

‘ ಕಾಮಯೇ ದುಃಖತಪ್ತಾನಾಂ ಪ್ರಾಣಿನಾಂ ಆರ್ತಿನಾಶನಂ ’

ನೌಖಾಲಿಯಲ್ಲಿ ಏಕಾಕಿ ಬಾಪೂ—೧೯೪೬ರ ನವೆಂಬರ್

(ಟೆಂಡುಲ್‌ಕರರ ‘ ಮಹಾತ್ಮಾ ’ ಗ್ರಂಥದಿಂದ)

ಗಾಂಧೀ ಗ್ರಂಥಮಾಲೆ – ೪

# ಸತ್ಯಾಹಿಂಸೆ



ಮೋ. ಕ. ಗಾಂಧೀ



ಗಾಂಧೀ ಸ್ಮಾರಕ ನಿಧಿ

೧೯೫೮

ಪ್ರಕಾಶಕರು :

ಪ್ರಧಾನ ಸಂಪಾದಕರು,
ಕನ್ನಡದಲ್ಲಿ ಗಾಂಧೀ ಗ್ರಂಥಮಾಲೆಯ ಸಂಪಾದಕ ಮಂಡಲಿ,
೧೬೩, ರಮಾವಿಲಾಸ ರಸ್ತೆ, ಮೈಸೂರು

(ಅಹಮದಾಬಾದಿನ ನವಜೀವನ ಟ್ರಸ್ಟ್ ಅವರ ಅನುಮತಿಯ ಕೃಪೆಯಿಂದ.)

ಬೆಲೆ :
ಸಾಧಾರಣ ಪ್ರತಿ : ೪ ರೂ.

ಮುದ್ರಕರು :
ಆರ್. ಎಸ್. ಹಬ್ಬು,
ಉಷಾ ಪ್ರೆಸ್, ಮೈಸೂರು

**Works of Gandhiji in Kannada - 4**

# SATYA - AHIMSE

(TRUTH - NON-VIOLENCE)



**M. K. GANDHI**



GANDHI SMARAK NIDHI

1958

# ಗಾಂಧೀಜಿಯ ಬರಹಗಳ ಕನ್ನಡ ಅನುವಾದ

ವಿಶ್ವದ ಎಲ್ಲ ಭಾಷೆಗಳಲ್ಲಿಯೂ ಗಾಂಧೀಜಿಯ ವಿಚಾರಗಳ ಪ್ರಚಾರ ಮಾಡುವುದು ಗಾಂಧೀ ಸ್ಮಾರಕ ನಿಧಿಯ ಮುಖ್ಯ ಉದ್ದೇಶ್ಯಗಳಲ್ಲಿ ಒಂದು. ಕರ್ನಾಟಕಕ್ಕೆ ಹಾಗೂ ಕನ್ನಡಿಗರಿಗೆ ಅತೀವ ಮಹತ್ವದ ಗಾಂಧೀ ವಿಚಾರಗಳ ಪರಿಚಯ ಮಾಡಿಕೊಡುವುದು ಈಗ ಕೈಕೊಂಡ ಈ ಯೋಜನೆಯ ಗುರಿ ಆಗಿದೆ.

ಕರ್ನಾಟಕದ ಹಲವಾರು ಸಾಹಿತಿಗಳು, ಲೇಖಕರು ಗಾಂಧೀಜಿಯ ಬರಹಗಳಲ್ಲಿ ಕೆಲವನ್ನು ಆಗಲೇ ಅನುವಾದಿಸಿ ಪ್ರಕಟಿಸಿದಾರೆ. ಸಾಧ್ಯವಾದಷ್ಟು ಈಗಲೇ ಪ್ರಕಟವಾಗಿರುವ ಅನುವಾದಗಳನ್ನು, ಆವಶ್ಯಕವಿದ್ದಲ್ಲಿ ಪರಿಷ್ಕರಿಸಿ, ಅವುಗಳನ್ನು ಈ ಗಾಂಧೀ ಗ್ರಂಥಮಾಲೆಯಲ್ಲಿ ಪೋಣಿಸುವ ಪ್ರಯತ್ನ ನಡೆದಿದೆ. ಗಾಂಧೀಜಿಯ ಮುಖ್ಯ ಹಾಗೂ ವಿವಿಧ ವಿಚಾರಗಳ ಪರಿಚಯವನ್ನು ಮಾಡಿ ಕೊಡಲು ಸುಮಾರು ಇಪ್ಪತ್ತು ಸಂಪುಟಗಳು ಸಿದ್ಧವಾಗುತ್ತಲಿವೆ.

ಗಾಂಧೀಜಿಯ ಎಲ್ಲ ಬರಹಗಳನ್ನೂ ಸಂಪೂರ್ಣವಾಗಿ ಅನುವಾದಿಸುವುದು ನಮ್ಮ ಉದ್ದೇಶ್ಯವಲ್ಲ; ಭಾರತ ಸರ್ಕಾರ ಆ ಕಾರ್ಯವನ್ನು ಕೈಕೊಂಡಿದೆ. ಆದರೆ ಈ ನಮ್ಮ ಯೋಜನೆಯ ಉದ್ದೇಶ್ಯ ಗಾಂಧೀಜಿಯ ಪ್ರಧಾನವಾದ ಅಭಿಪ್ರಾಯಗಳನ್ನು ಸಮಂಜಸವಾದ ರೀತಿಯಲ್ಲಿ ಕೂಡಿಸಿ ಮುಖ್ಯವಾದ ಶೀರ್ಷಿಕೆಗಳ ಅಡಿಯಲ್ಲಿ ಅವನ್ನು ಅಳವಡಿಸಿ ಕನ್ನಡಿಸಿ ಪ್ರಕಟ ಮಾಡುವುದಾಗಿದೆ. ಗಾಂಧೀಜೀ ಪುಸ್ತಕರೂಪಕವಾಗಿಯೇ ಬರೆದ ಗ್ರಂಥಗಳನ್ನು ಅವು ಇರುವಂತೆ ಅಥವಾ ಆವಶ್ಯಕವಾದರೆ ಸಂಗ್ರಹಿಸಿ ಅನುವಾದ ಮಾಡಲಾಗುತ್ತದೆ. ಮತ್ತೆ ಕೆಲವು ಗ್ರಂಥಗಳು ಗಾಂಧೀಜೀ ಅವರ ಅಭಿಪ್ರಾಯಗಳನ್ನು 'ಯಂಗ್ ಇಂಡಿಯಾ' ಮತ್ತು 'ಹರಿಜನ' ಪತ್ರಿಕೆಗಳಿಂದ ಆಯ್ದ ಲೇಖನಗಳ ಸಂಕಲನಗಳಾಗಿವೆ. ಸಂಕಲನ ಸ್ವಲ್ಪ ನಿಧಾನದ ಕೆಲಸ; ಕಷ್ಟವಾದ ಕೆಲಸವೂ ಹೌದು. ಎಷ್ಟು ಪ್ರಯತ್ನ ಮಾಡಿದರೂ ವಿಷಯಪ್ರತಿಪಾದನೆಯ ಪುನರಾವರ್ತನೆಯನ್ನು ತಪ್ಪಿಸುವುದು ಕಷ್ಟ. ನಮ್ಮ ಅನುವಾದಕರು ಕರ್ನಾಟಕದ ನುರಿತ ಸಾಹಿತಿ

ಗಳು ಮತ್ತು ಗಾಂಧೀ ಮಾರ್ಗದಲ್ಲಿ ಶ್ರದ್ಧೆಯುಳ್ಳವರು. ಆದಷ್ಟು ಸಮರ್ಪಕವಾಗಿ ಭಾಷಾಂತರದ ಕೆಲಸವನ್ನು ಮಾಡುತ್ತಿದಾರೆ. ಗಾಂಧೀಜಿಯವರ ಸರಳ ಮತ್ತು ರಸವತ್ತಾದ ಬರಹಗಳನ್ನು ಭಾಷಾಂತರಿಸುವುದು ಎಷ್ಟು ಕಷ್ಟ ಎಂಬುದನ್ನು ಹೇಳಬೇಕಾಗಿಲ್ಲ. ಆದರೂ ಈ ಅನುವಾದಕರು ಗಾಂಧೀಜಿಯವರ ಮನೋಗತವನ್ನು ಅರಿತವರಾದುದರಿಂದ ಈ ಅನುವಾದಗಳು ಜನಪ್ರಿಯವಾಗಬಲ್ಲವೆಂದು ಆಶಿಸಲಾಗಿದೆ.

ಈ ಸಂಪಾದಕ ಸಮಿತಿಯಿಂದ ಪ್ರಕಟಿಸಲ್ಪಡುವ ಗ್ರಂಥಗಳು ಬಹಳ ಸುಲಭ ಬೆಲೆಗೆ ಪಾಠಕರ ಕೈಸೇರಬೇಕೆಂಬ ಉದ್ದೇಶ್ಯದಿಂದ ಸಾಮಾನ್ಯ ಪ್ರತಿಯ ಬೆಲೆ ಅತಿ ಕಡಮೆ ಇಡಲಾಗಿದೆ. ಇದರೊಡನೆ ಉತ್ತಮ ಪ್ರತಿಯೂ ಸಹ ಮಾರಾಟಕ್ಕೆ ಇರುವುದಲ್ಲದೆ ಅದರ ಬೆಲೆಯೂ ಕೂಡ ಬಹಳ ಹೆಚ್ಚು ಇಡಲಾಗಿಲ್ಲ.

ಈ ಗ್ರಂಥಮಾಲೆ ಕನ್ನಡ ನಾಡಿನ ಜನಕ್ಕೆ ಗಾಂಧೀ ಸಾಹಿತ್ಯವನ್ನು ಒದಗಿಸಿಕೊಡುವ ಕೆಲಸದಲ್ಲಿ ಕೃತಕೃತ್ಯತೆಯನ್ನು ಪಡೆಯಬಲ್ಲದೆಂದು ಭಾವಿಸಲಾಗಿದೆ. ಗಾಂಧೀಜಿಯವರ ಆಧ್ಯಾತ್ಮಿಕ, ಧಾರ್ಮಿಕ, ಸಾಮಾಜಿಕ, ಆರ್ಥಿಕ, ರಾಜಕೀಯ ಅಭಿಪ್ರಾಯಗಳು ಈ ಗ್ರಂಥಗಳ ಮೂಲಕ ಜನಸಾಮಾನ್ಯರಲ್ಲಿ ಹರಡಲಿ, ಸಕಲ ಜನರಿಗೆ ಸ್ಫೂರ್ತಿ ಕೊಟ್ಟು ನವಚೈತನ್ಯವನ್ನು ತುಂಬಲಿ ಎಂದು ಹಾರೈಸಿ ಈ ಗ್ರಂಥಗಳನ್ನು ಜನತಾಜನಾರ್ದನನಿಗೆ ಅರ್ಪಿಸುತ್ತಿರುವೆ.

ಗಾಂಧೀ ಸ್ಮಾರಕ ನಿಧಿ
ರಾಜಘಾಟ, ದಿಲ್ಲಿ
೭–೫–೫೮

ರಂಗನಾಥ ದಿವಾಕರ

# ನಿವೇದನ

(ಗಾಂಧೀಜಿಯ ಮಾತುಗಳಲ್ಲಿ)

ಅನುವಾದಕರು : **' ಕುವೆಂಪು '**

ನಾನೊಬ್ಬ ಸತ್ಯಶೋಧಕ. ಅದಕ್ಕೊಂದು ಮಾರ್ಗವನ್ನು ಕಂಡುಕೊಂಡಿದೇನೆಂದು ನನ್ನ ವಿಶ್ವಾಸ. ಅದರ ಸಿದ್ಧಿಗಾಗಿ ನಾನು ನಿರಂತರ ಪ್ರಯತ್ನಶೀಲನಾಗಿದೇನೆಂದೂ ನನ್ನ ನಂಬಿಕೆ. ಅದು ಇನ್ನೂ ನನಗೆ ಸಿದ್ಧಿಸಿಲ್ಲ ಎಂಬುದನ್ನು ಒಪ್ಪಿಕೊಳ್ಳುತ್ತೇನೆ. ಸತ್ಯದ ಸಮ್ಯಕ್‌ದರ್ಶನವೇ ಆತ್ಮಸಾಕ್ಷಾತ್ಕಾರ ; ಅದೇ ಜೀವನದ ಅಂತಿಮ ಗುರಿ—ಅಂದರೆ ಪರಿಪೂರ್ಣತೆಯ ಸಿದ್ಧಿ. ನನ್ನ ನ್ಯೂನತೆಗಳು ಎಷ್ಟೆಂಬುದನ್ನು ನಾನು ವ್ಯಸನದಿಂದ ಅರಿತಿದೇನೆ. ಆ ಅರಿವು ನನಗೆ ದುಃಖ ತರುವಷ್ಟೂ ಇದೆ. ಆ ಅರಿವೇ ನನ್ನ ಶಕ್ತಿಯ ಸರ್ವಮೂಲ; ಏಕೆಂದರೆ ತನ್ನ ದೌರ್ಬಲ್ಯಗಳ ಅರಿವಾಗುವುದೇ ಮಾನವನಿಗೆ ಒಂದು ಅಪೂರ್ವ ಬಲ. (ಯಂಗ್ ಇಂಡಿಯಾ, ೧೭–೧೧–೧೯೨೧)

ಮನಸ್ಸಿನಲ್ಲಿ, ಮಾತಿನಲ್ಲಿ, ಕೆಲಸದಲ್ಲಿ ಅತ್ಯಂತ ಋಜುವಾಗಿ, ಅತ್ಯಂತ ಸತ್ಯವಾಗಿ, ಅತ್ಯಂತ ಅಹಿಂಸಕವಾಗಿ ನಡೆಯಬೇಕೆಂದು ಹೋರಾಡುತ್ತಿದ್ದರೂ ನನಗೆ ಸರಿಯೆಂದು ತಿಳಿದ ಗುರಿಯನ್ನು ಮುಟ್ಟಲು ಹಂಬಲಿಸಿ ಹೆಣಗುತ್ತ ಸತತವೂ ಸೋಲುತ್ತಿರುವ ನಾನು ಒಬ್ಬ ಸಾಮಾನ್ಯಚೇತನ. ಆ ಯಾತ್ರೆಯೇನೊ ಕ್ಲೇಶಕರವೇ ; ಆದರೆ ಆ ಯಾತನೆಯಲ್ಲಿಯೂ ನನಗೆ ಒಂದು ಆನಂದವಿದೆ. ಏರುವ ಒಂದೊಂದು ಹೆಜ್ಜೆಯೂ ನನ್ನನ್ನು ಬಲಿಷ್ಠನನ್ನಾಗಿ ಮಾಡಿ ಮುಂದಣ ಹೆಜ್ಜೆಗೆ ಸಾಮರ್ಥ್ಯವೀಯುತ್ತದೆ. (ಯಂಗ್ ಇಂಡಿಯಾ, ೯–೪–೧೯೨೬)

ದಾರಿ ನನಗೆ ಗೊತ್ತು. ಅದು ನೇರ ಮತ್ತು ಇಕ್ಕಟ್ಟು—ಕತ್ತಿಯ ಅಲಗಿನಂತೆ. ಅದರ ಮೇಲೆ ನಡೆಯುವುದೆಂದರೆ ನನಗೆ ಉಲ್ಲಾಸ. ಜಾರಿದಾಗಲೆಲ್ಲ ಕಣ್ಣೀರಿಡುತ್ತೇನೆ. ' ನ ಮೇ ಭಕ್ತಃ ಪ್ರಣಶ್ಯತಿ ' ಎಂದು ದೇವರ ವಚನವಿದೆ. ಆ ವಚನದಲ್ಲಿ ನನಗೆ ದೃಢವಾದ ನಂಬಿಕೆಯಿದೆ. ಆದ್ದರಿಂದ ನನ್ನ ದೌರ್ಬಲ್ಯದ ಪರಿಣಾಮವಾಗಿ ಸಾವಿರ ಬಾರಿ ಸೋತರೂ ನಾನೆಂದಿಗೂ ಶ್ರದ್ಧೆಗೆಡುವುದಿಲ್ಲ. ಪ್ರತಿಯಾಗಿ, ಇಂದಲ್ಲ ನಾಳೆ, ಸ್ವತಸ್ಸಿದ್ಧವಾಗಿ ಕೈಗೂಡಲೇಬೇಕಾಗಿರುವ

ಇಂದ್ರಿಯಜಯ ಲಭಿಸಿದಂದು, ಬೆಳಕನ್ನು ಕಂಡೇ ಕಾಣುತ್ತೇನೆಂಬುದು ನನ್ನ ವಿಶ್ವಾಸ. (ಯಂಗ್ ಇಂಡಿಯಾ, ೧೬–೬–೧೯೨೬)

ಏಕೆಂದರೆ, ಸಾವಿನ ನಡುವೆ ಬಾಳು, ಸುಳ್ಳಿನ ನಡುವೆ ಸತ್ಯ, ತಮಸ್ಸಿನ ನಡುವೆ ಜ್ಯೋತಿ ಚಿರಸ್ಥಾಯಿಯಾಗಿರುವುದನ್ನು ನಾನು ಕಾಣುತ್ತಿದೇನೆ. ಭಗವಂತನೇ ಪ್ರಾಣಶಕ್ತಿ, ಅವನೇ ಸತ್ಯ ಮತ್ತು ಜ್ಯೋತಿ ಎಂಬುದು ನನ್ನ ವಿಶ್ವಾಸ. ಆತ ಪ್ರೇಮಸ್ವರೂಪಿ ; ಆತನೇ ಪರಮಶ್ರೇಯಸ್ಸು.

(ಯಂಗ್ ಇಂಡಿಯಾ, ೧೦–೧೦–೧೯೨೮)

ಬಾಲ್ಯದಿಂದಲೂ ನಾನೊಬ್ಬ ಸತ್ಯಾರಾಧಕ ಎಂಬುದು ನನ್ನ ವಿಶ್ವಾಸ. ಅದು ನನ್ನ ಅತ್ಯಂತ ಸಹಜಪ್ರವೃತ್ತಿ. ಉಪಾಸನಾಪೂರ್ವಕವಾದ ಶೋಧನೆ ಯಿಂದ ಭಗವಂತನೇ ಸತ್ಯ ಎಂಬ ರೂಢಿಯ ನಂಬಿಕೆಯ ಬದಲು ಸತ್ಯವೇ ಭಗವಂತ ಎಂಬ ಸೂತ್ರ ನನಗೆ ಸ್ಫುರಣವಾಯಿತು. ಭಗವಂತನನ್ನು ಪ್ರತ್ಯಕ್ಷವೋ ಎಂಬಂತೆ ಕಾಣಲು ಈ ಸೂತ್ರದಿಂದ ನನಗೆ ಸಾಧ್ಯವಾಗಿದೆ. ನನ್ನ ಚೇತನಸಮಸ್ತವನ್ನೂ ಆತ ವ್ಯಾಪಿಸಿದಾನೆ ಎಂಬುದು ನನ್ನ ಅನುಭವ.

(ಹರಿಜನ, ೯–೮–೧೯೪೨)

ಭಗವಂತನ ಪ್ರತ್ಯಕ್ಷ ದರ್ಶನದ ಹಂಬಲ ನನ್ನದು. ಭಗವಂತನೇ ಸತ್ಯ ಎಂಬುದನ್ನು ನಾನು ಬಲ್ಲೆ. ನನ್ನ ಪಾಲಿಗೆ ಭಗವಂತನನ್ನು ಕಾಣಲು ಇರುವ ಒಂದೇ ಒಂದು ನಿಶ್ಚಿತ ಮಾರ್ಗವೆಂದರೆ—ಅಹಿಂಸೆ, ಪ್ರೇಮ. (ಆತ್ಮಕಥೆ)

ಅಹಿಂಸೆ ನನ್ನ ದೇವರು. ಸತ್ಯ ನನ್ನ ದೇವರು. ಅಹಿಂಸೆಯ ಸಾಧನೆ ಗಾಗಿ ನಾನು ಶ್ರಮಿಸುವಾಗ ಸತ್ಯ ಹೇಳುತ್ತದೆ: ' ನನ್ನ ಮೂಲಕವೇ ಅದರ ಸಿದ್ಧಿ ' ಎಂದು. ಸತ್ಯದ ಸಾಧನೆಗಾಗಿ ನಾನು ಶ್ರಮಿಸುವಾಗ ಅಹಿಂಸೆ ಹೇಳುತ್ತದೆ: ' ನನ್ನ ಮೂಲಕವೇ ಅದರ ಸಿದ್ಧಿ.'

(ಯಂಗ್ ಇಂಡಿಯಾ, ೪–೬–೧೯೨೫)

ಭಾರತದ ಸ್ವಾತಂತ್ರ್ಯಸಾಧನೆಯೇ ನನ್ನ ಜೀವಿತೋದ್ದೇಶ. ಅದಕ್ಕಾಗಿ ನಾನು ಸಾಯಲು ಕೂಡ ಸಿದ್ಧ. ಏಕೆಂದರೆ ಭಾರತದ ಸ್ವಾತಂತ್ರ್ಯ ಸತ್ಯದ ಒಂದು ಅಂಶ. ಬಂಧಮುಕ್ತವಾದಾಗಲೇ ಭರತಖಂಡ ಸತ್ಯಸ್ವರೂಪನಾದ

ಭಗವಂತನನ್ನು ಪೂಜಿಸಬಲ್ಲದು. ಭಾರತದ ಬಿಡುಗಡೆಗಾಗಿ ನಾನು ದುಡಿಯು ತ್ತಿದೇನೆ; ಏಕೆಂದರೆ ಭಾರತದಲ್ಲಿ ಬದುಕಿ ಅದರ ಸಂಸ್ಕೃತಿಯನ್ನು ಪಡೆದಿರುವು ದರಿಂದ ಅದರ ಸೇವೆಗೆ ನಾನು ಅತ್ಯಂತ ಅರ್ಹ ಎಂಬುದನ್ನು, ನನ್ನ ಸೇವೆಯ ಮೊದಲ ಹಕ್ಕು ಭಾರತದ್ದು ಎಂಬುದನ್ನು ನನ್ನ ಸ್ವದೇಶಿ ನನಗೆ ಕಲಿಸಿದೆ. ನನ್ನ ದೇಶಭಕ್ತಿ ಭಾರತಕ್ಕೆ ಮಾತ್ರ ಮೀಸಲಾದುದಲ್ಲ. ಬೇರೆ ಯಾವ ರಾಷ್ಟ್ರದ ಹಿತಕ್ಕೂ ಧಕ್ಕೆಯೊದಗಬಾರದು ಎಂಬುದಷ್ಟೇ ಅಲ್ಲ; ಸಕಲ ರಾಷ್ಟ್ರಗಳಿಗೂ, ಆ ಪದದ ಸಂಪೂರ್ಣಾರ್ಥದಲ್ಲಿ, ಸರ್ವಲಾಭ ಒದಗಬೇಕು ಎಂಬುದೇ ನನ್ನ ಮಾತಿನ ಆಶಯ. ನಾನು ಸಂಕಲ್ಪಿಸಿರುವ ಭಾರತದ ಸ್ವಾತಂತ್ರ್ಯ ಎಂದೆಂದೂ ಲೋಕಹಿತಕಂಟಕವಾಗಲಾರದು. (ಆತ್ಮಕಥೆ)

ವಿಶ್ವಾತ್ಮಕವೂ ವಿಶ್ವವ್ಯಾಪಿಯೂ ಆದ ಸತ್ಯವನ್ನು ಸಾಕ್ಷಾತ್ತಾಗಿ ಸಂದ ರ್ಶಿಸಬೇಕಾದರೆ ಸೃಷ್ಟಿಯಲ್ಲಿ ಕ್ಷುದ್ರತಮವಾದುದನ್ನೂ ತನ್ನಂತೆ ಪ್ರೀತಿಸುವುದು ಸಾಧ್ಯವಾಗಲೇಬೇಕು. ಆ ಹಂಬಲವನ್ನು ತುಂಬಿಕೊಂಡವನು ಜೀವನದ ಯಾವ ಕ್ಷೇತ್ರದಿಂದಲೂ ವಿಮುಖನಾಗಲು ಸಾಧ್ಯವಿಲ್ಲ. ನನ್ನ ಸತ್ಯಶ್ರದ್ಧೆ ನನ್ನನ್ನು ರಾಜಕೀಯ ಕ್ಷೇತ್ರಕ್ಕೆ ಎಳೆದು ತಂದಿರುವುದು ಈ ಕಾರಣದಿಂದಲೇ. ಅಧ್ಯಾತ್ಮಕ್ಕೂ ರಾಜಕೀಯಕ್ಕೂ ಏನೂ ಸಂಬಂಧವಿಲ್ಲ ಎನ್ನುವವರಿಗೆ ಅಧ್ಯಾತ್ಮ ಎಂದರೇನು ಎಂಬುದೇ ತಿಳಿಯದೆಂದು ಸ್ವಲ್ಪವೂ ಅಳುಕದೆ, ಆದರೆ ವಿನೀತನಾಗಿ ನಾನು ಹೇಳಬಲ್ಲೆ. (ಆತ್ಮಕಥೆ)

ಆತ್ಮಶ್ರೀವಿದೂರರಾದ ರಾಜಕೀಯ ನನ್ನ ಪಾಲಿಗೆ ಸರ್ವಥಾ ತ್ಯಾಜ್ಯವಾದ ಕಲಂಕ. ರಾಜಕೀಯ ರಾಷ್ಟ್ರಗಳನ್ನು ಕುರಿತದ್ದು. ಯಾವುದು ರಾಷ್ಟ್ರಗಳ ಹಿತ ವನ್ನು ಕುರಿತದ್ದೊ ಅದು ಅಧ್ಯಾತ್ಮ ಪ್ರವೃತ್ತಿಯುಳ್ಳ ವ್ಯಕ್ತಿಯ, ಎಂದರೆ ಸತ್ಯದ ಮತ್ತು ಭಗವಂತನ ಅನ್ವೇಷಕನ ಸಾಧನೆಯ ಅಂಗಗಳಲ್ಲಿ ಒಂದಾಗಿರುವುದು ಅನಿವಾರ್ಯ. ನನಗಾದರೊ ಭಗವಂತನೆಂದರೂ ಒಂದೇ, ಸತ್ಯವೆಂದರೂ ಒಂದೇ. ಭಗವಂತ ಅಸತ್ಯದ ಮೂರ್ತಿಯೆಂದೂ, ಹಿಂಸೆಯ ಮೂರ್ತಿಯೆಂದೂ ಯಾರಾದರೂ ಸ್ಥಿರಪಡಿಸಿದರೆ ಅಂತಹ ಭಗವಂತನನ್ನು ಪೂಜಿಸಲು ನಾನು ನಿರಾಕರಿಸುತ್ತೇನೆ. ರಾಜಕೀಯದಲ್ಲಿ ಕೂಡ ಭಗವಂತನ ರಾಜ್ಯ ಸ್ಥಾಪಿತವಾಗ ಬೇಕಾಗಿದೆ. ನನ್ನ ಬದುಕಿನ ಅತ್ಯಂತ ಆತ್ಮೀಯ ವಸ್ತುಗಳಿಂದ ರಾಜಕೀಯ

ವನ್ನು ಬೇರ್ಪಡಿಸಲಾರೆ. ಕಾರಣ ಇಷ್ಟೆ: ನನ್ನ ರಾಜಕೀಯ ಕಲುಷಿತವಲ್ಲ. ಈ ಎಲ್ಲವೂ ಸತ್ಯ-ಅಹಿಂಸೆಗಳೊಂದಿಗೆ ಜಟಿಲವಾಗಿ ಹೆಣೆದುಕೊಂಡಿವೆ. ಸತ್ಯವನ್ನು ಬಲಿಗೊಟ್ಟು ಸ್ವಾತಂತ್ರ್ಯವನ್ನು ಪಡೆಯುವುದಕ್ಕಿಂತ ಭಾರತ ವಿನಾಶ ಹೊಂದುವುದೇ ಹೆಚ್ಚು ಲೇಸೆಂಬುದು ನನ್ನ ಮತ. ರಾಜಕೀಯ ಸಂಪರ್ಕವಿಲ್ಲದೆ ಸಮಾಜಸೇವೆಯಂಥ ಕೆಲಸವನ್ನು ಕೂಡ ನಡೆಸುವುದು ಅಸಾಧ್ಯವೆಂಬುದು ನನ್ನ ಅನುಭವಕ್ಕೆ ಬಂದುದರಿಂದ ರಾಜಕೀಯ ಕ್ಷೇತ್ರವನ್ನು ನಾನು ಪ್ರವೇಶಿಸುವುದು ಅನಿವಾರ್ಯವಾಯಿತು. ಸಾಮಾಜಿಕ ಮತ್ತು ನೈತಿಕದೃಷ್ಟಿಯಿಂದ ರಾಜಕೀಯ ಕಾರ್ಯ ಪರಿಗಣಿತವಾಗಲೇಬೇಕು.

ಮಾನವನ ಮನಸ್ಸಾಗಲಿ ಸಮಾಜವಾಗಲಿ ರಾಜಕೀಯ, ಸಾಮಾಜಿಕ, ಧಾರ್ಮಿಕ ಎಂಬ ಪ್ರತ್ಯೇಕ ವಿಭಾಗಗಳಾಗಿ ವಿಂಗಡಣೆಯಾಗಿಲ್ಲ ಎಂಬುದು ನನ್ನ ವಿಶ್ವಾಸ. ಅವುಗಳ ನಡುವೆ ಕ್ರಿಯೆ-ಪ್ರತಿಕ್ರಿಯೆಗಳು ಇದ್ದೇ ತೀರುತ್ತವೆ.

(ಯಂಗ್ ಇಂಡಿಯಾ, ೨-೩-೧೯೨೨)

ಆತ್ಮಶ್ರೀನಿಯಮಕ್ಕೆ ತನ್ನದೇ ಆದ ಒಂದು ಕ್ಷೇತ್ರವಿದೆ ಎಂಬುದನ್ನು ನಾನು ನಂಬುವುದಿಲ್ಲ. ಬದಲು, ಅದು ಜೀವನದ ಸಾಮಾನ್ಯ ವ್ಯಾಪಾರಗಳ ಮೂಲಕವಾಗಿ ಮಾತ್ರವೇ ವ್ಯಕ್ತಗೊಳ್ಳುತ್ತದೆ. ಹೀಗೆ ಅದು ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ವಲಯಗಳ ಮೇಲೂ ಪರಿಣಾಮವನ್ನುಂಟು ಮಾಡುತ್ತದೆ.

(ಯಂಗ್ ಇಂಡಿಯಾ, ೩-೯-೧೯೨೪)

ಮಾನವಜೀವಿತದ ಪರಮೋದ್ದೇಶ ಭಗವತ್ಸಾಕ್ಷಾತ್ಕಾರ. ಅವನ ಕರ್ಮಕ್ರಿಯೆಗಳೇನೇ ಇರಲಿ ಸಾಮಾಜಿಕ, ರಾಜಕೀಯ, ಧಾರ್ಮಿಕ ಎಲ್ಲವೂ ಈ ಈಶ್ವರಸಾಕ್ಷಾತ್ಕಾರದ ಪರಮೋದ್ದೇಶದಿಂದಲೇ ನಿಯಂತ್ರಿತವಾಗಿರಬೇಕು. ಮಾನವಸೇವೆಯೇ ಈ ಸಾಧನೆಯ ಪ್ರಪ್ರಥಮ ಅನಿವಾರ್ಯಾಂಗವಾಗುತ್ತದೆ. ಏಕೆಂದರೆ ಇಷ್ಟೆ: ಈಶ್ವರದರ್ಶನಕ್ಕಿರುವ ಏಕೈಕ ಮಾರ್ಗವೆಂದರೆ ಆತನ ಸೃಷ್ಟಿಯಲ್ಲಿಯೇ ಆತನನ್ನು ಕಂಡು ಅದರಲ್ಲಿಯೆ ಒಂದಾಗಿರುವುದು. ಸರ್ವರ ಸೇವೆಯೊಂದೇ ಇದಕ್ಕೆ ಸಾಧನ. ನಾನು ಈ ಸರ್ವದ ಒಂದು ಅಂಶ. ಇತರರನ್ನುಳಿದು ನಾನೊಬ್ಬನೇ ಆತನನ್ನು ಪಡೆಯಲಾರೆ.

(ಹರಿಜನ, ೨೯-೮-೧೯೩೬)

ಈಶಸೇವೆ ಅರ್ಥಾತ್ ಮಾನವಸೇವೆಯೇ ನನ್ನ ಧರ್ಮ; ನಿಷ್ಕಾಮ ಸೇವೆಯಿಂದ ಸೇವೆಸಲ್ಲಿಸುವುದೆಂದರೆ ಇತರರಿಗೆ ನಾವು ಉಪಕಾರಮಾಡಿದ್ದಕ್ಕಿಂತ ನಮ್ಮ ಸಾಲವನ್ನು ನಾವು ತೀರಿಸಿಕೊಂಡು ಕೃತಕೃತ್ಯರಾದಂತೆ. ನಮ್ಮ ಹೊಣೆಯನ್ನು ನಾವೇ ಇಳಿಸಿಕೊಂಡು ನಮ್ಮ ಕರ್ತವ್ಯವನ್ನು ಪರಿಪಾಲಿಸುವುದರ ಮೂಲಕ ನಮಗೇ ನಾವು ಉಪಕಾರಮಾಡಿಕೊಳ್ಳುತ್ತೇವೆ. ನಮ್ಮಲ್ಲಿ ಒಳ್ಳೆಯ ವರೆನಿಸಿಕೊಂಡವರು ಮಾತ್ರವಲ್ಲ, ನಾವೆಲ್ಲರೂ ನಮ್ಮ ಸರ್ವಸಂಪತ್ತನ್ನೂ ಸರ್ವರಿಗಾಗಿ ವಿನಿಯೋಗಿಸಲು ಬದ್ಧರು. ಮೃಗಗಳಿಗಿಂತ ಮಾನವ ಭಿನ್ನ ಎಂದು ತೋರುವುದು ತ್ಯಾಗಧರ್ಮ ಒಂದರಿಂದಲೇ. (ಮಂಗಳ ಪ್ರಭಾತ)

ಮನುಷ್ಯ ಎಷ್ಟರಮಟ್ಟಿಗೆ ಪರಾರ್ಥಕ್ಕಾಗಿ ಶ್ರಮಿಸುತ್ತಾನೆಯೊ ಅಷ್ಟರ ಮಟ್ಟಿಗೆ ಅವನು ದೊಡ್ಡವನಾಗುತ್ತಾನೆ. (ಯಂಗ್ ಇಂಡಿಯಾ, ೪-೧೨-೧೯೨೪)

ನಾನು ಸೋದರಭಾವ ಅಥವಾ ತಾದಾತ್ಮ್ಯವನ್ನು ಸಾಧಿಸಲೆಳಸುವುದು ಕೇವಲ ಮಾನವಜೀವಿಗಳೊಂದಿಗೆ ಮಾತ್ರವಲ್ಲ, ಸಮಸ್ತ ಜೀವರಾಶಿಯೊಂದಿಗೆ, ನೆಲದ ಮೇಲೆ ಹರಿದಾಡುವ ಕ್ರಿಮಿಕೀಟಗಳೊಂದಿಗೆ ಕೂಡ. ನಿಮ್ಮನ್ನು ಚಕಿತಗೊಳಿಸಬಹುದಾದ ಈ ಬಯಕೆಗೆ—ನೆಲದ ಮೇಲೆ ಹರಿದಾಡುವ ಕ್ರಿಮಿ ಕೀಟಗಳೊಂದಿಗೂ ತಾದಾತ್ಮ್ಯವನ್ನು ಸಾಧಿಸಬೇಕೆನ್ನುವ ಬಯಕೆಗೆ—ಕಾರಣ ಇಷ್ಟೆ: ನಾವೆಲ್ಲರೂ ಒಬ್ಬನೇ ಭಗವಂತನಿಂದ ಬಂದವರು ಎಂದು ಹೇಳುತ್ತೇ ವಲ್ಲ; ಹಾಗಿರುವುದರಿಂದ ಯಾವುದೇ ರೂಪದಲ್ಲಿ ಗೋಚರಿಸಿದರೂ ಮೂಲತಃ ಎಲ್ಲ ಜೀವವೂ ಒಂದೇ. (ಹರಿಜನ, ೪-೪-೧೯೪೬)

ಭಗವಂತನ ಕೇವಲ ಅಖಂಡತೆಯನ್ನು ನಾನು ನಂಬುತ್ತೇನೆ; ಆದುದ ರಿಂದಲೇ ಜನತೆಯ ಅಖಂಡತೆಯಲ್ಲೂ ನನಗೆ ಶ್ರದ್ಧೆಯಿರುವುದು. ಒಬ್ಬನು ಮಾತ್ರ ಅಧ್ಯಾತ್ಮಲಾಭ ಪಡೆದು ಅವನ ಸುತ್ತಣ ಜನರು ತೊಳಲುತ್ತಾರೆ ಎಂಬುದನ್ನು ನಾನು ನಂಬುವುದಿಲ್ಲ. ಅದ್ವೈತದಲ್ಲಿ ನನಗೆ ಶ್ರದ್ಧೆಯಿದೆ. ತತ್ತ್ವಶಃ ಮಾನವನ ಅಖಂಡತೆಯಲ್ಲಿ, ಹಾಗೆ ನೋಡಿದರೆ ಜೀವಸಮಸ್ತದ ಅಖಂಡತೆಯಲ್ಲಿ, ನನಗೆ ವಿಶ್ವಾಸವುಂಟು. ಆದುದರಿಂದಲೇ ಒಂದು ವ್ಯಕ್ತಿಗೆ ಅಧ್ಯಾತ್ಮಲಾಭವಾದರೆ ಇಡೀ ವಿಶ್ವಕ್ಕೆ ಆ ಲಾಭ ಒದಗುತ್ತದೆ. ಒಂದು

ವ್ಯಕ್ತಿ ಪತನಹೊಂದಿದರೆ ಅಷ್ಟರಮಟ್ಟಿಗೆ ಇಡೀ ವಿಶ್ವದ ಪತನವೇ ಆಗುತ್ತದೆ ಎಂದು ನಾನು ಭಾವಿಸಿರುವುದು. (ಯಂಗ್ ಇಂಡಿಯಾ, ೪–೧೨–೧೯೨೪)

ಈ ಪೃಥ್ವಿಯ ನಶ್ವರ ಸಾಮ್ರಾಜ್ಯದ ಬಯಕೆ ನನಗಿಲ್ಲ. ಮೋಕ್ಷರೂಪವಾದ ಅಮರ ಸಾಮ್ರಾಜ್ಯಕ್ಕಾಗಿ ನಾನು ಶ್ರಮಿಸುತ್ತಿದೇನೆ. ನನ್ನ ಧ್ಯೇಯ ಸಾಧನೆಗಾಗಿ ನಾನು ಗುಹಾನಿವಾಸಿಯಾಗಬೇಕಾಗಿಲ್ಲ.

(ಯಂಗ್ ಇಂಡಿಯಾ, ೩–೪–೧೯೨೪)

ದೇಶದ, ತನ್ಮೂಲಕ ಮಾನವತೆಯ ಸೇವೆಗಾಗಿ ಎಡಬಿಡದೆ ದುಡಿಯುವುದೇ ನನ್ನ ಮೋಕ್ಷಪಥ. ಜೀವಸಮಸ್ತದೊಂದಿಗೆ ಅನನ್ಯತೆಯನ್ನು ಸಾಧಿಸುವುದೇ ನನ್ನ ಬಯಕೆ. (ಯಂಗ್ ಇಂಡಿಯಾ, ೩–೪–೧೯೨೪)

ಯಾವ ನೂತನ ಸಿದ್ಧಾಂತಗಳನ್ನೂ ನಾನು ಮಂಡಿಸಿಲ್ಲ. ಅದರ ಬದಲು ಪುರಾತನ ಸಿದ್ಧಾಂತಗಳ ಪುನರ್ನಿರೂಪಣೆಯ ಪ್ರಯತ್ನವೇ ನನ್ನದು. ಅದು ಎಷ್ಟರ ಮಟ್ಟಿಗೆ ಸರಿಯಾಗಿ ಸಾಗಿದೆಯೋ ಹೇಳಲಾರೆ. ಆದರೆ ಅದು ನನ್ನ ಪ್ರಾಮಾಣಿಕವಾದ ನಂಬಿಕೆಯನ್ನು ಪ್ರತಿನಿಧಿಸುತ್ತಿದೆ.

(ಯಂಗ್ ಇಂಡಿಯಾ, ೩–೧೨–೧೯೨೬)

ಗಾಂಧೀ ಪಂಥ ಎಂಬುದೊಂದಿಲ್ಲ. ನನ್ನ ತರುವಾಯ ಯಾವ ಪಂಥವನ್ನೂ ಕಟ್ಟಿಹೋಗುವ ಇಚ್ಛೆ ನನಗಿಲ್ಲ. ನಾನು ಯಾವುದಾದರೂ ನೂತನ ತತ್ತ್ವದ ಅಥವಾ ಸಿದ್ಧಾಂತದ ಮೂಲಪುರುಷ ಎಂಬ ಭಾವನೆ ನನಗಿಲ್ಲ. ನಿತ್ಯಸತ್ಯಗಳನ್ನು ನಮ್ಮ ದೈನಂದಿನ ಜೀವನ ಹಾಗೂ ಸಮಸ್ಯೆಗಳಿಗೆ ಅಳವಡಿಸಲು ನನ್ನ ರೀತಿಯಲ್ಲಿ ನಾನು ಸಾಧಾರಣನಂತೆ ಪ್ರಯತ್ನಿಸಿದೇನೆ; ಅಷ್ಟೆ. ಸತ್ಯ–ಅಹಿಂಸೆ—ಈ ಭಾವಗಳು ಪರ್ವತಗಳಷ್ಟೇ ಪುರಾತನವಾದುವು. ನನ್ನ ಶಕ್ತಿಗೆ ಸಾಧ್ಯವಾದಷ್ಟು ವಿಪುಲ ಪ್ರಮಾಣದಲ್ಲಿ ಅವೆರಡರಲ್ಲೂ ಪ್ರಯೋಗಗಳನ್ನು ನಡೆಸಿರುವುದಷ್ಟೆ ನನ್ನ ಕೆಲಸ. ಹಾಗೆ ಮಾಡುವಾಗ ಕೆಲವು ಸಲ ತಪ್ಪುಮಾಡಿದೇನೆ; ಆ ತಪ್ಪುಗಳಿಂದ ಪಾಠ ಕಲಿತಿದೇನೆ. ಹೀಗೆ ಜೀವನ ಮತ್ತು ಅದರ ಸಮಸ್ಯೆಗಳು ಸತ್ಯ–ಅಹಿಂಸೆಗಳ ಅನುಷ್ಠಾನಗಳಲ್ಲಿ ನಡೆಸಿರುವ ಅನೇಕ ಪ್ರಯೋಗಗಳಾಗಿವೆ. (ಹರಿಜನ, ೨೮–೩–೧೯೩೬)

ನಿಮ್ಮ ಮುಂದೆ ಉದ್ಭವಿಸಿರುವ ಸಮಸ್ಯೆಗಳನ್ನು ನನ್ನ ಹೇಳಿಕೆಗೆ ಅನುಸಾರವಾಗಿ ಎದುರಿಸಬೇಕೆಂಬುದೇ ನನ್ನ ಇಚ್ಛೆ. ಹೀಗೆ ಸತ್ಯ-ಅಹಿಂಸೆಗಳಲ್ಲಿ ನನ್ನ ಶ್ರದ್ಧೆ ವರ್ಧಿಸುತ್ತಲೇ ಇದೆ. ನನ್ನ ಜೀವನದಲ್ಲಿ ಅವುಗಳನ್ನು ಅನುಸರಿಸುತ್ತ ಹೋದಂತೆ ನಾನು ಕೂಡ ಪ್ರತಿ ಕ್ಷಣವೂ ಬೆಳೆಯುತ್ತಲೇ ಇದ್ದೇನೆ. ಅವುಗಳಲ್ಲಿ ನನಗೆ ಹೊಸ ಅರ್ಥ ಸ್ಫುರಿಸುತ್ತಿದೆ. ದಿನದಿನವೂ ಅವುಗಳನ್ನು ಹೊಸ ಹೊಸ ಬೆಳಕಿನಲ್ಲಿ ಕಂಡು ಹೊಸ ಹೊಸ ಅರ್ಥಗಳನ್ನೂ ಅರಿಯುತ್ತಿದ್ದೇನೆ. ನನ್ನ ಜತೆಜತೆಗೆ ನೀವೂ ಕೂಡ ಬೆಳೆಯಬೇಕು. ನನ್ನ ಅನಂತರ ಏನಾಗುತ್ತದೆ ಎಂಬುದನ್ನು ತಿಳಿಯುವ ಚಿಂತೆ ನನಗಿರಕೂಡದು. ಆದುದರಿಂದ ನನ್ನನ್ನು ಮರೆತುಬಿಡಿ. ನೀವು ಭದ್ರವಾಗಿ ಅಂಟಿಕೊಳ್ಳಬೇಕಾದುದು ನನ್ನ ಹೆಸರಿಗಲ್ಲ, ತತ್ತ್ವಗಳಿಗೆ. ಅದರ ಅಳತೆಗೋಲಿನಿಂದ ನಿಮ್ಮ ಒಂದೊಂದು ಚಟುವಟಿಕೆಯನ್ನೂ ಅಳೆದು, ಉದ್ಭವಿಸಬಹುದಾದ ಎಲ್ಲ ಸಮಸ್ಯೆಗಳನ್ನೂ ನಿರ್ಭೀತರಾಗಿ ಎದುರಿಸಿ. (ಹರಿಜನ, ೧-೫-೧೯೪೭)

ನಿಲ್ಲುವುದು ನನ್ನ ಕೃತಿಯೇ ಹೊರತು, ನನ್ನ ಮಾತೂ ಅಲ್ಲ, ಬರಹವೂ ಅಲ್ಲ. ಇತ್ತೀಚೆಗೆ ನಾನು ಈ ಮಾತನ್ನು ಅನೇಕ ಸಲ ಹೇಳಿದ್ದೇನೆ. ಸಕಲ ಶಾಸ್ತ್ರಗಳೂ ಒಂದು ವೇಳೆ ವಿನಾಶಹೊಂದುವುದಾದರೂ ಹಿಂದೂ ಧರ್ಮದ ಸಾರವನ್ನು ಸಾರಲು ಈಶೋಪನಿಷತ್ತಿನ ಒಂದು ಮಂತ್ರ ಸಾಕು; ಆದರೆ ಅದನ್ನು ಅನುಷ್ಠಾನಕ್ಕೆ ತರಲು ಯಾರೊಬ್ಬರೂ ಇರದಿದ್ದರೆ ಆ ಒಂದು ಮಂತ್ರವೂ ನಿರರ್ಥಕ. ಅದರಂತೆಯೇ ನನ್ನ ಮಾತು, ಬರಹಗಳು ಸತ್ಯ-ಅಹಿಂಸೆಯ ಮಹಾತತ್ತ್ವಗಳನ್ನು ರಕ್ತಗತಮಾಡಿಕೊಳ್ಳಲು ನಿಮಗೆ ನೆರವು ನೀಡಿರುವಷ್ಟರ ಮಟ್ಟಿಗೆ ಮಾತ್ರ ಉಪಯುಕ್ತ. ಅವುಗಳನ್ನು ನೀವು ಹಾಗೆ ರಕ್ತಗತಮಾಡಿಕೊಳ್ಳದಿದ್ದರೆ ನನ್ನ ಬರಹಗಳಿಂದ ನಿಮಗೆ ಯಾವ ಪ್ರಯೋಜನವೂ ಇಲ್ಲ. ಒಬ್ಬ ಸತ್ಯಾಗ್ರಹಿಯಾಗಿ ನಾನು ಈ ಒಂದೊಂದು ಮಾತನ್ನೂ ಉದ್ದೇಶಪೂರ್ವಕವಾಗಿ ಹೇಳುತ್ತಿದ್ದೇನೆ. (ಹರಿಜನ, ೧-೫-೧೯೪೭)

ಗಾಂಧೀ ಪಂಥ ಎಂಬುದು ದೋಷದ ಪ್ರತೀಕವಾಗಿರುವುದಾದರೆ ಅದು ನಾಶಹೊಂದಲಿ. ಸತ್ಯ-ಅಹಿಂಸೆಗಳು ಅಜರಾಮರ. ಆದರೆ ಗಾಂಧೀ ಪಂಥ ಎಂಬುದು ಪಂಥಾಭಿಮಾನಕ್ಕೆ ಮತ್ತೊಂದು ಹೆಸರಾದರೆ ಅದು ವಿನಾಶಯೋಗ್ಯವೇ ನಿಜ. ತಾನು ಗಾಂಧಿಯ ಅನುಯಾಯಿ ಎಂದು ಯಾರೊಬ್ಬನೂ

ಹೇಳದಿರಲಿ. ನಾನು ನನ್ನನ್ನು ಅನುಸರಿಸಿದರೆ ಸಾಕು. ಅದರಲ್ಲೂ ನಾನು ಎಂತಹ ಅಸಮರ್ಪಕ ಅನುಯಾಯಿ ಎಂಬುದನ್ನು ನಾನು ಬಲ್ಲೆ; ಯಾವ ತತ್ತ್ವಗಳಿಗಾಗಿ ನಾನು ನಿಂತಿದೇನೆಯೊ ಅವುಗಳಿಗೆ ತಕ್ಕಂತೆ ನಾನು ಬಾಳುತ್ತಿಲ್ಲ. ನೀವು ಅನುಯಾಯಿಗಳಲ್ಲ; ಸಹವಿದ್ಯಾರ್ಥಿಗಳು, ಸಹಯಾತ್ರಿಕರು, ಸಹ-ಅನ್ವೇಷಕರು, ಸಹ-ಉದ್ಯೋಗಿಗಳು. (ಹರಿಜನ, ೨-೩-೧೯೪೦)

ಸತ್ಯ-ಅಹಿಂಸೆಗಳನ್ನು ಕೇವಲ ವೈಯಕ್ತಿಕ ಅನುಷ್ಠಾನದ ತತ್ತ್ವಗಳನ್ನಾಗಿ ಮಾಡಿಕೊಂಡರೆ ಸಾಲದು; ಸಮಾಜ-ಸಮುದಾಯಗಳು, ರಾಷ್ಟ್ರಗಳೂ ಕೂಡ ಅವುಗಳನ್ನು ಅನುಷ್ಠಾನಕ್ಕೆ ತರುವಂತಾಗಬೇಕು. ಹೇಗೇ ಆಗಲಿ, ಅದಂತೂ ನನ್ನ ಕನಸು. ನನ್ನ ಬದುಕೆಲ್ಲ ಅದರ ಸಾಕ್ಷಾತ್ಕಾರದ ಪ್ರಯತ್ನಕ್ಕಾಗಿಯೆ, ನನ್ನ ಸಾವೂ ಅದರಲ್ಲಿಯೆ. ನನ್ನ ಶ್ರದ್ಧೆ ನನಗೆ ಅನುದಿನವೂ ನೂತನ ಸತ್ಯಗಳನ್ನು ಕಾಣಿಸುತ್ತಿದೆ. ಆತ್ಮದ ಸ್ವರೂಪವೇ ಅಹಿಂಸೆ; ಆದುದರಿಂದಲೇ ಸಕಲರೂ ಬದುಕಿನ ಸಕಲ ವ್ಯವಹಾರಗಳಲ್ಲೂ ಅದನ್ನು ಅನುಷ್ಠಾನಕ್ಕೆ ತರಬೇಕು. ಎಲ್ಲ ಕ್ಷೇತ್ರಗಳಲ್ಲೂ ಅದನ್ನು ಅನುಷ್ಠಾನ ಮಾಡಲಾಗದಿದ್ದರೆ ಅದಕ್ಕೆ ಔಪಯೋಗಿಕ ಮೌಲ್ಯವೇ ಇಲ್ಲ.

(ಹರಿಜನ, ೧-೫-೧೯೩೭)

ನನ್ನ ದೇಶಕ್ಕಾಗಿ ನಾನು ತ್ಯಾಗ ಮಾಡಲಾರದುದು ಈ ಜಗತ್ತಿನಲ್ಲಿ ಏನೂ ಇಲ್ಲ—ಎರಡರ ಹೊರತು. ಅವು ಸತ್ಯ ಮತ್ತು ಅಹಿಂಸೆ. ಇಡೀ ಜಗತ್ತನ್ನೇ ನನ್ನ ಮುಂದಿಟ್ಟರೂ ಈ ಎರಡನ್ನು ಮಾತ್ರ ನಾನು ಬಿಡಲಾರೆ. ಏಕೆಂದರೆ ನನ್ನ ಪಾಲಿಗೆ ಸತ್ಯವೇ ದೇವರು. ಸತ್ಯಸಾಧನೆಗೆ ಅಹಿಂಸೆಯಲ್ಲದೆ ಅನ್ಯ ಪಥವಿಲ್ಲ. ಸತ್ಯ ಅಥವಾ ಭಗವಂತನನ್ನು ಬಲಿಗೊಟ್ಟು ಭಾರತಕ್ಕೆ ಸೇವೆಸಲ್ಲಿಸುವ ಆಲೋಚನೆಯನ್ನು ನಾನು ಮಾಡಲಾರೆ. ನಾನು ಬಲ್ಲೆ: ಸತ್ಯವನ್ನು ಕೈಬಿಡಬಲ್ಲವನು ತನ್ನ ದೇಶವನ್ನೂ ಕೈಬಿಡಬಲ್ಲ, ಆಪ್ತೇಷ್ಟರನ್ನೂ ಕೈಬಿಡಬಲ್ಲ. ನನ್ನಾತ್ಮ ಮತ್ತು ನನ್ನ ಕರ್ತ ಇಬ್ಬರೂ ಮೆಚ್ಚುವಂತೆ ನಾನು ಹೋದೆಡೆಯೆಲ್ಲ ನನ್ನ ಕರ್ಮಕ್ಷೇತ್ರದ ಗಾಯತ್ರಿಗಳಾದ ಈ ನನ್ನ ಧರ್ಮಸೂತ್ರಗಳನ್ನು ಸಾರುತ್ತ ಹೋಗುತ್ತೇನೆ.

ನನ್ನದು ಧರ್ಮಮಾರ್ಗ, ನಾವು ಧರ್ಮಿಗಳು, ಆದುದರಿಂದ ಉಳಿದವರಿಗೆ ನಾವು ಶ್ರೇಷ್ಠರು ಎಂಬ ಅಹಂಭಾವ ನಮ್ಮನ್ನು ಆಕ್ರಮಿಸುವ ಭಯ ಯಾವಾ

ಗಲೂ ಇದ್ದೇ ಇದೆ. ಇತರರಿಂದ ನಾನು ನಿರೀಕ್ಷಿಸುವಂತೆ ಸ್ವವಿಮರ್ಶೆಯಲ್ಲಿ ಸತ್ಯದಂತೆಯೆ ನಿಷ್ಠುರವಾಗಿರಲು ನಾನು ಪ್ರಯತ್ನಿಸುತ್ತೇನೆ.

(ಹರಿಜನ, ೧-೫-೧೯೩೭)

'ಗಾಂಧೀ ತತ್ತ್ವ' ಎಂದು ಯಾವುದನ್ನು ಕರೆಯುತ್ತಾರೊ ಅದನ್ನು, ಅದರ ಪ್ರಸಾರವಿಧಾನಗಳನ್ನು ವಿಚಾರಿಸೋಣ. ಸತ್ಯ-ಅಹಿಂಸೆಗಳನ್ನು ಕುರಿತು ಪುಸ್ತಕಗಳನ್ನು ಬರೆಯುವುದಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಸತ್ಯ-ಅಹಿಂಸೆಗಳ ಪ್ರಸಾರ ಸಾಧ್ಯ, ಅವುಗಳನ್ನು ಅನುಷ್ಠಾನಕ್ಕೆ ತಂದರೆ, ಅನುಷ್ಠಾನದ ಜೀವನ ಪುಸ್ತಕಕ್ಕಿಂತ ಶ್ರೇಷ್ಠ. ಪುಸ್ತಕ ಮತ್ತು ಪತ್ರಿಕೆಗಳ ಪ್ರಕಟನೆ ಅನಗತ್ಯ ಎಂದು ನಾನು ಹೇಳುತ್ತಿಲ್ಲ. ಅವು ಅನಿವಾರ್ಯವೇನಲ್ಲ ಎಂದಷ್ಟೆ ನನ್ನ ಅಭಿಪ್ರಾಯ. ನಾವು ಸತ್ಯ-ಅಹಿಂಸೆಗಳ ನಿಜವಾದ ಆರಾಧಕರಾಗುವ ಪಕ್ಷದಲ್ಲಿ ಸಮಸ್ಯೆ ಗಳನ್ನು ಪರಿಹರಿಸಲು ಅಗತ್ಯವಾಗಿ ಬೇಕಾದ ಬುದ್ಧಿಶಕ್ತಿಯನ್ನು ಭಗವಂತನೇ ನಮಗೆ ದಯಪಾಲಿಸುತ್ತಾನೆ. ಪ್ರತಿಪಕ್ಷದ ದೃಷ್ಟಿಕೋನವನ್ನು ಅರ್ಥಮಾಡಿ ಕೊಳ್ಳುವ ಇಚ್ಛೆ ಆಂತಹ ಶ್ರದ್ಧೆಯ ಪೂರ್ವಾಂಗವಾಗಿಯೇ ಉಳಿದಿದೆ. ಪ್ರತಿಪಕ್ಷಿಯ ಮನಸ್ಸನ್ನು ಹೊಕ್ಕು ಆತನ ದೃಷ್ಟಿ ಏನೆಂದು ಅರಿಯಲು ಪ್ರಾಮಾಣಿಕವಾಗಿ ಪ್ರಯತ್ನಿಸಬೇಕು. ಹಿಂಸೆಯ ಬಾಯನ್ನೇ ಅಹಿಂಸೆ ನೇರ ವಾಗಿ ಹೊಗುತ್ತದೆ ಎಂಬುದರ ಅರ್ಥ ಇದೇ. ಅಂತಹ ಮನೋಧರ್ಮದ ಕವಚ ನಮಗಿದ್ದರೆ ಅಹಿಂಸೆಯ ತತ್ತ್ವಗಳನ್ನು ಪ್ರಸಾರ ಮಾಡುವ ವಿಶ್ವಾಸ ನಮಗೆ ಬರುತ್ತದೆ. ಅದಿಲ್ಲದೆ ಪುಸ್ತಕ-ಪತ್ರಿಕೆಗಳ ಪ್ರಚಾರ ವ್ಯರ್ಥ.

(ಹರಿಜನ, ೧೩-೫-೧೯೩೯)

ನನ್ನ ಸಲಹೆಗಳಲ್ಲೆಲ್ಲ ಒಂದು ರಕ್ಷಾಸೂತ್ರ ಇದ್ದೇ ಇರುತ್ತದೆ. ತಮ್ಮ ಬುದ್ಧಿಗೂ ಹೃದಯಕ್ಕೂ ಒಪ್ಪಿಗೆಯಾಗದಿದ್ದರೆ ಯಾರೂ ಅವುಗಳನ್ನು ಅನುಸರಿಸ ಬೇಕಾಗಿಲ್ಲ.

(ಹರಿಜನ, ೧೫-೭-೧೯೩೫)

ನನ್ನನ್ನು ಮೆಚ್ಚುವವರಿಗೂ ನನ್ನ ಮಿತ್ರರಿಗೂ ಒಂದು ಧೈರ್ಯ ಹೇಳ ಬಲ್ಲೆ. ಮಹಾತ್ಮಾ ಎಂಬುದನ್ನು ಮರೆತು ನನ್ನನ್ನು ಬರಿಯ 'ಗಾಂಧೀ' ಎಂದು ಭಾವಿಸುವುದಾದರೆ ಅವರು ನನ್ನ ಮೆಚ್ಚುಗೆಗೆ ಹೆಚ್ಚಾಗಿ ಪಾತ್ರರಾಗು ತ್ತಾರೆ. ನಾನು ಯಾವ ತತ್ತ್ವಗಳನ್ನು ಜೀವನದಲ್ಲಿ ಅನುಷ್ಠಾನ ಮಾಡಬೇಕು

ಎಂದು ಕಾರ್ಯಕ್ರಮ ಹಾಕಿಕೊಂಡಿದೇನೆಯೋ ಅದನ್ನು ತಾವು ತಮ್ಮ ಜೀವನ ದಲ್ಲಿ ಅನುಷ್ಠಾನಕ್ಕೆ ತರಬೇಕು; ಇಲ್ಲವೆ ಅದರಲ್ಲಿ ಅವರಿಗೆ ನಂಬುಗೆ ಇರದಿದ್ದ ಪಕ್ಷದಲ್ಲಿ ಅದನ್ನು ಸರ್ವರೀತಿಯಿಂದಲೂ ವಿರೋಧಿಸಬೇಕು—ಇದೇ ನನ್ನ ಮಿತ್ರರು ನನಗೆ ತೋರಿಸಬಹುದಾದ ಪರಮಗೌರವ.

(ಯಂಗ್ ಇಂಡಿಯಾ, ೧೨-೯-೧೯೨೪)

ಯಾವ ಮಹಾ ಉದ್ಯಮದಲ್ಲಿಯೇ ಆಗಲಿ ನಿರ್ಣಯಕಾರಿಯಾಗುವುದು ಹೋರಾಡುವವರ ಸಂಖ್ಯೆಯಲ್ಲ, ಅವರ ಸತ್ತ್ವ. ಜಗತ್ತಿನ ಮಹಾವ್ಯಕ್ತಿಗಳೆಲ್ಲ ಏಕಾಂಗಿಯಾಗಿ ನಿಂತರು. ಝುರತುಷ್ಟ್ರ, ಬುದ್ಧ, ಏಸು, ಮಹಮ್ಮದ್ ಈ ಎಲ್ಲ ಮಹಾಪ್ರವಾದಿಗಳನ್ನೂ ಗಮನಿಸಿ. ನಾನಿನ್ನೂ ಹೆಸರಿಸಬಹುದಾದ ಇತರ ಹಲವರಂತೆಯೇ ಅವರೆಲ್ಲರೂ ಏಕಾಂಗಿಯಾಗಿಯೇ ಕೆಲಸ ಮಾಡಿದರು. ಆದರೆ ಅವರಿಗೆ ತಮ್ಮಲ್ಲಿಯೂ ಭಗವಂತನಲ್ಲಿಯೂ ಜೀವಂತಶ್ರದ್ಧೆಯಿತ್ತು; ಭಗವಂತ ತಮ್ಮ ಪಕ್ಕದಲ್ಲಿದಾನೆಂಬ ವಿಶ್ವಾಸ ಇದ್ದುದರಿಂದ ತಾವು ಏಕಾಕಿಗಳು ಎಂಬ ಭಾವನೆಯೇ ಅವರಿಗೆ ಬರಲಿಲ್ಲ. (ಯಂಗ್ ಇಂಡಿಯಾ, ೧೦-೧೦-೧೯೨೯)

ನನ್ನಲ್ಲಿರುವ ಏನೋ ಒಂದು ವಾಣಿ ನನ್ನ ಸಂಕಟವನ್ನು ಕೂಗಿ ಸಾರು ವಂತೆ ನನ್ನನ್ನು ಪ್ರಚೋದಿಸುತ್ತಿದೆ. ಅದು ಯಾವುದೆಂಬುದನ್ನು ನಾನು ಖಚಿತವಾಗಿ ಬಲ್ಲೆ. ನನ್ನನ್ನೆಂದೂ ವಂಚಿಸದ ನನ್ನೊಳಗಿನ ಆ ವಾಣಿ ಹೇಳುತ್ತದೆ: 'ನೀನು ಒಬ್ಬಂಟಿಗನೇ ಆಗಿ ನಿಲ್ಲಬೇಕಾಗಿ ಬಂದರೂ ಸರಿ, ಇಡಿಯ ಜಗತ್ತನ್ನೇ ಎದುರಿಸಿ ನಿಲ್ಲಬೇಕಾಗುತ್ತದೆ.

'ಜಗತ್ತು ನಿನ್ನನ್ನು ತನ್ನ ಕೆಂಗಣ್ಣಿನಿಂದ ದುರುದುರನೆ ನೋಡಿದರೂ ಸರಿ. ನೀನು ಅದರ ದೃಷ್ಟಿಗೆ ದೃಷ್ಟಿ ಕೊಟ್ಟು ನಿಲ್ಲಬೇಕಾಗುತ್ತದೆ. ಭೀತಿ ಬೇಡ. ನಿನ್ನ ಹೃದಯದಲ್ಲಿ ನೆಲಸಿ ಹೀಗೆಂದು ಹೇಳುತ್ತಿರುವ ಆ ಅಣುರೂಪಿ ಯಲ್ಲಿ ನಿನಗೆ ಶ್ರದ್ಧೆಯಿರಲಿ. ಯಾವುದಕ್ಕಾಗಿ ನೀನು ಬದುಕಿದೀಯೋ ಯಾವುದಕ್ಕಾಗಿ ನೀನು ಮಡಿಯಬೇಕೋ ಅದಕ್ಕಾಗಿ ಮನೆ-ಮಠ-ಮಡದಿ-ಮಕ್ಕಳು—ಸರ್ವಸ್ವವನ್ನೂ ಪರಿತ್ಯಜಿಸು; ಆದರೆ ಅದರ ಸತ್ಯಕ್ಕೆ ಸಾಕ್ಷಿಯಾಗಿ ಬಾಳು. (ಬಾಂಬೆ ಕ್ರಾನಿಕಲ್, ೯-೮-೧೯೪೨)

---

# ವಿಶೇಷ ದೃಷ್ಟಿ

[ ಲೇಖಕರು : ಶ್ರೀ. ರಂಗನಾಥ ದಿವಾಕರ ]

ಮಹಾತ್ಮಾ ಗಾಂಧೀಯವರು ಮಾನವಕುಲಕ್ಕೆ ಕೊಟ್ಟ ಸಂದೇಶವನ್ನು ಒಂದೇ ಶಬ್ದದಲ್ಲಿ ಹೇಳುವುದಾದರೆ 'ಸತ್ಯ' ಎಂದು ಹೇಳಬೇಕಾದೀತು ; ಎರಡು ಶಬ್ದಗಳಲ್ಲಿ ಹೇಳುವುದಾದರೆ 'ಸತ್ಯ-ಅಹಿಂಸೆ' ಎಂದು ಹೇಳಬೇಕಾಗುವುದು. ಸತ್ಯಶೋಧಕನು ಸತ್ಯಲೋಕವನ್ನು ಮುಟ್ಟಬೇಕಾಗಿದ್ದರೆ ಅಹಿಂಸೆಯೇ ರಾಜ ಮಾರ್ಗ ಎಂದು ಅವರು ಸಾರಿದರು. ಗಾಂಧೀಜಿಯವರ ಜೀವನವೆಂದರೆ ಸತ್ಯ-ಅಹಿಂಸೆಗಳ ಮೇಲೆ ಬರೆದ ಜೀವಂತ ಭಾಷ್ಯವೇ ಸೈ. ಅವರು ನುಡಿದುದು, ನಡೆದುದು, ಬರೆದುದು—ಎಲ್ಲವೂ ಕಾಲವಶಾತ್ ನಾಳೆ ಮಾನವರಿಗೆ ಮರೆತು ಹೋದರೂ 'ಸತ್ಯ-ಅಹಿಂಸೆ' ಈ ಎರಡು ಶಬ್ದಗಳು ವಾಯುಮಂಡಲದಲ್ಲಿ ಅಲೆಯುತ್ತಿರುವವರೆಗೆ ಅವರ ಆದೇಶ ನಮ್ಮ ಕಿವಿಯಲ್ಲಿ ದುಮುದುಮಿಸುತ್ತಲೆ ಇರುವುದು.

## ಸತ್ಯದ ಸ್ಮೃತಿಕಾರರು

ಮಹಾತ್ಮರು ಸತ್ಯ-ಅಹಿಂಸೆಗಳ ಮೇಲೆ ಭಾಷ್ಯ ಬರೆದ ಆಚಾರ್ಯರಷ್ಟೇ ಅಲ್ಲ ; ಅವರು ಸನಾತನವಾದ ಸತ್ಯ-ಅಹಿಂಸಾ ಧರ್ಮದ ಸ್ಮೃತಿಕಾರರು. ಅವರು ಸತ್ಯ-ಅಹಿಂಸೆಗಳ ದ್ರಷ್ಟಾರರೆಂದೇ ಹೇಳಬಹುದಾಗಿತ್ತು. ಆದರೆ ವೇದೋಪನಿಷತ್ತುಗಳ ಕಾಲದಲ್ಲಿಯೆ ಇವುಗಳ ಪ್ರಥಮ ದರ್ಶನವಾಗಿರುವುದರಿಂದ ಆಗಿನ ಋಷಿಗಳೇ ಈ ಮಂತ್ರಗಳ ದ್ರಷ್ಟಾರರು. ಗಾಂಧೀಜಿಯವರು ಸ್ಮೃತಿಕಾರರು ಹಾಗೂ ಅದ್ವಿತೀಯ ಭಾಷ್ಯಕಾರರು ಎಂದು ಹೇಳಬೇಕಾಗಿರುವುದು. ಎಲ್ಲಕ್ಕೂ ಹೆಚ್ಚಿನದೆಂದರೆ ಆಧುನಿಕ ಕಾಲದಲ್ಲಿ ಅವರು ಈ ಎರಡೂ ವ್ರತಗಳ ನಿತ್ಯ ನಿಷ್ಠಾಪೂರ್ಣ ಆಚರಣೆಯಿಂದ, 'ಆಚಾರಪ್ರಭವೋ ಧರ್ಮಃ' ಎಂಬ ನ್ಯಾಯದಂತೆ ಪ್ರತ್ಯಕ್ಷ ವ್ಯಾವಹಾರಿಕ ಧರ್ಮಸ್ವರೂಪವನ್ನೂ ಕೊಟ್ಟು ಮಾನವಕುಲಕ್ಕೆ ಮಾರ್ಗದರ್ಶಕರಾಗಿರುವರು. ಒಬ್ಬ ಮಾನವನ ನಿತ್ಯಜೀವನದಲ್ಲಿ ಸತ್ಯ-ಅಹಿಂಸೆಗಳ ಪ್ರತ್ಯಕ್ಷ ಪ್ರತಿಬಿಂಬವನ್ನು ಎಲ್ಲಿಯಾದರೂ ಯಾರಾ

ದರೂ ನೋಡಬೇಕೆಂದಿದ್ದರೆ ಅದು ಗಾಂಧೀಜಿಯವರ ಜೀವನದಲ್ಲಿಯೇ. ಅವರು ಅದಕ್ಕೆ ದೃಷ್ಟಾಂತಸ್ವರೂಪರು.

## ಸತ್ಯದ ವಿವಿಧಾರ್ಥಗಳು

ಸತ್ಯ ಎಂಬ ಶಬ್ದವು ವೇದಕಾಲದಿಂದ ವಿವಿಧಾರ್ಥಗಳಲ್ಲಿ ಉಪಯೋಗಿಸಲ್ಪಟ್ಟಿದೆ. ಆದರೆ ಸಾಮಾನ್ಯವಾಗಿ, ಯಾವಾಗಲೂ ಇರುವ ವಸ್ತು, ಇದ್ದುದನ್ನು ಇದ್ದಕ್ಕಿದ್ದ ಹಾಗೆ ಶಬ್ದರೂಪದಿಂದ ಹೇಳುವಿಕೆ ಇತ್ಯಾದಿಗಳು ಈ ಸಂದರ್ಭದಲ್ಲಿ ಆ ಶಬ್ದದ ಮುಖ್ಯಾರ್ಥಗಳು. ಸತ್ಯದಂತೆ ಯಾವುದು ಇರುವುದೋ ಅದು ವೈದಿಕ ಪರಿಭಾಷೆಯಲ್ಲಿ 'ಋತ' ಎನಿಸುವುದು. ಸತ್ಯಾನುರೂಪಕರ್ಮವು, ಆಚರಣೆಯು ಋತ ಎನಿಸುವುದು. ಆದುದರಿಂದ 'ಸತ್ಯಂ ಚ ಋತಂ ಚ' ಎಂಬ ಎರಡೂ ಶಬ್ದಗಳ ಉಪಯೋಗವು ವೇದದಲ್ಲಿ ಅಲ್ಲಲ್ಲಿ ಕಂಡುಬರುವುದು. ಯಾವುದು ಸತ್ಯಕ್ಕನುಸರಿಸಿಲ್ಲವೋ ಅದು ಅನೃತ (ನ+ಋತ). 'ಸತ್ಯಮೇವ ಜಯತೇ ನಾನೃತಮ್'—ಸತ್ಯವೇ ಜಯಿಸುವುದು, ಅನೃತ (ಸತ್ಯದಂತೆ, ಸತ್ಯಾನುಸಾರವಾಗಿ ಇಲ್ಲದಿದ್ದುದು) ಜಯಿಸಲಾರದು ಎಂದು ಸಾರುವಾಗ ಋಷಿಗಳು ಸತ್ಯ ಮತ್ತು ಋತ ಇವೆರಡನ್ನೂ ಹೊಂದಿಸಿ, ಅವುಗಳ ಸಂಬಂಧವನ್ನು ಜೋಡಿಸಿ ಹೇಳಿ ತಮ್ಮ ಅರ್ಥವನ್ನು ಸ್ಪಷ್ಟಗೊಳಿಸಿದಾರೆ. 'ಸತ್ಯಾತ್ ನಾಸ್ತಿ ಪರೋ ಧರ್ಮಃ' ಎಂದು ಹೇಳುವಲ್ಲಿಯೂ ಇದೇ ಅರ್ಥವು ಅಭಿಪ್ರೇತ ಇರುವುದು.

## ಸತ್ಯದ ನಮ್ರ ಶೋಧಕ

ಸತ್ಯವನ್ನು ಕಂಡು ಸತ್ಯದಂತೆ ಆಚರಿಸುವುದು ಬಹಳ ಸುಲಭ ಎಂದು ಯಾರಾದರೂ ತಿಳಿದಿದ್ದರೆ ಅದು ದೊಡ್ಡ ತಪ್ಪುತಿಳಿವಳಿಕೆಯೆಂದೇ ಹೇಳಬೇಕಾಗುವುದು. ಸತ್ಯವನ್ನು ಕಾಣುವುದು ಮೊದಲು ಕಠಿಣ, ಆಮೇಲೆ ಅದರಂತೆ ವರ್ತಿಸುವುದು ಅದಕ್ಕೂ ನೂರರಷ್ಟು ಕಠಿಣ. ಆದುದರಿಂದಲೆ, ನಾನು ಸತ್ಯದ ಒಬ್ಬ ನಮ್ರ ಶೋಧಕ, ಸೇವಕ, ಪೂಜಾರಿ; ಧೂಳಿಯ ಒಂದು ಅಣುರೇಣುವಿಗಿಂತ ಕಡೆ ಎಂದು ಭಾವಿಸಿ ಸತ್ಯದ ಶೋಧವನ್ನು ನಡೆಸಬೇಕು ಎಂದು ಗಾಂಧೀಜಿಯವರು ಹೇಳಿರುವರು. ಸತ್ಯದ ರೂಪ ಅಷ್ಟು ಅತಿ

ಸೂಕ್ಷ್ಮ, ತಿಳಿಯಲು ಅಷ್ಟು ಕಠಿಣ. ಯಾಕೆಂದರೆ, ಒಬ್ಬನು ಈ ಹೊತ್ತು ಸತ್ಯವೆಂದು ತಿಳಿದುಕೊಂಡದ್ದು ಮರುಕ್ಷಣಕ್ಕೆ ಅಥವಾ ನಾಳೆ ಅಥವಾ ಕಾಲಾಂತರದಿಂದ ಅವನಿಗೆ ಬೇರೆ ಕಾಣಬಹುದು ; ಅದು ಅಸತ್ಯವೆಂದು ಅನುಭವ ಬರಬಹುದು. ಆದುದರಿಂದಲೇ, ಆಯಾ ಕಾಲಕ್ಕೆ ವಿಮರ್ಶಿಸಿ, ಸರ್ವತೋಪರಿ ಪರೀಕ್ಷಿಸಿದ ಬಳಿಕ ಅದನ್ನು ಸತ್ಯವೆಂದು ಭಾವಿಸಿ ನಡೆಯ ಬೇಕು ; ಹೀಗೆ ಮಾಡುವುದೇ ಸತ್ಯವ್ರತ. ಅಲ್ಪಶಕ್ತಿಯ ಮಾನವಮಾತ್ರಕ್ಕೆ ಇಷ್ಟೇ ಸಾಧ್ಯ ಎಂದು ಗಾಂಧೀಜೀ ಹೇಳಿರುವರು.

ಇದೇ ಸತ್ಯ, ಇದೊಂದೇ ಸತ್ಯ, ಇದಲ್ಲದ್ದೆಲ್ಲ ಅಸತ್ಯ ; ಎಲ್ಲರೂ ಇದನ್ನೇ ಸತ್ಯವೆಂದು ಮನ್ನಿಸಲಿಕ್ಕೆ ಬೇಕು ಎಂದು ಹಟ ಹಿಡಿಯುವುದಾಗಲಿ, ಆ ಸತ್ಯ ವನ್ನು ಬಲಾತ್ಕಾರದಿಂದ ಇತರರ ಮೇಲೆ ಹೇರುವುದಾಗಲಿ ಅವರಿಗೆ ಇಷ್ಟ ವಿರಲಿಲ್ಲ. ಇದು ನನ್ನ ಮಟ್ಟಿಗೆ ಈಗ ಸತ್ಯ, ಇದರಂತೆ ಇತರರಿಗೆ ಹೇಳುವುದು ನನ್ನ ಕರ್ತವ್ಯ, ಈ ಸತ್ಯಕ್ಕನುಸಾರವಾಗಿ ಈಗ ನಾನು ನಡೆಯುವುದು ಅವಶ್ಯ ಎಂಬ ವೃತ್ತಿಯಿಂದಲೆ ಅವರು ಸಾಗುತ್ತಿದ್ದರು. ಅವರು ಈ ವಿಷಯದಲ್ಲಿ ಅಹಿಂಸಾವ್ರತವನ್ನು ಕೈಕೊಂಡುದಕ್ಕೆ, ಸತ್ಯವನ್ನು ಕುರಿತು ಇದ್ದ ಅವರ ಈ ನಮ್ರವೃತ್ತಿಯೇ ಕಾರಣ.

## ಸತ್ಯದ ಸಪ್ತಮುಖಗಳು

ಸತ್ಯದತ್ತ ಸೂಕ್ಷ್ಮವಾಗಿ ನೋಡಿದರೆ ಸತ್ಯದ ಬಗ್ಗೆ ಇದ್ದ ಅವರ ವೃತ್ತಿಯ ರಹಸ್ಯ ಗೊತ್ತಾಗುವುದು. ಇದ್ದ ವಸ್ತುವನ್ನು ಇದ್ದಕ್ಕಿದ್ದ ಹಾಗೆ ನೋಡುವುದು, ಕಾಣುವುದು, ಹೇಳುವುದು ಇದರ ಅರ್ಥವೇನು ? ಅಲ್ಪಶಕ್ತಿ ಮಾನವನು ಇದನ್ನು ಪರಿಪೂರ್ಣವಾಗಿ ಮಾಡಬಲ್ಲನೋ ? ಅಹಂಭಾವ, ಸ್ವಾರ್ಥ ಇತ್ಯಾದಿ ಭಾವನೆಗಳಿಂದ ಕೂಡಿದವನು, ತೀರ ಮರ್ಯಾದಿತ ಶಕ್ತಿಯುಳ್ಳವನು ಇದನ್ನು ಎಷ್ಟರ ಮಟ್ಟಿಗೆ ಮಾಡಬಲ್ಲನು ? ಮೇಲಾಗಿ ಒಂದೇ ಸತ್ಯ ಒಬ್ಬ ಮಾನವನ ಮಟ್ಟಿಗೆ ಸಪ್ತರೂಪವಾಗಿ, ಏಳು ಮುಖವಾಗಿ ಕಾಣಬಲ್ಲದು. ಉದಾಹರ ಣಾರ್ಥವಾಗಿ ಚಂದ್ರದರ್ಶನವನ್ನು ಇಟ್ಟುಕೊಳ್ಳುವ. ಒಂದು ಚಂದ್ರಬಿಂಬ ಯಾವುದೊಂದು ವರುಷ ಭಾರತ ಹುಣ್ಣಿಮೆಯ ದಿನ ಒಬ್ಬನಿಗೆ ಕಂಡಿತೆಂದು ತಿಳಿಯುವ. ಕಣ್ಣಿನಿಂದ ಹಾಗೂ ಪಂಚೇಂದ್ರಿಯಗಳಿಂದ ಅವನಿಗೆ ಆ ದಿನ,

ಆ ಕ್ಷಣ ಆದ ಚಂದ್ರದರ್ಶನ ಹಾಗೂ ಚಂದ್ರನ ನಾಮರೂಪಗುಣಕರ್ಮ ಪರಿಣಾಮ, ಇವುಗಳ ಅನುಭವ ಇವು ಚಂದ್ರ ಎಂಬ ಸತ್ಯವಸ್ತುವಿನ ಒಂದು ರೂಪ. ಇದನ್ನೆಲ್ಲ ಅವನು ಸ್ಮೃತಿಪಟಲದಲ್ಲಿ ಫೋಟೋದಂತೆ ಸಂಗ್ರಹಿಸಿಡುವುದು ಆ ಸತ್ಯದ ಎರಡನೆಯ ರೂಪ. ಅದನ್ನೇ ಅವನು ನೆನಪಿಗೆ ತರುವಾಗ ಅದೆಲ್ಲ ಯಾವ ರೂಪವನ್ನು ಪಡೆಯುವುದೋ ಅದು ಅದರ ಮೂರನೆಯ ರೂಪ. ಯಾವ ಸಂದರ್ಭದಲ್ಲಿ ಅವನು ಮೊದಲು ಆ 'ಚಂದ್ರ' ಎಂಬ ಸತ್ಯವನ್ನು ಕಂಡಿರುವನೋ ಆ ಸಂದರ್ಭವಲ್ಲದ ಇನ್ನೊಂದು ಸಂದರ್ಭದಲ್ಲಿ ಅದನ್ನು ನೆನಪಿಗೆ ತರುತ್ತಿರುವುದರಿಂದ ಅದು ಆ ಸತ್ಯದ ಚತುರ್ಥರೂಪ. ಅದೇ ಚಂದ್ರನನ್ನು ಕನಸಿನಲ್ಲಿ ಕಾಣುವುದಾದರೆ ಅದು ಆ ಸತ್ಯದ ಪಂಚಮರೂಪ. ಅವನ ಸ್ಮರಣಪಟಲದಾಚೆ ತಳ-ಚಿತ್ತ(ಸಬ್-ಕಾನ್‌ಷಸ್)ದಲ್ಲಿ ಸಂಗ್ರಹಿತವಾಗುವ ಆ ಚಂದ್ರನ ರೂಪ ಅದು ಆರನೆಯ ರೂಪ. ಈ ತನ್ನ ಅನುಭವ ಎರಡನೆಯವರಿಗೆ ಹೇಳುವಾಗ ಅದಕ್ಕೆ ಕೊಡತಕ್ಕ ಶಬ್ದರೂಪ (ಅನುಭವವನ್ನು ಶಬ್ದರೂಪದಲ್ಲಿ ಇದ್ದಕ್ಕಿದ್ದ ಹಾಗೇ ಹೇಳುವುದು ಅಸಾಧ್ಯ) ಇದು ಸತ್ಯದ ಏಳನೆಯ ರೂಪ!

ಹೀಗೆ ಒಂದೇ ಸತ್ಯವು ಮಾನವನ ಅತ್ಯಂತ ಪರಿಮಿತ ಹಾಗೂ ಅಲ್ಪಶಕ್ತಿಯ ಮೂಲಕ ಸಪ್ತಮುಖವಾಗಿ ಸಪ್ತರೂಪದಿಂದ ಪ್ರತೀತವಾಗುವುದು. ಮೇಲಾಗಿ ಚಿತ್ತ, ವಿಶ್ವ, ನಮಗಾಗುವ ಅನುಭವ ಇವು ಜಡವಸ್ತುಗಳಂತೆ ಅಥವಾ ನಿರ್ಜೀವ ವಸ್ತುಗಳಂತೆ ಸ್ಥಿರವಿಲ್ಲ; ಇವೆಲ್ಲ ಗತಿಶೀಲವಿರುವುವು, ಕ್ಷಣಕ್ಷಣವೂ ಅವುಗಳಲ್ಲಿ ಹೆಚ್ಚು ಕಡಮೆಗಳಾಗುವುವು. ಹೀಗಿರುವುದರಿಂದಲೆ ಗಾಂಧೀಜಿಯವರು, ಸತ್ಯವನ್ನು ನಾವು ನಮ್ರಾತಿನಮ್ರರಾಗಿ ಶೋಧಿಸಬೇಕು, ಎಂದು ಸಾರಿದರು; ಸತ್ಯದ ನಿಜದರ್ಶನವೇ ದೇವದರ್ಶನ, ಸತ್ಯವೇ ದೇವರು ಎಂದು ಘೋಷಿಸಿದರು.

## ಸತ್ಯಾಗ್ರಹಿ

ಸತ್ಯವನ್ನು ಹುಡುಕುವವರು, ನೋಡುವವರು, ಅದರಂತೆ ವರ್ತಿಸುವವರು ಇವರೆಲ್ಲರಿಗೂ ಸಂಸ್ಕೃತದಲ್ಲಿ ಹಲವಾರು ಶಬ್ದಗಳು ರೂಢವಾಗಿವೆ.

ಸತ್ಯಕಾಮ, ಸತ್ಯದರ್ಶಿ, ಸತ್ಯವಂತ, ಸತ್ಯನಿಷ್ಠ, ಸತ್ಯಸಂಧ, ಸತ್ಯಶೀಲ, ಸತ್ಯವ್ರತ ಇತ್ಯಾದಿ ಶಬ್ದಗಳು ಎಲ್ಲರಿಗೂ ಪರಿಚಿತವಿರುವುವು.

ಆದರೆ 'ಸತ್ಯಾಗ್ರಹಿ' ಎಂಬ ಶಬ್ದ ಹಾಗೂ ಅದರಿಂದ ಬೋಧವಾಗುವ ವಿಶೇಷವಾದ ಧರ್ಮ ಅಥವಾ ಮಾರ್ಗ ಇದು ಸಂಸ್ಕೃತಕ್ಕೆ, ಮಾನವಕುಲಕ್ಕೆ, ಸಮಾಜಶಾಸ್ತ್ರಕ್ಕೆ ಗಾಂಧೀಜಿಯವರು ಕೊಟ್ಟ ವಿಶೇಷವಾದ ಹಾಗೂ ಅಮೋಘವಾದ ಕೊಡುಗೆ ಇದೆ, ಎಂದು ಹೇಳಬಹುದು. ಅವರು ಆಜನ್ಮ ಹಾಗೂ ಆಜೀವ ಸತ್ಯದ ಆಗ್ರಹವನ್ನು ತೊಟ್ಟರು. ಈ ಆಗ್ರಹವನ್ನು ತೊಟ್ಟು ಮಾರ್ಗ ಕ್ರಮಣ ಮಾಡುತ್ತಿರುವಾಗಲೆ ಅವರಿಗೆ ಅಹಿಂಸೆಯ ದರ್ಶನವಾಯಿತು, ಅಹಿಂಸಾರತ್ನ ಅವರ ಕೈಸೇರಿತು.

## ಅಹಿಂಸೆ

ಸತ್ಯಕ್ಕೆ, ಸತ್ಯಧರ್ಮಕ್ಕೆ ಇದ್ದಂತೆಯೇ ಅಹಿಂಸೆಗೆ, ಅಹಿಂಸಾವ್ರತಕ್ಕೆ ಪೂರ್ವಪರಂಪರೆಯಿದೆ. ಅದು ಸನಾತನಧರ್ಮದ ಅವಿಭಾಜ್ಯ ಅಂಗವಿದೆ. 'ಅಹಿಂಸನ್ ಸರ್ವತೀರ್ಥೇಭ್ಯಃ' ಎಂದು ಸಾರಿದ ಉಪನಿಷತ್ತುಗಳು ಅಹಿಂಸಾ ಧರ್ಮದ ಮೇಲ್ಮೆಯನ್ನು ಸಾರಲಾರಂಭಿಸಿದವು ಎಂದು ಹೇಳಬಹುದು. ಬಳಿಕ ಮಹಾವೀರನಿಗಿಂತ ಪೂರ್ವದಲ್ಲಿ ಸುಮಾರು ೨೫೦ ವರುಷಗಳಾಚೆ ಅಂದರೆ ಕ್ರಿಸ್ತಪೂರ್ವ ಒಂಬತ್ತನೆಯ ಶತಮಾನದಲ್ಲಿ ಪಾರ್ಶ್ವನಾಥನು ಅಹಿಂಸಾವ್ರತಕ್ಕೆ ತನ್ನ ಚತುರ್ಯಾಮ (ನಾಲ್ಕು ಸಂಯಮಗಳುಳ್ಳ) ಧರ್ಮದಲ್ಲಿ ಪ್ರಥಮ ಸ್ಥಾನವನ್ನು ಕೊಟ್ಟನು. ಮಹಾವೀರನು ಅಹಿಂಸೆಗೆ ಎಲ್ಲದಕ್ಕೂ ಪ್ರಥಮ ಸ್ಥಾನವನ್ನು ಕೊಟ್ಟುದಲ್ಲದೆ 'ಅಹಿಂಸಾ ಪರಮೋ ಧರ್ಮಃ' ಎಂದು ಸಾರಿದನು. ಮುಂದೆ ಬುದ್ಧ, ಅಶೋಕ, ಕ್ರೈಸ್ತ, ಇವರೆಲ್ಲರೂ ಅಹಿಂಸೆಗೆ ಬಹಳ ದೊಡ್ಡ ಸ್ಥಾನವನ್ನು ಕೊಟ್ಟು ಮಾನವಕುಲವು ಅಹಿಂಸಾಧರ್ಮದ ಆಧಾರದ ಮೇಲೆಯೆ ಬೆಳೆಯಬಲ್ಲುದು ಎಂಬುದನ್ನು ಉದ್ಘೋಷಿಸಿದರು.

ಶತ್ರುಗಳನ್ನು ಕುರಿತು ಕೂಡ ಅಹಿಂಸಾಧರ್ಮವನ್ನೇ ಪರಿಪಾಲಿಸಬೇಕೆಂದವರಲ್ಲಿ ಗಾಂಧೀಜಿಯವರು ಎಲ್ಲಕ್ಕೂ ಹಿರಿದಾದವರು ಎಂದು ಹೇಳಲು ಅಡ್ಡಿ ಇಲ್ಲ. ಅಹಿಂಸೆಯು ಕೇವಲ ಸನ್ಯಾಸಿಗಳ ಧರ್ಮವಲ್ಲ; ಕೇವಲ ವೈಯಕ್ತಿಕ ಮೋಕ್ಷದ ಮಾರ್ಗವಲ್ಲ; ಬರೀ ಬಿಡಿ ವ್ಯಕ್ತಿಗಳಷ್ಟೇ ಆಚರಿಸತಕ್ಕ

ವ್ರತವಲ್ಲ; ಅಹಿಂಸೆ ಇದು ಒಂದು ವೃತ್ತಿ, ಒಂದು ಭಾವ. ಕಾಯೇನ ವಾಚಾ ಮನಸಾ ಯಾರನ್ನೂ ಎಂದಿಗೂ ನೋಯಿಸದೆ ಬೇಯಿಸದೆ ಸದಾಕಾಲವೂ ಪ್ರೇಮಭರಿತರಾಗಿ, ಸರ್ವರಿಗೂ ಶುಭವನ್ನಿಚ್ಛಿಸುತ್ತ, ಸರ್ವರ ಸೇವೆಯಲ್ಲಿ ಸದಾ ನಿರತರಾಗಿರುವುದೆ ಅಹಿಂಸಾಧರ್ಮ ಎಂದು ಗಾಂಧೀಜಿಯವರು ಪದೇ ಪದೇ ಹೇಳಿದಾರೆ. ಅಲ್ಲದೆ ವ್ಯಕ್ತಿ, ಸಮಾಜ, ದೇಶ, ರಾಷ್ಟ್ರ—ಇವರಲ್ಲಿ ಇರುವ ಹಾಗೂ ಉಂಟಾಗುವ ದ್ವೇಷಾಸೂಯೆಗಳನ್ನೂ ಆ ಮೂಲಕ ಉದ್ಭವಿಸುವ ಅನ್ಯಾಯ ಘರ್ಷಣೆಗಳನ್ನೂ ಯಾವ ರೀತಿ ಪರಿಹರಿಸಬೇಕು ಎಂಬ ಬಗ್ಗೆ ಒಂದು ಹೊಸ ಶಾಸ್ತ್ರವನ್ನೆ ಅವರು ನಿರ್ಮಿಸಿದಾರೆ. ಆ ಶಾಸ್ತ್ರಕ್ಕೇ, ಆ ರೀತಿನೀತಿಗಳಿಗೇ, ಆ ಧರ್ಮಕ್ಕೇ ಅವರು 'ಸತ್ಯಾಗ್ರಹ' ಎಂಬ ಹೆಸರನ್ನು ಇಟ್ಟರು. ಅದು ಒಂದು ಧರ್ಮವೂ ಸೈ; ಒಂದು ಮಾರ್ಗವೂ ಸೈ; ಒಂದು ಶಾಸ್ತ್ರವೂ ಹೌದು; ಅನ್ಯಾಯಾದಿಗಳನ್ನು ಹೋಗಲಾಡಿಸಲು ಒಂದು ಪರಿಹಾರವೂ ಸಹ; ದುಷ್ಟರಿಂದ ಮತ್ತು ಪಾತಕಿಗಳಿಂದ ಸುರಕ್ಷಿತವಾಗಿರುವ ರಕ್ಷಾಕವಚವೂ ನಿಜ; ದ್ವೇಷಾದಿಗಳೊಡನೆ ಹೋರಾಡುವ ಆಯುಧವೂ ಸೈ; ಸತ್ಯಾಗ್ರಹದಲ್ಲಿ ಸಾಧ್ಯ-ಸಾಧನಗಳ ಏಕರಸತೆ ಇದೆ; ಧರ್ಮ-ಮೋಕ್ಷಗಳ ಸಮನ್ವಯವಿದೆ.

## ಮಹಾಸಮನ್ವಯ

ಒಂದು ರೀತಿ ನೋಡಿದರೆ, ಸನಾತನ ಧರ್ಮದ ಬೀಜಮಂತ್ರವಾದ 'ಸತ್ಯಾನ್ನಾಸ್ತಿ ಪರೋ ಧರ್ಮಃ' ಹಾಗೂ ಸನಾತನ ಧರ್ಮದ ಬಲವಾದ ಅಂಗವಾದ ಜೈನಸಂಪ್ರದಾಯದ ಬೀಜಮಂತ್ರವಾದ 'ಅಹಿಂಸಾ ಪರಮೋ ಧರ್ಮಃ' ಇವುಗಳ ಮಹಾಸಮನ್ವಯವು 'ಸತ್ಯಾಗ್ರಹ' ಧರ್ಮದಲ್ಲಿ ಸ್ಪಷ್ಟವಾಗಿ ಗೋಚರವಾಗುವುದು. ಈ ಸಮನ್ವಯದ ಶ್ರೇಯಸ್ಸು ಗಾಂಧೀಜೀ ಅವರಿಗೇ ಸೇರುವುದು.

ಗಾಂಧೀಪ್ರಣೀತ ಸತ್ಯ-ಅಹಿಂಸೆಗಳ ಅಭ್ಯಾಸವು ನಮ್ಮನ್ನು ಎಲ್ಲಿಯವರೆಗೆ ಒಯ್ಯಬಲ್ಲದು, ಒಯ್ಯಬಹುದು ಎಂಬುದನ್ನು ಮೇಲೆ ಕಾಣಿಸಲಾಗಿದೆ. ಗಾಂಧೀಜಿಯವರು ಆ ತತ್ತ್ವಗಳನ್ನು ಅಕಸ್ಮಾತ್ತಾಗಿ ಹುಟ್ಟಿಸಿಲ್ಲ ಅಥವಾ ಚೇಷ್ಟೆಗಾಗಿ ನಮ್ಮೆದುರು ಇಟ್ಟಿಲ್ಲ. ಅವು ಭಾರತೀಯ ಸಂಸ್ಕೃತಿಯ ಹಾಗೂ

ಸನಾತನ ಧರ್ಮದ ಮಹಾಪ್ರವಾಹದ ಗುಂಟ ಹರಿಯುತ್ತ ಬಂದಿವೆ. ಆ ಸಂದರ್ಭದಲ್ಲಿ ಅವುಗಳ ರಹಸ್ಯ, ಬಲಾಬಲ ತಿಳಿಯಬಲ್ಲದು; ಅವುಗಳ ಪೂರ್ಣ ಅರ್ಥ ತಿಳಿದು ನಮಗೆ ಚೆನ್ನಾಗಿ ಉಪಯುಕ್ತವಾಗುವುವು.

## ಸಭ್ಯತೆಯ ಪ್ರಗತಿ

ಇದಲ್ಲದೆ, ಮಾನವಕುಲದ ಸಭ್ಯತೆಯ ಪರಂಪರೆಯಲ್ಲಿಯೂ ಆ ಸತ್ಯ-ಅಹಿಂಸಾತತ್ತ್ವಗಳ ಅಭ್ಯಾಸ ಅಗತ್ಯ. ಮೇಲ್ನೋಟಕ್ಕೆ ಹಿಂಸೆ, ಅಸತ್ಯ, ಯುದ್ಧಗಳು, ದ್ವೇಷ ನಮ್ಮ ಇತಿಹಾಸದಲ್ಲಿ ಬೇಕಾದಷ್ಟು ಎದ್ದುಕಾಣಿಸಿದರೂ ನಮ್ಮ ಸಾಂಸ್ಕೃತಿಕ ಬೆಳವಣಿಗೆ, ಸಭ್ಯತೆಯ ಪ್ರಗತಿ ಅವುಗಳಿಂದಾಗದೆ ಸತ್ಯ-ಅಹಿಂಸೆಗಳ ಮೂಲಕವೇ ಆಗಿದೆ ಎಂಬುದು ಸಿದ್ಧ. ಕಾಡುಸ್ಥಿತಿಯಿಂದ ಎದ್ದು ಮುಂದರಿದು ಮಾನವನು ಈಗ ವಿಶ್ವಕುಟುಂಬದ ಧ್ಯೇಯವನ್ನು ಸಾಧಿಸಬೇಕು ಎನ್ನುತ್ತಿರುವನು. ಈ ಸಂದರ್ಭದಲ್ಲಿಯೂ ಗಾಂಧೀಜಿಯವರು ಪುರಸ್ಕರಿಸಿದ ಸತ್ಯ-ಅಹಿಂಸಾಮಾರ್ಗದ ಅಭ್ಯಾಸ-ಆಚರಣೆ ಇವು ಮಹತ್ವವೆನಿಸದೆ ಇರಲಾರವು.

---

# ಪ್ರಕಾಶಕೀಯ

ಗಾಂಧೀ ಗ್ರಂಥಮಾಲೆಯ ನಾಲ್ಕನೆಯ ಸಂಪುಟವಾಗಿ ' ಸತ್ಯ-ಅಹಿಂಸೆ ' ಯನ್ನು ಪ್ರಕಟಿಸುತ್ತಿದೇವೆ. ಈ ಗ್ರಂಥದ ಮೊದಲ ಒಂಬತ್ತು ಅಧ್ಯಾಯಗಳನ್ನು ಶ್ರೀ ಕೆ. ಸಂಪದ್ಗಿರಿರಾಯರೂ, ಕೊನೆಯ ನಾಲ್ಕು ಅಧ್ಯಾಯಗಳನ್ನು ಶ್ರೀ ಗೊರೂರು ರಾಮಸ್ವಾಮಿ ಅಯ್ಯಂಗಾರ್ಯರೂ ಕನ್ನಡಿಸಿ ಕೊಟ್ಟಿದಾರೆ. ಅವರಿಗೆ ನಮ್ಮ ಕೃತಜ್ಞತೆಗಳು.

ಈ ಗ್ರಂಥದಲ್ಲಿ ಅಚ್ಚಾಗಿರುವ ಪಡಿಯಚ್ಚುಗಳನ್ನು ಶ್ರೀ ಡಿ. ಜಿ. ಟೆಂಡುಲ್‌ಕರ್ ಅವರ ' ಮಹಾತ್ಮಾ ' ಗ್ರಂಥದಲ್ಲಿರುವ ಚಿತ್ರಗಳಿಂದ ತಯಾರಿಸಲಾಗಿದೆ. ಅವರಿಗೂ ನಮ್ಮ ಸಂಪಾದಕ ಮಂಡಲಿ ಋಣಿ.

ಡಿಸೆಂಬರ್, ೧೯೫೮<br>ಮೈಸೂರು

ಪ್ರಧಾನ ಸಂಪಾದಕರು<br>**ಗಾಂಧೀ ಗ್ರಂಥಮಾಲೆ**

# ಪರಿವಿಡಿ

## ಅಧ್ಯಾಯ – ೧

## ಜೀವನದ ಮೂಲತತ್ತ್ವಗಳು :

# ಸತ್ಯ - ಅಹಿಂಸೆ



### ಆತ್ಮನಿವೇದನೆ

ನನಗೆ ಸತ್ಯವೇ ಪರಮತತ್ತ್ವ; ಅದರಲ್ಲಿ ಉಳಿದ ಅನೇಕ ತತ್ತ್ವ ಅಡಗಿವೆ. ಬರೀ ಸತ್ಯವಚನವಲ್ಲ, ಸತ್ಯವಿಚಾರ; ನಮಗೆ ಗೋಚರವಾದ ಸತ್ಯವಷ್ಟೇ ಅಲ್ಲ, ಶಾಶ್ವತ ತತ್ತ್ವವಾದ ಪರಿಪೂರ್ಣ ಸತ್ಯ; ಎಂದರೆ ದೇವರು —ಇದು ಸತ್ಯ. ದೇವರು ಲೆಕ್ಕವಿಲ್ಲದಷ್ಟು ರೀತಿಗಳಲ್ಲಿ ಪ್ರಕಟವಾಗಿದಾನೆ. ಆದುದರಿಂದ ದೇವರ ವ್ಯಾಖ್ಯೆಗಳು ಲೆಕ್ಕವಿಲ್ಲದಷ್ಟು. ಅವನ್ನು ನೋಡಿ ನಾನು ಆಶ್ಚರ್ಯಮಗ್ನನಾಗಿದೇನೆ. ಒಂದು ಗಳಿಗೆ ದಂಗು ಬಡಿದಿದೆ. ಆದರೆ ನಾನು ಆರಾಧಿಸುವುದು ಸತ್ಯಬ್ರಹ್ಮನನ್ನೇ. ನಾನಿನ್ನೂ ದೇವರನ್ನು ಕಂಡಿಲ್ಲ; ಅರಸು ತ್ತಿದೇನೆ. ಈ ಅನ್ವೇಷಣೆಯಲ್ಲಿ ನನಗೆ ಅತಿಪ್ರಿಯವಾದ ವಸ್ತುಗಳನ್ನು ತ್ಯಾಗ ಮಾಡಲೂ ಸಿದ್ಧ. ನನ್ನ ಪ್ರಾಣವನ್ನೇ ಆಹುತಿ ಕೊಡಬೇಕಾದರೂ ಸಿದ್ಧನಾದೇ ನೆಂಬ ವಿಶ್ವಾಸ ನನಗಿದೆ. ಆದರೆ ಈ ಪರಮಸತ್ಯದ ಸಾಕ್ಷಾತ್ಕಾರವಾಗುವ ವರೆಗೂ ನಾನು ಗ್ರಹಿಸಿದ ಸಾಪೇಕ್ಷ ಸತ್ಯವನ್ನು ನಾನು ಹಿಡಿದಿರಬೇಕು. ಈ ಸಾಪೇಕ್ಷ ಸತ್ಯವೇ ಅಲ್ಲಿಯವರೆಗೆ ನನಗೆ ಪ್ರದೀಪಸ್ತಂಭ, ನನ್ನ ರಕ್ಷಾಕವಚ. ಈ ದಾರಿ ಬಹಳ ಇಕ್ಕಟ್ಟು, ಕಡಿದು, ಅಸಿಧಾರೆಯಂತೆ ಹರಿತ. ಆದರೆ ನನಗೇನೋ ಇದೇ ಅತ್ಯಂತ ಸುಲಭ, ಅತಿಕ್ಷಿಪ್ರ ಮಾರ್ಗ. ಈ ದಾರಿಯನ್ನು ಚಾಚೂ ಬಿಡದೆ ನಡೆಯುತ್ತಿದೇನೆ. ಅದರಿಂದಾಗಿ ನನ್ನ ಹಿಮಾಲಯಸದೃಶ ಅಪರಾಧಗಳೂ ಕ್ಷುದ್ರವಾಗಿ ಕಾಣುತ್ತಿವೆ. ಸಂಕಟಕ್ಕೆ ಗುರಿಯಾಗದಂತೆ ನನ್ನನ್ನು ಪಾರುಮಾಡಿದೆ ಈ ದಾರಿ. ನನಗೆ ಕಂಡ ಬೆಳಕಿನಲ್ಲಿ ನಾನು ಮುಂದೆ ಸಾಗಿದೇನೆ. ಮುಂದೆ ಸಾಗಿದಂತೆಲ್ಲ ಮುಸಕುಮುಸಕಾಗಿ ಪರಮಸತ್ಯದ, ಅರ್ಥಾತ್ ದೇವರ ಸಕೃದ್ದರ್ಶನವಾಗಿದೆ ನನಗೆ. ಆತ್ಮನೇ ಸತ್ಯ, ಉಳಿದುದೆಲ್ಲ ಮಿಥ್ಯವೆಂಬ ದೃಢವಿಶ್ವಾಸ ದಿನೇ ದಿನೇ ನನ್ನಲ್ಲಿ ಬೆಳೆಯುತ್ತಿದೆ. ನನ್ನಲ್ಲಿ ಈ

ವಿಶ್ವಾಸ ಹೇಗೆ ಬೆಳೆಯಿತೋ ತಿಳಿಯಬಯಸುವವರು ಅರಿತುಕೊಳ್ಳಲಿ; ಅವರು ನನ್ನ ಪ್ರಯೋಗಗಳಲ್ಲಿ ಭಾಗಿಗಳಾಗಲಿ, ಸಾಧ್ಯವಾದರೆ ನನ್ನ ದೃಢವಿಶ್ವಾಸವನ್ನು ಅವರು ಪಡೆಯಲಿ. ಮತ್ತೊಂದು ವಿಶ್ವಾಸವೂ ನನ್ನಲ್ಲಿ ದೃಢಗೊಳ್ಳುತ್ತಿದೆ —ಅದೇನೆಂದರೆ, ನನಗೆ ಯಾವುದು ಸಾಧ್ಯವೋ ಅದು ಒಂದು ಮಗುವಿಗೂ ಸಾಧ್ಯ. ಹೀಗೆ ಹೇಳಲು ಸಮಂಜಸವಾದ ಕಾರಣಗಳಿವೆ. ಈ ಸತ್ಯಾನ್ವೇಷಣದ ಸಾಧನಗಳು ಎಷ್ಟು ಕಷ್ಟವೋ ಅಷ್ಟೂ ಸುಲಭ. ದುರಹಂಕಾರಿ ಆದವನಿಗೆ ಅವು ಅಸಾಧ್ಯವೆನಿಸಬಹುದು. ಕಪಟವಿಲ್ಲದ ಮಗುವಿಗೆ ಅವು ಸುಲಭಸಾಧ್ಯವಾಗಬಹುದು. ಸತ್ಯಾನ್ವೇಷಕನು ಧೂಳಿನ ಕಣಕ್ಕಿಂತಲೂ ನಮ್ರನಾಗಿರಬೇಕು. ಲೋಕವು ಧೂಳನ್ನು ಕಾಲಿನ ಕೆಳಗೆ ತುಳಿಯುತ್ತದೆ. ಆದರೆ ಆ ಧೂಳಿನ ಕಣದಿಂದಲೂ ತುಳಿಸಿಕೊಳ್ಳುವಷ್ಟು ವಿನೀತನಾಗಿರಬೇಕು ಸತ್ಯಶೋಧಕ. ಆಗಲೇ ಅವನಿಗೆ ಸತ್ಯದ ದರ್ಶನ, ಅಲ್ಲಿಯವರೆಗೂ ಇಲ್ಲ. ವಸಿಷ್ಠ ವಿಶ್ವಾಮಿತ್ರರ ಸಂವಾದ ಇದನ್ನು ಸ್ಪಷ್ಟೀಕರಿಸುತ್ತದೆ. ಕ್ರೈಸ್ತ ಮತ್ತು ಇಸ್ಲಾಂ ಧರ್ಮಗಳು ಇದನ್ನು ಬೇಕಾದಷ್ಟು ಸಮರ್ಥಿಸುತ್ತವೆ.

ನಾನು ಈ ಪುಟಗಳಲ್ಲಿ ಬರೆದುದರಲ್ಲಿ ಏನಾದರೂ ಅಹಂಭಾವದ ಸೋಂಕು ಇದೆಯೆಂದು ವಾಚಕರಿಗೆ ಭಾಸವಾದರೆ, ನನ್ನ ಅನ್ವೇಷಣದಲ್ಲಿ ಏನೋ ದೋಷವಿದೆ, ನನಗಾಗುವ ಕ್ಷಣಿಕ ದರ್ಶನಗಳು ಬರೀ ಭ್ರಮೆ ಎಂದು ಅವರು ಗ್ರಹಿಸಬೇಕು. ನನ್ನಂತಹ ನೂರಾರು ಜನ ಮಡಿಯಲಿ, ಆದರೆ ಸತ್ಯಕ್ಕೆ ಜಯವಾಗಲಿ! ದೋಷಿಗಳಾದ ನನ್ನಂತಹ ಪಾಮರರನ್ನು ವಿಮರ್ಶಿಸಲೆಂದು ಸತ್ಯದ ಮಟ್ಟವನ್ನು ಒಂದು ಕೂದಲೆಳೆಯಷ್ಟೂ ಇಳಿಸಲಾಗದು.

(ಆತ್ಮಕಥೆಯ ಮುನ್ನುಡಿಯಿಂದ)

## ಇಬ್ಬರು ನೆಚ್ಚಿನ ಸಖರು

ಜೀವನವೋ ಬಹಳ ಜಟಿಲ; ಸತ್ಯ-ಅಹಿಂಸೆಗಳೋ ಅನೇಕ ವೇಳೆ ಬಿಡಿಸಲು ಬಾರದಂಥ, ವಿಮರ್ಶೆಗೆ ನಿಲುಕದಂಥ ಸಮಸ್ಯೆಗಳನ್ನು ಒದಗಿಸುತ್ತವೆ. ಸತ್ಯ ತಾಳ್ಮೆಯ ಪ್ರಯತ್ನ, ಮೌನಪ್ರಾರ್ಥನೆಗಳಿಂದ ಕಂಡೀತು; ಅದನ್ನು ಸಾಧಿಸುವ ಏಕೈಕ ನ್ಯಾಯಮಾರ್ಗ, ಸತ್ಯಾಗ್ರಹ ಹೊಳೆದೀತು. ಎಲ್ಲಾ

ಸಾಧಕರೂ ಪ್ರಯಾಸಕರವಾದರೂ ಸುಂದರವಾದ ಈ ದಾರಿಯನ್ನೆ ತುಳಿಯ ಬೇಕು. ನಾನು ಇಷ್ಟು ಭರವಸೆ ಕೊಡಬಲ್ಲೆ ಗೆಳೆಯರಿಗೆ: ಈ ದಾರಿಯಲ್ಲಿ ನಾನು ಸರಿಯಾದ ನಿಟ್ಟನ್ನೆ ತಡಕಾಡುತ್ತ ಹೋಗುತ್ತಿದೇನೆ; ಈ ದಾರಿಯಲ್ಲಿ ಸತತ ವಿನಮ್ರ ಪ್ರಯತ್ನ, ಮೌನಪ್ರಾರ್ಥನೆಗಳೇ ಸರ್ವದಾ ನಾನು ನೆಚ್ಚಿದ ಇಬ್ಬರು ಸಂಗಾತಿಗಳು.

## ಅಧ್ಯಾತ್ಮ ಪ್ರಪಂಚದ ಪ್ರಯೋಗಗಳು

ಜಗತ್ತಿಗೆ ಹೊಸದಾಗಿ ಹೇಳುವಂಥದು ನನ್ನಲ್ಲಿ ಏನೂ ಇಲ್ಲ. ಸತ್ಯ–ಅಹಿಂಸೆಗಳು ಈ ಪೃಥಿವಿಯಷ್ಟೇ ಪುರಾತನ. ನಾನು ಮಾಡಿದುದೆಲ್ಲ ಇಷ್ಟೆ: ಈ ಎರಡರ ವಿಷಯದಲ್ಲಿಯೂ ನನಗೆ ಶಕ್ಯವಿದ್ದಷ್ಟು ವಿಸ್ತೃತ ರೀತಿಯಲ್ಲಿ ಪ್ರಯೋಗಗಳನ್ನು ಮಾಡಲು ಯತ್ನಿಸಿದೇನೆ. ಹೀಗೆ ಮಾಡುವಾಗ ಕೆಲವು ವೇಳೆ ತಪ್ಪು ಮಾಡಿದೇನೆ, ತಪ್ಪುಗಳಿಂದ ಪಾಠ ಕಲಿತಿದೇನೆ. ಹೀಗಾಗಿ ಜೀವನದ ಸಮಸ್ಯೆಗಳೆಲ್ಲ ಸತ್ಯ–ಅಹಿಂಸೆಗಳ ಸಾಧನೆಯಲ್ಲಿ ಪ್ರಯೋಗಗಳಂತೆ ಆಗಿವೆ ನನಗೆ. ನನಗೆ ಅಹಿಂಸೆಯ ದರ್ಶನವಾದುದು ನನ್ನ ಸತ್ಯಸಾಧನೆ ಯಲ್ಲಿಯೆ. (ಹರಿಜನ, ೨೮–೩–೧೯೩೬)

## ಸತ್ಯಸಾಧಕನಿಗೆ ಪ್ರಾರಂಭಿಕ ನಿಯಮಗಳು

ಈ ಪ್ರಯೋಗಗಳನ್ನು ಮಾಡುವುದರಲ್ಲಿ ಕೆಲವು ನಿಯಮಗಳನ್ನು ಪಾಲಿಸ ಬೇಕೆಂದು ಪ್ರಯೋಗಮಾಡಿ ನೋಡಿದ ಸಾಧಕರು ತೀರ್ಮಾನಿಸಿದಾರೆ. ವಿಜ್ಞಾನಶಾಸ್ತ್ರದ ಪ್ರಯೋಗಮಾಡುವುದರಲ್ಲಿರುವಂತೆಯೇ ಆಧ್ಯಾತ್ಮಿಕ ಪ್ರಪಂಚ ದಲ್ಲಿ ಪ್ರಯೋಗಮಾಡುವವರೂ ಕೆಲವು ಪ್ರಾರಂಭಿಕ ನಿಯಮಗಳನ್ನು ಅತಿ ನಿಷ್ಠೆಯಿಂದ ಪಾಲಿಸಬೇಕು. ಸತ್ಯಪರಮೇಶ್ವರನನ್ನು ವೈಯಕ್ತಿಕವಾಗಿ ಅರಸುವ ಸಾಧಕ ಸತ್ಯ, ಬ್ರಹ್ಮಚರ್ಯ ಮುಂತಾದ ಅನೇಕ ವ್ರತಗಳನ್ನು ಹಿಡಿಯ ಬೇಕು; ಸತ್ಯಕ್ಕೆ, ಪರಮೇಶ್ವರನಿಗೆ, ನೀವು ತೋರುವ ನಿಷ್ಠೆಯನ್ನು ಹಂಚಿ ಬೇರೆಲ್ಲೂ ತೋರಲಾಗದು—ಅನುಭವದಿಂದ ಬಂದ ಶ್ರದ್ಧೆ ಇದು. ಪಂಚವ್ರತ ಗಳ ದೀಕ್ಷೆ ತೊಡಲಿಲ್ಲವೋ, ಈ ಪ್ರಯೋಗವನ್ನು ಮಾಡುವುದೇ ಬೇಡ.

ಅತ್ಯಂತ ವಿನಯದಿಂದ ನಾನು ಹೇಳಬಹುದಾದುದು ಇಷ್ಟೆ: ಅತ್ಯಂತ ವಿನಯ ಸಮೃದ್ಧಿ ಇಲ್ಲದವನಿಗೆ ಎಂದಿಗೂ ಸತ್ಯದರ್ಶನವಾಗದು. ಸತ್ಯಸಾಗರದಲ್ಲಿ ಈಸುವ ಮುನ್ನ ನೀನು ಶೂನ್ಯನಾಗಬೇಕು. ಇದಕ್ಕೂ ಹೆಚ್ಚಿಗೆ ಈ ಅತಿ ಮನೋಜ್ಞ ವಿಷಯವನ್ನು ವಿಸ್ತರಿಸಲಾರೆ.

(ಯಂಗ್ ಇಂಡಿಯಾ, ೩೧-೧೨-೧೯೩೧)

ಬಾಳುವೆಯ ಆರಂಭದಲ್ಲೆ ನಾನು ಮನಗಂಡೆ: ಸತ್ಯಸಾಕ್ಷಾತ್ಕಾರವಾಗಬೇಕೆಂದರೆ, ಪ್ರಾಣ ಹೋದರೂ ಚಿಂತೆಯಿಲ್ಲ, ಪ್ರೇಮದ ಸಿದ್ಧಾಂತವನ್ನು ನಡೆಸಲೇಬೇಕು.

ಜ್ಞಾನ ಅನಂತ, ಸತ್ಯದ ಅನುಷ್ಠಾನವೂ ಅನಂತ. ದಿನವೂ ನಮ್ಮ ಆತ್ಮಶಕ್ತಿಯ ಜ್ಞಾನವನ್ನು ಬೆಳೆಸುತ್ತಿದೇವೆ, ಸದಾಕಾಲವೂ ಹಾಗೆಯೇ ಮಾಡುತ್ತೇವೆ. ಹೊಸ ಅನುಭವ ಹೊಸ ಕರ್ತವ್ಯಗಳನ್ನು ತೋರಿಸುತ್ತದೆ ನಮಗೆ. ಆದರೆ ಸತ್ಯವೇನೋ ಯಾವಾಗಲೂ ಒಂದೇ. ಅದರ ಸಂಪೂರ್ಣ ಸ್ವರೂಪವನ್ನು ಕಂಡವರಾರು? (ಯಂಗ್ ಇಂಡಿಯಾ, ೮-೪-೧೯೨೬)

## ಅಹಿಂಸೆ ಮತ್ತು ಸತ್ಯ ಅಭಿನ್ನ

ಅಹಿಂಸೆ ಮತ್ತು ಸತ್ಯ—ಇವು ಒಂದರಲ್ಲೊಂದು ಬಿಡಿಸಲು ಬಾರದಂತೆ ಹೆಣೆದುಕೊಂಡಿವೆ. ಎರಡೂ ಒಂದು ನಾಣ್ಯದ ಅಥವಾ ಯಾವ ಗುರುತೂ ಇಲ್ಲದ ಒಂದು ಲೋಹದ ಬಿಲ್ಲೆಯ ನುಣುಪಾದ ಎರಡು ಮುಖಗಳಂತೆ. ಯಾವುದು ಮುಖವೋ ಯಾವುದು ಬೆನ್ನೋ ಹೇಳಲು ಸಾಧ್ಯವಿಲ್ಲ. ಆದರೂ ಅಹಿಂಸೆ ಸಾಧನ, ಸತ್ಯ ಸಾಧ್ಯ. ಸಾಧನ ನಮ್ಮ ಕೈಗೆ ಸಿಲುಕುವಂತಿದ್ದರೆ ಅದು ಸಾಧನ. ಆದುದರಿಂದ ಅಹಿಂಸೆ ನಮ್ಮ ಪರಮಧರ್ಮ. ನಮ್ಮ ಸಾಧನ ಶುದ್ಧವಾಗಿದ್ದರೆ ಸಾಧ್ಯವನ್ನು ಇಂದಲ್ಲ ನಾಳೆ ಮುಟ್ಟಬಹುದು. ಇದನ್ನು ನಾವು ಗ್ರಹಿಸಿದ್ದೇ ಆದರೆ ಉತ್ತರೋತ್ತರ ವಿಜಯದಲ್ಲಿ ಸಂಶಯವೇ ಇಲ್ಲ. ಎಷ್ಟೇ ಕಷ್ಟಗಳು ಎದುರಾಗಲಿ, ಸೋಲಾದಂತೆ ಎಷ್ಟೇ ಕಾಣಲಿ ಸತ್ಯದ ಶೋಧನೆಯನ್ನು—ಅದೇ ದೇವರು—ಕೈಬಿಡಲಾಗದು.

ಸತ್ಯಾಗ್ರಹವೆಂದರೆ ಸತ್ಯದ ಶೋಧನೆ, ದೇವರೇ ಸತ್ಯ. ನನಗೆ ಆ ಸತ್ಯವನ್ನು ಬೆಳಗಿಸುವ ಬೆಳಕೇ ಅಹಿಂಸೆ. ಸತ್ಯದ ಮಾರ್ಗ ಎಷ್ಟು ನೇರವೋ ಅಷ್ಟೇ ಇಕ್ಕಟ್ಟು. ಅಂತೆಯೇ ಅಹಿಂಸೆಯ ಮಾರ್ಗವೂ; ಕತ್ತಿಯ ಅಲಗಿನ ಮೇಲೆ ನಡೆದಂತೆ. ಏಕಾಗ್ರತೆಯಿಂದ ದೊಂಬ ಹಗ್ಗದ ಮೇಲೆ ನಡೆಯಬಲ್ಲ. ಸತ್ಯ ಮತ್ತು ಅಹಿಂಸೆಗಳ ಮಾರ್ಗದ ಮೇಲೆ ನಡೆಯಲು ಇದಕ್ಕೂ ಹೆಚ್ಚಿನ ಏಕಾಗ್ರತೆ ಬೇಕು. ಸ್ವಲ್ಪ ಅಜಾಗರೂಕನಾದರೆ ಸಾಕು ಮುಗ್ಗರಿಸಿ ಕೆಳಗೆ ಬೀಳಬೇಕಾದ್ದೇ. ಸತ್ಯ ಮತ್ತು ಅಹಿಂಸೆಗಳ ಸಿದ್ಧಿ ಸತತ ಪ್ರಯತ್ನದಿಂದ ಮಾತ್ರ ಸಾಧ್ಯ.

ಸತ್ಯಾನ್ವೇಷಣಕ್ಕೆ ತಪಸ್ಸು, ಆತ್ಮದಂಡನೆ, ಪ್ರಾಣತ್ಯಾಗ ಕೂಡ—ಒಮ್ಮೊಮ್ಮೆ—ಅಗತ್ಯ ಅಂಗಗಳು. ಸ್ವಾರ್ಥಕ್ಕೆ ಇದರಲ್ಲಿ ಲವಲೇಶವೂ ಎಡೆ ಇಲ್ಲ. ಇಂಥ ನಿಸ್ಸ್ವಾರ್ಥ ಸತ್ಯಾನ್ವೇಷಣೆಯಲ್ಲಿ ತೊಡಗಿದಾಗ ಹೆಚ್ಚು ಕಾಲ ದಾರಿ ತಪ್ಪುವುದು ಸಾಧ್ಯವಿಲ್ಲ. ತಪ್ಪು ದಾರಿ ಹಿಡಿದ ಕೂಡಲೆ ಮನುಷ್ಯ ಮುಗ್ಗರಿಸುತ್ತಾನೆ. ಅದರಿಂದ ಸರಿಯಾದ ದಾರಿಗೆ ಮತ್ತೆ ಬರುತ್ತಾನೆ.

ಪ್ರತಿಯೊಬ್ಬನೂ ತನತನಗೆ ಗೋಚರವಾದ ಸತ್ಯವನ್ನು ಅನುಸರಿಸುವುದರಲ್ಲಿ ತಪ್ಪೇನಿಲ್ಲ. ಅದು ಅವನ ಕರ್ತವ್ಯವೂ ಹೌದು. ಹೀಗೆ ಸತ್ಯವನ್ನು ಅನುಸರಿಸುವವರು ಯಾರೇ ಆಗಲಿ, ತಪ್ಪು ದಾರಿ ಹಿಡಿದರೂ ಸಹಜವಾಗಿಯೆ ಸರಿಯಾದ ದಾರಿ ಹಿಡಿಯಬೇಕಾಗುತ್ತದೆ.

ನಾವೆಲ್ಲರೂ ಒಂದೇ ಬಗೆಯಲ್ಲಿ ಚಿಂತನ ಮಾಡಲು ಸಾಧ್ಯವಿಲ್ಲ. ಸತ್ಯವನ್ನು ಅಖಂಡವಾಗಿ ನೋಡದೆ ಖಂಡವಾಗಿ ಬೇರೆ ಬೇರೆ ದೃಷ್ಟಿಕೋನದಿಂದ ನೋಡುತ್ತೇವೆ—ಆದುದರಿಂದ ಪರಸ್ಪರ ಸಹನೆಯೇ ಅತ್ಯುತ್ತಮ ಶೀಲ.

ಸತ್ಯದ ಈ ಆಗ್ರಹವೇ ನನಗೆ ಸಾಮರಸ್ಯದ ಸೊಬಗನ್ನು ಸವಿಯಲು ಕಲಿಸಿತು. ಇದರಿಂದ ನನ್ನ ಪ್ರಾಣಕ್ಕೇ ಅನೇಕ ವೇಳೆ ಅಪಾಯ ಉಂಟಾಗಿದೆ—ಮಿತ್ರರು ಅಸಮಾಧಾನಗೊಂಡಿದಾರೆ. ಆದರೆ ಸತ್ಯ ವಜ್ರದಷ್ಟು ಕಠೋರವಾದರೂ ಹೂವಿನಷ್ಟು ಮೃದು. (ಆತ್ಮಕಥೆಯಿಂದ)

ಕೇವಲ ಸಿದ್ಧಾಂತದ ಸತ್ಯದಿಂದ ಪ್ರಯೋಜನವಿಲ್ಲ. ಮನುಷ್ಯರಲ್ಲಿ ಸತ್ಯ ಒಡಮೂಡಬೇಕು; ಅದಕ್ಕಾಗಿ ಅವರು ಸಾಯಲೂ ಸಿದ್ಧರಾಗಬೇಕು.

(ಯಂಗ್ ಇಂಡಿಯಾ, ೨೨-೧೨-೧೯೨೧)

# ಸಾಧನ – ಸಾಧ್ಯ

ನನ್ನ ಜೀವನಸಿದ್ಧಾಂತದಲ್ಲಿ ಸಾಧನ–ಸಾಧ್ಯಗಳಲ್ಲಿ ಭೇದವಿಲ್ಲ. ಸಾಧ್ಯ–ಸಾಧನಗಳೆರಡೂ ಕಡೆಯಲ್ಲಿ ಒಂದೇ ಎಂದು ನನ್ನ ನಂಬುಗೆ. ಆದುದರಿಂದ ಪ್ರೇಮವೇ ದೇವರೆಂದು ಹೇಳಲು ನಾನು ಹಿಂಜರಿಯೆ. ಸಾಧನ–ಸಾಧ್ಯಗಳು ಅಭಿನ್ನ ವಸ್ತುಗಳೆಂದು ಯಾವಾಗಲೂ ನಾನು ಹೇಳುತ್ತ ಬಂದಿದೇನೆ. ಆದುದರಿಂದ ಪರಸ್ಪರ ವಿರುದ್ಧವಾದ ನಾನಾ ಸಾಧನಗಳಿರುವ ಕಡೆ ಸಾಧ್ಯ ಭಿನ್ನವೇ ಆದೀತು, ವಿರುದ್ಧವೂ ಆದೀತು. ಅನೇಕರು ಇದನ್ನು ಒಪ್ಪರು. ಸಾಧನ ಎಂಥದೇ ಆಗಲಿ ಗುರಿಯನ್ನು ಸಾಧಿಸಿದರಾಯಿತು ಎಂದು ಅವರ ಅಭಿಮತ.

ಸಾಧನಗಳಲ್ಲಿ ಅಸತ್ಯ, ಮೋಸ, ಹಿಂಸೆಗಳಿದ್ದರೆ ತಮ್ಮ ಪ್ರಯತ್ನಗಳಿಗೆ ದೇವರು ಯಶಸ್ಸನ್ನು ನೀಡುತ್ತಾನೆಂದು ಜನರು ನಿರೀಕ್ಷಿಸಬಹುದೆ? ಇಂತಹ ಪ್ರಾರ್ಥನೆ ದೇವರನ್ನು ಮುಟ್ಟಲಾರದು. ಇಂತಹ ಪ್ರಾರ್ಥನೆ ಮಾಡಿದವರು ನಗೆಗೆ ಈಡಾಗುವರು.

ಸಾಧನ ಎಷ್ಟೆಂದರೂ ಬರೀ ಸಾಧನ ಎನ್ನುತ್ತಾರೆ. ಸಾಧನವೇ ಸಮಸ್ತವೂ ಎನ್ನುತ್ತೇನೆ ನಾನು. ಸಾಧನದಂತೆ ಸಾಧ್ಯ. ಎರಡರ ನಡುವೆ ಯಾವ ಗೋಡೆಯೂ ಇಲ್ಲ. ಸೃಷ್ಟಿಕರ್ತ ನಮಗೆ ಕೊಟ್ಟಿರುವ—ಬಹಳ ಪರಿಮಿತ—ಸ್ವಾತಂತ್ರ್ಯ ಸಾಧನಗಳ ವಿಷಯದಲ್ಲಿ, ಸಾಧ್ಯದ ಬಗ್ಗೆ ಎಳ್ಳಷ್ಟೂ ಇಲ್ಲ. ಸಾಧನದಂತೆ ಸಾಧ್ಯ, ಅಷ್ಟೇ ಪ್ರಮಾಣ. ಈ ಸೂತ್ರಕ್ಕೆ ಅಪವಾದವೇ ಇಲ್ಲ.

(ಯಂಗ್ ಇಂಡಿಯಾ, ೧೭–೭–೧೯೨೪)

ಸಾಧನ ಅಥವಾ ಉಪಾಯ ಬೀಜದಂತೆ, ಸಾಧ್ಯ ವೃಕ್ಷದಂತೆ. ಸಾಧನ–ಸಾಧ್ಯಗಳ ಸಂಬಂಧ ಬೀಜ–ವೃಕ್ಷಗಳ ಸಂಬಂಧ, ಅಪರಿಹಾರ್ಯ. ಪಿಶಾಚಿಗೆ ಅಡ್ಡಬಿದ್ದು ದೇವರ ಪೂಜೆಯ ಫಲವನ್ನು ಬಯಸಬಹುದೆ? 'ದೇವರ ಪೂಜೆ ಮಾಡಬೇಕು. ಅದಕ್ಕಾಗಿ ಪಾಪ ಮಾಡಿದರೂ ಚಿಂತೆಯಿಲ್ಲ' ಎಂದರೆ ಅವನನ್ನು ಶುದ್ಧ ಮೂರ್ಖ ಎಂದಾರು. ಬಿತ್ತಿದಂತೆ ಬೆಳೆಯಲ್ಲವೆ?

(ಹಿಂದ್ ಸ್ವರಾಜ್ಯದಿಂದ)

ಗುರಿಯನ್ನು ಎಷ್ಟೇ ಸ್ಪಷ್ಟವಾಗಿ, ಖಚಿತವಾಗಿ ವಿವರಿಸಿದರೂ ಗುರಿಯನ್ನು ಪ್ರಶಂಸಿಸಿದ ಮಾತ್ರಕ್ಕೇ ಸಾಧನೆಯ ಮಾರ್ಗವನ್ನು ತಿಳಿದು ಅನುಸರಿಸದೆ ಇದ್ದರೆ ಯಾರೂ ಗುರಿಯನ್ನು ಮುಟ್ಟಲಾರೆವು. ಆದುದರಿಂದ ಸಾಧನೋಪಾಯ ಗಳನ್ನು ಭದ್ರಪಡಿಸಿ ಅವುಗಳ ಪ್ರಗತಿಪರ ಅನುಷ್ಠಾನದ ಕಡೆಗೇ ನಾನು ಹೆಚ್ಚು ಗಮನ ಕೊಡುತ್ತ ಬಂದಿದೇನೆ. ಸಾಧನೋಪಾಯಗಳನ್ನು ಕಾದು ಕೊಂಡರೆ ಗುರಿಯನ್ನು ಮುಟ್ಟುವುದು ಖಂಡಿತವೆಂದು ನಾನು ಬಲ್ಲೆ. ನಮ್ಮ ಸಾಧನೋಪಾಯಗಳು ಎಷ್ಟು ಪ್ರಮಾಣದಲ್ಲಿ ಶುದ್ಧವಾಗಿರುವುವೋ ಅಷ್ಟೇ ಶೀಘ್ರಗತಿಯಲ್ಲಿ ನಮ್ಮ ಗುರಿಯ ಕಡೆ ನಾವು ಮುಂದೆ ಸಾಗುವೆವೆಂದು ನನ್ನ ಭಾವನೆ.

ಅಶುದ್ಧ ಸಾಧನಗಳ ಫಲ ಅಶುದ್ಧ ಸಿದ್ಧಿ. ಅಸತ್ಯದಿಂದ ಸತ್ಯವನ್ನು ಸೇರಲು ಸಾಧ್ಯವಿಲ್ಲ, ಸತ್ಯಪೂರ್ಣ ನಡತೆಯಿಂದಲೇ ಅದು ಸಾಧ್ಯ. ಅಹಿಂಸೆ-ಸತ್ಯಗಳು ಅವಳಿಯಲ್ಲವೆ? ಖಂಡಿತವಾಗಿಯೂ ಅಲ್ಲ—ಅಹಿಂಸೆ ಸತ್ಯದಲ್ಲಿ ಅಡಕವಾಗಿದೆ, ಸತ್ಯ ಅಹಿಂಸೆಯಲ್ಲಿ. ಅಂತಲೇ ಅವು ಒಂದೇ ನಾಣ್ಯದ ಎರಡು ಮೈ ಇದ್ದಂತೆ ಎನ್ನುವುದು. ಒಂದನ್ನು ಇನ್ನೊಂದರಿಂದ ಬೇರ್ಪಡಿಸು ವಂತಿಲ್ಲ. ಎತ್ತ ಕಡೆಯಾದರೂ ಓದಿ. ಅಕ್ಷರಗಳು ಬೇರೆ ಇದ್ದಾವು, ಬೆಲೆ ಮಾತ್ರ ಒಂದೇ. ಪೂರ್ಣ ಪರಿಶುದ್ಧತೆ ಇಲ್ಲದೆ ಇಂಥ ಪುಣ್ಯಪದವಿ ಪಡೆಯೆವು. ಮನದಲ್ಲಿ, ಮೈಯಲ್ಲಿ, ಕೊಳೆ ತುಂಬಿತೋ ನಿಮ್ಮಲ್ಲಿ ಅಸತ್ಯ, ಹಿಂಸೆ ಸೇರಿದಂತೆಯೇ. (ಹರಿಜನ, ೧೩-೭-೧೯೪೭)

## ಸತ್ಯ – ಅಹಿಂಸೆಯಲ್ಲಿ ಶ್ರದ್ಧೆ

ಅಹಿಂಸೆಯ ಧ್ಯೇಯಕ್ಕಿಂತಲೂ ಸತ್ಯದ ಧ್ಯೇಯವನ್ನು ಚೆನ್ನಾಗಿ ಅರ್ಥ ಮಾಡಿಕೊಂಡಿದೇನೆಂದು ನನಗನಿಸುತ್ತದೆ. ಸತ್ಯವನ್ನು ಕೈಬಿಟ್ಟು ಅಹಿಂಸೆಯ ಒಗಟನ್ನು ಬಿಡಿಸಲಾರೆನೆಂದು ನನ್ನ ಅನುಭವ ಹೇಳುತ್ತದೆ. ಸತ್ಯದ ಧ್ಯೇಯ ವನ್ನು ಸಾಧಿಸಬೇಕಾದರೆ ವ್ರತಗಳನ್ನು ಅಕ್ಷರಶಃ ಮಾತ್ರವಲ್ಲ, ಸಾರ್ಥಕವಾಗಿ ಪಾಲಿಸುವುದು ಆವಶ್ಯಕ.

ನನಗೆ ಕಂಡಂತೆ ಸತ್ಯವನ್ನು ವಿವರಿಸುವುದು, ಅದನ್ನು ಸಾಧಿಸಿದ ಬಗೆಯನ್ನು ಸ್ಪಷ್ಟಪಡಿಸುವುದು—ನನ್ನ ಸತತ ಪ್ರಯತ್ನ. ಈ ಅಭ್ಯಾಸದಿಂದ

ನನಗೆ ಬಣ್ಣಿಸಲಾಗದ ಮನಶ್ಶಾಂತಿ ದೊರೆತಿದೆ—ಏತಕ್ಕೆಂದರೆ ಇದರಿಂದ ಸತ್ಯ-ಅಹಿಂಸೆಗಳ ವಿಷಯದಲ್ಲಿ ಜನರಿಗೆ ಶ್ರದ್ಧೆ ಹುಟ್ಟಬಹುದೆಂದು ನನ್ನ ವಿಶ್ವಾಸ.
(ಆತ್ಮಕಥೆಯಿಂದ)

ಅಹಿಂಸೆ ನನ್ನ ಶ್ರದ್ಧೆಯ ಪ್ರಥಮ ಚರಣ. ನನ್ನ ಸಿದ್ಧಾಂತದ ಕೊನೆಯ ಚರಣವೂ ಅದೇ. (ಯಂಗ್ ಇಂಡಿಯಾ, ೨೪-೪-೧೯೨೨)

ಈ ಸಿದ್ಧಾಂತದ ಪ್ರಸಾರಕ್ಕಾಗಿ ನನ್ನ ಜೀವನ ಮೀಸಲು. ಪ್ರಪಂಚದ ಎಲ್ಲ ಧರ್ಮಸಂಸ್ಥಾಪಕರ—ಜರತುಷ್ಟ್ರ, ಮಹಾವೀರ, ಡೇನಿಯಲ್, ಏಸು, ಮುಹಮ್ಮದ್, ನಾನಕ್ ಮುಂತಾದ ಅನೇಕರ—ಉಪದೇಶವಾಣಿಗಳಲ್ಲಿ ನಾನು ಅದನ್ನೇ ಕಾಣುತ್ತೇನೆ. (ಯಂಗ್ ಇಂಡಿಯಾ, ೯-೨-೧೯೨೨)

ಪರಮಪ್ರಮಾಣದಲ್ಲಿ ಮಾನವ ಸತ್ಯ ಮತ್ತು ಅಹಿಂಸೆಗಳನ್ನು ಆಚರಿಸದೆ ವ್ಯಕ್ತಿಗಳಿಗಾಗಲಿ, ರಾಷ್ಟ್ರಗಳಿಗಾಗಲಿ ಶಾಂತಿ ಇರದೆಂದು ದಿನವೂ ಬಲಗೊಳ್ಳುತ್ತಿರುವ, ಹೆಚ್ಚುತ್ತಿರುವ ನನ್ನ ಅನುಭವ ಹೇಳುತ್ತದೆ. ಪ್ರತೀಕಾರಮಾರ್ಗ ಎಂದೂ ಯಶಸ್ವಿಯಾಗಿಲ್ಲ. (ಯಂಗ್ ಇಂಡಿಯಾ, ೧೧-೧೨-೧೯೨೭)

ನನ್ನ ಉಪದೇಶ ಭಾವುಕವಲ್ಲ—ಅವ್ಯವಹಾರ್ಯವಲ್ಲ. ಏಕೆಂದರೆ ನಾನು ಉಪದೇಶಿಸುತ್ತಿರುವುದು ಪುರಾತನ ತತ್ತ್ವ, ಅದನ್ನು ಆಚರಿಸಲೂ ಯತ್ನಿಸುತ್ತಿದೇನೆ. ನಾನು ಅನುಷ್ಠಾನ ಮಾಡುವುದನ್ನು ಎಲ್ಲರೂ ಮಾಡಬಹುದೆಂದು ನನ್ನ ವಾದ. ನಾನೊಬ್ಬ ತೀರಾ ಸಾಮಾನ್ಯ ಮನುಷ್ಯ, ನಮ್ಮಲ್ಲಿ ಅತ್ಯುತ್ತಮರಿಗೂ ಇರುವ ಚಿತ್ತಚಾಪಲ್ಯ, ದೌರ್ಬಲ್ಯಗಳಿಗೆ ನಾನೂ ಈಡು.

ಬಾಳಿನಾದ್ಯಂತ ನಾನೊಬ್ಬ ಜೂಜುಗಾರ. ಸತ್ಯಶೋಧನೆಯ ಉದ್ವೇಗದಲ್ಲಿ, ಅನವರತ ಅಹಿಂಸೆಯಲ್ಲಿ ನನ್ನ ಶ್ರದ್ಧೆಯನ್ನು ಅನುಸರಿಸಲು ಯಾವ ಪಣವನ್ನೂ ಹೆಚ್ಚೆಂದು ನಾನು ಎಣಿಸಲಿಲ್ಲ. ಹಾಗೆ ಮಾಡುವಾಗ ತಪ್ಪಿದೇನೆ, ಆದರೆ ಇದರಲ್ಲಿ ಎಲ್ಲ ಕಾಲದ, ನಾಡಿನ ಅತಿಪ್ರಖ್ಯಾತ ವಿಜ್ಞಾನಿಯ ಜೊತೆ ನನಗುಂಟು. (ಯಂಗ್ ಇಂಡಿಯಾ, ೨೦-೨-೧೯೩೦)

ನನ್ನ ಅಹಿಂಸಾಪ್ರೇಮ ಯಾವುದೇ ಲೌಕಿಕ ಪಾರಲೌಕಿಕ ವಿಷಯವನ್ನೂ ಮೀರಿದುದು. ನನ್ನ ಸತ್ಯಪ್ರೇಮ ಮಾತ್ರ ಅದಕ್ಕೆ ಸಾಟಿ, ನನಗಾದರೋ

ಅದು–ಅಹಿಂಸೆ ಎರಡೂ ಒಂದೇ; ಅದರ ಮೂಲಕವೇ, ಆ ಮೂಲಕ ಮಾತ್ರವೇ ನನಗೆ ಸತ್ಯದ ಸಾಕ್ಷಾತ್ಕಾರ. ನನ್ನ ಜೀವನವಿಧಾನ ಭಾರತದ ಬೇರೆ ಬೇರೆ ಧರ್ಮೀಯರಲ್ಲಿ ಭೇದ ಎಣಿಸದು, ವಿವಿಧ ಜನಾಂಗಗಳನ್ನೂ ಬೇರೆ ಎನ್ನದು. ನನಗೆ ಮಾನವ ಕೇವಲ ಮಾನವ ಮಾತ್ರ.

(ಯಂಗ್ ಇಂಡಿಯಾ, ೧೨–೩–೧೯೩೦)

---

## ಅಧ್ಯಾಯ – ೨

# ಸತ್ಯ



ಸತ್ಯವೆಂದರೆ ಏನು? ಕಠಿಣ ಪ್ರಶ್ನೆ. ನಿನ್ನ ಅಂತರ್ವಾಣಿ ನುಡಿವುದೇ ಸತ್ಯ ಎಂದು ನನ್ನ ಮಟ್ಟಿಗೆ ನಾನು ಉತ್ತರಿಸಿದೇನೆ. ಹಾಗಾದರೆ ಬೇರೆ ಬೇರೆ ಜನ ಬೇರೆ ಬೇರೆ, ಪರಸ್ಪರ ವಿರುದ್ಧ ಸತ್ಯವೆನ್ನುವರಲ್ಲ ಎಂದು ನೀವು ಕೇಳೀರಿ.

ಯಾವುದೇ ಶಿಸ್ತು–ಸಂಯಮಕ್ಕೆ ಒಳಪಡದೆ ಅಂತರಾತ್ಮನ ಅಧಿಕಾರ ಕೇಳುವವರೇ ಇಂದು ಪ್ರತಿಯೊಬ್ಬರೂ. ಅಂತಲೇ ಚಕಿತ ಜಗತ್ತಿಗೆ ಬಹಳಷ್ಟು ಅಸತ್ಯಪ್ರದಾನವಾಗುತ್ತಿದೆ.

ಸತ್ಯ ತುಂಬಿರುವ ಹೃದಯಾಂತರಾಳ ನಮ್ಮೆಲ್ಲರಲ್ಲಿ ಉಂಟು. ಪ್ರತಿಯೊಬ್ಬ ತಪ್ಪಿತಸ್ಥನೂ ತಾನೆಸಗುವುದು ತಪ್ಪೆಂದು ಒಳಗೇ ಬಲ್ಲ; ಅಸತ್ಯವನ್ನು ಸತ್ಯವೆಂದು ಭ್ರಮಿಸುವುದು ಶಕ್ಯವಿಲ್ಲವಲ್ಲ. ಅತ್ಯಂತ ನೀಚರೂ, ಎಂದೂ ನೀತಿಯ ಹಾದಿ ತುಳಿಯದವರೂ ನೀತಿಸಂಪನ್ನ ಜನ ತಾವೆಂದುಕೊಳ್ಳಲು ಹೆಮ್ಮೆಪಡುತ್ತಾರೆ. ನೀತಿ–ನಿಯಮದ ಅನಿವಾರ್ಯತೆಯನ್ನು ಅವರೂ ಮನಗಂಡಿರುತ್ತಾರೆ. ಭಗವಂತನ ಈ ಜಗತ್ತಿನಲ್ಲಿ ಸತ್ಯ–ಧರ್ಮಗಳೇ ಎಂದೆಂದಿಗೂ ನಿಯಮವಾಗಿ ಉಳಿಯಲೇಬೇಕು.

ದಿಟ ನುಡಿಯುವುದು ಮಾತ್ರ ಸತ್ಯದ ವಿಧಿ ಎಂದು ತಿಳಿಯುತ್ತಾರೆ. ಆದರೆ ನಮ್ಮ ಅರ್ಥ ಇನ್ನೂ ವ್ಯಾಪಕ. ಮನದಲ್ಲಿ, ನುಡಿಯಲ್ಲಿ, ನಡೆಯಲ್ಲಿ ಸತ್ಯ ಪಾಲಿಸಬೇಕು. (ಯಂಗ್ ಇಂಡಿಯಾ, ೩೧–೧೨–೧೯೩೧)

## ಸತ್ಯದ ವಿವಿಧ ಸ್ವರೂಪ

ಒಬ್ಬರಿಗೆ ಸತ್ಯವೆಂದು ಕಾಣುವುದು ಅನೇಕ ವೇಳೆ ಮತ್ತೊಬ್ಬರಿಗೆ ಅಸತ್ಯವೆಂದು ಕಾಣಬಹುದು. ಆದರೆ ಇದರಿಂದ ಸತ್ಯಶೋಧಕ ಚಿಂತಿಸಬೇಕಾಗಿಲ್ಲ. ನಿಜವಾದ ಪ್ರಯತ್ನ ಮಾಡಿದವನಿಗೆ ಒಂದೇ ಮರದ ಅಸಂಖ್ಯಾತ

ಎಲೆಗಳು ಭಿನ್ನವಾಗಿ ಕಾಣುವಂತೆ ನಾನಾಮುಖಗಳುಳ್ಳ ಸತ್ಯವೂ ಸಹ ಭಿನ್ನ ವಾಗಿ ಕಾಣುವುದೆಂದು ಮನಗಾಣುವನು. ಭಗವಂತನೇ ಬೇರೆ ಬೇರೆ ಜನರಿಗೆ ಬೇರೆ ಬೇರೆ ರೂಪಗಳನ್ನು ತಾಳಿ ಕಾಣಿಸಿಕೊಳ್ಳುವುದಿಲ್ಲವೆ ? ಆದರೂ ಭಗವಂತ ನೊಬ್ಬನೇ ಎಂದು ನಾವು ಗ್ರಹಿಸಿದೇವೆ. ಎಷ್ಟೇ ಹೆಸರುಗಳಿದ್ದರೂ ದೇವರಿಗೆ 'ಸತ್ಯ'ವೇ ಸೂಕ್ತವಾದ ಹೆಸರು. ಆದುದರಿಂದ ಪ್ರತಿಯೊಬ್ಬನೂ ತನ್ನ ತಿಳಿವಳಿಕೆಗಳಿಗನುಸಾರವಾಗಿ ಸತ್ಯವನ್ನನುಸರಿಸುವುದರಲ್ಲಿ ಯಾವ ದೋಷವೂ ಇಲ್ಲ, ಅದು ಅವನ ಕರ್ತವ್ಯವೂ ಹೌದು. ಹೀಗೆ ಮಾಡುವುದರಿಂದ ಏನಾದರೂ ತಪ್ಪಾದರೆ ಅದು ತನ್ನಷ್ಟಕ್ಕೆ ತಾನೇ ಸರಿಹೋಗುವುದು. ಏಕೆಂದರೆ ಸತ್ಯಾನ್ವೇಷಣಕ್ಕೆ ತಪಸ್ಸು, ಆತ್ಮದಂಡನೆ, ಪ್ರಾಣತ್ಯಾಗ ಕೂಡ—ಒಮ್ಮೊಮ್ಮೆ—ಅಗತ್ಯ ಅಂಗಗಳು—ಇಂಥ ನಿಸ್ಸ್ವಾರ್ಥ ಸಾಧಕನಿಗೆ ಹೆಚ್ಚು ಕಾಲ ದಾರಿ ತಪ್ಪುವುದು ಸಾಧ್ಯವಿಲ್ಲ. ತಪ್ಪು ದಾರಿ ಹಿಡಿದ ಕೂಡಲೆ ಮುಗ್ಗರಿಸಿಯಾನು. ಅದರಿಂದ ಸರಿಯಾದ ದಾರಿಗೆ ಮತ್ತೆ ಬಂದು ಸೇರುತ್ತಾನೆ.

(ಯಂಗ್ ಇಂಡಿಯಾ, ೩೦–೭–೧೯೩೧)

ಆದುದರಿಂದ ಸತ್ಯವನ್ನು ಅರಸುತ್ತ ಹೋಗುವುದೇ ನಿಜವಾದ ಭಕ್ತಿ ಮಾರ್ಗ. ಈ ಮಾರ್ಗ ದೇವರಲ್ಲಿಗೆ ಕೊಂಡೊಯ್ಯುವುದು. ಇಲ್ಲಿ ಹೇಡಿತನಕ್ಕೆ ಎಡೆ ಇಲ್ಲ, ಸೋಲಿಗೆ ಸ್ಥಳವಿಲ್ಲ. ಇದೊಂದು ರಕ್ಷಾಮಣಿ. ಇದರಿಂದ ಸಾವೂ ಸಹ ಅಮರಜೀವನದ ಹೆಬ್ಬಾಗಿಲಾಗುತ್ತದೆ.

ಈ ಸಂಬಂಧದಲ್ಲಿ ಹರಿಶ್ಚಂದ್ರ, ಪ್ರಹ್ಲಾದ, ರಾಮಚಂದ್ರ, ಇಮಾಂ ಹಸನ್ ಮತ್ತು ಇಮಾಂ ಹುಸೇನ್, ಹಾಗೂ ಕ್ರೈಸ್ತ ಸಾಧುಸಂತರ ಜೀವನ ಗಳನ್ನೂ ಕಾರ್ಯಗಳನ್ನೂ ಕುರಿತು ಆಳವಾಗಿ ಚಿಂತನೆಮಾಡುವುದು ಒಳಿತು. ನಾವೆಲ್ಲರೂ—ಸ್ತ್ರೀಪುರುಷರೆಲ್ಲ ನಮ್ಮ ಜಾಗ್ರತಾವಸ್ಥೆಯ ಕಾಲದಲ್ಲೆಲ್ಲ, ಕೆಲಸ ಮಾಡುವಾಗ, ಅನ್ನಪಾನಾದಿಗಳನ್ನು ಸೇವಿಸುವಾಗ, ಆಟವಾಡುವಾಗ, ನಮ್ಮ ದೇಹ ಬಿದ್ದು ನಾವು ಸತ್ಯದೊಂದಿಗೆ ಐಕ್ಯವಾಗುವವರೆಗೂ, ಪೂರ್ತಿಯಾಗಿ ಸತ್ಯದ ಉಪಾಸಕರೇ ಆದರೆ ಎಷ್ಟು ಸೊಗಸು ! ಸತ್ಯವೆಂಬ ದೇವರು ನನಗೆ ಅಮೂಲ್ಯ ನಿಧಿ, ಅಂತೆಯೇ ನಮ್ಮೆಲ್ಲರಿಗೂ ಆಗಲಿ.

(ಮಂಗಳ ಪ್ರಭಾತ, ಅಧ್ಯಾಯ ೧)

## ಸತ್ಯಾಧಾರಿತ ಶೀಲದಿಂದ ಈಶ್ವರಪ್ರಾಪ್ತಿ

ರಾಮಾಯಣವನ್ನು ಓದುವುದರಿಂದ ರಾಮನನ್ನಾಗಲಿ, ಗೀತೆಯನ್ನು ಓದುವುದರಿಂದ ಕೃಷ್ಣನನ್ನಾಗಲಿ, ಕುರಾನನ್ನು ಓದುವುದರಿಂದ ಅಲ್ಲಾನನ್ನಾಗಲಿ, ಬೈಬಲನ್ನು ಓದುವುದರಿಂದ ಕ್ರೈಸ್ತನನ್ನಾಗಲಿ ನಾವು ಸಾಕ್ಷಾತ್ಕಾರ ಮಾಡಿಕೊಳ್ಳಲಾರೆವು. ಪರಿಶುದ್ಧವಾದ, ಉತ್ತಮವಾದ ಸಚ್ಚಾರಿತ್ರ್ಯವನ್ನು ಬೆಳೆಸಿಕೊಳ್ಳುವುದೊಂದೇ ಸಾಕ್ಷಾತ್ಕಾರಕ್ಕೆ ಮಾರ್ಗ. ಸಚ್ಚಾರಿತ್ರ್ಯ ಒಳ್ಳೆಯ ನಡತೆಯ ಮೇಲೆ ನಿಂತಿದೆ. ಒಳ್ಳೆಯ ನಡತೆ ಸತ್ಯದ ಮೇಲೆ ಸ್ಥಾಪಿತವಾಗಿದೆ. ಆದುದರಿಂದ ಎಲ್ಲ ಒಳ್ಳೆಯ ಮತ್ತು ಮಹತ್ತಾದ ವಿಷಯಗಳಿಗೂ ಸತ್ಯವೇ ಮೂಲ, ತಳಪಾಯ. ಆದುದರಿಂದ ಸತ್ಯ ಮತ್ತು ಧರ್ಮದ ನಿರ್ಭೀತ, ಅಚಲ ಅನುಷ್ಠಾನವೇ ನಿಜವಾದ ಆರೋಗ್ಯಪಾಲನೆಗೆ ಉಪಾಯ. ಎಲ್ಲ ವಿಷಯಗಳ ಸಾಧನೆಗೂ ಅದೇ ಉಪಾಯ. (ಆರೋಗ್ಯರಹಸ್ಯದಿಂದ)

## ಸತ್ಯಸಾಕ್ಷಾತ್ಕಾರ ಎಂತು?

ಸ್ಪರ್ಶಮಣಿಗೂ ಕಾಮಧೇನುವಿಗೂ ಸದೃಶವಾದ ಈ ಸತ್ಯವನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವುದು ಹೇಗೆ?—ಏಕನಿಷ್ಠ ಅಭ್ಯಾಸದಿಂದ, ಬಾಳಿನ ಉಳಿದೆಲ್ಲ ವಿಷಯಗಳಲ್ಲಿ ವೈರಾಗ್ಯ ತಾಳುವುದರಿಂದ.

ನನ್ನಂತಹ ಸತ್ಯಶೋಧಕನಿಗೆ ಮೌನ ಬಹಳ ಸಹಾಯಕ. ಮೌನದಿಂದ ಆತ್ಮದ ದಾರಿ ಬೆಳಗುತ್ತದೆ, ಮಾಯೆ, ಭ್ರಮೆ ಕರಗಿ ಸ್ಫಟಿಕಸ್ಪಷ್ಟತೆ ಉಂಟಾಗುತ್ತದೆ. ನಮ್ಮ ಬಾಳುವೆಯೆಂದರೇ ದೀರ್ಘ, ಕಠಿನ ಸತ್ಯಾನ್ವೇಷಣ, ಅದರ ಪೂರಾ ಎತ್ತರ ಏರಲು ಆತ್ಮಕ್ಕೆ ಅಂತಶ್ಶಾಂತಿ ಬೇಕು.

(ಹರಿಜನ, ೧೦–೧೨–೧೯೩೮)

ಸತ್ಯಾರಾಧಕನ ಸಾಧನೆಯ ಕ್ರಮದಲ್ಲಿ ಮೌನ ಒಂದು ಮುಖ್ಯ ಅಂಗವೆಂದು ಅನುಭವ ನನಗೆ ಕಲಿಸಿದೆ. ತಿಳಿದೊ ತಿಳಿಯದೆಯೋ ಸತ್ಯದ ಉತ್ಪ್ರೇಕ್ಷೆ,

ಸತ್ಯವನ್ನು ಬಚ್ಚಿಡುವುದು ಅಥವಾ ಬದಲಿಸುವುದು ಮನುಷ್ಯನ ಸಹಜ ದೌರ್ಬಲ್ಯ, ಅದನ್ನು ಗೆಲ್ಲಲು ಮೌನ ಅಗತ್ಯ. ಮಿತಭಾಷಿಯಾದವ ಮಾತಿನಲ್ಲಿ ಅವಿವೇಕಿಯಾಗಿರುವುದು ಅಪರೂಪ. ಒಂದೊಂದು ಮಾತನ್ನೂ ತೂಗಿ ಆಡಿಯಾನು. (ಆತ್ಮಕಥೆಯಿಂದ)

## ವ್ರತಗಳ ಮಹತ್ವ

ಕೆಲವು ನಿಯಮಗಳನ್ನು ಆಚರಿಸುವುದು ಸೂಕ್ತವೆಂದು ಒಪ್ಪಿದರೂ ವ್ರತಗಳನ್ನು ಆಚರಿಸುವ ಆವಶ್ಯಕತೆಯನ್ನು ಒಪ್ಪದಿರುವ ಜ್ಞಾನಿಗಳ ಪ್ರಬಲ ಗುಂಪೊಂದು ಉಂಟು. ವ್ರತಗಳು ದೌರ್ಬಲ್ಯದ ಚಿಹ್ನೆ, ಆದುದರಿಂದ ಹಾನಿಕರವೂ ಆದೀತೆನ್ನುವಷ್ಟು ದೂರ ಅವರು ಹೋಗುತ್ತಾರೆ. ಒಂದು ನಿಯಮ ಅನಾನುಕೂಲವೆಂದೂ, ಪಾಪವೆಂದೂ ತಿಳಿದಮೇಲೂ ಅದಕ್ಕೆ ಕಟ್ಟುಬಿದ್ದಿರುವುದು ತಪ್ಪೆಂದು ಅವರ ವಾದ. ಮದ್ಯ ಕುಡಿಯದಿರುವುದು ಒಳ್ಳೆಯದೆ. ಆದರೆ ಒಮ್ಮೊಮ್ಮೆ ವೈದ್ಯರ ಸಲಹೆಯಂತೆ ಸೇವಿಸಿದರೆ ತಪ್ಪೇನು? ಪೂರಾ ಮದ್ಯ ನಿಷೇಧ ಅನಾವಶ್ಯಕ ತೊಡಕು. ಮದ್ಯ ಹೇಗೋ ಉಳಿದವೂ ಹಾಗೆಯೇ— ಎನ್ನುತ್ತಾರೆ.

ಅಚಲ ಸಂಕಲ್ಪವೇ ವ್ರತ, ಚಾಪಲ್ಯಗಳಿಂದ ಅದು ನಮ್ಮನ್ನು ಕಾಪಾಡುತ್ತದೆ. ಅನಾನುಕೂಲಕ್ಕೆ ಮಣಿಯುವ ಸಂಕಲ್ಪಕ್ಕೆ ಬೆಲೆಯೇ ಇಲ್ಲ. ಅಚಲ ನಿರ್ಧಾರವಿಲ್ಲದೆ ಪ್ರಗತಿ ಸಾಧ್ಯವಿಲ್ಲವೆಂಬುದನ್ನು ಜಗತ್ತಿನ ಅನುಭವ ಸಮರ್ಥಿಸುತ್ತದೆ. ಪಾಪಮಾಡಲು ವ್ರತವೇ ಬೇಕಿಲ್ಲ; ಮೊದಲು ಒಳ್ಳೆಯದೆಂದು ಕಂಡು ಬಳಿಕ ಪಾಪಕರವೆಂದು ಕಾಣಬರುವ ವ್ರತವನ್ನು ತೊರೆಯುವುದು ಸ್ಪಷ್ಟ ಅಗತ್ಯ. ಸಂಶಯಾತ್ಮಕ ವಿಷಯಗಳ ವ್ರತವನ್ನು ಯಾರೂ ಹಿಡಿಯರು, ಹಿಡಿಯಬಾರದು. ಸರ್ವಮಾನ್ಯ ತತ್ತ್ವಗಳನ್ನು ಕುರಿತ ವ್ರತಗಳನ್ನಷ್ಟೇ ಹಿಡಿಯಬೇಕು. ಅಂಥ ಸಂದರ್ಭದಲ್ಲಿ ಪಾಪದ ಸಂಭವ ಹೆಚ್ಚುಕಡಿಮೆ ಕಾಲ್ಪನಿಕ. ಸತ್ಯಾರಾಧಕ ತಾನು ಸತ್ಯ ನುಡಿದರೆ ಯಾರದಾದರೂ ಮನ ನೊಂದೀತಲ್ಲ ಎಂದು ತಡೆಯಲಾರ, ಏಕೆಂದರೆ ಸತ್ಯ ಯಾರಿಗೂ ಹಾನಿಕರವಲ್ಲವೆಂದು ಅವನ ಅಭಿಮತ. ಅಂತೆಯೇ ಪೂರ್ಣ ಮದ್ಯನಿಷೇಧದ ವಿಷಯದಲ್ಲಿಯೂ. ಈ ವ್ರತಧಾರಿ

ಇಲ್ಲವೆ ಔಷಧವನ್ನು ಅಪವಾದವೆಂದೆಣಿಸಿಯಾನು ಅಥವಾ ತನ್ನ ವ್ರತದ ಪೂರ್ಣ ಪರಿಪಾಲನೆಗಾಗಿ ತನ್ನ ಜೀವವನ್ನೇ ಅಪಾಯಕ್ಕೆ ಈಡುಮಾಡಲು ಸಿದ್ಧನಾಗಿದ್ದಾನು. ಪೂರ್ಣ ಮದ್ಯನಿಷೇಧದಿಂದ ನಾವು ಜೀವ ಕಳೆದುಕೊಂಡರೆ ತಾನೆ ಏನು ? ಮದ್ಯದಿಂದ ನಮ್ಮ ಬಾಳುವೆ ಮುಂದುವರಿದೀತೆಂಬ ಯಾವ ಭರವಸೆಯೂ ಸಾಧ್ಯವಿಲ್ಲ, ಹಾಗೆ ಒಂದು ಗಳಿಗೆ ಮುಂದುವರಿದರೂ ಮರುಗಳಿಗೆಯಲ್ಲೇ ಬೇರೊಂದು ನಿಮಿತ್ತದಿಂದ ಜೀವ ಹೋಗಲೂ ಬಹುದು. ತದ್ವಿರುದ್ಧ ವ್ರತ ಬಿಡದೆ ಪ್ರಾಣ ತ್ಯಜಿಸುವ ಮನುಷ್ಯನ ದೃಷ್ಟಾಂತ ಕುಡುಕರು ಕುಡಿತ ಬಿಡುವಂತೆ ಪ್ರೇರೇಪಿಸೀತು, ಹೀಗೆ ಜಗತ್ತಿನಲ್ಲಿ ಸಚ್ಚಾರಿತ್ರ್ಯಕ್ಕೊಂದು ಸಾಮರ್ಥ್ಯವಾದೀತು. ತಮ್ಮೊಳಗಿನ ಶ್ರದ್ಧೆಗಾಗಿ ತಮ್ಮ ಜೀವ ಹೋದರೂ ನಿಲ್ಲಬಲ್ಲಂಥ ಉದಾತ್ತಸಿದ್ಧಸಂಕಲ್ಪರು ಮಾತ್ರ ಎಂದಾದರೊಂದು ದಿನ ದೇವರನ್ನು ಕಾಣಬಲ್ಲರು.

ವ್ರತಗಳ ಸಂಕಲ್ಪ ದೌರ್ಬಲ್ಯದ ಕುರುಹಲ್ಲ, ಬಲದ ಸಂಕೇತ. ಮಾಡಬೇಕಾದುದನ್ನು ಏನೇ ಬಂದರೂ ಮಾಡುವುದೇ ವ್ರತ. ಅದು ಶಕ್ತಿಯ ಕೊತ್ತಲವಾಗುತ್ತದೆ. 'ಸಾಧ್ಯವಾದಷ್ಟುಮಟ್ಟಿಗೆ' ಮಾಡುವೆನೆಂದು ಹೇಳುವವನು ತನ್ನ ಅಹಂಕಾರ ಅಥವಾ ದೌರ್ಬಲ್ಯ ತೋರಿಸಿಕೊಳ್ಳುತ್ತಾನೆ. 'ಸಾಧ್ಯವಾದಷ್ಟುಮಟ್ಟಿಗೆ' ಎಂಬ ಪರಿಮಿತಿ ಘಾತಕ ಅವಕಾಶ ಒದಗಿಸಿಬಿಡುತ್ತದೆ. ಇದನ್ನು ನನ್ನ ಬಾಳಿನಲ್ಲಿಯೂ ಇತರರ ಬಾಳಿನಲ್ಲಿಯೂ ನೋಡಿದೇನೆ. 'ಸಾಧ್ಯವಿದ್ದಷ್ಟುಮಟ್ಟಿಗೆ' ಮಾಡುವೆನೆಂದು ಹೇಳುವುದೆಂದರೆ ಮೊಟ್ಟಮೊದಲ ಚಾಪಲ್ಯಕ್ಕೇ ಸೋತುಬೀಳುವುದೆಂದರ್ಥ. 'ಸಾಧ್ಯವಿದ್ದಷ್ಟುಮಟ್ಟಿಗೆ' ಸತ್ಯ ಹೇಳುವೆನೆನ್ನುವುದರಲ್ಲಿ ಅರ್ಥವಿಲ್ಲ. ಇಂಥ ತಾರೀಖಿಗೆ ಇಷ್ಟು ಹಣವನ್ನು 'ಸಾಧ್ಯವಿದ್ದಷ್ಟು' ತೀರಿಸುತ್ತೇನೆಂದು ಪತ್ರ ಬರೆದುಕೊಟ್ಟರೆ ಯಾವ ಶೆಟ್ಟಿ ಹಣ ಕೊಡುತ್ತಾನೆ ? ಹಾಗೆಯೇ 'ಸಾಧ್ಯವಿದ್ದಷ್ಟುಮಟ್ಟಿಗೆ' ಸತ್ಯಾಚರಣೆ ಮಾಡುವೆನೆನ್ನುವವನ ಮುಚ್ಚಳಿಕೆಯನ್ನು ದೇವರು ನಿರಾಕರಿಸಿಯಾನು.

ದೇವರೇ ವ್ರತದ ಮೂರ್ತಿಮಂತ ರೂಪ. ತನ್ನದೇ ಆದ ನಿಯಮಗಳಿಗೆ ಕೂದಲೆಳೆಯಷ್ಟು ಕೊಂಕಿದರೂ ದೇವರು ದೇವರಾಗಿರಲಾರ. ಸೂರ್ಯ ಇನ್ನೂ ದೊಡ್ಡ ವ್ರತಧಾರಿ; ಅಂತಲೇ ಜಗತ್ತಿನ ಕಾಲದ ನಿರ್ಮಾಣ, ಪಂಚಾಂಗಗಳ ಪ್ರಕಟನೆ ಸಾಧ್ಯ. ಮನುಷ್ಯರು ತಮ್ಮ ವಚನಗಳು ಈಡೇರಿಸುವುದೇ ಎಲ್ಲ

ವ್ಯಾಪಾರಕ್ಕೂ ಆಧಾರ. ಚಾರಿತ್ರ್ಯನಿರ್ಮಾಣಕ್ಕೆ, ಆತ್ಮಸಾಕ್ಷಾತ್ಕಾರಕ್ಕೆ ಅಂಥ ವಚನಗಳು ಅಗತ್ಯವಿಲ್ಲವೆ? ಆದುದರಿಂದ ಆತ್ಮಶುದ್ಧಿ, ಆತ್ಮಸಾಕ್ಷಾತ್ಕಾರಗಳಿಗೆ ವ್ರತಗಳ ಅಗತ್ಯತೆಯನ್ನು ನಾವು ಎಂದೂ ಶಂಕಿಸತಕ್ಕುದಲ್ಲ.

(ಮಂಗಳ ಪ್ರಭಾತದಿಂದ)

## ಸತ್ಯವೇ ದೇವರೆಂಬ ದರ್ಶನ

ನಮ್ಮ ಸುತ್ತುಮುತ್ತಲೂ ಮೂಢ ನಂಬಿಕೆಗಳೂ, ಮಿಥ್ಯಾಚಾರವೂ ವಿಪುಲವಾಗಿರುವುದರಿಂದ ಸರಿಯಾದುದನ್ನು ಮಾಡಲು ಜನ ಹೆದರುತ್ತಾರೆ. ಆದರೆ ನಾವು ಹೆದರಿಕೆಗೆ ಎಡೆಗೊಟ್ಟರೆ ಸತ್ಯವನ್ನೂ ಮುಚ್ಚಿಡಬೇಕಾಗುವುದು. ನಮಗೆ ಸರಿಯೆಂದು ನಂಬಿಕೆ ಬರುವುದನ್ನು ನಿರ್ಭಯವಾಗಿ ನಡೆಸುವುದೇ ಉತ್ತಮೋತ್ತಮ ಮಾರ್ಗ. ಕಪಟ ವರ್ತನೆಯೂ ಅಸತ್ಯವೂ ಪ್ರಪಂಚದಲ್ಲಿ ಇದ್ದೇ ಇರುವುವು. ನಾವು ಸರಿಯಾದುದನ್ನು ಮಾಡುವುದರಿಂದ ಅವು ಕಡಮೆಯಾಗಬಹುದು, ಎಂದಿಗೂ ಹೆಚ್ಚಾಗಲಾರವು. ಎಲ್ಲೆಲ್ಲಿಯೂ ಅಸತ್ಯವು ನಮ್ಮನ್ನು ಆವರಿಸಿಕೊಂಡಿರುವುದರಿಂದ ನಾವೂ ಅದರ ಬಲೆಗೆ ಬಿದ್ದು ಮೋಸಹೋಗಬಹುದು. ಇದೇ ಅಪಾಯ. ನಮ್ಮ ಆಲಸ್ಯ ಅಥವಾ ಅಜ್ಞಾನದಿಂದ ತಪ್ಪು ಮಾಡದಂತೆ ಸದಾ ಎಚ್ಚರಿಕೆಯಿಂದಿರಬೇಕು. ಎಲ್ಲ ಸಂದರ್ಭಗಳಲ್ಲಿಯೂ ನಿರಂತರ ಜಾಗೃತಿ ಅತ್ಯಾವಶ್ಯಕ. ಸತ್ಯಾರಾಧಕ ಅನ್ಯಥಾ ವರ್ತಿಸಲಾರ. ಸರ್ವಶಕ್ತಿಯುಕ್ತವಾದ 'ರಾಮನಾಮ' ಜಪದಂತಹ ಉಪಾಯವೂ ಸಹ ಅಜಾಗರೂಕತೆಯಿಂದ ನಿಷ್ಫಲವಾಗಬಹುದು. ಈಗಾಗಲೇ ಇರುವ ಅನೇಕ ಮೂಢ ನಂಬಿಕೆಗಳ ಆಚರಣೆಗಳ ರಾಶಿಗೆ ಇದೂ ಸೇರಿಬಿಡಬಹುದು.

(ಹರಿಜನ, ೨-೬-೧೯೪೬)

ಸತ್ಯದ ವಿನಾ ಅನ್ಯ ಉಪಾಸನಾದೇವತೆ ನನಗಿಲ್ಲ.

(ಹರಿಜನ, ೧೫-೪-೧೯೩೯)

ಸತ್ಯಕ್ಕೆ ಹೊರತಾಗಿ ಬೇರಾವುದಕ್ಕೂ ನಾನು ಶ್ರದ್ಧಾಬದ್ಧನಲ್ಲ, ಸತ್ಯವನ್ನು ಬಿಟ್ಟು ಬೇರಾರಿಗೂ ನನ್ನ ನಿಷ್ಠೆಯಿಲ್ಲ. (ಹರಿಜನ, ೨೦-೫-೧೯೩೫)

ಈ ನಶ್ವರ ದೇಹದ ಸೆರೆಯಲ್ಲಿರುವವರೆಗೆ ಸತ್ಯದ ಪರಿಪೂರ್ಣ ಸಾಕ್ಷಾತ್ಕಾರ ಸಾಧ್ಯವಿಲ್ಲ. ಕೇವಲ ಅದರ ಕಲ್ಪನೆ ಮಾತ್ರ ಸಾಧ್ಯ. ಈ ನಶ್ವರ ದೇಹದ ಮೂಲಕ ಅಮರ ಸತ್ಯದ ಪ್ರತ್ಯಕ್ಷ ದರ್ಶನ ಅಸಂಭವ. ಅಂತಲೇ ಕಟ್ಟಕಡೆಗೆ ಶ್ರದ್ಧೆಯನ್ನೇ ಆಶ್ರಯಿಸಬೇಕು.

ಈ ಸಾವುಗುಳಿ ಮೈಯ ಮೂಲಕ ಸಂಪೂರ್ಣ ಸತ್ಯದರ್ಶನ ಸಾಧ್ಯವಿಲ್ಲ ಎಂಬುದೇ ಪುರಾತನ ಜಿಜ್ಞಾಸುವಿಗೆ ಅಹಿಂಸೆಯನ್ನು ತೋರಿಸಿಕೊಟ್ಟಿರಬೇಕು. ಆತನ ಎದುರು ಪ್ರಶ್ನೆ ಎದ್ದಿತು : 'ನನ್ನ ಸಾಧನೆಯ ಹಾದಿಯಲ್ಲಿ ಸಂಕಟಗಳನ್ನು ಒಡ್ಡುವವರನ್ನು ಸೈರಿಸಲೆ? ಅಥವಾ ಅವರನ್ನು ನಾಶಮಾಡಿ ಮುಂಬರಿಯಲೆ?' ಇತರರನ್ನು ನಾಶಮಾಡುತ್ತ ಮುಂಬರಿಯುವವ ಮುಂಬರಿಯ, ಇದ್ದಲ್ಲಿಯೇ ಇರುತ್ತಾನೆ; ಆದರೆ ಸಂಕಟಗಳನ್ನು ಸೈರಿಸಿದವ ಮುಂಬರಿಯುತ್ತಾನೆ ಎಂದು ಜಿಜ್ಞಾಸುವಿಗೆ ಕಂಡುಬಂತು. ತಾನು ಅರಸುತ್ತಿರುವ ಸತ್ಯ ಹೊರಗಿಲ್ಲ, ತನ್ನೊಳಗೇ ಇದೆ—ಎಂದು ಮೊಟ್ಟಮೊದಲಿನ ವಿನಾಶಕಾರ್ಯದಲ್ಲಿಯೇ ಅವನಿಗೆ ತಿಳಿಯಿತು. ಆದುದರಿಂದ ಹೆಚ್ಚು ಹಿಂಸೆ ಮಾಡಿದಂತೆಲ್ಲ ಸತ್ಯದಿಂದ ಹೆಚ್ಚು ಹೆಚ್ಚು ಹಿಂದೆ ಬಿದ್ದ. ಹೊರಗಿನ ಕಾಲ್ಪನಿಕ ಶತ್ರುವನ್ನು ಇದಿರಿಸಲು ಹೋಗಿ ಒಳಗಿನ ಶತ್ರುವನ್ನು ಮರೆತ. (ಮಂಗಳ ಪ್ರಭಾತದಿಂದ)

ಹೀಗೆ ಹೆಜ್ಜೆಹೆಜ್ಜೆಯಾಗಿ ಲೋಕಮೈತ್ರಿ ಕಲಿಯುತ್ತೇವೆ; ಸತ್ಯಪರಮೇಶ್ವರನ ಮಹಿಮೆಯನ್ನು ಅರಿಯುತ್ತೇವೆ: ನಾವು ಕಷ್ಟದಲ್ಲಿದ್ದರೂ ನಮ್ಮ ಮನಶ್ಶಾಂತಿ ವೃದ್ಧಿಯಾಗುತ್ತದೆ; ಧೀರರೂ ಸಾಹಸಿಗಳೂ ಆಗುತ್ತೇವೆ. ಶಾಶ್ವತ-ಅಶಾಶ್ವತಗಳ ನಡುವಿನ ಭೇದ ನಮಗೆ ಹೆಚ್ಚು ನಿಚ್ಚಳವಾಗಿ ಕಾಣುತ್ತದೆ; ಕರ್ತವ್ಯ-ಅಕರ್ತವ್ಯ ವಿವೇಕ ಮೂಡುತ್ತದೆ. ನಮ್ಮ ಗರ್ವ ಕರಗಿ, ಹೆಚ್ಚು ನಮ್ರರಾಗುತ್ತೇವೆ. ನಮ್ಮ ಐಹಿಕ ಆಸಕ್ತಿ ಕಡಮೆಯಾಗುತ್ತದೆ; ನಮ್ಮೊಳಗಿನ ಕೊಳೆ-ಕೆಡಕು ದಿನೇ ದಿನೇ ಕಡಮೆಯಾಗುತ್ತದೆ.

ಈ ಮೋಹವಿಮೋಚನೆಯೇ ಸತ್ಯನಾರಾಯಣನ ಸಾಕ್ಷಾತ್ಕಾರ.

(ಮಂಗಳ ಪ್ರಭಾತದಿಂದ)

# ಸತ್ಯವೇ ದೇವರು—ಏಕೆ ?

ನನ್ನ ಬಾಲ್ಯದಲ್ಲಿ ಹಿಂದೂ ಶಾಸ್ತ್ರಗಳಲ್ಲಿರುವ ದೇವರ ಸಹಸ್ರನಾಮ ಪಾಠ ಹೇಳಿಕೊಟ್ಟರು. ಆದರೆ ಈ ಸಹಸ್ರನಾಮಗಳೂ ದೇವರ ಮಹಿಮೆಯನ್ನು ಸಮಗ್ರವಾಗಿ ತಿಳಿಸುವುವಲ್ಲ. ಸೃಷ್ಟಿಯಲ್ಲಿ ಎಷ್ಟು ಪ್ರಾಣಿಗಳಿವೆಯೋ ಅಷ್ಟು ನಾಮಗಳೂ ದೇವರಿಗುಂಟೆಂದು ನಾವು ನಂಬುತ್ತೇವೆ. ಅದು ನಿಜವೂ ಹೌದು. ಆದುದರಿಂದ ದೇವರು ನಾಮರಹಿತನೆಂದೂ ಹೇಳುತ್ತೇವೆ. ಅಂತೆಯೇ ದೇವರಿಗೆ ಅನೇಕಾನೇಕ ಆಕಾರಗಳಿರುವುದರಿಂದ ಅವನು ನಿರಾಕಾರನೆಂದೂ ಹೇಳುತ್ತೇವೆ. ಅವನು ನಮ್ಮೊಂದಿಗೆ ಅನೇಕ ಭಾಷೆಗಳ ಮೂಲಕ ಮಾತನಾಡುವುದರಿಂದ ಅವನು ಭಾಷಾರಹಿತನೆಂದೂ—ಇತ್ಯಾದಿಯಾಗಿ ಹೇಳುತ್ತೇವೆ. ಹೀಗೆಯೇ ನಾನು ಇಸ್ಲಾಂ ಮತವನ್ನು ಅಧ್ಯಯನ ಮಾಡಿದಾಗ ಆ ಮತದಲ್ಲಿಯೂ ದೇವರಿಗೆ ಅನೇಕ ನಾಮಗಳಿರುವುದನ್ನು ಕಂಡೆ. ದೇವರು ಪ್ರೇಮಸ್ವರೂಪವೆಂದು ಹೇಳುವರೊಂದಿಗೆ ಸೇರಿಕೊಂಡು ನಾನೂ ಹೌದೆನ್ನುವೆ. ಆದರೂ ದೇವರು ಪ್ರೇಮಸ್ವರೂಪವಾಗಿರಬಹುದಾದರೂ ನನ್ನ ಅಂತರಂಗದಲ್ಲಿ ಎಲ್ಲಕ್ಕೂ ಮಿಗಿಲಾಗಿ ದೇವರು ಸತ್ಯಸ್ವರೂಪನೆಂದು ಹೇಳುವುದನ್ನು ನಾನು ರೂಢಿಸಿಕೊಂಡೆ. ಮಾನವನ ವಾಕ್ಶಕ್ತಿಗೆ ದೇವರನ್ನು ಸಮಗ್ರವಾಗಿ ವರ್ಣಿಸಲು ಸಾಧ್ಯವಾದರೆ ದೇವರು ಸತ್ಯಸ್ವರೂಪ ಎನ್ನುವ ನಿರ್ಧಾರಕ್ಕೆ ನನ್ನ ಪೂರ್ತಿಗೆ ನಾನು ಬಂದಿದ್ದೇನೆ. ಆದರೆ ಎರಡು ವರ್ಷಗಳ ಹಿಂದೆ ಮತ್ತೊಂದು ಹೆಜ್ಜೆ ಮುಂದೆ ಹೋಗಿ ಸತ್ಯವೇ ದೇವರೆಂದು ಹೇಳಿದೆ. ದೇವರು ಸತ್ಯಸ್ವರೂಪ ಮತ್ತು ಸತ್ಯವೇ ದೇವರ ಸ್ವರೂಪ—ಈ ಎರಡು ವಾಕ್ಯಗಳಲ್ಲಿರುವ ಸೂಕ್ಷ್ಮ ಭೇದವನ್ನು ನೀವು ಅರ್ಥಮಾಡಿಕೊಳ್ಳಬಲ್ಲಿರಿ. ಅರವತ್ತು ವರ್ಷಗಳ ಕಾಲ ಸತ್ಯಾನ್ವೇಷಣೆಯನ್ನು ಸತತವಾಗಿಯೂ, ಹಿಮ್ಮೆಟ್ಟದೆಯೂ ಮಾಡಿದುದರ ಫಲವಾಗಿ ಈ ನಿರ್ಧಾರಕ್ಕೆ ಬಂದೆ. ಆ ಸತ್ಯದ ಬಳಿ ಸಾರಲು ಪ್ರೇಮವೇ ದಾರಿಯೆಂದು ಮನಗಂಡೆ. ಆದರೆ ಪ್ರೇಮವೆನ್ನುವ ಪದಕ್ಕೆ ಇಂಗ್ಲೀಷು ಭಾಷೆಯಲ್ಲಿಯಾದರೂ ಅನೇಕ ಅರ್ಥಗಳಿರುವುದನ್ನೂ ಕಂಡೆ. ಮತ್ತು ಮಾನವರ ಪ್ರೇಮ-ಕಾಮವೆಂಬ ಅರ್ಥದಲ್ಲಿ ಅಧೋಗತಿಗೆ ಎಳೆದೊಯ್ಯಬಹುದೆಂದೂ ಕಂಡೆ. ಹಾಗೂ ಅಹಿಂಸೆ ಎಂಬ ಅರ್ಥದಲ್ಲಿ ಪ್ರೇಮದ ಉಪಾಸಕರು ಲೋಕದಲ್ಲಿ ವಿರಳರೆಂದೂ ತಿಳಿದೆ. ಆದರೆ ಸತ್ಯದ ವಿಷಯದಲ್ಲಿ ಈ ಬಗೆಯ ದ್ವಂದ್ವಾರ್ಥ

ಎಲ್ಲಿಯೂ ಕಾಣಲಿಲ್ಲ. ನಾಸ್ತಿಕರೂ ಸಹ ಸತ್ಯದ ಶಕ್ತಿ ಅಥವಾ ಆವಶ್ಯಕತೆ ಯನ್ನು ಕುರಿತು ಆಕ್ಷೇಪಿಸುವುದಿಲ್ಲ. ಸತ್ಯವನ್ನು ಕಂಡುಹಿಡಿಯಬೇಕೆಂದು ಅವರಿಗಿರುವ ಉತ್ಕಟೇಚ್ಛೆಯಲ್ಲಿ ದೇವರೇ ಇಲ್ಲವೆಂದು ಹೇಳಲೂ ನಾಸ್ತಿಕರು ಹಿಂಜರಿಯಲಿಲ್ಲ—ತಮ್ಮ ದೃಷ್ಟಿಕೋನದಿಂದ ಇದೂ ಸರಿಯೆ! ಈ ತರ್ಕಸರಣಿ ಯನ್ನು ಅನುಸರಿಸಿಯೆ ದೇವರು ಸತ್ಯವೆಂದು ಹೇಳುವುದಕ್ಕಿಂತಲೂ ಸತ್ಯವೇ ದೇವರ ಸ್ವರೂಪವೆಂದು ಹೇಳುವುದನ್ನು ನಾನು ಮನಗಂಡೆ. ಈ ಸಂದರ್ಭದಲ್ಲಿ ಚಾರ್ಲ್ಸ್ ಬ್ರಾಡ್‌ಲಾ ಅವರ ಹೆಸರು ನೆನಪಿಗೆ ಬರುತ್ತದೆ. ಅವರಿಗೆ ತಾನು ನಾಸ್ತಿಕನೆಂದು ಹೇಳಿಕೊಳ್ಳುವುದರಲ್ಲಿ ಸಂತೋಷ. ಆದರೆ ಅವರನ್ನು ನಾನು ತಕ್ಕಮಟ್ಟಿಗೆ ಬಲ್ಲೆನಾದುದರಿಂದ ನಾಸ್ತಿಕರೆಂದು ಅವರನ್ನು ಕರೆಯಲು ನಾನು ಸಿದ್ಧನಿಲ್ಲ. ಇತರರಿಗೆ ದೇವರೆಂದರೆ ಹೇಗೋ ಹಾಗೆ ಚಾರ್ಲ್ಸ್ ಬ್ರಾಡ್‌ಲಾ ಅಂತಹ ನಾಸ್ತಿಕರಿಗೆ ಸತ್ಯ ಇದ್ದಿತು—ಅದೇ ಸ್ಥಾನದಲ್ಲಿ. ಆತನನ್ನು ದೈವ ಭೀರು ಎಂದು ಹೇಳಲು ನಾನು ಬಯಸುತ್ತೇನೆ. ಇದನ್ನು ಆತ ಒಪ್ಪಿರಲಾರ ನೆಂದು ನಾನು ಬಲ್ಲೆ. 'ಬ್ರಾಡ್‌ಲಾ ಅವರೆ, ನೀವು ಸತ್ಯಭೀರುಗಳು—ಆದುದ ರಿಂದ ದೈವಭೀರುಗಳು' ಎಂದು ನಾನು ಹೇಳಿದ್ದರೆ ಆತನ ಮುಖ ಕೆಂಪೇರು ತ್ತಿತ್ತು. ಸತ್ಯವೇ ದೇವರೆಂದು ಹೇಳಿ ಅಷ್ಟರಲ್ಲಿಯೇ ಆತನ ಆಕ್ಷೇಪಣೆಯನ್ನು ತೊಡೆದುಹಾಕುತ್ತಿದ್ದೆ. ಹೀಗೆಯೇ ಅನೇಕ ಯುವಕರ ಆಕ್ಷೇಪಗಳನ್ನೂ ನಾನು ತೊಡೆದುಹಾಕಿದ್ದೇನೆ. ಮತ್ತೊಂದು ವಿಷಯ: ಲಕ್ಷಾಂತರ ಜನರು ತಾವು ದೇಶಭಕ್ತರೆಂದು ಹೇಳಿಕೊಂಡು ದೇವರ ಹೆಸರಿನಲ್ಲಿ ಹೇಳಲಾಗದ ಅತ್ಯಾಚಾರ ಗಳನ್ನು ಮಾಡಿ ಒಂದು ದೊಡ್ಡ ತೊಡಕನ್ನು ಉಂಟುಮಾಡಿದಾರೆ. ಸತ್ಯದ ಹೆಸರಿನಲ್ಲಿಯೂ ವಿಜ್ಞಾನಶಾಸ್ತ್ರ ಸಂಶೋಧಕರು ಸಹ ಕ್ರೂರಕರ್ಮಗಳನ್ನು ಮಾಡಲಿಲ್ಲವೆಂದಲ್ಲ. ಸತ್ಯದ ಹೆಸರಿನಲ್ಲಿ—ವಿಜ್ಞಾನಶಾಸ್ತ್ರದ ಹೆಸರಿನಲ್ಲಿ— ಸಂಶೋಧಕರು ತಮ್ಮ ಸಂಶೋಧನೆಯ ಸಲುವಾಗಿ ಪ್ರಾಣಿಗಳನ್ನು ಕೊಯ್ದು ಚಿತ್ರಹಿಂಸೆಗಳಿಗೆ ಗುರಿಮಾಡುವುದನ್ನು ನಾನು ಬಲ್ಲೆ. ದೇವರನ್ನು ಯಾವ ಬಗೆಯಲ್ಲಿ ವಿವರಿಸಿದರೂ, ಈ ಬಗೆಯ ತೊಡಕುಗಳಿದ್ದೇ ಇವೆ. ಆದರೆ ಮಾನವನ ವಿಚಾರಶಕ್ತಿಗೆ ಒಂದು ಪರಿಮಿತಿಯುಂಟು: ಮಾನವನ ಶಕ್ತಿಗೆ ಮೀರಿದ ಅಗ್ರಾಹ್ಯವಾದ ಪರವಸ್ತು ಅಥವಾ ಪರಮಪುರುಷನನ್ನು ಕುರಿತು ವಿಚಾರಮಾಡಬೇಕಾದರೆ ಈ ಪರಿಮಿತಿಗಳಿಗೆ ಒಳಗಾಗಿಯೇ ವಿಚಾರ ಮಾಡ

ಬೇಕಾಗುತ್ತದೆ. ಮತ್ತು ಹಿಂದೂ ಧರ್ಮದಲ್ಲಿ ಇನ್ನೊಂದು ಸಿದ್ಧಾಂತವಿದೆ: 'ದೇವರೊಬ್ಬನೇ ಇರುವನು; ಬೇರೆ ಯಾವುದೂ ಇಲ್ಲ' ಎಂದು. ಇದೇ ತತ್ತ್ವವನ್ನೇ ಮುಸಲ್ಮಾನರು ಹೇಳುವ ಕಾಲ್ಮಾದಲ್ಲಿ (ಲಾ ಇಲಾ ಇಲ್ಲಿಲ್ಲಾಹ್) ಒತ್ತಿ ಹೇಳಲಾಗಿದೆ. ಈ ಕಾಲ್ಮಾದಲ್ಲಿ ಇರುವುದು ದೇವರೊಬ್ಬನೇ—ಬೇರೆ ಯಾವುದೂ ಇಲ್ಲವೆಂಬುದನ್ನು ಸ್ಪಷ್ಟವಾಗಿ ಹೇಳಿದೆ. ವಸ್ತುತಃ ಸತ್ಯವೆಂಬ ಸಂಸ್ಕೃತ ಪದದ ಮೂಲವೇ ಈ ಅರ್ಥವನ್ನು ಕೊಡುವುದು. ಸತ್ ಅಂದರೆ ಇರುವುದೆಂದು ಅರ್ಥ. ಈ ಕಾರಣಗಳಿಂದ ಸತ್ಯವೇ ದೇವರ ಸ್ವರೂಪವೆಂದು ಹೇಳುವುದೇ ನನಗೆ ಹೆಚ್ಚು ತೃಪ್ತಿಯನ್ನು ಕೊಡುತ್ತದೆ. ಈ ಸತ್ಯಸ್ವರೂಪವಾದ ದೇವರನ್ನು ಕಂಡುಕೊಳ್ಳಲು ಪ್ರೇಮವೇ ದಾರಿ; ಅಂದರೆ ಅಹಿಂಸೆ; ಅದೇ ಸಾಧನ; ಮೂಲತಃ ಸಾಧನ, ಸಿದ್ಧಿ ಅಭಿನ್ನವಾಗಿರುವುದರಿಂದ, ದೇವರು ಪ್ರೇಮಸ್ವರೂಪನೆಂದು ಹೇಳಲು ನಾನು ಹಿಂಜರಿಯುವುದಿಲ್ಲ.

'ದೇವರು ಸತ್ಯಸ್ವರೂಪ' ಎನ್ನುವುದರ ಅರ್ಥ ದೇವರು ಸತ್ಯಕ್ಕೆ ಸಮಾನನೆಂದಾಗಲಿ—ಅಥವಾ ದೇವರು ಕೇವಲ ಸತ್ಯಸಂಧನೆಂದಾಗಲಿ ಅಲ್ಲವೇ ಅಲ್ಲ. ಸತ್ಯ ದೇವರ ಗುಣ ಅಥವಾ ಲಕ್ಷಣ ಮಾತ್ರವಲ್ಲ. ಅದೇ ಅವನು. ಹಾಗಿಲ್ಲದಿದ್ದರೆ ಅವನಿಗೆ ಅಸ್ತಿತ್ವವೇ ಇಲ್ಲ. ಸಂಸ್ಕೃತದಲ್ಲಿ 'ಸತ್' ಎನ್ನುವ ಶಬ್ದ ಇರುವಿಕೆಯನ್ನು ಸೂಚಿಸುತ್ತದೆ. ಸತ್ಯದಲ್ಲಿ ಇರುವಿಕೆ ಅಡಕವಾಗಿದೆ. ದೇವರಿದ್ದಾನೆ. ಅದರ ಹೊರತು ಯಾವುದೂ ಇಲ್ಲ. ಆದುದರಿಂದ ನಾವು ಸತ್ಯವಂತರಾಗಿರುವಷ್ಟು ಪ್ರಮಾಣದಲ್ಲಿ ದೇವರ ಸಮೀಪಕ್ಕೆ ಹೋಗುತ್ತಿದೇವೆ. ನಾವು ಎಷ್ಟು ಮಾತ್ರ ಸತ್ಯವಂತರಾಗಿರುವೆವೋ ಅಷ್ಟೇ ಪ್ರಮಾಣದಲ್ಲಿಯೇ ನಮ್ಮ ಅಸ್ತಿತ್ವವೂ ಸಿದ್ಧವಾಗುತ್ತದೆ. (ಹರಿಜನ, ೨೭–೩–೧೯೪೯)

ಬಹಳ ಕಾಲಕ್ಕೆ ಹಿಂದೆಯೇ ದೇವರು ಸತ್ಯಸ್ವರೂಪಿಯೆಂದೂ ಇದೇ ಅವನ ಪರಮಗುಣವೆಂದೂ ನನ್ನ ಬುದ್ಧಿಶಕ್ತಿಯಿಂದಲೂ ಹೃದಯದಿಂದಲೂ ನಾನು ಮನಗಂಡೆ. ಆ ಸತ್ಯಸ್ವರೂಪವನ್ನು ನಾನು 'ರಾಮ'ನೆಂದು ಕರೆಯುತ್ತೇನೆ. ನಾನು ವಿಷಮಪರೀಕ್ಷೆಗೆ ಸಿಲುಕಿ ಕಗ್ಗತ್ತಲೆ ನನ್ನನ್ನು ಕವಿದಾಗ ರಾಮನಾಮವು ನನ್ನನ್ನು ಕಾಪಾಡಿದೆ—ಈಗಲೂ ಕಾಪಾಡುತ್ತಿದೆ. ಇದು ಬಾಲ್ಯದ ಒಂದು ಅಭ್ಯಾಸವಾಗಿರಬಹುದು. ತುಲಸೀದಾಸರು ನನ್ನ ಮೇಲೆ

ಬೀರಿದ ಪ್ರಭಾವವೆನ್ನಬಹುದು. ಆದರೂ ಇದು ದೃಢವಾದ ಸತ್ಯ. ನಾನು ಈ ಮಾತುಗಳನ್ನು ಬರೆಯುತ್ತಿರಬೇಕಾದರೆ, ನನ್ನ ಬಾಲ್ಯದ ನೆನಪುಗಳು ನನ್ನ ಮನಸ್ಸಿನಲ್ಲಿ ಸುಳಿದಾಡುತ್ತವೆ. ಆ ಕಾಲದಲ್ಲಿ ನಮ್ಮ ಪೂರ್ವಜರು ಕಟ್ಟಿದ ಮನೆಯ ಪಕ್ಕದಲ್ಲಿದ್ದ ರಾಮದೇವರ ಗುಡಿಗೆ ಪ್ರತಿನಿತ್ಯವೂ ಹೋಗುತ್ತಿದ್ದೆ. ನನ್ನ ರಾಮನು ಅಲ್ಲಿ ವಾಸಿಸುತ್ತಿದ್ದನು. ಅನೇಕ ಭಯಗಳಿಂದಲೂ ಪಾಪ ಗಳಿಂದಲೂ ನನ್ನನ್ನು ಅವನು ಪಾರುಮಾಡಿದ. ನನ್ನ ಮಟ್ಟಿಗೆ ಇದು ಮೂಢ ನಂಬಿಕೆಯಾಗಿರಲಿಲ್ಲ. ಆ ದೇವಸ್ಥಾನದ ಅರ್ಚಕನು ಕೆಟ್ಟವನಾಗಿದ್ದಿರಬಹುದು. ಅದರ ವಿಷಯ ನನಗೆ ಗೊತ್ತಿಲ್ಲ. ದೇವಸ್ಥಾನದಲ್ಲಿ ಅತ್ಯಾಚಾರಗಳು ನಡೆದಿರ ಬಹುದು. ಅದರ ವಿಷಯವೂ ನನಗೆ ಗೊತ್ತಿಲ್ಲ. ಆದುದರಿಂದ ಈ ವಿಷಯ ಗಳು ನನ್ನ ಮೇಲೆ ಯಾವ ಪರಿಣಾಮವನ್ನೂ ಉಂಟುಮಾಡುವುದಿಲ್ಲ. ನನಗೆ ಹಿಂದೆಯೂ ಈಗಲೂ ಯಾವುದು ಸತ್ಯವೋ—ಅದೇ ಲಕ್ಷಾಂತರ ಹಿಂದೂ ಗಳಿಗೂ ಸತ್ಯವಾಗಿಯೇ ಇದೆ. (ಹರಿಜನ, ೧೭-೮-೧೯೩೪)

## ಸತ್ಯಾನ್ವೇಷಣೆ – ಅಪರಿಗ್ರಹ

ಸತ್ಯಾನ್ವೇಷಕ, ಪ್ರೇಮದ ನಿಯಮದ ಪಾಲಕ ನಾಳೆಗೆಂದು ಏನನ್ನೂ ಶೇಖರಿಸಿಡಲಾರ. ನಾಳೆಗೆಂದು ದೇವರು ಏನನ್ನೂ ಕಾದಿಡುವುದಿಲ್ಲ. ಆ ಹೊತ್ತಿಗೆ ಏನು ಬೇಕೋ ಅಷ್ಟನ್ನು ಮಾತ್ರ ದೇವರು ಸೃಷ್ಟಿಸುತ್ತಾನೆ. ಆದುದರಿಂದ ಅವನು ಎಲ್ಲರ ನಿರ್ವಾಹಕನೆಂದು ನಾವು ನಂಬಿದರೆ ನಮಗೆ ನಮ್ಮ ನಿತ್ಯದ ಆಹಾರವನ್ನು ಮಾತ್ರವಲ್ಲದೆ ನಮಗೆ ಬೇಕಾದುದೆಲ್ಲವನ್ನೂ ಅವನು ಒದಗಿಸಿಯಾನು. ಸಾಧುಸಂತರೂ ಭಕ್ತರೂ ಹೀಗೆ ನಂಬಿ ತಮ್ಮ ಜೀವನ ನಡೆಸಿದ್ದಾರೆ. ಅವರ ಅನುಭವ ಈ ನಂಬಿಕೆಯನ್ನು ಸಾರ್ಥಕ ಗೊಳಿಸಿದೆ.

ಶುದ್ಧಸತ್ಯದ ದೃಷ್ಟಿಯಿಂದ ನಮ್ಮ ದೇಹವೂ ಸಹ ಒಂದು ಸೊತ್ತು. ಹೀಗೆ ವಿಚಾರಮಾಡಿದರೆ ಆತ್ಯಂತಿಕ ತ್ಯಾಗವೆಂಬ ಧ್ಯೇಯದ ಬಳಿಗೆ ಬರುತ್ತೇವೆ. ನಮ್ಮ ದೇಹವನ್ನು ಸೇವೆಗಾಗಿ ಮೀಸಲಾಗಿಡುವುದನ್ನು ಕಲಿಯುತ್ತೇವೆ. ಆಗ ರೊಟ್ಟಿಯಲ್ಲ, ಸೇವೆ ನಮ್ಮ ಜೀವನಪಥದ ಊರೆಗೋಲಾಗುತ್ತದೆ. ನಾವು

ಸೇವೆಗಾಗಿಯೇ ಊಟ, ನಿದ್ದೆ, ಎಚ್ಚರ ಎಲ್ಲವನ್ನೂ ಮಾಡಿಯೇವು. ಅಂಥ ಮನೋಧರ್ಮವೇ ನಿಜವಾದ ಸುಖ ಕೊಡುತ್ತದೆ. (ಮಂಗಳ ಪ್ರಭಾತದಿಂದ)

## ಸತ್ಯವೇ ದೇವರು

### (ಒಂದು ಚರ್ಚೆ)

೧೯೩೨ನೇ ವರ್ಷ ಏಪ್ರಿಲ್ ೮ನೇ ದಿನಾಂಕ. ಶ್ರೀ ಮಹಾದೇವ ದೇಸಾಯಿಯವರು ಗಾಂಧೀಜಿಯೊಂದಿಗೆ ಗಾಳಿಸಂಚಾರಕ್ಕೆ ಹೊರಟಿದ್ದಾಗ ಶ್ರೀ ಮಹಾದೇವ ದೇಸಾಯಿಯವರು ಗಾಂಧೀಜಿಯನ್ನು ಕೇಳಿದರು: 'ನೀವು ಸತ್ಯವೇ ದೇವರ ಸ್ವರೂಪವೆಂದು ಹೇಳುವಿರಿ. ದೇವರಲ್ಲಿ ಅನನ್ಯಭಕ್ತಿಯಿಟ್ಟು ಅವನ ಪ್ರೇರಣೆಯಂತೆ ಎಲ್ಲವನ್ನೂ ಮಾಡಬೇಕೆಂದೂ ಹೇಳುವಿರಿ. ಈ ಎರಡನ್ನೂ ಹೇಗೆ ಸಮನ್ವಯ ಮಾಡುವಿರಿ?' ಅದಕ್ಕೆ ಗಾಂಧೀಜಿಯ ಉತ್ತರ ವನ್ನು ಶ್ರೀ ಮಹಾದೇವ ದೇಸಾಯಿಯವರು ತಮ್ಮ 'ದಿನಚರಿ'ಯಲ್ಲಿ ಈ ಕೆಳಕಂಡಂತೆ ಬರೆದಿಟ್ಟಿದ್ದಾರೆ.

'ಆಶ್ರಮ ನಿಯಮಗಳ ಆಚರಣೆಯ ವಿಧಾನ' ಎಂಬ ವಿಷಯದ ಭಾಗವಾಗಿ ಬಾಪೂ ಈ ರಾತ್ರಿ ಇಂದು ಹೇಳಿ ಬರೆಯಿಸಿದರು.

'ದೇವರು ಒದಗಿಸಿರುವ ಹಣದಿಂದ ಏನು ಕೆಲಸಕಾರ್ಯಗಳು ಸಾಧ್ಯವೊ ಅವನ್ನು ದೇವರು ಮಾಡುವ ಪ್ರೇರಣೆಗೆ ಅನುಸಾರವಾಗಿ ದೇವರಲ್ಲಿ ಶ್ರದ್ಧೆ ಇರುವವನು ಮಾಡುವನು. ದೇವರೇ ಎಲ್ಲವನ್ನೂ ಮಾಡುವಂತೆ ನಾವು ತಿಳಿದು ಕೊಳ್ಳಲು ಅವನು ಅವಕಾಶ ಕೊಡುವುದಿಲ್ಲ. ಅವನು ಮನುಷ್ಯರಿಗೆ ಪ್ರೇರಣೆ ಯನ್ನು ಕೊಡುವನು—ಅವನ ಸಂಕಲ್ಪವನ್ನು ಅವರ ಮುಖಾಂತರ ಈಡೇರಿ ಸುವನು.' ಈ ವಾಕ್ಯಗಳಲ್ಲಿ 'ದೇವರು' ಎಂದು ಬರುವ ಸ್ಥಳದಲ್ಲಿ 'ಸತ್ಯ' ಎಂದು ಬದಲಾಯಿಸಲು ಸಾಧ್ಯವೆ? 'ಸತ್ಯವು' ಮಾಡುವುದು, ಸತ್ಯವು ಮನುಷ್ಯರಿಗೆ ಪ್ರೇರಣೆಯನ್ನು ಕೊಡುವುದು—ಆಂದೋಳನಗಳನ್ನು ಸೂಚಿಸು ವುದು ಅಥವಾ ಅವುಗಳನ್ನು ನಡೆಸುವುದು—ಹೀಗೆಲ್ಲ ಹೇಳಲು ಸಾಧ್ಯವೆ? ಬಾಪೂ ಉತ್ತರ ಕೊಟ್ಟರು: 'ಅಗತ್ಯವಾಗಿ ಹೀಗೆಲ್ಲ ಹೇಳಬಹುದು: ಇಲ್ಲಿ ಸತ್ಯಕ್ಕೆ ಸಂಕುಚಿತವಾದ ಅರ್ಥವಲ್ಲ—ವ್ಯಾಪಕವಾದ ಅರ್ಥವನ್ನು ಮಾಡ

ಬೇಕು. ಅಂದರೆ—ಯಾವುದು ಇರುವುದೋ—ಯಾವುದು ಶಾಶ್ವತವೋ ಅದೇ ಸತ್ಯವೆಂದು ಅರ್ಥ. ದೇವರಲ್ಲಿ ಶ್ರದ್ಧೆಯನ್ನಿಡುವುದೆಂದರೆ—ದೇವರ ಶಕ್ತಿಯೇ ಎಲ್ಲವನ್ನೂ ನಡೆಸುವುದೆಂದು ಮನಗಾಣುವುದು. 'ಈಶ್ವರ'ವೆಂಬ ಶಬ್ದ ರೂಢಿಗೆ ಬಂದಿದೆ, ಆದುದರಿಂದ ಅದನ್ನು ನಾವು ಬಳಸುತ್ತೇವೆ. ಆದರೆ ಆ ಶಬ್ದದ ಮೂಲ ಧಾತು 'ಈಶ್' ಅಥವಾ ಆಳುವುದು ಎಂದು. ಇದು ನನ್ನ ಅಭಿಪ್ರಾಯದಲ್ಲಿ 'ಸತ್ಯ'ವೆನ್ನುವುದಕ್ಕಿಂತಲೂ ಕನಿಷ್ಠ-ಶಾಶ್ವತವಾದ 'ಸತ್ಯ' ಎಲ್ಲ ಆಂದೋಳನಗಳನ್ನೂ ನಡೆಸುವುದು—ಮನುಷ್ಯರಿಗೆ ಪ್ರೇರಣೆ ಕೊಡುವುದು—ಹೀಗೆಂದು ನಾವು ಖಂಡಿತವಾಗಿ ಹೇಳಬಹುದು. 'ಈಶ್ವರ ಪ್ರಣಿಧಾನತ್ವಾತ್' ಎಂಬ ಸೂತ್ರದಲ್ಲಿ 'ಈಶ್ವರ'ವೆಂದರೆ ಏನರ್ಥವೆಂದು ಮುನ್ಷಿಯವರು ನನ್ನನ್ನು ಕೇಳಿದರು. ಅದರ ಅರ್ಥ ಸತ್ಯವೆಂದು ನಾನು ಹೇಳಿದೆ. ಈ ಪದಗಳು ಅನಾವಶ್ಯಕವೆಂದು ಕೆಲವು ಟೀಕಾಕಾರರ ಅಭಿಪ್ರಾಯ. ಆಗಿನ ಕಾಲದ ಸಿದ್ಧಾಂತಗಳಿಗೆ ವಿರುದ್ಧವಾಗಿರಬಾರದೆಂದು ಪತಂಜಲಿ ಮಹರ್ಷಿಗಳು ಈ ಪದಗಳನ್ನು ಸೇರಿಸಿದರೆಂದು ಅವರ ಅಭಿಮತ. ಇದಕ್ಕೆ ನಾನು ಒಪ್ಪುವುದಿಲ್ಲ. ಪತಂಜಲಿಯಂತಹ ಗ್ರಂಥಕರ್ತರು ಒಂದು ಪದವನ್ನಾದರೂ ಅನಾವಶ್ಯಕವಾಗಿ ಸೇರಿಸಿದರೆಂದು ನಾನು ಹೇಳಲಾರೆ. ದೇವರೆನ್ನುವ ಶಬ್ದಕ್ಕೆ ನಾನು ಹೇಳುವ ಅರ್ಥ ಅವರ ಮನಸ್ಸಿನಲ್ಲಿತ್ತೋ ನಾನು ಕಾಣೆ. ಆದರೆ ನಾನು ಹೇಳುವ ಅರ್ಥವನ್ನು ಕೊಟ್ಟರೆ ಅಲ್ಲಿರುವ ಎರಡು ಪದಗಳು ಇರಲೇಬೇಕೆಂದು ವೇದ್ಯವಾಗುವುದು.' (ಮಹಾದೇವ ದೇಸಾಯಿಯವರ ದಿನಚರಿ, ಸಂಪುಟ ೧, ಪುಟ ೬೧-೬೨)

ದೇವರು ಮತ್ತು ಸತ್ಯದ ವಿಚಾರವಾಗಿ ಬಾಪೂ ಪ್ರಭುದಾಸರಿಗೆ ಬರೆದರು:

'ಸತ್ಯದ ವಿಷಯವಾಗಿ ನಾನು ಹೆಚ್ಚಿಗೆ ಹೇಳಬೇಕಾಗಿಲ್ಲ. ದೇವರ ವಿಚಾರದಲ್ಲಿ ಹೇಳಬೇಕಾದರೆ ಅವನನ್ನು ನಾವು ವಿವರಿಸುವುದು ಕಷ್ಟ. ಆದರೆ ಸತ್ಯದ ವಿವರಣೆ ಎಲ್ಲ ಮಾನವಹೃದಯದಲ್ಲಿಯೂ ಅಡಗಿರುವ ವಿಷಯ. ಈ ಕ್ಷಣದಲ್ಲಿ ಯಾವುದು ಸತ್ಯವೆಂದು ತಿಳಿದಿರುವೆಯೊ ಅದೇ ಸತ್ಯ. ಅದೇ ನಿನಗೆ ದೇವರು. ಇಂತಹ ಸಾಕ್ಷೇಕ್ಷ ಸತ್ಯವನ್ನು ಮನುಷ್ಯನು ಆರಾಧಿಸಿದ್ದೇ ಆದರೆ ಕಾಲಕ್ರಮದಲ್ಲಿ ಅವನು ನಿರಪೇಕ್ಷ ಸತ್ಯವನ್ನು ಹೊಂದುವುದು ಖಂಡಿತ. ಇದೇ ವಿಷಯವನ್ನೇ ವೇದಗಳು ಉಪದೇಶ ಮಾಡಿವೆ. ವೇದಗಳ ಕೆಲವು

ಭಾಗಗಳನ್ನು ಈಗ ನಾನು ಓದುತ್ತಿದೇನೆ. ನಾವು ಸತ್ಯಸಂಧರಾಗಿ ಜೀವನವನ್ನು ನಡೆಸಲು ಕಲಿಯದೆ ಹೋದರೆ ಈ ಓದುಗಾರಿಕೆಯೆಲ್ಲ ವ್ಯರ್ಥ. ಸತ್ಯದ ಮೇಲೆ ಒಲವಿರುವವನು ತಾನು ಇರುವುದಕ್ಕೆ ವ್ಯತಿರಿಕ್ತವಾಗಿ ಕಾಣಿಸಿಕೊಳ್ಳಲು ಪ್ರಯತ್ನಿಸಲಾರ. ಅವನ ಯೋಚನೆ, ಮಾತು, ನಡತೆ ಒಂದರೊಂದಿಗೆ ಮತ್ತೊಂದು ಹೊಂದಿಕೊಂಡಿರುತ್ತದೆ. ಯಾರು ಸತ್ಯವನ್ನೇ ದೇವರೆಂದು ತಿಳಿದಿದ್ದಾರೆಯೋ ಅಂತಹವರಿಗೆ ಈ ಸಾಮರಸ್ಯ ಸ್ಥಿತಿಯನ್ನು ಪಡೆಯುವುದು ಸುಲಭ. ಸತ್ಯವಂತನಾಗಿ ಬಾಳುವುದಕ್ಕೆ ದೊಡ್ಡ ದೊಡ್ಡ ಗ್ರಂಥಗಳನ್ನು ಅಧ್ಯಯನಮಾಡಬೇಕಾಗಿಲ್ಲ. ಈಶಾವಾಸ್ಯ ಉಪನಿಷತ್ತಿನಲ್ಲಿರುವ ಈ ಮಂತ್ರದ ಅರ್ಥವನ್ನು ಚೆನ್ನಾಗಿ ಮನನಮಾಡು :

ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಂ ।
ತತ್ ತ್ವಂ ಪೂಷನ್ನಪಾವೃಣು ಸತ್ಯಧರ್ಮಾಯ ದೃಷ್ಟಯೇ ॥

ಸತ್ಯದ ಮುಖವು ಬಂಗಾರದ ಪಾತ್ರೆಯಿಂದ ಮುಚ್ಚಲ್ಪಟ್ಟಿದೆ. ದೇವರೇ! ಸತ್ಯವನ್ನು ಅರಸುವ ನನಗೆ ಅದನ್ನು ಬಹಿರಂಗ ಮಾಡಿ ತೋರಿಸು.'

(ಮಹಾದೇವ ದೇಸಾಯಿಯವರ ದಿನಚರಿ, ಪುಟ ೨೪೯)

ದೇವರೆಂದರೆ ಸತ್ಯ. ಈಗ ಕೆಲ ವರ್ಷಗಳಿಂದ ದೇವರು ಸತ್ಯವೆನ್ನುವುದಕ್ಕೆ ಬದಲಾಗಿ ಸತ್ಯವೇ ದೇವರೆಂದು ಹೇಳುತ್ತ ಬಂದಿದೇನೆ. ಈ ಮಾತು ವಸ್ತುಸ್ಥಿತಿಯನ್ನು ಹೇಳುತ್ತದೆ. ಏಕೆಂದರೆ ಈ ಪ್ರಪಂಚದಲ್ಲಿ ಸತ್ಯದ ವಿನಾ ಬೇರೊಂದಿಲ್ಲ. ಇಲ್ಲಿ 'ಸತ್ಯ'ವೆಂಬ ಪದಕ್ಕೆ ವ್ಯಾಪಕವಾದ ಅರ್ಥವನ್ನು ಮಾಡಬೇಕು. ಅದು ಚೈತನ್ಯಮಯ. ದೇವರ ಸತ್ಯಸ್ವರೂಪಕ್ಕೂ ಅವನ ನಿಯಮಕ್ಕೂ ಯಾವ ಭೇದವೂ ಇಲ್ಲ. ಅವೆರಡೂ ಒಂದೇ. ಆದುದರಿಂದಲೇ ಅವನು ಚೈತನ್ಯಮಯನೂ ಹೌದು. ಈ ವಿಶ್ವವು ಸತ್ಯದ ಆಧಾರದ ಮೇಲೆ ನಿಂತಿದೆ—ಅದರ ಅವಲಂಬನೆಯಲ್ಲಿದೆ ಎಂದರೂ ನಿಯಮದ ಆಧಾರದ ಮೇಲೆ ನಿಂತಿದೆ— ನಿಯಮದ ಅವಲಂಬನೆಯಲ್ಲಿದೆ ಎಂದರೂ— ನಿಜವಾಗಿಯೂ ಎರಡೂ ಒಂದೆ. ಈ ಸತ್ಯವು ಸರ್ವಶಕ್ತ. ಗೀತೆಯ ಹತ್ತನೆಯ ಅಧ್ಯಾಯದ ಮಾತುಗಳಲ್ಲಿ ಹೇಳಬೇಕಾದರೆ ಈ ಜಗತ್ತು ಅದರ ಒಂದು ಅಂಶದ ಮೇಲೆ ನಿಂತಿದೆ. ಆದುದರಿಂದ ದೇವರೆಂಬ ಶಬ್ದ ಇರುವ ಕಡೆಯಲ್ಲೆಲ್ಲ 'ಸತ್ಯ'ವೆಂಬ

ಪದವನ್ನು ಉಪಯೋಗಿಸಿದರೆ, ನಾನು ಹೇಳುವ ಮಾತಿನ ಅರ್ಥ ಸ್ವಲ್ಪ ಸ್ಪಷ್ಟವಾದೀತು. ದೇವರಿದ್ದರೆ—ಅವನನ್ನು ಸತ್ಯಸ್ವರೂಪನಾಗಿರುವನೆಂದು ನಾವು ಹೇಳಿದರೂ—ಅವನನ್ನು ಪೂಜಿಸುವುದು ನಮ್ಮ ಕರ್ತವ್ಯ. ನಾವು ಪೂಜಿಸುವ ವಸ್ತುವಿನಂತೆ ನಾವಾಗುವೆವು. ಪ್ರಾರ್ಥನೆಗೆ ಇದೇ ಸಂಪೂರ್ಣವೂ ಸಮಗ್ರವೂ ಆದ ಅರ್ಥ. ಸತ್ಯವು ಮಾನವಹೃದಯದಲ್ಲಿ ಸನ್ನಿಹಿತವಾಗಿದೆ. ಆದರೆ ಇದಕ್ಕೆ ನಾವು ಉದಾಸೀನರಾಗಿದೇವೆ—ಅಥವಾ ಇದನ್ನು ನಾವು ಲಕ್ಷಿಸುವುದೇ ಇಲ್ಲ. ಮನಮುಟ್ಟಿ ಪ್ರಾರ್ಥನೆಯನ್ನು ಮಾಡುವುದೇ ಇದನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವ ಮಾರ್ಗ. (ಮಹಾದೇವ ದೇಸಾಯಿಯವರ ದಿನಚರಿ, ಪುಟ ೧೬೦)

## ಸಕಲ ಕಾರ್ಯಗಳಿಗೂ ಸತ್ಯವೇ ಕೇಂದ್ರವಾಗಬೇಕು

ನಾವು ಮಾಡುವ ಎಲ್ಲ ಕಾರ್ಯಗಳಿಗೂ ಸತ್ಯವೇ ಕೇಂದ್ರವಾಗಬೇಕು. ಸತ್ಯವೇ ನಮ್ಮ ಜೀವನದ ಉಸಿರಾಗಬೇಕು. ನಮ್ಮ ಜೀವನಯಾತ್ರೆಯಲ್ಲಿ ಈ ಘಟ್ಟವನ್ನು ನಾವು ಮುಟ್ಟಿದಾಗ ಜೀವನವನ್ನು ನಡೆಸಲು ಬೇಕಾದ ಇತರ ನಿಯಮಗಳನ್ನು ಅನಾಯಾಸವಾಗಿ ನಾವು ಅನುಸರಿಸುವೆವು. ಆ ನಿಯಮಗಳ ಪಾಲನೆ ಸ್ವಾಭಾವಿಕವಾಗುವುದು. ಆದರೆ ಸತ್ಯವನ್ನು ಕೈಬಿಟ್ಟರೆ ಯಾವ ತತ್ತ್ವಗಳನ್ನಾಗಲಿ ನಿಯಮಗಳನ್ನಾಗಲಿ ಪಾಲಿಸಲು ಸಾಧ್ಯವಿಲ್ಲ.

ಸತ್ಯವೇ ದೇವರ ಸೂಕ್ತವಾದ ಹೆಸರು. ಆದುದರಿಂದ ಪ್ರತಿಯೊಬ್ಬನೂ ತನ್ನ ಬುದ್ಧಿಗೆ ಬೆಳಗುವಂತೆ ಸತ್ಯವನ್ನು ಅನುಸರಿಸುವುದರಲ್ಲಿ ಯಾವ ದೋಷವೂ ಇಲ್ಲ. ಹೀಗೆ ಮಾಡುವುದರಿಂದ ಏನಾದರೂ ಪ್ರಮಾದಗಳಾದರೆ ಅವು ತಮ್ಮಷ್ಟಕ್ಕೆ ತಾವೇ ಸರಿಹೋಗುವುವು.

## ನಿರ್ಭಯವಿಲ್ಲದೆ ಸತ್ಯಾನ್ವೇಷಣೆ ಸಾಧ್ಯವಿಲ್ಲ

ಎಲ್ಲ ಉತ್ತಮ ಗುಣಗಳ ಬೆಳವಣಿಗೆಗೂ ನಿರ್ಭಯವು ಅಗತ್ಯವಾಗಿ ಬೇಕು. ನಿರ್ಭಯವಿಲ್ಲದೆ ಒಬ್ಬನು ಸತ್ಯಾನ್ವೇಷಣೆಯನ್ನು ಮಾಡಲು ಹೇಗೆ ಸಾಧ್ಯ? ಪ್ರೇಮವನ್ನು ತಾಳಲು ಹೇಗೆ ಸಾಧ್ಯ? ಪ್ರಿತಮ್ ಎನ್ನುವ ಕವಿ ಹೇಳುವಂತೆ 'ಹರಿಯ ಮಾರ್ಗ ಹುರಿಯಾಳುಗಳ ಮಾರ್ಗ, ಹೇಡಿಗಳದಲ್ಲ.'

ಇಲ್ಲಿ ' ಹರಿ ' ಎಂದರೆ ಸತ್ಯವೆಂದಿಟ್ಟುಕೊಳ್ಳಬೇಕು. ಹುರಿಯಾಳುಗಳೆಂದರೆ ನಿರ್ಭಯ ಮನುಷ್ಯರು. (ಮಂಗಳ ಪ್ರಭಾತದಿಂದ)

## ಸತ್ಯದ ಧರ್ಮ

ನಾನು ಹಿಂದೂ ಧರ್ಮವನ್ನು ಅನುಸರಿಸುತ್ತೇನೆ. ನನ್ನ ಪೂರ್ತಿಗೆ ಹಿಂದೂ ಧರ್ಮವೆಂದರೆ ಮಾನವ ಧರ್ಮ. ನನಗೆ ತಿಳಿದ ಎಲ್ಲ ಧರ್ಮಗಳ ಉತ್ತಮ ಅಂಶಗಳನ್ನು ಒಳಗೊಂಡ ಧರ್ಮ.

ಈ ಧರ್ಮದ ಪಾಲನೆಯಲ್ಲಿ ನನಗೆ ಸತ್ಯವೂ ಅಹಿಂಸೆಯೂ (ಅಂದರೆ ವ್ಯಾಪಕವಾದ ಅರ್ಥದಲ್ಲಿ ಪ್ರೇಮ) ದಾರಿ ತೋರಿಸುವುವು. ಸತ್ಯಧರ್ಮವೆಂದು ನನ್ನ ಧರ್ಮವನ್ನು ನಾನು ಆಗಾಗ್ಗೆ ಕರೆದಿದೇನೆ. ಈಚೆಗೆ ದೇವರು ಸತ್ಯ ಸ್ವರೂಪನೆಂದು ಹೇಳುವುದಕ್ಕೆ ಬದಲಾಗಿ ಸತ್ಯವೇ ದೇವರೆಂದು ನಾನು ಹೇಳುತ್ತ ಬಂದಿದೇನೆ. ನನ್ನ ಧರ್ಮವನ್ನು ಪೂರ್ಣವಾಗಿ ವಿವರಿಸಲು ಇದೇ ಸೂಕ್ತ ಎಂದು ನನಗೆ ತೋರಿದೆ. ನನ್ನ ಬಾಲ್ಯದಲ್ಲಿ ದೇವರ ಸಹಸ್ರನಾಮಗಳು ಪದ್ಯರೂಪದಲ್ಲಿ ನನಗೆ ಬಾಯಿಪಾಠವಾಗಿತ್ತು. ನಮ್ಮ ದೇಶದಲ್ಲಿ ಸಾವಿರಾರು ಜನರು ಇದರ ನಿತ್ಯಪಾರಾಯಣವನ್ನು ಮಾಡುತ್ತಾರೆ. ಆದರೆ ಈಗ ನನಗೆ ದೇವರ ಹೆಸರನ್ನು ಸತ್ಯವೆಂದು ಹೇಳುವುದೇ ಎಲ್ಲಕ್ಕೂ ಸಮಂಜಸವಾದ ವರ್ಣನೆಯೆಂದು ತೋರಿದೆ. ಈ ಪದವೇ ದೇವರನ್ನು ಪೂರ್ಣವಾಗಿ ವಿವರಿಸುತ್ತದೆ. ದೇವರಿಲ್ಲವೆಂದು ಹೇಳುವ ನಾಸ್ತಿಕರನ್ನು ನಾವು ನೋಡಿದೇವೆ. ಆದರೆ ಸತ್ಯವಿಲ್ಲವೆಂಬುವರನ್ನು ನಾವು ಕಂಡುದಿಲ್ಲ. ಮಾನವರಲ್ಲಿ ಎಂತಹ ಜ್ಞಾನವಿಹೀನರಲ್ಲಿಯೂ ಸ್ವಲ್ಪ ಅಂಶದ ಸತ್ಯವಿರುತ್ತದೆ. ನಾವೆಲ್ಲರೂ ಸತ್ಯದ ಕಿಡಿಗಳು. ಈ ಕಿಡಿಗಳೆಲ್ಲವೂ ಒಟ್ಟು ಕೂಡಿದರೆ ಹೇಗೆ ಕಾಣುವುದೆಂಬುದನ್ನು ವರ್ಣಿಸಲು ಸಾಧ್ಯವಿಲ್ಲ. ಇದು ನಾವಿದುವರೆಗೂ ಕಾಣದ ಸತ್ಯದ ರೂಪ—ಅದೇ ದೇವರು. ಸತತವಾದ ಪ್ರಾರ್ಥನೆಯ ಮೂಲಕ ನಾನು ದೇವರ ಸಮೀಪಕ್ಕೆ ಹೋಗುತ್ತಿದೇನೆ.

ಈ ಧರ್ಮದಿಂದ ನಮ್ಮ ಸಮಾಜ ಜೀವನದ ಮೇಲೆ ಏನು ಪರಿಣಾಮ ಉಂಟಾಗುತ್ತದೆ, ಇದನ್ನು ನಾವು ನಡೆಸುವ ಪ್ರತಿದಿನದ ಬಾಳಿನಲ್ಲಿ—ನಮ್ಮ

ನೆರೆಹೊರೆಯೊಂದಿಗೆ ಇಟ್ಟುಕೊಳ್ಳುವ ಸಂಪರ್ಕದಿಂದ ಕಾಣುತ್ತೇವೆ—ಅಥವಾ ಕಾಣಬೇಕು. ಈ ಧರ್ಮವನ್ನು ನಾವು ಸಾರ್ಥಕಗೊಳಿಸಬೇಕಾದರೆ ನಾವು ಎಲ್ಲ ಜೀವರಾಶಿಗಳ ಸೇವೆಯಲ್ಲಿ ನಿರತರಾಗಬೇಕು—ನಮ್ಮ ಅಹಂಭಾವವನ್ನು ಕಳೆದುಕೊಳ್ಳಬೇಕು. ಅನಂತವಾದ, ಅಮಿತವಾದ ಜೀವನದ ಸಾಗರದಲ್ಲಿ ನಾವು ಪೂರ್ಣವಾಗಿ ಲೀನವಾಗಿ ಅದರೊಂದಿಗೆ ಐಕ್ಯವಾಗುವವರೆಗೂ ಈ ಸತ್ಯವೆಂಬ ಧರ್ಮದಲ್ಲಿ ಸಿದ್ಧಿಯನ್ನು ಪಡೆಯಲು ಸಾಧ್ಯವಿಲ್ಲ. ಆದುದರಿಂದ ನನ್ನ ಮಟ್ಟಿಗೆ ಸಮಾಜಸೇವೆಯಿಂದ ತಪ್ಪಿಸಿಕೊಳ್ಳಲು ನನಗೆ ಮಾರ್ಗವಿಲ್ಲ. ಇದನ್ನುಳಿದು ಇದರಿಂದ ಪಾರಾಗಿ ನನಗೆ ಇಹದಲ್ಲಿ ಸುಖವಿಲ್ಲ. ಸಮಾಜಸೇವೆ ಎಂದರೆ ನಾನು ವಿಸ್ತೃತವಾದ ಅರ್ಥದಲ್ಲಿ ಬಳಸುತ್ತಿದೇನೆ—ಅದರಲ್ಲಿ ಜೀವನದ ಎಲ್ಲ ಮುಖಗಳೂ, ಎಲ್ಲ ವ್ಯಾಪಾರಗಳೂ ಅಡಕವಾಗಿವೆ. ಈ ಮಾರ್ಗದಲ್ಲಿ ಉಚ್ಚ-ನೀಚವೆಂಬುದಿಲ್ಲ. ಎಲ್ಲವೂ ಒಂದೇ—ನಾವು ಅನೇಕರೆಂದು ಕಾಣಬಹುದು. (ಆಧುನಿಕ ಭಾರತೀಯ ತತ್ತ್ವಶಾಸ್ತ್ರ, ಪುಟ ೨೧)

## ಸತ್ಯಕ್ಕಾಗಿಯೂ ಶಾಂತಿಗಾಗಿಯೂ ಅರಸುವಿಕೆ

(೧೯೨೨ರಲ್ಲಿ ಗಾಂಧೀಜಿಯವರನ್ನು ಸೆರೆಹಿಡಿದ ಕೂಡಲೆ—ಅವರು ಇನ್ನೂ ವಿಚಾರಣೆಗೆ ಗುರಿಯಾಗಬೇಕಾಗಿದ್ದ ಸಂದರ್ಭದಲ್ಲಿ ಶ್ರೀ ಜಮನಾಲಾಲ್ ಬಜಾಜರಿಗೂ ಮಹಾದೇವ ದೇಸಾಯಿಯವರಿಗೂ ಈ ಪತ್ರವನ್ನು ಬರೆದರು. ಉತ್ತರ ಪ್ರದೇಶದಲ್ಲಿ ಆಗ ಮಹಾದೇವ ದೇಸಾಯಿಯವರು ಸೆರೆಯಲ್ಲಿದ್ದರು. ಈ ಪತ್ರ ಗಾಂಧೀಜಿಯವರ ಜೀವನತತ್ತ್ವವನ್ನು ವ್ಯಕ್ತಪಡಿಸುತ್ತದೆ.)

ನಾನು ಸತ್ಯವನ್ನು ಅರಸುತ್ತ ಹೋದಹಾಗೆಲ್ಲ ಅದು ಎಲ್ಲವನ್ನೂ ಒಳಗೊಂಡುದೆಂದು ಭಾಸವಾಗುತ್ತದೆ. ಅಹಿಂಸೆಯಲ್ಲಿ ಸತ್ಯವು ಅಡಕವಾಗಿಲ್ಲ. ಆದರೆ ಸತ್ಯದಲ್ಲಿ ಅಹಿಂಸೆ ಅಡಕವಾಗಿರುವುದನ್ನು ನನ್ನ ಅನುಭವದಿಂದ ತಿಳಿಯುತ್ತಿದೇನೆ. ಪರಿಶುದ್ಧಾತ್ಮವು ಒಂದು ಕ್ಷಣದಲ್ಲಿ ಗ್ರಹಿಸುವುದೇ ಸತ್ಯ. ಅದರ ಮೇಲೆ ನಿಶ್ಚಲವಾಗಿ ನಿಂತರೆ ಶುದ್ಧ ಸತ್ಯದ ಸ್ವರೂಪವನ್ನು ಸಾಕ್ಷಾತ್ಕಾರ ಮಾಡಲು ಸಾಧ್ಯ. ಮನಸ್ಸಾಕ್ಷಿಯ ಪ್ರೇರಣೆಗಾಗಲಿ, ಕರ್ತವ್ಯಪಾಲನೆಗಾಗಲಿ ಇದರಿಂದ ಯಾವ ಗೊಂದಲವೂ ಇಲ್ಲ. ಆದರೆ ಅಹಿಂಸಾಮಾರ್ಗ ಯಾವುದು ಎಂಬುದನ್ನು ನಿಷ್ಕರ್ಷಿಸುವುದರಲ್ಲಿ ತೊಡಕುಗಳುಂಟಾಗುತ್ತವೆ. ಕ್ರಿಮಿಗಳನ್ನು

ನಾಶಮಾಡುವ ದ್ರಾವಕಗಳ ಪ್ರಯೋಗವೂ ಹಿಂಸೆಯೇ. ಹಿಂಸಾಮಯವಾದ ಪ್ರಪಂಚದಲ್ಲಿ ಅಹಿಂಸಾಮಾರ್ಗದಲ್ಲಿ ನಡೆಯಬೇಕಾದರೆ ಸತ್ಯವನ್ನು ದೃಢವಾಗಿ ಹಿಡಿದಿರುವುದರಿಂದಲೇ ಸಾಧ್ಯ. ಆದುದರಿಂದ ಅಹಿಂಸೆಯು ಸತ್ಯದಿಂದ ಜನ್ಯ ವಾದುದೆಂದು ನಾನು ಹೇಳಬಲ್ಲೆ. ಹಾಗೆಯೇ ಪ್ರೇಮವೂ ಸತ್ಯದಿಂದಲೇ ಜನ್ಯ. ದಯೆ ಸತ್ಯದಿಂದಲೇ ಹುಟ್ಟಿ ಹರಿಯುತ್ತದೆ. ಸತ್ಯಸಂಧನಾದ ಸತ್ಯಾಗ್ರಹಿ (ಶಾಂತ ರೀತಿಯಲ್ಲಿ ಅನ್ಯಾಯವನ್ನು ಎದುರಿಸುವವನು) ಬಹಳ ನಮ್ರತೆಯಿಂದ ಕೂಡಿರಬೇಕು. ಅವನಲ್ಲಿ ಸತ್ಯವು ಬೆಳೆದಂತೆಲ್ಲ ಅವನ ನಮ್ರತೆಯೂ ಬೆಳೆಯು ತ್ತದೆ. ಇದು ಪ್ರತಿಕ್ಷಣದಲ್ಲಿಯೂ ನನ್ನ ಅನುಭವಕ್ಕೆ ಬರುತ್ತಲಿದೆ. ಒಂದು ವರ್ಷಕ್ಕೆ ಹಿಂದೆ ಈಗಿನಷ್ಟು ವಿಶದವಾಗಿ ಸತ್ಯದ ಸ್ವರೂಪವನ್ನು ನಾನು ಮನ ಗಂಡಿರಲಿಲ್ಲ. ಮತ್ತು ಈಗಿನಷ್ಟು ನಾನು ಒಂದು ವರ್ಷದ ಹಿಂದೆ ನಮ್ರಭಾವ ವನ್ನೂ ತಾಳಿರಲಿಲ್ಲ.

' ಬ್ರಹ್ಮ ಸತ್ಯಂ ಜಗನ್ಮಿಥ್ಯ ' ಎಂಬ ವಾಕ್ಯದ ಅದ್ಭುತವಾದ ಅರ್ಥವನ್ನು ದಿನದಿನಕ್ಕೂ ಸ್ಪಷ್ಟವಾಗಿ ಮನಗಾಣುತ್ತಿದೇನೆ.

ಆದುದರಿಂದ ನಾವು ಯಾವಾಗಲೂ ತಾಳ್ಮೆಯಿಂದಿರೋಣ. ತಾಳ್ಮೆಯಿಂದ ನಮ್ಮ ಹೃದಯದ ಕಾಠಿಣ್ಯ ಕಳೆದುಹೋಗುವುದು. ಕಾಠಿಣ್ಯ ಮಾಯವಾದ ಹಾಗೆಲ್ಲ ಅಹಿಂಸಾವೃತ್ತಿ ವೃದ್ಧಿಯಾಗುವುದು. ಆಗ ನಮ್ಮ ಸ್ವಂತ ದೋಷಗಳು ಬೆಟ್ಟದಂತೆ ಕಾಣುವುವು—ಪರರ ದೋಷಗಳು ದೊಡ್ಡದಾಗಿ ಕಾಣಿಸವು. ' ಅಹಂ 'ವೃತ್ತಿ ಇರುವುದರಿಂದಲೇ ದೇಹಧಾರಣೆ ಸಾಧ್ಯ. ಈ ದೇಹದ ಪೂರ್ಣ ನಾಶವೇ ಮೋಕ್ಷ ಅಥವಾ ಆತ್ಮಸಾಕ್ಷಾತ್ಕಾರ. ಯಾವನು ' ಅಹಂ 'ವೃತ್ತಿ ಯನ್ನು ಪೂರ್ಣ ನಾಶಗೊಳಿಸಿರುವನೊ ಅವನು ಸತ್ಯದ ಮೂರ್ತಿ. ಅಂತಹವ ನನ್ನು ದೇವರೆಂದು ಕರೆದರೂ ಯಾವ ದೋಷವೂ ಇಲ್ಲ. ಆದುದರಿಂದ ' ಭೃತ್ಯಸ್ಯ ಭೃತ್ಯ 'ವೆಂಬ ಸೊಗಸಾದ ಹೆಸರು ದೇವರಿಗುಂಟು.

ಹೆಂಡತಿ, ಮಗ, ಸ್ನೇಹಿತ, ಆಸ್ತಿ—ಇವೆಲ್ಲವೂ ಸತ್ಯಕ್ಕೆ ಅಧೀನವಾಗಿರ ಬೇಕು. ನಾವು ಸತ್ಯವನ್ನು ಅರಸುವ ಸತ್ಯಾಗ್ರಹಿಗಳಾಗಬೇಕಾದರೆ ಇವೆಲ್ಲವನ್ನು ತ್ಯಾಗಮಾಡಲೂ ಸಿದ್ಧರಾಗಬೇಕು. ಈ ಪ್ರಯತ್ನದಲ್ಲಿ ನಾನು ಈಗ ತೊಡಗಿ ದೇನೆ. ನಿನ್ನಂತಹವರನ್ನೂ ತ್ಯಾಗಮಾಡಿ ಬಲಿಕೊಡಲು ಹಿಂಜರಿಯುತ್ತಿಲ್ಲ. ಏಕೆಂದರೆ ಈ ರೀತಿಯ ಕರ್ತವ್ಯ ಎಲ್ಲರೂ ಸಹಜವಾಗಿ ಆಚರಿಸುವಂತಾಗ

ಬೇಕೆಂದು ನಾನು ಬಯಸುತ್ತೇನೆ. ಈ ಪ್ರಯತ್ನಕ್ಕೆ ಈವರೆಗೂ ತಡೆ ಉಂಟಾಗಿದೆ. ಕಾರಣವೇನೆಂದರೆ ಈವರೆಗೂ ಪಕ್ವವಾದ ಒಬ್ಬ ನಿಜವಾದ ಸತ್ಯಾಗ್ರಹಿಯೂ ಸಿದ್ಧವಾಗಲಿಲ್ಲ. ಆದರೆ ಅಧೈರ್ಯಪಡಬೇಕಾಗಿಲ್ಲ. ಇನ್ನೂ ಹೆಚ್ಚಿನ ಪ್ರಯತ್ನಗಳು ನಾವು ಮಾಡುವಂತೆ ಇದು ಪ್ರೇರಿಸಬೇಕು.

(ಹರಿಜನ, ೨೭–೧೧–೧೯೪೯)

ನಮ್ರತೆ ಇಲ್ಲದ ಸತ್ಯ ಅಹಂಭಾವದಿಂದ ಕೂಡಿದ ಹಾಸ್ಯಾಸ್ಪದವಾದ ಆಭಾಸವಾಗಿ ಪರಿಣಮಿಸುವುದು. ಸತ್ಯದ ಪಾಲನೆಯನ್ನು ಮಾಡಲು ಅಭ್ಯಾಸ ಮಾಡುವವನಿಗೆ ಇದು ಎಷ್ಟು ಕಷ್ಟವೆಂದು ಮನವರಿಕೆ ಆಗುತ್ತದೆ. ಅವನು ಜಯಪ್ರದನಾದನೆಂದು ತೋರಿದ ಕೂಡಲೆ ಪ್ರಪಂಚವು ಅವನಿಗೆ ಜಯಘೋಷ ವನ್ನು ಮಾಡಿ ಪ್ರಶಂಸಿಸುವುದು. ಆದರೆ ಅವನು ಎಷ್ಟು ಸಲ ಮುಗ್ಗರಿಸಿದ ಎಂದು ಪ್ರಪಂಚಕ್ಕೆ ಏನು ಗೊತ್ತು? ಸತ್ಯಸಂಧನಾದ ಮನುಷ್ಯನು ಪುಟ ಹಾಕಿದ ವ್ಯಕ್ತಿ. ಅವನು ನಮ್ರನಾಗಿರುವುದು ಅಗತ್ಯ. ಪ್ರಪಂಚವನ್ನೆಲ್ಲ ಪ್ರೇಮದಿಂದ ಕಾಣಬೇಕೆಂದು ಬಯಸುವ ಮನುಷ್ಯನು—ತನ್ನ ಶತ್ರುವೆಂದು ಭಾವಿಸುವವನನ್ನೂ ಸಹ ಪ್ರೀತಿಸಬೇಕೆಂದು ಹೊರಟವನು—ತನ್ನ ಸ್ವಂತ ಶಕ್ತಿಯ ಆಧಾರದ ಮೇಲೆ ಇದನ್ನು ಸಾಧಿಸುವುದು ಎಷ್ಟು ದುಸ್ತರವೆಂಬುದನ್ನು ಬಲ್ಲನು. ಅಹಿಂಸೆಯ 'ಓನಾಮ' ಕಲಿಯುವುದಕ್ಕೆ ಮೊದಲು ಅವನು ಧೂಳಿನ ಕಣಕ್ಕಿಂತಲೂ ತಗ್ಗಿದವನಾಗಿರಬೇಕು. ಅವನಲ್ಲಿ ದಿನದಿನಕ್ಕೂ ಪ್ರೇಮ ಬೆಳೆದಂತೆಲ್ಲ ನಮ್ರತೆಯೂ ಬೆಳೆಯದಿದ್ದರೆ ಅವನು ಅಪ್ರಯೋಜಕ. ಯಾರಲ್ಲಿ ಲೇಶಮಾತ್ರವಾದರೂ ಅಹಂಭಾವ ಉಳಿದಿರುವುದೊ ಅವರು ದೇವರನ್ನು ಪ್ರತ್ಯಕ್ಷ ನೋಡಲು ಸಾಧ್ಯವಿಲ್ಲ. ದೇವರನ್ನು ನೋಡಬೇಕೆಂದಿರುವವನು ತಾನು ಸೊನ್ನೆಯಾಗಬೇಕು. ಬಿರುಗಾಳಿಯ ಹೊಡೆತಕ್ಕೆ ಸಿಕ್ಕಿ ಈ ಬ್ರಹ್ಮಾಂಡದಲ್ಲಿ 'ನಾನು ಗೆದ್ದೆ' ಎಂದು ಹೇಳಲು ಯಾರಿಗೆ ಎದೆಯುಂಟು? ನಮ್ಮಲ್ಲಿರುವ ದೇವರು ಗೆಲ್ಲುತ್ತಾನೆ: ನಾವಲ್ಲ. ಭೌತಿಕ ಪ್ರಪಂಚಕ್ಕೆ ಅನ್ವಯಿಸುವುದೇ ಆಧ್ಯಾತ್ಮಿಕ ಪ್ರಪಂಚಕ್ಕೂ ಅನ್ವಯಿಸುವುದು. ಕಳೆದ ಮೊದಲನೆಯ ಮಹಾ ಯುದ್ಧದಲ್ಲಿ ಯೂರೋಪಿನಲ್ಲಿ ಲಕ್ಷಾಂತರ ಜನ ಬಲಿಯಾಗಿ ಒಂದು ಯುದ್ಧ ವನ್ನು ಗೆದ್ದರು. ಈ ಗೆಲುವೂ ಕ್ಷಣಿಕವಾದುದೇ. ಹೀಗಿರುವಲ್ಲಿ ಒಂದು ಆಧ್ಯಾ

ತ್ಮಿಕ ಸಮರದಲ್ಲಿ—ಒಂದು ಪರಿಪೂರ್ಣ ವಾದ ಉಳಿಯುವುದಕ್ಕಾಗಿ ಲಕ್ಷಗಟ್ಟಲೆ ಜನರು ಬಲಿಯಾದರೆ ಅದರಲ್ಲೇನು ಆಶ್ಚರ್ಯ?

(ಯಂಗ್ ಇಂಡಿಯಾ, ೨೫-೬-೧೯೨೫)

## ಸತ್ಯ ಮತ್ತು ಅಹಿಂಸೆಯನ್ನು ಶಾಸ್ತ್ರದ ಒರೆಗಲ್ಲಿಗೆ ಹಚ್ಚಿ ಪರೀಕ್ಷಿಸುವುದು

ಒಂದು ಸುಳ್ಳು ಅಥವಾ ದೋಷ ಹೆಚ್ಚಾಗಿ ಪ್ರಚುರವಾಗುವುದರಿಂದ ಅದು ಸತ್ಯವಾಗಲಾರದು. ಅಂತೆಯೇ ಯಾರೂ ನೋಡಲಿಲ್ಲವೆಂಬ ಕಾರಣ ದಿಂದ ಒಂದು ಸತ್ಯವು ಸುಳ್ಳಾಗಲಾರದು. (ಯಂಗ್ ಇಂಡಿಯಾ, ೨೬-೨-೧೯೨೫)

ಮಾನವನ ಯುಕ್ತಾಯುಕ್ತ ಪರಿಶೀಲನೆಗೂ, ಅವನ ಅಂತರಂಗ ಪ್ರೇರಣೆಗೂ ವಿರೋಧವಾಗಿ ನುಡಿಯುವ ಶಾಸ್ತ್ರದ ಆಧಾರವನ್ನು ಒತ್ತಟ್ಟಿಗಿಡಲು ನಾನು ಸಿದ್ಧನಾಗಿದೇನೆ. ಶಾಸ್ತ್ರದ ಆಧಾರ ನ್ಯಾಯಸಮ್ಮತವೇ ಆದರೆ ದುರ್ಬಲರಿಗೆ ಊರೆಗೋಲಾಗುತ್ತದೆ—ಅವರನ್ನು ಪೋಷಿಸುತ್ತದೆ.

(ಯಂಗ್ ಇಂಡಿಯಾ, ೮-೧೨-೧೯೨೦)

ನಾನು ಅಕ್ಷರಕ್ಕೆ ಕಟ್ಟುಬಿದ್ದವನಲ್ಲ. ಆದುದರಿಂದ ಪ್ರಪಂಚದ ಪವಿತ್ರ ಗ್ರಂಥಗಳ ಇಂಗಿತವನ್ನು, ಒಟ್ಟಿನ ಭಾವವನ್ನು ತಿಳಿದುಕೊಳ್ಳಲು ಪ್ರಯತ್ನಿಸು ತ್ತೇನೆ. ಈ ಗ್ರಂಥಗಳು ಸಾರುವ ಸತ್ಯ ಮತ್ತು ಅಹಿಂಸೆ ಈ ಗುಣಗಳನ್ನೇ ಒರೆಗಲ್ಲಾಗಿ ಮಾಡಿ ಅವುಗಳ ಅರ್ಥವನ್ನು ಗ್ರಹಿಸಲು ಬಯಸುತ್ತೇನೆ. ಈ ಪರೀಕ್ಷೆಗೆ ನಿಲ್ಲಲಾಗದುದನ್ನು ತಳ್ಳಿಹಾಕುತ್ತೇನೆ. ಈ ಗುಣಗಳಿಗೆ ಹೊಂದುವು ದನ್ನು ಗ್ರಾಹ್ಯವೆಂದು ಭಾವಿಸುತ್ತೇನೆ. ಒಬ್ಬ ಶೂದ್ರನು ವೇದವನ್ನೋದಲು ಮಾಡಿದ ಸಾಹಸಕ್ಕಾಗಿ ಶ್ರೀರಾಮಚಂದ್ರನಿಂದ ಶಿಕ್ಷೆಯನ್ನನುಭವಿಸಿದನು —ಈ ಪ್ರಕರಣವನ್ನು ಪ್ರಕ್ಷಿಪ್ತವೆಂದು ನಾನು ತಳ್ಳಿಹಾಕುತ್ತೇನೆ. ಅದೇನೇ ಇರಲಿ, ಶ್ರೀರಾಮ ನನ್ನ ಆರಾಧ್ಯದೇವತೆ—ಚರಿತ್ರೆಯಲ್ಲಿರಬಹುದಾದ ರಾಮ ಅಲ್ಲ. ಇತಿಹಾಸ ಸಂಶೋಧಕರು ಇವನ ಚರಿತ್ರೆಯಲ್ಲಿ ಹೊಸ ವಿಷಯಗಳನ್ನು ಕಂಡುಹಿಡಿಯಬಹುದು. ಅವನ ಚರಿತ್ರೆ ಬದಲಾವಣೆ ಹೊಂದಬಹುದು. ನಾನು ಪೂಜಿಸುವ ರಾಮ ನನ್ನ ಧ್ಯಾನದಲ್ಲಿ ನಾನು ಕಲ್ಪಿಸಿಕೊಂಡಿರುವ ರಾಮ.

ತುಲಸೀದಾಸರು ಚರಿತ್ರೆಯ ರಾಮನ ಗೋಜಿಗೆ ಹೋಗಲಿಲ್ಲ. ಇತಿಹಾಸ ಸಂಶೋಧನೆಯ ದೃಷ್ಟಿಯಿಂದ ಅವರ ರಾಮಾಯಣವನ್ನು ಕಸದ ಬುಟ್ಟಿಗೆ ಹಾಕಬೇಕಾದೀತು. ಆದರೆ ಆಧ್ಯಾತ್ಮಿಕ ಸಾಧನೆಯ ದೃಷ್ಟಿಯಿಂದ ನನ್ನ ಮಟ್ಟಿಗಾದರೂ ಅದು ಅನುಪಮವಾದ ಗ್ರಂಥ. ಹೀಗಿದ್ದರೂ ಅದರ ಅನೇಕ ಆವೃತ್ತಿಗಳು ಹೊರಬಿದ್ದಿವೆ. ಈ ಗ್ರಂಥಗಳ ಪ್ರತಿಯೊಂದು ಅಕ್ಷರವೂ ಮನನೀಯವೆಂದು ನಾನು ಹೇಳುವವನಲ್ಲ. ಆ ಗ್ರಂಥದಲ್ಲಿ ಹಾಸುಹೊಕ್ಕಿನಂತೆ ಕಾಣುವ ಭಕ್ತಿಭಾವ ನನ್ನನ್ನು ಮುಗ್ಧನನ್ನಾಗಿ ಮಾಡಿದೆ.

(ಯಂಗ್ ಇಂಡಿಯಾ, ೨೭–೮–೧೯೨೫)

ಧರ್ಮಗ್ರಂಥಗಳ ಅರ್ಥವನ್ನು ಗ್ರಹಿಸಬೇಕಾದರೆ ಅವುಗಳನ್ನು ಶ್ರದ್ಧೆಯಿಂದ ಅಧ್ಯಯನ ಮಾಡಬೇಕು—ಆಧ್ಯಾತ್ಮಿಕ ಅನುಭವವನ್ನು ಪಡೆದಿರಬೇಕು. ಇವು ಅಗತ್ಯ. ಒಬ್ಬ ಶೂದ್ರನು ಇಂತಹ ಗ್ರಂಥಗಳನ್ನು ಓದಬಾರದು ಎಂಬ ನಿಷೇಧ ಅರ್ಥವಿಲ್ಲದೆ ಮಾಡಿದ್ದಲ್ಲ. ಶೂದ್ರನೆಂದರೆ ಆಧ್ಯಾತ್ಮಿಕ ಬೆಳವಣಿಗೆಯನ್ನು ಹೊಂದದವನು: ಅಜ್ಞಾನಿ. ಅಂತಹವನು ಧರ್ಮಗ್ರಂಥಗಳನ್ನು ಓದಿದರೆ ಅವುಗಳನ್ನು ಅಪಾರ್ಥಮಾಡಿಕೊಳ್ಳುವ ಸಂಭವ ಹೆಚ್ಚಾಗಿರುವುದು. ಪ್ರತಿಯೊಬ್ಬನೂ ಬೀಜಗಣಿತದ ಲೆಕ್ಕವನ್ನು ಮಾಡಲು ಸಾಧ್ಯವಿಲ್ಲ. ಅದಕ್ಕೆ ತಕ್ಕಮಟ್ಟಿಗೆ ಪೂರ್ವಸಿದ್ಧತೆ ಬೇಕಾಗುತ್ತದೆ- 'ಅಹಂ ಬ್ರಹ್ಮಾಸ್ಮಿ' ಎನ್ನುವ ಉದಾತ್ತವಾದ ವಾಕ್ಯ ಒಬ್ಬ ಪಾಪಿಯ ಬಾಯಿಂದ ಹೊರಟರೆ ಫಲವೇನು? ಈ ವಾಕ್ಯವನ್ನು ಎಂತಹ ಹೇಯವಾದ ರೀತಿಯಲ್ಲಿ ಅವನು ಪ್ರಯೋಗಕ್ಕೆ ತಿರುಗಿಸಬಲ್ಲನು—ಇದರಿಂದ ಎಂತಹ ವಿಪರೀತ ಪರಿಣಾಮ ಉಂಟಾದೀತು?

ಆದುದರಿಂದ ಧರ್ಮಗ್ರಂಥಗಳನ್ನು ವಿವರಿಸಬಲ್ಲವನು ಆಧ್ಯಾತ್ಮಿಕ ಸಾಧನೆಯನ್ನು ಮಾಡಿದವನಾಗಿರಬೇಕು. ಎಲ್ಲ ಕಾಲಕ್ಕೂ ಅನ್ವಯವಾಗುವ —ನಮ್ಮ ಶೀಲವನ್ನು ತಿದ್ದಬಲ್ಲ ಯಮನಿಯಮಾದಿಗಳನ್ನು ಪಾಲಿಸಬೇಕು. ಅವುಗಳ ಕೇವಲ ಬಾಹ್ಯ ಆಚರಣೆಯಿಂದ ಯಾವ ಪ್ರಯೋಜನವೂ ಇಲ್ಲ. ಒಬ್ಬ ಗುರು ಅವಶ್ಯವೆಂದು ಶಾಸ್ತ್ರಗಳು ಸಾರುತ್ತವೆ. ಆದರೆ ಈ ಕಾಲದಲ್ಲಿ ಗುರುಗಳು ವಿರಳ. ಆದುದರಿಂದ ಭಕ್ತಿಗ್ರಂಥಗಳನ್ನು ಅಧ್ಯಯನ ಮಾಡು

ವುದು ಅವಶ್ಯವೆಂದು ಜ್ಞಾನಿಗಳು ಹೇಳಿರುವರು. ಯಾರಲ್ಲಿ ಭಕ್ತಿ ಇಲ್ಲವೊ, ಶ್ರದ್ಧೆ ಇಲ್ಲವೊ ಅಂತಹವರು ಧರ್ಮಗ್ರಂಥಗಳ ಅರ್ಥವನ್ನು ಹೇಳಲು ಅಸಮರ್ಥರು. ತಮ್ಮ ಪಾಂಡಿತ್ಯದಿಂದ ವಿದ್ವಾಂಸರು ದೀರ್ಘವಾದ ವ್ಯಾಖ್ಯಾನ ವನ್ನು ಮಾಡಬಹುದು—ಆದರೆ ಅದು ನಿಜವಾದ ಅರ್ಥವಾಗಲಾರದು. ಯಾರು ಅನುಭವವನ್ನು ಪಡೆದಿರುವರೊ ಅಂತಹವರು ಮಾತ್ರ ಈ ಗ್ರಂಥಗಳ ನಿರೂಪಣೆ ಯನ್ನು ಮಾಡಬಲ್ಲರು.

ಅನುಭವವಿಲ್ಲದವರು ಸಹ ಈ ಗ್ರಂಥಗಳ ಅರ್ಥವನ್ನು ಗ್ರಹಿಸುವ ವಿಚಾರದಲ್ಲಿ ಕೆಲವು ನಿಯಮಗಳನ್ನು ನೆನಪಿನಲ್ಲಿಡಬೇಕು. ಯಾವುದು ಸತ್ಯಕ್ಕೆ ವಿರೋಧವಾಗಿದೆಯೊ ಅಂತಹ ಅರ್ಥ ಗ್ರಾಹ್ಯವಲ್ಲ. ಯಾವನು ಸತ್ಯದ ವಿಚಾರ ದಲ್ಲಿಯೂ ಸಹ ಶಂಕೆಯುಳ್ಳವನಾಗಿರುವನೊ ಅಂತಹವನಿಗೆ ಈ ಗ್ರಂಥಗಳು ನಿರರ್ಥಕ—ಅಂತಹವನನ್ನೆದುರಿಸಿ ಪ್ರಯೋಜನವಿಲ್ಲ.

(ಯಂಗ್ ಇಂಡಿಯಾ, ೧೨–೧೧–೧೯೨೫)

## ಸತ್ಯ ಮತ್ತು ಅಹಿಂಸೆಯ ಪಾಲನೆಗೆ ದೈವಭಕ್ತಿಯ ಆವಶ್ಯಕತೆ

ಸತ್ಯ ಮತ್ತು ಅಹಿಂಸೆ ಸಾಮ್ಯವಾದದಲ್ಲಿ ರೂಪ ತಾಳಬೇಕು. ಹೀಗಾಗ ಬೇಕಾದರೆ ಈ ತತ್ತ್ವಗಳನ್ನನುಸರಿಸುವ ಸಾಧಕನು ದೈವಭಕ್ತಿಯಿಂದ ಕಳಕಳಿಸುವವನಾಗಿರಬೇಕು. ಕೇವಲ ಔಪಚಾರಿಕವಾಗಿ ಸತ್ಯ ಮತ್ತು ಅಹಿಂಸೆಯ ನಿಯಮಗಳನ್ನು ಬಾಹ್ಯಾಚರಣೆಯಲ್ಲಿಟ್ಟುಕೊಳ್ಳುವವನು ವಿಷಮ ಸ್ಥಿತಿ ಒದಗಿದಾಗ ಆ ತತ್ತ್ವಗಳನ್ನು ಕೈಬಿಡುವನು. ಆದುದರಿಂದಲೇ ಸತ್ಯವೇ ದೇವರೆಂದು ನಾನು ಹೇಳುತ್ತಿರುವುದು. ಈ ದೇವರು ಸದಾ ನಮ್ಮನ್ನು ಪ್ರಚೋದಿಸುವ ಶಕ್ತಿ. ನಮ್ಮ ಜೀವವೇ ಆ ಶಕ್ತಿಯಿಂದ ಬಂದುದು. ಆ ಶಕ್ತಿ ದೇಹದಲ್ಲಿರುವುದು—ಆದರೆ ಅದು ದೇಹವಲ್ಲ. ಇಂತಹ ಅಪಾರಶಕ್ತಿಯೊಂದಿರು ವುದನ್ನು ನಿರಾಕರಿಸುವವನು—ಆ ಅನಂತಶಕ್ತಿಯ ಲಾಭವನ್ನು ಕಳೆದುಕೊಳ್ಳು ವನು, ಅಸಹಾಯನಾಗುವನು. ಬಿರುಗಾಳಿಯಲ್ಲಿ ಸಿಕ್ಕಿದ ಹಡಗಿನಂತೆ ಅವನು ದಿಕ್ಕುತೋರದವನಾಗುವನು.

ಈ ಮಹಾಶಕ್ತಿಯನ್ನು ಆವಿಷ್ಕರಣ ಮಾಡಿ ಅದರಿಂದ ಲಾಭವನ್ನು ಪಡೆಯುವುದು ಒಂದು ಕಠಿಣವಾದ ಸಂಶೋಧನೆ.

ಈ ಸಂಶೋಧನೆಯಲ್ಲಿಯೇ ಸತ್ಯಾಗ್ರಹದ ಆವಿಷ್ಕರಣವಾಗುವುದೆಂದು ನಾನು ಹೇಳಬಯಸುತ್ತೇನೆ. ಸತ್ಯಾಗ್ರಹದ ಎಲ್ಲ ನಿಯಮಗಳನ್ನು ಕಂಡು ಹಿಡಿದಿದೇನೆಂದು ನಾನು ಹೇಳಲಾರೆ. ಆದರೆ ಒಂದು ಮಾತನ್ನು ಖಚಿತ ವಾಗಿಯೂ ನಿರ್ಭಯವಾಗಿಯೂ ಹೇಳಬಲ್ಲೆ. ಎಲ್ಲ ಯೋಗ್ಯವಾದ ಗುರಿ ಗಳನ್ನೂ ಸತ್ಯಾಗ್ರಹದ ಮೂಲಕ ಸಾಧಿಸಬಹುದು. ಇದೇ ಉತ್ತಮೋತ್ತಮ ಮಾರ್ಗ. ಇದರಲ್ಲಿ ಸೋಲೆಂಬುದಿಲ್ಲ. ಇದರ ಶಕ್ತಿ ಅಪಾರ. ಸಾಮ್ಯವಾದ ಬೇರೆ ಯಾವ ಮಾರ್ಗದಿಂದಲೂ ಸಾರ್ಥಕಗೊಳಿಸಲು ಸಾಧ್ಯವಿಲ್ಲ. ಸಮಾಜ ದಲ್ಲಿ ತಲೆದೋರುವ ರಾಜಕೀಯ, ಆರ್ಥಿಕ, ನೈತಿಕ—ಎಲ್ಲ ದೋಷಗಳನ್ನೂ ಸತ್ಯಾಗ್ರಹದ ಮೂಲಕ ತೊಡೆದುಹಾಕಬಹುದು. (ಹರಿಜನ, ೨೦-೭-೧೯೪೭)

'ಸತ್ಯ'ವೆನ್ನುವ ಶಬ್ದ 'ಸತ್' ಶಬ್ದದಿಂದ ಹುಟ್ಟಿದುದು. 'ಸತ್' ಅಂದರೆ ಇರುವುದು. ನಿಜವಾಗಿಯೂ 'ಸತ್ಯ'ವೊಂದೇ ಇರುವುದು. ಆದುದ ರಿಂದ ದೇವರಿಗೆ 'ಸತ್' ಎನ್ನುವುದೇ ಸಾರ್ಥಕವಾದ ಮತ್ತು ಮುಖ್ಯವಾದ ಹೆಸರು. ನಿಜವಾಗಿಯೂ ದೇವರು ಸತ್ಯನೆಂದು ಹೇಳುವುದಕ್ಕಿಂತಲೂ ಸತ್ಯವೇ ದೇವರೆಂದು ಹೇಳುವುದೇ ಹೆಚ್ಚು ಸಮಂಜಸವಾಗಿದೆ. ಆದರೆ ಪ್ರಪಂಚದಲ್ಲಿ ರಾಜರು, ದಳಪತಿಗಳು, ನಾಯಕರು ಬೇಕಾಗುವಂತೆ ದೇವರಿಗೆ ರಾಜರ ರಾಜನೆಂತಲೂ, ಸರ್ವಶಕ್ತನೆಂತಲೂ ಹೇಳುವುದು ಹೆಚ್ಚು ರೂಢಿಯಲ್ಲಿದೆ. ಆದರೆ ಆಳವಾಗಿ ವಿಚಾರಮಾಡಿದರೆ ದೇವರಿಗೆ 'ಸತ್' ಅಥವಾ 'ಸತ್ಯ'— ಇದೇ ಸೂಕ್ತವೂ ಪೂರ್ಣವಾದ ಅರ್ಥವುಳ್ಳ ಹೆಸರೆಂದೂ ಗೋಚರವಾಗುವುದು.

ಸತ್ಯವೆಲ್ಲಿರುವುದೊ ಅಲ್ಲಿ ಜ್ಞಾನವಿರುವುದು—ಶುದ್ಧವಾದ ಜ್ಞಾನ. ಎಲ್ಲಿ ಸತ್ಯವಿಲ್ಲವೊ ಅಲ್ಲಿ ನಿಜವಾದ ಜ್ಞಾನವಿರಲಾರದು. ಆದುದರಿಂದ ದೇವರಿಗೆ 'ಚಿತ್'—ಜ್ಞಾನಸ್ವರೂಪನೆಂದು ಹೇಳುವರು. ಎಲ್ಲಿ ನಿಜವಾದ ಜ್ಞಾನ ಇರುವುದೊ ಅಲ್ಲಿ ಸದಾ ಆನಂದವಿರುವುದು. ದುಃಖಕ್ಕೆ ಅಲ್ಲಿ ಎಡೆಯಿಲ್ಲ. ಸತ್ಯವು ಶಾಶ್ವತವಾಗಿರುವಂತೆ ಅದರಿಂದ ಜನ್ಯವಾದ ಆನಂದವೂ ಶಾಶ್ವತ. ಆದುದರಿಂದ ದೇವರು ಸತ್-ಚಿತ್-ಆನಂದ—ಸಚ್ಚಿದಾನಂದ(ಸತ್ಯ-ಜ್ಞಾನ- ಆನಂದ)ನೆಂದು ಹೇಳುತ್ತೇವೆ.

ಈ ಸತ್ಯದ ಉಪಾಸನೆಯೇ ನಮ್ಮ ಇರುವಿಕೆಗೆ ಮುಖ್ಯವಾದ ಕಾರಣ.

ಸಾಮಾನ್ಯವಾಗಿ ಸತ್ಯದ ನಿಷ್ಠೆಯೆಂದರೆ ಸತ್ಯವನ್ನು ಹೇಳುವುದೆಂದು ಮಾತ್ರ ತಿಳಿಯುತ್ತಾರೆ. ಆದರೆ ನಾವು ಆಶ್ರಮವಾಸಿಗಳು ಸತ್ಯ ಶಬ್ದವನ್ನು ಬಹಳ ವ್ಯಾಪಕವಾದ ರೀತಿಯಲ್ಲಿ ಗ್ರಹಿಸಿದೇವೆ. ಮನಸಾ ವಾಚಾ ಕಾಯೇನ ಸತ್ಯವಿರ್‍ರಬೇಕು. ಈ ಸತ್ಯವನ್ನು ಪೂರ್ಣವಾಗಿ ಸಾಕ್ಷಾತ್ಕಾರ ಮಾಡಿದವನಿಗೆ ತಿಳಿದುಕೊಳ್ಳಬೇಕಾದ ವಿಷಯ ಬೇರೊಂದಿರುವುದಿಲ್ಲ. ಏಕೆಂದರೆ ಸತ್ಯದಲ್ಲಿಯೇ ಎಲ್ಲ ಜ್ಞಾನವೂ ಅಡಕವಾಗಿದೆ. ಅದರಲ್ಲಿ ಅಡಕವಾಗದೆ ಇರುವುದು ಸತ್ಯವಲ್ಲ. ಆದುದರಿಂದ ಅದು ನಿಜವಾದ ಜ್ಞಾನವಲ್ಲ. ನಿಜವಾದ ಜ್ಞಾನವಿಲ್ಲದೆ ನಿಜವಾದ ಆತ್ಮಶಾಂತಿಯೂ ದೊರೆಯಲಾರದು. ಸತ್ಯವನ್ನು ಈ ಬಗೆಯಲ್ಲಿ ಒರೆಗಲ್ಲಿಗೆ ಉಜ್ಜಿ ತಿಳಿಯುವುದನ್ನು ಒಮ್ಮೆ ಕಲಿತೆವಾದರೆ ಯಾವುದನ್ನು ಮಾಡಲು ಯೋಗ್ಯ, ನೋಡಲು ಯೋಗ್ಯ, ಓದಲು ಯೋಗ್ಯ—ಎಂಬುದನ್ನು ತತ್‌ಕ್ಷಣ ದಲ್ಲಿಯೇ ಅರಿಯುವೆವು.

ಆದರೆ ಸ್ಪರ್ಶಮಣಿಯಂತೆಯೂ ಕಾಮಧೇನುವಿನಂತೆಯೂ ಇರುವ ಈ ಸತ್ಯವನ್ನು ಸಾಕ್ಷಾತ್ಕಾರಮಾಡಿಕೊಳ್ಳುವುದು ಹೇಗೆ? ಭಗವದ್ಗೀತೆ ಈ ಪ್ರಶ್ನೆಗೆ ಉತ್ತರ ಹೇಳಿದೆ: ಅಭ್ಯಾಸದಿಂದ, ವೈರಾಗ್ಯದಿಂದ—ಅಂದರೆ ಏಕಾಗ್ರ ಶ್ರದ್ಧೆ ಯಿಂದ—ಉಳಿದ ವಿಷಯಗಳಲ್ಲಿ ಉದಾಸೀನತೆಯನ್ನು ತಾಳುವುದರಿಂದ. ಆದರೆ ಇಂತಹ ಶ್ರದ್ಧೆಯಿದ್ದರೂ ಒಬ್ಬನಿಗೆ ಸತ್ಯವೆಂದು ತೋರುವುದು, ಮತ್ತೊಬ್ಬನಿಗೆ ಅಸತ್ಯವೆಂದು ತೋರಬಹುದು. ಆದರೆ ಸಾಧಕನು ಇದರಿಂದ ಚಿಂತೆಗೊಳ್ಳಬೇಕಾಗಿಲ್ಲ. ಪ್ರಯತ್ನವು ಶುದ್ಧವಾಗಿದ್ದರೆ, ಭಿನ್ನವೆಂದು ತೋರುವ ಸತ್ಯ ಒಂದೇ ಮರದ ಬೇರೆ ಬೇರೆ ಅಸಂಖ್ಯಾತ ಎಲೆಗಳಂತೆ, ದೇವರೇ ಬೇರೆ ಬೇರೆ ವ್ಯಕ್ತಿಗಳಿಗೆ ಬೇರೆಬೇರೆಯಾಗಿ ಕಾಣಿಸುವುದಿಲ್ಲವೆ? ಆದರೂ ದೇವರು ಒಬ್ಬನೇ ಎಂದು ನಾವು ತಿಳಿದಿರುವೆವು. (ಮಂಗಳ ಪ್ರಭಾತದಿಂದ)

## ಸತ್ಯ – ಅಹಿಂಸೆ ವಿವಿಕ್ತ ವ್ರತಗಳಲ್ಲ

ಸತ್ಯ ಮತ್ತು ಅಹಿಂಸೆ ವಿವಿಕ್ತವಾಗಿ ಆಚರಿಸುವ ವ್ರತಗಳಲ್ಲ. ಅವುಗಳ ಪ್ರಯೋಗ ಮಾನವ ಸಭೆಗಳಲ್ಲಿಯೂ ಮಾರುಕಟ್ಟೆಗಳಲ್ಲಿಯೂ ಆಗಬೇಕು. ರಾಜಕೀಯದಲ್ಲಿಯೂ ಪ್ರಾಪಂಚಿಕ ವ್ಯವಹಾರಗಳಲ್ಲಿಯೂ ಸತ್ಯ ಮತ್ತು

ಅಹಿಂಸೆಗಳಿಗೆ ಸ್ಥಾನವಿಲ್ಲವೆಂದು ಕೆಲವು ಮಿತ್ರರು ನನಗೆ ಹೇಳುವುದುಂಟು. ಈ ಮಾತನ್ನು ನಾನು ಒಪ್ಪುವುದಿಲ್ಲ. ಸತ್ಯ ಮತ್ತು ಅಹಿಂಸೆ ಕೇವಲ ವೈಯಕ್ತಿಕ ಮೋಕ್ಷಸಾಧನೆಗಾದರೆ ಅದರಿಂದ ನನಗೆ ಪ್ರಯೋಜನವಿಲ್ಲ. ನಮ್ಮ ನಿತ್ಯ ಜೀವನದಲ್ಲಿ ಇವುಗಳನ್ನು ಬಳಕೆಗೆ ತರುವುದನ್ನೇ ಮೊದಲಿನಿಂದಲೂ ನಾನು ಪ್ರಯೋಗ ಮಾಡುತ್ತಿದೇನೆ. (ಆತ್ಮಕಥೆಯಿಂದ)

ಸತ್ಯ ಮತ್ತು ಅಹಿಂಸೆ ಕೇವಲ ವೈಯಕ್ತಿಕ ಸಾಧನೆಗೆ ಅಭ್ಯಾಸದ ವಿಷಯಗಳಾಗಿ ಮಾತ್ರವಲ್ಲದೆ—ಮಾನವ ಸಮೂಹಗಳು, ಕುಲಗಳು ಮತ್ತು ಜನಾಂಗಗಳು ಸಾಮೂಹಿಕವಾಗಿ ಇದರ ಅಭ್ಯಾಸಕ್ಕೆ ತೊಡಗುವಂತೆ ನಾವು ಮಾಡಬೇಕು. ಅಂತೂ ಇದೇ ನನ್ನ ಕನಸು. ಈ ಕನಸು ನನಸಾಗಲು ಯತ್ನಿಸುತ್ತ ನಾನು ಬದುಕುವೆನು, ಸಾಯುವೆನು. ಪ್ರತಿನಿತ್ಯವೂ ಹೊಸ ಸತ್ಯಗಳನ್ನು ಕಾಣುವಂತೆ ನನ್ನ ಶ್ರದ್ಧೆ ಸಹಾಯಮಾಡುತ್ತದೆ. ಅಹಿಂಸೆ ಆತ್ಮಕ್ಕೆ ಸಂಬಂಧಿಸಿದ ಗುಣವಿಶೇಷ. ಆದುದರಿಂದ ಪ್ರತಿಯೊಬ್ಬರೂ ಎಲ್ಲ ವ್ಯವಹಾರಗಳಲ್ಲಿಯೂ ಅನುಷ್ಠಾನಕ್ಕೆ ತರಬೇಕಾದ ವಿಷಯ.

(ಹರಿಜನ, ೨-೩-೧೯೪೦)

ಈ ಪ್ರಪಂಚದಲ್ಲಿ ಸತ್ಯ ಮತ್ತು ಅಹಿಂಸೆಗಿಂತಲೂ ಪುರಾತನ ವಸ್ತುಗಳು ಬೇರೊಂದಿಲ್ಲ. ಬಹಳ ವಿಚಾರಮಾಡಿ ಈ ಖಚಿತವಾದ ತೀರ್ಮಾನಕ್ಕೆ ಬಂದೆನು. ಈ ಎರಡು ತತ್ತ್ವಗಳು ಅತಿ ಪುರಾತನವಾದುದರಿಂದ, ಇವುಗಳ ಅಭ್ಯಾಸವನ್ನು ಮರಳಿ ಆಧುನಿಕ ಕಾಲದಲ್ಲಿ ಆಧುನಿಕ ಜೀವನಕ್ಕೆ ಅನ್ವಯ ವಾಗದ ರೀತಿಯಲ್ಲಿ ತರಲು ಯತ್ನಿಸಬಾರದೆಂದು ಕಂಡುಕೊಂಡೆನು. ಹಳೆಯ ಕಾಲದ ಆಚರಣೆಗಳು ಆ ಕಾಲಕ್ಕೆ ಸರಿಹೋಗಿರಬಹುದು. ಆದರೆ ಕಾಲ ಬದಲಾಗಿದೆ. ಆಚರಣೆಗಳು–ಆವಶ್ಯಕತೆಗಳು ಬೇರೆಯಾಗಿವೆ. ಈ ಹಳೆಯ ಅಭ್ಯಾಸಗಳು ಸತ್ಯಕ್ಕೂ ಅಹಿಂಸೆಗೂ ವಿರೋಧವಲ್ಲದಿದ್ದರೂ ಆಧುನಿಕ ಕಾಲಕ್ಕೆ ಅನ್ವಯಿಸದೆ ಹೋಗಬಹುದು.

(' ಗಾಂಧೀಜಿಯೊಡನೆ ಸಿಂಹಳದಲ್ಲಿ ' ಗ್ರಂಥದಿಂದ)

# ಸಾಧನ – ಸಾಧ್ಯ

(೧೯೨೪ರಲ್ಲಿ ಪುಣೆಯ ಸಾಸೂನ್ ಆಸ್ಪತ್ರೆಯಲ್ಲಿ ಗಾಂಧೀಜಿಯವರಿಗೆ ಶಸ್ತ್ರಚಿಕಿತ್ಸೆಯಾದ ಬಳಿಕ ಬೊಂಬಾಯಿಯ ಜುಹುವಿನಲ್ಲಿ ವಿಶ್ರಾಂತಿ ಪಡೆಯುತ್ತಿದ್ದ ಕಾಲದಲ್ಲಿ ಅವರ ಕಿರಿಯ ಮಗ ಶ್ರೀ ರಾಮದಾಸ್ ಗಾಂಧೀಗೆ ಬರೆದ ಪತ್ರ.)

ಒಂದು ವಿಷಯವನ್ನು ಚೆನ್ನಾಗಿ ಗ್ರಹಿಸಬೇಕೆಂದು ನನ್ನ ಇಚ್ಛೆ. ನಾವು ಗುರಿಯನ್ನು ಮುಟ್ಟಬಹುದು ಅಥವಾ ಮುಟ್ಟದೆ ಹೋಗಬಹುದು. ಇದು ನಮ್ಮ ದೃಷ್ಟಿಗೆ ಅಗೋಚರವಾದ ವಿಷಯ. ಆದರೆ ಸಾಧನೆ ನಮ್ಮ ಪೂರ್ಣ ಸ್ವಾಧೀನದಲ್ಲಿದೆ. ಸಾಧನೆಯನ್ನು ನಡೆಸಲು ನಾವೆಲ್ಲರೂ ಅರ್ಹರು. ಇದರಲ್ಲಿ ಯಶಸ್ಸು ಪಡೆಯುವುದು ತಕ್ಕಮಟ್ಟಿಗೆ ಸುಲಭ. ನಾವು ಸಾಧನೆಯನ್ನು ನಮ್ಮ ಸ್ವಾಧೀನದಲ್ಲಿಟ್ಟುಕೊಳ್ಳುವ ಪ್ರಮಾಣದಲ್ಲಿ ಗುರಿಯನ್ನು ಮುಟ್ಟಬಲ್ಲೆವು. ದಾರಿ ಯಾವುದೆಂದು ನಾವು ಗುರುತಿಸಬಲ್ಲೆವು—ಏಕೆಂದರೆ ಸಾಧುಸಂತರು ಅದನ್ನು ತೋರಿಸಿದಾರೆ. ಆದರೆ ಅವರೇ ಗುರಿಯನ್ನು ಅರ್ಥಮಾಡಿಕೊಳ್ಳುವುದು ಕಠಿಣವೆಂದೂ ಹೇಳಿದಾರೆ. ಸತ್ಯವೇ ಮುಖ್ಯವಾದ ದಾರಿ. ಈ ದಾರಿಯಲ್ಲಿ ನಡೆಯಲು ನೀನು ಸಮರ್ಥನೆಂದು ನನ್ನ ಪೂರ್ಣ ನಂಬಿಕೆ. ನೀನು ಯಾರನ್ನೂ ಮೋಸಮಾಡುವವನಲ್ಲ; ನಿನ್ನನ್ನು ನೀನೇ ಮೋಸಗೊಳಿಸಿಕೊಳ್ಳುವವನೂ ಅಲ್ಲ. ಆದುದರಿಂದಲೆ ನೀನು ಬಯಸುವಂತೆ ತತ್‌ಕ್ಷಣವೇ ಆಗಲಿಲ್ಲವೆಂದು ಅತೃಪ್ತಿಗೊಂಡಿರುವೆ—ಪರಿತಪಿಸುತ್ತಿರುವೆ. ಆದರೆ ನಮ್ಮ ಸ್ವಂತ ವಿಚಾರಗಳಲ್ಲಿ ನಾವು ಸ್ವಲ್ಪಮಟ್ಟಿಗೆ ತಾಳ್ಮೆಯುಳ್ಳವರಾಗಬೇಕು. ಶಾಂತಚಿತ್ತದಿಂದ ನಾವು ಮಾಡಬೇಕೆಂದಿರುವ ಕೆಲಸವನ್ನು ಮಾಡುತ್ತ ಹೋಗಬೇಕು—ಅದರಲ್ಲಿ ಯಶಸ್ವಿಗಳಾಗಲು ಪ್ರಯತ್ನ ಮಾಡಬೇಕು. ಅನಂತರ ಫಲದ ವಿಚಾರದಲ್ಲಿ ಉದಾಸೀನತೆಯನ್ನು ತಾಳುವ ಅಭ್ಯಾಸವನ್ನು ರೂಢಿಸಿಕೊಳ್ಳಬೇಕು.

## ಸತ್ಯವನ್ನು ಅರಸುತ್ತ ಅಹಿಂಸೆಯೆಂಬ ರತ್ನ ದೊರೆಯಿತು

ಸತ್ಯವನ್ನು ಅರಸುತ್ತ, ಅದನ್ನು ಧ್ಯಾನಿಸುತ್ತ ಅಹಿಂಸೆಯೆಂಬ ರತ್ನವನ್ನು ಕಂಡುಹಿಡಿಯಲಾಯಿತು.

(ಜೆ. ಬಿ. ಕೃಪಲಾನಿಯವರ 'ಗಾಂಧೀಮಾರ್ಗ'ದ ಮುನ್ನುಡಿಯಿಂದ)

ಅಹಿಂಸೆ ಗುರಿಯಲ್ಲ. ಸತ್ಯವೇ ಗುರಿ. ಮಾನವರ ಮಧ್ಯೆ ನಡೆಯುವ ವ್ಯವಹಾರಗಳಲ್ಲಿ ಸತ್ಯವನ್ನು ಸಾಧಿಸಲು ಅಹಿಂಸೆಯನ್ನು ಆಚರಣೆಗೆ ತರುವುದೊಂದೇ ಮಾರ್ಗ, ಅನ್ಯಥಾ ಇಲ್ಲ. ಸತ್ಯಕ್ಕೆ ಬದ್ಧನಾಗಿರುವವನು ಅಹಿಂಸೆಯನ್ನು ಎಡೆಬಿಡದೆ ಪಾಲಿಸಬೇಕು; ಹಿಂಸಾಮಾರ್ಗದಲ್ಲಿ ಹೀಗಿಲ್ಲ. ಅದಕ್ಕಾಗಿಯೇ ಅಹಿಂಸೆಯನ್ನು ನಾನು ಇಷ್ಟು ಒತ್ತಿ ಹೇಳಲು ಕಾರಣ. ಸತ್ಯವೆಂಬುದು ನನಗೆ ಸಹಜವಾಗಿಯೇ ರೂಢಿ ಆಯಿತು. ಆದರೆ ಬಹಳ ಪ್ರಯಾಸಪಟ್ಟಮೇಲೆ ಅಹಿಂಸೆಯನ್ನು ರೂಢಿಸಿಕೊಂಡೆ. ಇದೇ ಸಾಧನೆಯ ಮಾರ್ಗವಾದುದರಿಂದ ನಮ್ಮ ನಿತ್ಯಜೀವನದಲ್ಲಿ ಇದನ್ನು ಬಳಕೆಗೆ ತರುವ ವಿಚಾರವನ್ನು ನಾವು ಮಾಡುವುದು ಸೂಕ್ತವಾಗಿದೆ. ಈ ಕಾರಣದಿಂದ ನಮ್ಮ ಸಾಮಾನ್ಯ ಜನ ಅಹಿಂಸೆಯ ವಿಷಯದಲ್ಲಿ ಶಿಕ್ಷಣವನ್ನು ಪಡೆಯಬೇಕು. ಇದರ ಪರಿಣಾಮವಾಗಿ ಸ್ವಾಭಾವಿಕವಾಗಿಯೇ ಸತ್ಯದ ವಿಚಾರದಲ್ಲಿ ಶಿಕ್ಷಣ ಉಂಟಾಗುತ್ತದೆ.

(ಹರಿಜನ, ೨೩-೬-೧೯೪೬)

ನಾನು ಸತ್ಯಶೋಧನೆಯಲ್ಲಿ ಬಹಳ ನಿಷ್ಠೆಯುಳ್ಳವನೆಂದು ಹೇಳಬಯಸುತ್ತೇನೆ. ಈ ಶೋಧನೆಯಲ್ಲಿಯೇ ನನಗೆ ಅಹಿಂಸೆಯ ಆವಿಷ್ಕರಣವಾಯಿತು. ಅದು ವ್ಯಾಪಿಸುವಂತೆ ಮಾಡುವುದೇ ನನ್ನ ಜೀವನದ ಧ್ಯೇಯ. ಇದಕ್ಕೆ ನಾನು ದೀಕ್ಷಾಬದ್ಧನಾಗಿದೇನೆ. ಈ ಪವಿತ್ರ ಕರ್ತವ್ಯವನ್ನುಳಿದು ನನಗೆ ಜೀವನದಲ್ಲಿ ಯಾವ ಆಸಕ್ತಿಯೂ ಇಲ್ಲ. (ಹರಿಜನ, ೬-೭-೧೯೪೦)

## ಸತ್ಯವಲ್ಲದೆ ಬೇರೆ ದೇವರಿಲ್ಲ

ಸತ್ಯವಲ್ಲದೆ ಬೇರೆ ದೇವರಿಲ್ಲವೆಂದು ನನ್ನ ಸತತವಾದ ಅನುಭವದಿಂದ ದೃಢವಾದ ನಂಬಿಕೆಯಾಗಿದೆ. ಅದರ ದರ್ಶನ ನನಗೆ ಆಗಾಗ್ಗೆ ಕ್ಷಣಿಕವಾಗಿ

ಆಗಿದೆ. ಈ ಬಗೆಯ ದರ್ಶನದಿಂದಲೇ ಕೋಟಿಸೂರ್ಯಪ್ರಕಾಶದಂತೆ ದೇದೀಪ್ಯ ಮಾನವಾಗಿರುವ ಅದರ ತೇಜಸ್ಸನ್ನು ವರ್ಣಿಸಲು ಸಾಧ್ಯವಿಲ್ಲ. ಆ ಜಾಜ್ವಲ್ಯ ಮಾನವಾದ ಜ್ಯೋತಿಯು ಒಂದು ಕ್ಷಣ ಮಾತ್ರ ಕಾಣಿಸಿಕೊಂಡು ಮರೆಯಾದ ರೀತಿಯಲ್ಲಿ ನಾನು ಅದರ ದರ್ಶನವನ್ನು ಪಡೆದಿರುವುದು. ಆದರೆ ನನ್ನ ಅನುಭವದ ಆಧಾರದ ಮೇಲೆ ನಾನು ಈ ಮಾತನ್ನು ಹೇಳಬಲ್ಲೆ: ಸತ್ಯದ ಪೂರ್ಣದರ್ಶನವಾಗಬೇಕಾದರೆ ಅದಕ್ಕೆ ಪೂರ್ವಭಾವಿಯಾಗಿ ಸಾಧಕನು ಅಹಿಂಸೆಯನ್ನು ಪೂರ್ತಿಯಾಗಿ ಸಾಧಿಸಿರಬೇಕು.

(ಯಂಗ್ ಇಂಡಿಯಾ, ೭-೨-೧೯೨೯)

## ಸತ್ಯದ ಪ್ರಯೋಗ

ಕೆಲವು ವಿಷಯಗಳನ್ನು ಜೀವನದ ನಿಯಮಗಳೆಂದು ನಮ್ಮ ಶಾಸ್ತ್ರಗಳು ಸಾರಿವೆ. ಅವು ಸ್ವತಸ್ಸಿದ್ಧವಾದ ನಿಯಮಗಳೆಂದು ನಾವು ಗ್ರಹಿಸಬೇಕು. ಈ ನಿಯಮಗಳನ್ನು ಪಾಲಿಸದೆ ಧರ್ಮಮಾರ್ಗದಲ್ಲಿ ನಡೆಯಲು ನಾವು ಅಸಮರ್ಥ ರೆಂದು ನಮ್ಮ ಶಾಸ್ತ್ರಗಳು ಹೇಳುತ್ತವೆ. ಅನೇಕ ವರ್ಷಗಳಾಗಿ ಈ ನಿಯಮಗಳ ಪಾಲನೆಯಲ್ಲಿ ನಾನು ಅಚಲವಾದ ಶ್ರದ್ಧೆಯನ್ನು ತಾಳಿದೇನೆ. ನನ್ನ ಆಶ್ರಮ ವನ್ನು ಸ್ಥಾಪಿಸುವುದರಲ್ಲಿ ಈ ನಿಯಮಗಳನ್ನು ಆಚರಿಸಬೇಕೆಂದು ನನ್ನ ಜೊತೆಗಾರರ ಸಹಯೋಗವನ್ನು ನಾನು ಕೇಳಿಕೊಂಡಿದ್ದೇನೆ. ಈಗ ಆ ನಿಯಮ ಗಳೇನೆಂಬುದನ್ನು ನಿಮಗೆ ತಿಳಿಸುತ್ತೇನೆ. ನನ್ನ ಆಶ್ರಮವನ್ನು ಸೇರಲಿಚ್ಛಿಸುವ ಪ್ರತಿಯೊಬ್ಬರೂ ಈ ನಿಯಮಗಳನ್ನು ಅನುಷ್ಠಾನಕ್ಕೆ ತರಬೇಕು.

ಇವಕ್ಕೆ ಯಮಗಳೆಂದು ಹೆಸರು—ಐದು ಯಮಗಳಿವೆ—ಮೊದಲ ನೆಯದೂ ಬಹು ಮುಖ್ಯವಾದುದೂ ಸತ್ಯ.

ಇಲ್ಲಿ ಸತ್ಯವೆಂದರೆ—ನಾವು ಸಾಮಾನ್ಯವಾಗಿ ಅರ್ಥಮಾಡುವಂತೆ ಸಾಧ್ಯ ವಾದಮಟ್ಟಿಗೆ ಸುಳ್ಳು ಹೇಳದಿರುವುದು ಎಂಬ ಅರ್ಥದಲ್ಲಿ ಅಲ್ಲ—ಅಂದರೆ ನಾಣ್ಣುಡಿ ಹೇಳುವಂತೆ 'ಪ್ರಾಮಾಣಿಕತೆಯೇ ಉತ್ತಮ ವ್ಯವಹಾರನೀತಿ' (Honesty is the best policy). ಇದರ ಅರ್ಥ ವ್ಯವಹಾರದಲ್ಲಿ ಇದು ಉತ್ತಮವಾಗದಿದ್ದರೆ ಇದರಿಂದ ಜಾರಬಹುದೆಂಬ ಧ್ವನಿ ಇರುವುದು.

ಈ ಅರ್ಥದಲ್ಲಿಲ್ಲ. ನಮ್ಮ ಜೀವನವನ್ನು ಸತ್ಯದ ನಿಯಮವನ್ನನುಸರಿಸಿ, ಏನೇ ಆಗಲಿ, ನಡೆಸಿಕೊಂಡು ಹೋಗಬೇಕೆಂದು ನಮ್ಮ ವ್ರತವಾಗಬೇಕು. ಇದನ್ನು ಸ್ಪಷ್ಟಪಡಿಸುವುದಕ್ಕಾಗಿ ಪ್ರಸಿದ್ಧವಾಗಿರುವ ಪ್ರಹ್ಲಾದನ ಉದಾಹರಣೆಯನ್ನು ನಾನು ತೆಗೆದುಕೊಂಡಿದೇನೆ. ಸತ್ಯಕ್ಕಾಗಿ ಪ್ರಹ್ಲಾದನು ತನ್ನ ತಂದೆಯನ್ನೂ ಎದುರಿಸಿದನು; ಮತ್ತು ತನ್ನ ರಕ್ಷಣೆಯನ್ನು ಮಾಡಿಕೊಳ್ಳಲು ತಂದೆಯು ಕೊಟ್ಟ ಹಿಂಸೆಗೆ, ಅವನ ಆಜ್ಞಾನುಸಾರ ಹಿಂಸೆ ಮಾಡಿದ ಭಟರ ವರ್ತನೆಗೆ ಪ್ರತಿಯಾಗಿ ಮುಯ್ಯಿಗೆ ಮುಯ್ಯಿ ತೀರಿಸಿಕೊಳ್ಳದೆ—ಯಾವ ಪ್ರತಿಭಟನೆಯನ್ನೂ ಮಾಡದೆ ಪ್ರಹ್ಲಾದನು ಸಾಯಲೂ ಸಿದ್ಧನಾದನು. ಅಷ್ಟೇ ಅಲ್ಲ—ರಾಜಭಟರು ಕೊಟ್ಟ ಏಟುಗಳಿಂದ ತಪ್ಪಿಸಿಕೊಳ್ಳಲೂ ಸಹ ಪ್ರಯತ್ನ ಮಾಡಲಿಲ್ಲ. ಅವರು ಕೊಟ್ಟ ಅಸಂಖ್ಯಾತ ಚಿತ್ರಹಿಂಸೆಗಳನ್ನು ನಗುಮುಖದಿಂದ ಸಹಿಸಿದನು—ಕೊನೆಗೆ ಅವನಲ್ಲಿದ್ದ ಸತ್ಯವು ಪ್ರಕಾಶಕ್ಕೆ ಬಂದು ಜಯಗಳಿಸಿತು. ಇಷ್ಟೆಲ್ಲ ಪ್ರಹ್ಲಾದನು ತಾಳಿದುದು ತನ್ನ ಜೀವಮಾನದಲ್ಲಿಯೇ ಒಂದಲ್ಲ ಒಂದು ದಿನ ಸತ್ಯವೇ ಜಯಿಸುವುದೆಂಬ ನಂಬಿಕೆ ಅವನಲ್ಲಿದ್ದಿತೆಂದು ಅರ್ಥವಲ್ಲ. ಅವನು ತಾಳಿದುದು ನಿಜ. ಅವನು ಒಂದು ವೇಳೆ ಸತ್ತಿದ್ದನೆಂದರೆ ಆಗಲೂ ಅವನು ಸತ್ಯವನ್ನು ಪಾಲಿಸುತ್ತಿದ್ದನು. ಅಂತಹ ರೀತಿಯಲ್ಲಿ ನಾನು ಸತ್ಯವನ್ನು ಪಾಲಿಸಲು ಬಯಸುತ್ತೇನೆ. ನಿನ್ನೆ ಒಂದು ಸಣ್ಣ ಘಟನೆ ನಡೆಯಿತು: ಬಹಳ ಸಣ್ಣ ವಿಷಯ—ಆದರೆ ಇಂತಹ ಸಣ್ಣ ವಿಷಯಗಳು ಗಾಳಿ ಎತ್ತಕಡೆ ಬೀಸುತ್ತಿದೆಯೆಂದು ಒಂದು ಹುಲ್ಲುಕಡ್ಡಿ ಸೂಚಿಸುವಂತೆ ನಮ್ಮ ಮನೋಧರ್ಮವನ್ನು ಸೂಚಿಸುತ್ತವೆ. ನಡೆದುದು ಹೀಗೆ: ನನ್ನೊಡನೆ ಏಕಾಂತದಲ್ಲಿ ಮಾತನಾಡಬೇಕೆಂದು ಕೇಳಿದ ಒಬ್ಬ ಮಿತ್ರರೊಂದಿಗೆ ನಾನು ಮಾತನಾಡುತ್ತಿದ್ದೆ. ಮತ್ತೊಬ್ಬ ಮಿತ್ರರು ಅಲ್ಲಿಗೆ ಬಂದು—ಬಹಳ ಸೌಜನ್ಯದಿಂದ ತಾವು ನಮ್ಮ ಮಾತುಕಥೆಗೆ ಅಡ್ಡಬರುತ್ತಿಲ್ಲವಷ್ಟೆ ಎಂದು ಪ್ರಶ್ನಿಸಿದರು. ಯಾರೊಡನೆ ನಾನು ಮೊದಲು ಮಾತನಾಡುತ್ತಿದ್ದೆನೊ ಆ ಮಿತ್ರರು ಕೂಡಲೆ 'ಏನಿಲ್ಲ—ಇಲ್ಲಿ ಯಾವ ರಹಸ್ಯದ ಮಾತೂ ಇಲ್ಲ' ಎಂದು ಉತ್ತರ ಕೊಟ್ಟರು. ನನಗೆ ಆಶ್ಚರ್ಯವಾಯಿತು—ಏಕೆಂದರೆ ಈ ಮಿತ್ರರು ನನ್ನನ್ನು ಪ್ರತ್ಯೇಕವಾಗಿ ಕರೆದಾಗ ಯಾವುದೋ ರಹಸ್ಯದ ಮಾತೆಂದು ಸೂಚಿಸಿದ್ದರು. ಆದರೆ ಈಗ ತಮ್ಮ ಸೌಜನ್ಯದಿಂದ—ಇದಕ್ಕೆ ಅತಿಸೌಜನ್ಯವೆಂದು ನಾನು ಹೇಳಬಹುದು—ಯಾವ ರಹಸ್ಯವಿಲ್ಲವೆಂದು

ಹೇಳಿ ಮತ್ತೊಬ್ಬ ಮಿತ್ರರೂ ಅವರೊಂದಿಗೆ ಸೇರಿಕೊಳ್ಳಬಹುದೆಂದು ಹೇಳಿದರು. ಸತ್ಯಕ್ಕೆ ನಾನು ಕೊಡುವ ಅರ್ಥದ ಪ್ರಕಾರ ಈ ನಡೆವಳಿಕೆಯು ಸತ್ಯಕ್ಕೆ ದೂರ ವಾದುದೆಂದು ನಾನು ಸೂಚಿಸುತ್ತೇನೆ. ನನ್ನನ್ನು ಮೊದಲು ಕರೆದ ಮಿತ್ರರು ಮೃದುವಾದ ರೀತಿಯಲ್ಲಿ ಆದರೆ ನಿಸ್ಸಂಕೋಚವಾಗಿ 'ಹೌದು—ನಾವೀಗ ಯಾವುದೋ ರಹಸ್ಯವನ್ನು ಆಡಿಕೊಳ್ಳುತ್ತಿದೇವೆ. ನಿಮ್ಮ ಬರುವಿಕೆಯಿಂದ ನಮ್ಮ ಮಾತಿಗೆ ಅಡ್ಡಿಯಾಗುತ್ತದೆ' ಎಂದು ಹೇಳಿರಬೇಕಾಗಿತ್ತು. ಇದನ್ನು ಬಹಳ ಸೌಜನ್ಯದಿಂದ ನೋವಾಗದಂತೆ ಆತ ಸಜ್ಜನನಾದರೆ ಹೇಳಬೇಕು. ಇತರರು ಅನ್ಯಥಾ ವರ್ತಿಸುವವರಿಗೂ ನಾವು ಎಲ್ಲರನ್ನೂ ಸಜ್ಜನರೆಂದೇ ಭಾವಿಸಿ ಕೊಂಡು ಅವರೊಂದಿಗೆ ವ್ಯವಹರಿಸಬೇಕು. ನಾನು ಹೇಳಿದ ಘಟನೆ ನಮ್ಮ ಜನಾಂಗದ ದಾಕ್ಷಿಣ್ಯಪರತೆಯನ್ನು ತೋರಿಸುತ್ತದೆ ಎಂದು ನೀವು ಹೇಳಬಹುದು. ಹಾಗಾದರೆ ಇದು ಅತಿದಾಕ್ಷಿಣ್ಯಪರತೆಯೆಂದು ನನಗೆ ಅನ್ನಿಸುತ್ತದೆ. ಕೇವಲ ಸೌಜನ್ಯಕ್ಕಾಗಿ ನಾವು ಹೀಗೆಲ್ಲ ವರ್ತಿಸುತ್ತ ಹೋದರೆ ನಾವು ನಿಜವಾಗಿಯೂ ಮಿಥ್ಯಾಚಾರಿಗಳಾಗುತ್ತೇವೆ. ಒಮ್ಮೆ ಒಬ್ಬ ಇಂಗ್ಲೀಷು ಮಿತ್ರರೊಂದಿಗೆ ಆಡಿದ ಮಾತು ನೆನಪಿಗೆ ಬರುತ್ತದೆ. ಆತ ಅಷ್ಟು ಪರಿಚಿತನಲ್ಲ. ಆತ ಒಂದು ಕಾಲೇಜಿನ ಪ್ರಿನ್ಸಿಪಾಲನು—ಭಾರತದೇಶದಲ್ಲಿ ಅನೇಕ ವರ್ಷ ನೆಲೆಸಿದ್ದಾನೆ. ಆ ಮಾತು ಈ ಮಾತು ಆಡಿ ಆತ ನನ್ನನ್ನು ಒಂದು ಪ್ರಶ್ನೆ ಕೇಳಿದ. 'ಇಲ್ಲ' ಎಂದು ಹೇಳುವ ಸಂದರ್ಭದಲ್ಲಿ ಅನೇಕ ಇಂಗ್ಲೀಷು ಸಜ್ಜನರು ಹೇಳುವಂತೆ 'ಇಲ್ಲ'ವೆಂದು ಭಾರತೀಯರೂ ಹೇಳಲು ಧೈರ್ಯಮಾಡುವುದಿಲ್ಲವಷ್ಟೆ ಎಂದು ಆತ ನನ್ನನ್ನು ಕೇಳಿದ. 'ಹೌದು' ಎಂದು ನಾನು ಒಪ್ಪಬೇಕಾಯಿತು. 'ಇಲ್ಲ'ವೆಂದು ಹೇಳಲು ನಾವು ಬಹಳ ಹಿಂದುಮುಂದು ನೋಡುತ್ತೇವೆ. ಮತ್ತೊಬ್ಬರನ್ನು ನೋಯಿಸಬೇಕಲ್ಲ ಎಂದು ಹಿಂಜರಿಯುತ್ತೇವೆ. ನಮ್ಮ (ಸತ್ಯಾಗ್ರಹ) ಆಶ್ರಮದಲ್ಲಿ ನಮ್ಮ ಮನಸ್ಸಿನಲ್ಲಿ 'ಇಲ್ಲ'ವೆಂಬ ಅಭಿಪ್ರಾಯ ಇದ್ದಾಗ ಬಾಯಿಂದಲೂ 'ಇಲ್ಲ' ಎಂದು ಏನೇ ಆಗಲಿ ಹೊರಡಬೇಕು. ಇದು ಸತ್ಯದ ನಿಯಮ.

ಈಗ ಅಹಿಂಸೆಯ ವಿಚಾರವನ್ನು ಮಾಡೋಣ:

ಅಹಿಂಸೆಯೆಂದರೆ ಕೊಲ್ಲದಿರುವುದು—ಹಿಂಸೆ ಮಾಡದಿರುವುದು—ಎಂದು ಅಕ್ಷರಶಃ ಅರ್ಥವಾಗುತ್ತದೆ. ಆದರೆ ನನ್ನ ಮಟ್ಟಿಗೆ ಇದರ ಅರ್ಥ ಬಹಳ

ಉದಾತ್ತವಾದ ವಿಚಾರಕ್ಕೆ—ಉತ್ತಮೋತ್ತಮ ಲೋಕಗಳಿಗೆ ನನ್ನನ್ನು ಕೊಂಡೊಯ್ಯುತ್ತದೆ. ಅಕ್ಷರಶಃ ಕೊಲ್ಲದಿರುವುದೆಂದು ಮಾತ್ರ ಅರ್ಥಮಾಡಿದರೆ ಈ ಉದಾತ್ತ ಭಾವನೆಗಳು ಸಾಧ್ಯವಿಲ್ಲ. ಅಹಿಂಸೆಯೆಂದರೆ ಯಾರಿಗೂ ಹಿಂಸೆ ಯನ್ನುಂಟುಮಾಡಬಾರದು—ನಿನ್ನ ಶತ್ರುಗಳೆಂದು ಭಾವಿಸಿಕೊಂಡಿರುವವರ ವಿಚಾರದಲ್ಲಿಯೂ ಒಂದು ಕೆಟ್ಟ ಯೋಚನೆಯನ್ನೂ ಮಾಡಬಾರದು. ಇಲ್ಲಿ ಸ್ವಲ್ಪ ಗಮನವಿಟ್ಟು ನೋಡಿ: 'ನೀನು ಶತ್ರುವೆಂದು ಭಾವಿಸುವವರೆಂದು ನಾನು ಹೇಳಲಿಲ್ಲ. ನಿನ್ನ ಶತ್ರುಗಳೆಂದು ಯಾರು ಭಾವಿಸಿಕೊಂಡಿರುವರೊ ಅವರು—ಎಂದು ಹೇಳಿದೇನೆ. ಏಕೆಂದರೆ ಅಹಿಂಸಾವ್ರತವನ್ನು ಕೈಗೊಂಡವ ನಿಗೆ ಶತ್ರುವಿಲ್ಲ. ಶತ್ರು ಇರಲಾರನೆಂದೇ ಅವನ ಗ್ರಹಿಕೆ. ಆದರೆ ಇತರರು ತಾವು ಶತ್ರುಗಳೆಂದು ಭಾವಿಸಿಕೊಂಡಿರುವರು. ಅದಕ್ಕಾಗಿ ಅವನೇನು ಮಾಡಿ ಯಾನು? ಇಂತಹವರ ವಿಚಾರದಲ್ಲಿಯೂ ಸಹ ಅವನ ಮನಸ್ಸಿನಲ್ಲಿ ಕಲ್ಮಷ ಇಲ್ಲವೆಂದು ಹೇಳುತ್ತೇವೆ. ಮುಯ್ಯಿಗೆ ಮುಯ್ಯಿ ತೀರಿಸಿಕೊಂಡರೆ ನಾವು ಅಹಿಂಸೆಯ ಮಾರ್ಗದಿಂದ ದೂರವಾಗುತ್ತೇವೆ. ಆದರೆ ಪ್ರತಿಭಟನೆ ಮಾಡುವು ದಿಲ್ಲವೆಂದರೆ ಇತರರ ವರ್ತನೆಗೆ ನಮ್ಮ ಸಮ್ಮತಿ ಇದೆಯೆಂದಲ್ಲ. ಪ್ರತಿಭಟನೆ ಎಂದರೆ ಆ 'ಶತ್ರು'ವಿಗೆ ಏನಾದರೂ ಕೇಡಾಗಬೇಕೆಂದು ಬಯಸುವುದು—ಅವನು ಬೇರೊಬ್ಬರ ಕಾರ್ಯದಿಂದಲ್ಲದಿದ್ದರೂ ದೈವಸಹಾಯದಿಂದ ಕಾರ್ಯಮಾಡ ದಂತೆ ಅಸಹಾಯವಾಗುವುದು. ಈ ಬಗೆಯ ಯೋಚನೆ ನಮ್ಮ ಮನಸ್ಸಿನಲ್ಲಿ ಸುಳಿದಾಡಿದರೂ ಸಹ ಅಹಿಂಸೆಯ ವ್ರತಕ್ಕೆ ಭಂಗ ಉಂಟಾಗುತ್ತದೆ. ಆಶ್ರಮ ವನ್ನು ಸೇರುವವರು ಅಹಿಂಸಾವ್ರತವನ್ನು ಹೀಗೆ ಅಕ್ಷರಶಃ ಪಾಲಿಸಬೇಕು. ಈ ನಿಯಮವನ್ನು ನಾವು ಪೂರ್ತಿಯಾಗಿ ಅನುಷ್ಠಾನಕ್ಕೆ ತರುತ್ತೇವೆಂದಲ್ಲ. ಅದು ದೂರದ ಧ್ಯೇಯ. ಆ ಧ್ಯೇಯದ ಕಡೆ ಸಾಗಬೇಕು. ಈಗಲೇ ಅದು ನಿಲುಕುವುದಾದರೆ ಆಗಬಹುದು. ಆದರೆ ರೇಖಾಗಣಿತದ ಪ್ರಮೇಯಗಳಂತೆ ಇದು ಬಾಯಿಪಾಠದ ವಿಷಯವಲ್ಲ. ಪ್ರೌಢ ಗಣಿತಶಾಸ್ತ್ರದಲ್ಲಿ ಲೆಕ್ಕಗಳ ಸದುತ್ತರಗಳನ್ನು ಕಂಡುಹಿಡಿಯುವಂತೆಯೂ ಅಲ್ಲ. ಇವೆಲ್ಲಕ್ಕೂ ಅತಿಕಷ್ಟತಮ ವಾದ ಸಾಧನೆ ಇದು. ನಿಮ್ಮಲ್ಲಿ ಅನೇಕರು ರಾತ್ರಿಯೆಲ್ಲ ಎಚ್ಚರವಿದ್ದು ಇಂತಹ ಕಠಿಣವಾದ ಗಣಿತದ ಲೆಕ್ಕಗಳನ್ನು ಮಾಡಿರುತ್ತೀರಿ. ಆದರೆ ಅಹಿಂಸಾವ್ರತ ವನ್ನು ಅನುಷ್ಠಾನಕ್ಕೆ ತರಬೇಕಾದರೆ ಇದಕ್ಕೂ ಕಠಿಣವಾದ ಸಾಧನೆಯನ್ನು

ಕೈಗೊಳ್ಳಬೇಕು. ರಾತ್ರಿಯೆಲ್ಲ ಜಾಗರಣೆ ಮಾಡಬೇಕಾದೀತು; ಅನೇಕ ಮಾನಸಿಕ ಕ್ಲೇಶಗಳನ್ನೂ ಸಂಕಟಗಳನ್ನೂ ಅನುಭವಿಸಬೇಕಾದೀತು. ಆಧ್ಯಾತ್ಮಿಕ ಜೀವನದ ಮರ್ಮವನ್ನು ತಿಳಿಯುವುದಕ್ಕೆ ಪೂರ್ವದಲ್ಲಿ—ನಮ್ಮ ಧ್ಯೇಯವನ್ನು ಸಾಧಿಸಲು ಇಂತಹ ಅನುಭವಗಳಾಗಬೇಕು. ಅಹಿಂಸೆಯ ವಿಷಯದಲ್ಲಿ ಇದಕ್ಕೂ ಹೆಚ್ಚಾಗಿ ಈಗ ನಾನು ಹೇಳಲು ಬಯಸುವುದಿಲ್ಲ. ಅಹಿಂಸೆಯ ಶಕ್ತಿಯಲ್ಲಿ ವಿಶ್ವಾಸವಿರುವವನು, ತಾನು ಧ್ಯೇಯವನ್ನು ಸಾಧಿಸುವ ತರುಣದಲ್ಲಿ ಇಡೀ ಪ್ರಪಂಚವೇ ತನ್ನ ಪದತಲದಲ್ಲಿರುವುದನ್ನು ಕಾಣುವನು. ಹೀಗಾಗಬೇಕೆಂದು ತಾನು ಇಚ್ಛಿಸುವುದಿಲ್ಲ—ಆದರೆ ಹಾಗೆಯೇ ಆಗಬೇಕಾಗುತ್ತದೆ. ನೀನು ನಿನ್ನ ಶತ್ರುವೆಂದು ಭಾವಿಸಿಕೊಳ್ಳುವವನ ಮನಸ್ಸಿನ ಮೇಲೆ ಅಚ್ಚಳಿಯದ ಮುದ್ರೆಯಂತೆ ನಿನ್ನ ಪ್ರೇಮವನ್ನು—ನಿನ್ನ ಅಹಿಂಸೆಯನ್ನು—ಒತ್ತಿದ್ದೇ ಆದರೆ ಆ ಪ್ರೇಮಕ್ಕೆ ಪ್ರತಿಯಾಗಿ ಅವನೂ ಪ್ರೇಮ ತೋರಬೇಕು. ಈ ವಿಚಾರಸರಣಿಯಿಂದ ಮತ್ತೊಂದು ವಿಷಯ ಸ್ಪಷ್ಟವಾಗುತ್ತದೆ—ಈ ನಿಯಮದ ಪ್ರಕಾರ ವ್ಯವಸ್ಥಿತವಾದ ಸಾಮೂಹಿಕ ಕೊಲೆಗಳಿಗೆ ಅವಕಾಶವಿಲ್ಲ—ಬಹಿರಂಗವಾದ ಕೊಲೆಗಳಾಗಲಾರವು, ದೇಶದ ಸಲುವಾಗಿ ಯಾವ ಹಿಂಸಾಕೃತ್ಯಕ್ಕೂ ಎಡೆ ಇಲ್ಲ. ನಿನ್ನ ರಕ್ಷಣೆಯಲ್ಲಿರುವ ಪ್ರಿಯಜನರನ್ನು ಕಾಪಾಡಲೂ ಸಹ ಇಂತಹ ಕೃತ್ಯಗಳಿಗೆ ಅವಕಾಶವಿಲ್ಲ. ಇಂತಹ ಹಿಂಸಾಕೃತ್ಯಗಳಿಂದ ಮಾನರಕ್ಷಣೆಯಾಗುವುದರಲ್ಲಿ ಏನು ಬೆಲೆ ಇದ್ದೀತು? ನಮ್ಮ ರಕ್ಷಣೆಯಲ್ಲಿ ಇರುವವರ ಮಾನವನ್ನು ಕಾಪಾಡಲು ನಾವು ಬಲಿದಾನ ಮಾಡಬೇಕೆಂದು—ಅತ್ಯಾಚಾರ ಮಾಡಲು ಬರುವವರಿಗೆ ನಮ್ಮ ಪ್ರಾಣವನ್ನರ್ಪಿಸಬೇಕೆಂದು ಅಹಿಂಸಾವ್ರತವು ಹೇಳುತ್ತದೆ. ಹೀಗೆ ಮಾಡಬೇಕಾದರೆ ದೈಹಿಕ ಮತ್ತು ಮಾನಸಿಕ ಶೌರ್ಯ ಅಪಾರವಾಗಿ ನಮ್ಮಲ್ಲಿರಬೇಕು. ಏಟು ಕೊಡುವುದಕ್ಕಿಂತಲೂ ಬಹಳ ಹೆಚ್ಚಿನ ಶೌರ್ಯವಿದು. ನಿಮ್ಮಲ್ಲಿ ತಕ್ಕಮಟ್ಟಿಗೆ ದೈಹಿಕಶಕ್ತಿ—ಇದಕ್ಕೆ ನಾನು ಶೌರ್ಯವೆಂದು ಹೇಳುವುದಿಲ್ಲ—ಇರಬಹುದು. ಆ ಶಕ್ತಿಯನ್ನು ನೀವು ಪ್ರಯೋಗ ಮಾಡಬಹುದು. ಅದು ವ್ಯಯವಾದಮೇಲೆ ಆಗುವುದೇನು? ಎದುರಾಳಿ ಕೋಪ-ರೋಷಗಳಿಂದ ತುಂಬಿರುತ್ತಾನೆ. ಅವನ ಹಿಂಸೆಗೆ ಪ್ರತಿಯಾಗಿ ನೀನೂ ಹಿಂಸೆಯನ್ನು ಪ್ರಯೋಗ ಮಾಡಿರುವುದರಿಂದ ಅವನ ಕ್ರೋಧ ಇಮ್ಮಡಿಯಾಗಿರುತ್ತದೆ. ನಿನ್ನನ್ನು ಅವನು ಕೊಂದುಹಾಕಿದಮೇಲೆ ಅವನ

ಕೋಪವು ನಿನ್ನ ರಕ್ಷಣೆಯಲ್ಲಿರುವವರ ಮೇಲೆ ತಿರುಗುತ್ತದೆ. ಆದರೆ ನೀನು ಪ್ರತಿಭಟಿಸದೆ ನಿನ್ನ ಎದುರಾಳಿಯ ದೌರ್ಜನ್ಯವನ್ನು ತಾಳಿದೆಯಾದರೆ ಏನಾಗುತ್ತದೆ? ಅವನ ಕೋಪವೆಲ್ಲವೂ ನಿನ್ನಮೇಲೆ ವ್ಯಯವಾಗಿ, ನಿನ್ನ ರಕ್ಷಣೆಯಲ್ಲಿರುವವನು ಯಾವ ಅಪಾಯಕ್ಕೂ ಗುರಿಯಾಗದೆ ಉಳಿಯುವನು. ಈ ರೀತಿಯ ಜೀವನಕ್ರಮದಲ್ಲಿ ಈಗ ಯೂರೋಪ್ ಖಂಡದಲ್ಲಿ ನಾವು ನೋಡುವ ಯುದ್ಧಗಳನ್ನು ನಡೆಸಿ ಸಮರ್ಥನೆ ಮಾಡುವ ದೇಶಭಕ್ತಿಗೆ ಅವಕಾಶವಿಲ್ಲ.

(ಆಶ್ರಮನಿಯಮಗಳ ಅನುಷ್ಠಾನ)

## ಸತ್ಯದಲ್ಲಿ ಸೌಂದರ್ಯ

ಎಲ್ಲ ವಸ್ತುಗಳಿಗೂ ಎರಡು ಮುಖಗಳಿವೆ—ಬಾಹ್ಯ, ಆಂತರಿಕ. ಯಾವುದಕ್ಕೆ ಹೆಚ್ಚು ಮನ್ನಣೆ ಕೊಡಬೇಕೆಂಬುದೇ ನನ್ನ ಮಟ್ಟಿಗೆ ಪ್ರಶ್ನೆ. ಆಂತರಿಕ ಗುಣಕ್ಕೆ ಎಷ್ಟು ಪೋಷಣೆ ಕೊಡುವುದೊ ಅಷ್ಟೇ ಪ್ರಮಾಣದಲ್ಲಿ ಬಾಹ್ಯದ ಬೆಲೆ. ಎಲ್ಲ ನಿಜವಾದ ಕಲೆಯೂ ಆತ್ಮನನ್ನು ವಿಕಾಸಗೊಳಿಸಬೇಕು. ಅದನ್ನು ಪ್ರಕಾಶಕ್ಕೆ ತರಬೇಕು. ಮನುಷ್ಯನ ಅಂತರಾತ್ಮನನ್ನು ಪ್ರಕಾಶಪಡಿಸುವ ಪ್ರಮಾಣದಲ್ಲಿ ಮಾತ್ರ ಬಾಹ್ಯರೂಪಗಳಿಗೆ ಬೆಲೆಯುಂಟು. ಈ ರೀತಿಯ ಕಲೆ ನನಗೆ ಬಹಳ ರುಚಿಸುತ್ತದೆ. ಆದರೆ ಈ ವಿಷಯವೂ ನನಗೆ ತಿಳಿದಿದೆ—ಅನೇಕರು ಕಲಾವಿದರೆಂದು ಅನಿಸಿಕೊಂಡಿರುವವರು, ತಾವೇ ಕಲಾವಿದರೆಂದು ಭಾವಿಸಿಕೊಂಡಿರುವವರು ತಮ್ಮ ಕೃತಿಗಳಲ್ಲಿ ಈ ಅಂತರಾತ್ಮನ ಅಶಾಂತತೆಯನ್ನೂ ಉತ್ಕರ್ಷವನ್ನೂ ಲೇಶಮಾತ್ರವಾದರೂ ರೂಪಿಸಿರುವುದಿಲ್ಲ.

ಎಲ್ಲ ನಿಜವಾದ ಕಲಾವಿಶೇಷವೂ ಆತ್ಮಸಾಕ್ಷಾತ್ಕಾರಕ್ಕೆ ಸಹಾಯಕವಾಗಬೇಕು. ನನ್ನ ಪೂರ್ತಿಗೆ ಹೇಳುವುದಾದರೆ ನನ್ನ ಆತ್ಮಸಾಕ್ಷಾತ್ಕಾರಕ್ಕೆ ಯಾವ ಬಾಹ್ಯರೂಪಗಳ ಆವಶ್ಯಕತೆಯೂ ಇಲ್ಲ. ಆದುದರಿಂದ ನನ್ನ ಜೀವನದಲ್ಲಿ ಪ್ರಭಾವಯುತವಾದ ಕಲೆಯಿದೆಯೆಂದು ನಾನು ಹೇಳಬಲ್ಲೆ—ಆದರೆ ನನ್ನ ಸುತ್ತುಮುತ್ತಲೂ ಕಲಾಕೃತಿಗಳೆಂದು ನೀವು ಹೇಳುವ ವಸ್ತುಗಳು ಕಾಣದೆ ಇರಬಹುದು. ನನ್ನ ಕೋಣೆಯ ಗೋಡೆಗಳು ಬರಿದಾಗಿರಬಹುದು; ಛಾವಣಿಯೇ ಇಲ್ಲದೆ ನಾನು ವಾಸಮಾಡಬಹುದು; ಏಕೆಂದರೆ ನಾನು ಹೀಗೆ

ಅನಂತವ್ಯಾಪ್ತಿಯೂ ಸೌಂದರ್ಯವೂ ಉಳ್ಳ ನಕ್ಷತ್ರಮಂಡಲವನ್ನು ನೋಡ ಬಹುದು. ಮೇಲೆ ನಭೋಮಂಡಲವನ್ನು ವೀಕ್ಷಿಸುತ್ತ ಅಲ್ಲಿ ದೇದೀಪ್ಯಮಾನ ವಾಗಿರುವ ಅಸಂಖ್ಯಾತ ನಕ್ಷತ್ರಗಳ ಸೊಗಸಾದ ದೃಶ್ಯಕ್ಕಿಂತಲೂ ಮಾನವನ ಕೃತಕವಾದ ಕಲಾಕೃತಿ ಏನುತಾನೆ ಕೊಡಬಲ್ಲದು ? ಆದರೆ ಕಲಾಕೃತಿಗಳೆಂದು ಗಣಿಸಲ್ಪಡುವ ವಿಷಯಗಳನ್ನು ನಾನು ನಿರಾಕರಿಸುತ್ತೇನೆಂದು ಇದರ ಅರ್ಥ ವಲ್ಲ; ಪ್ರಕೃತಿಯಲ್ಲಿ ನಿತ್ಯಸೌಂದರ್ಯದಿಂದ ಶೋಭಿಸುವ ವಸ್ತುಗಳೊಂದಿಗೆ ಹೋಲಿಸಿದರೆ ಈ ಕಲಾಕೃತಿಗಳು ಎಷ್ಟು ಅಸಮರ್ಪಕವಾದುವೆಂದು ಹೇಳು ವುದು ಮಾತ್ರ ನನ್ನ ಉದ್ದೇಶ್ಯ. ಮಾನವನ ಈ ಕಲಾಕೃತಿಗಳು ಆತ್ಮವು ತನ್ನ ಸಿದ್ಧಿಯನ್ನು ಪಡೆಯಲು ಎಷ್ಟರಮಟ್ಟಿಗೆ ಸಹಾಯಕವಾಗುವುವೊ ಅಷ್ಟೇ ಅವುಗಳ ಬೆಲೆ.

ಸತ್ಯದಲ್ಲಿಯೂ ಸತ್ಯದ ಮುಖಾಂತರವೂ ನಾನು ಸತ್ಯವನ್ನು ಕಾಣು ತ್ತೇನೆ. ಎಲ್ಲ ಸತ್ಯಗಳೂ—ಕೇವಲ ಸತ್ಯದ ವಿಚಾರಗಳು ಮಾತ್ರವಲ್ಲ, ಸತ್ಯ ವನ್ನು ಹೊರಸೂಸುವ ಚಹರೆಗಳು, ಸತ್ಯಯುತವಾದ ಚಿತ್ರಗಳು ಅಥವಾ ಹಾಡುಗಳು—ಇವೆಲ್ಲ ಅತ್ಯಂತ ಸುಂದರವಾದುವು. ಸತ್ಯದಲ್ಲಿ ಸಾಮಾನ್ಯವಾಗಿ ಜನರು ಸೌಂದರ್ಯವನ್ನು ಕಾಣುವುದಿಲ್ಲ—ಸಾಮಾನ್ಯ ಮನುಷ್ಯನು ಅದರಿಂದ ಓಡಿಹೋಗುತ್ತಾನೆ—ಅಥವಾ ಅತ್ತ ಕಡೆ ನೋಡುವುದಿಲ್ಲ. ಎಂದಿಗೆ ಜನರು ಸತ್ಯದಲ್ಲಿ ಸೌಂದರ್ಯವನ್ನು ಕಾಣುವರೊ ಅಂದಿಗೆ ನಿಜವಾದ ಕಲೆ ಉದಯ ವಾಗುವುದು.

ನಿಜವಾದ ಕಲಾವಿದನಿಗೆ—ಹೊರ ರೂಪು ಏನೇ ಇರಲಿ ಯಾವ ಮುಖ ದಲ್ಲಿ ಆಂತರಿಕದಲ್ಲಿರುವ ಸತ್ಯ ಪ್ರಕಾಶಿಸುವುದೊ ಅದೇ ಸುಂದರವಾದ ಮುಖ. ಸತ್ಯದ ವಿನಾ ಸೌಂದರ್ಯವಿಲ್ಲ. ಆದರೆ ಸತ್ಯವು ಸುಂದರವಾಗಿಲ್ಲದ ರೂಪಗಳನ್ನು ತಾಳಿ ಕಾಣಿಸಿಕೊಳ್ಳಬಹುದು. ಸೊಕ್ರಟೀಸನು ತನ್ನ ಕಾಲದಲ್ಲಿ ಬಹಳ ಸತ್ಯವಂತನೆಂದು ನಾವು ಕೇಳಿದೇವೆ. ಆದರೆ ಗ್ರೀಸ್ ಜನರ ಪೈಕಿ ಆತನು ಅತಿಕುರೂಪಿಯೆಂದು ಪ್ರಸಿದ್ಧವಾಗಿದೆ. ಆದರೆ ನನ್ನ ಅಭಿಮತದಲ್ಲಿ ಆತನೂ ಸುಂದರ ಪುರುಷನೆ—ಏಕೆಂದರೆ ಆತನು ಜೀವನಪರ್ಯಂತ ಸತ್ಯವನ್ನು ಅರಸು ತ್ತಿದ್ದ. ಈತನು ಕುರೂಪಿಯೆಂದು ಅನಿಸಿಕೊಂಡರೂ ಸುಪ್ರಸಿದ್ಧ ಶಿಲ್ಪಿಯಾದ ಫಿಡಿಯಸನು ಕಲೋಪಾಸಕನಾದುದರಿಂದ ಸಾಮಾನ್ಯವಾಗಿ ಹೊರರೂಪದ

ಸೌಂದರ್ಯವನ್ನು ಕಾಣುವವನಾದರೂ ಸೊಕ್ರಟೀಸನಲ್ಲಿ ಹುದುಗಿದ್ದ ಸತ್ಯದ ಸೌಂದರ್ಯವನ್ನು ಮೆಚ್ಚದೆ ಇರಲಿಲ್ಲ.

ಸತ್ಯ–ಅಸತ್ಯ—ಒಂದರ ಬದಿಗೆ ಮತ್ತೊಂದು ಇರುತ್ತದೆ. ಒಳ್ಳೆಯದು–ಕೆಟ್ಟದು ಜೊತೆಯಲ್ಲಿರುತ್ತವೆ. ಕಲಾವಿದನಲ್ಲಿಯೂ ಅನೇಕ ವೇಳೆ ವಸ್ತುಗಳನ್ನು ಗ್ರಹಿಸುವುದರಲ್ಲಿ ಸಾಧು–ಅಸಾಧು ರೀತಿಗಳು ಎರಡೂ ಇರುತ್ತವೆ. ಅವನ ಅವಗಾಹನೆ ಸಾಧುವಾಗಿದ್ದಾಗ ನಿಜವಾಗಿಯೂ ಸುಂದರವಾದ ಕೃತಿಗಳ ರಚನೆಯಾಗುತ್ತದೆ. ಜೀವನದಲ್ಲಿ ಇಂತಹ ಸಂದರ್ಭಗಳು ವಿರಳವಾದರೆ, ಕಲೆಯಲ್ಲಿಯೂ ಅವು ವಿರಳವೆ.

ಈ ಸುಂದರವಾದ ವಿಷಯಗಳು (ಸೂರ್ಯಾಸ್ತಮದ ಅಥವಾ ನಕ್ಷತ್ರಗಳ ರಾಶಿಯ ಮಧ್ಯೆ ಬೆಳಗುವ ಅರ್ಧಚಂದ್ರ) ಸತ್ಯದ್ಯೋತಕ—ಏಕೆಂದರೆ ಅವುಗಳನ್ನು ನೋಡಿದರೆ ಅವುಗಳ ಹಿಂದಿರುವ ಸೃಷ್ಟಿಕರ್ತನ ನೆನಪಾಗುತ್ತದೆ. ಸೃಷ್ಟಿಯ ಮಧ್ಯಬಿಂದುವಾಗಿರುವ ಸತ್ಯವಿಲ್ಲದಿದ್ದರೆ ಇವೆಲ್ಲ ಹೇಗೆ ಸುಂದರವಾದಾವು ? ಸೂರ್ಯಾಸ್ತದ ಅದ್ಭುತ ದೃಶ್ಯವನ್ನೊ ಚಂದ್ರನ ಸೊಗಸನ್ನೊ ನೋಡಿದಾಗ ನನ್ನ ಆತ್ಮದಲ್ಲಿ ಸೃಷ್ಟಿಕರ್ತನ ವಿಚಾರದಲ್ಲಿ ಭಕ್ತಿಭಾವ ಹುಟ್ಟುತ್ತದೆ. ಎಲ್ಲ ಸೃಷ್ಟಿಯಲ್ಲಿಯೂ ಜಗದೀಶ್ವರನನ್ನೂ ಅವನ ದಯೆಯನ್ನೂ ನಾನು ಕಾಣಲು ಯತ್ನಿಸುತ್ತೇನೆ. ಆದರೆ ನಾನು ಭಗವಂತನ ಚಿಂತನೆಯನ್ನು ಇವುಗಳ ಮೂಲಕ ಮಾಡದೆ ಹೋದ ಪಕ್ಷಕ್ಕೆ—ಈ ಸೂರ್ಯೋದಯವೂ ಸೂರ್ಯಾಸ್ತವೂ ಸಹ ಪ್ರತಿಬಂಧಕಗಳೇ ಆಗುವುವು. ಆತ್ಮದ ಉತ್ಕರ್ಷಕ್ಕೆ ಯಾವುದೇ ಪ್ರತಿಬಂಧಕವಾಗಲಿ ಅದು ಮೋಹ–ವಂಚನೆ—ನಮ್ಮ ಮೋಕ್ಷ ಮಾರ್ಗಕ್ಕೆ ಅಡ್ಡಿಬರುವ ದೇಹ ಹೇಗೊ ಹಾಗೆಯೆ.

(ಯಂಗ್ ಇಂಡಿಯಾ, ೧೩–೧೧_೧೯೨೪)

ಎಲ್ಲಕ್ಕೂ ಮೊದಲು ಅರಸಬೇಕಾದುದು ಸತ್ಯವನ್ನು. ಸೌಂದರ್ಯ, ಸೌಜನ್ಯ ತಾವಾಗಿ ಅನಂತರ ಬಂದು ಸೇರುತ್ತವೆ. ಈ ಮಾತನ್ನೇ ಏಸುಕ್ರಿಸ್ತ ತನ್ನ ಗಿರಿಸಂದೇಶದಲ್ಲಿ ಹೇಳಿದುದು. ನನ್ನ ಅಭಿಮತದಲ್ಲಿ ಏಸು ಉತ್ತಮೋತ್ತಮ ಕಲಾವಿದ; ಏಕೆಂದರೆ ಆತನು ಸತ್ಯದ ದರ್ಶನವನ್ನು ಪಡೆದಿದ್ದ, ಅದನ್ನು ಸಾರಿದ. ಅಂತೆಯೇ ಮಹಮ್ಮದ್ ಪೈಗಂಬರನೂ—ಏಕೆಂದರೆ ಅರಬ್ಬಿ

ಸಾಹಿತ್ಯದಲ್ಲೇ ಕುರಾನ್ ಅತ್ಯುತ್ಕೃಷ್ಟವಾದ ಗ್ರಂಥ—ಹೀಗೆಂದು ಅರಿತ ವಿದ್ವಾಂಸರು ಹೇಳುತ್ತಾರೆ. ಇವರಿಬ್ಬರೂ ಸತ್ಯಕ್ಕಾಗಿ ಮೊದಲು ಶ್ರಮಿಸಿದರು. ಅದರ ಫಲವಾಗಿ ಅವರ ವಾಣಿಯಲ್ಲಿ ಲಾವಣ್ಯವು ಸಹಜವಾಗಿ ಮೂಡಿಬಂತು. ಆದರೂ ಏಸುವಾಗಲಿ ಮಹಮ್ಮದ್‌ರಾಗಲಿ ಕಲೆಯ ಬಗ್ಗೆ ಬರೆಯಲಿಲ್ಲ. ಈ ಸತ್ಯ, ಈ ಸೌಂದರ್ಯಕ್ಕಾಗಿ ನಾನು ಹಂಬಲಿಸುತ್ತೇನೆ. ಇವಕ್ಕಾಗಿ ಬದುಕ ಬೇಕೆಂದಿದೇನೆ, ಸಾಯಬೇಕೆಂದಿದೇನೆ.

(ಯಂಗ್ ಇಂಡಿಯಾ, ೨೦-೧೧-೧೯೨೪)

ಇತರ ಕಡೆಗಳಲ್ಲಿ ಮಾಡುವಂತೆ ಇಲ್ಲಿಯೂ ಮಾನವಕೋಟಿಯ ದೃಷ್ಟಿ ಯಿಂದ ನಾನು ಯೋಚಿಸಬೇಕು. ಈ ಜನಸ್ತೋಮಕ್ಕೆ ಸತ್ಯವನ್ನು ಕಾಣು ವಂತಹ ಸೌಂದರ್ಯೋಪಾಸನೆಯನ್ನು ಮಾಡುವಂತೆ ನಾವು ಶಿಕ್ಷಣವನ್ನು ಕೊಡಲು ಸಾಧ್ಯವಿಲ್ಲ. ಆ ಸತ್ಯವನ್ನು ಮೊದಲು ಅವರಿಗೆ ತೋರಿಸಿ ಅನಂತರ ಸೌಂದರ್ಯವನ್ನು ಅವರು ಕಂಡುಕೊಳ್ಳಲಿ. ಹಸಿದಿರುವ ಲಕ್ಷಗಟ್ಟಲೆ ಜೀವಿಗಳಿಗೆ ಯಾವುದು ಉಪಯುಕ್ತವೊ ಅದೇ ನನ್ನ ಅಭಿಮತದಲ್ಲಿ ಸುಂದರವೂ ಅಹುದು. ಮೊದಲು ಅವರಿಗೆ ಅವಶ್ಯವಾದ ವಸ್ತುಗಳನ್ನು ಕೊಡೋಣ. ಜೀವನದಲ್ಲಿ ಸೊಗಸಿನ ಪದಾರ್ಥಗಳೂ ಅಲಂಕಾರಗಳೂ ಅನಂತರ ಬರುವುವು.

(ಯಂಗ್ ಇಂಡಿಯಾ, ೨೦-೧೧-೧೯೨೪)

ನಿಜವಾದ ಕಲೆ ರೂಪವನ್ನು ಮಾತ್ರವಲ್ಲದೆ—ಅದರ ಹಿಂದಿರುವುದನ್ನೂ ಗಮನಕ್ಕೆ ತೆಗೆದುಕೊಳ್ಳುತ್ತದೆ. ಕಲೆಯಲ್ಲಿ ವಿನಾಶಕಾರಿಯಾದುದೂ ಉಂಟು —ಚೇತನ ಕೊಡುವುದೂ ಉಂಟು. ನಿಜವಾದ ಕಲೆ ಅದರ ಉಪಾಸಕರ ಸುಖ, ಸಂತುಷ್ಟಿ ಮತ್ತು ಪರಿಶುದ್ಧತೆಯ ನಿದರ್ಶನವಾಗಿರಬೇಕು.

(ಯಂಗ್ ಇಂಡಿಯಾ, ೧೧-೮-೧೯೨೧)

ಒಬ್ಬ ವ್ಯಕ್ತಿಯ ಜೀವನ ಶುದ್ಧವಾಗಿರುವುದಕ್ಕೂ ಅವನ ಕಲೆಗೂ ಯಾವ ಸಂಬಂಧವೂ ಇಲ್ಲವೆಂಬ ಅಭಿಪ್ರಾಯವನ್ನು ರೂಢಿಸಿಕೊಂಡಿದ್ದೇವೆ. ಇದಕ್ಕಿಂತಲೂ ಅಸತ್ಯವಾದ ಮಾತು ಬೇರೊಂದಿಲ್ಲವೆಂದು ನನ್ನ ಸಮಗ್ರ ಅನುಭವದಿಂದ ನಾನು ಹೇಳಬಲ್ಲೆ. ನಾನು ಜೀವನದ ಅಂತಿಮಕಾಲಕ್ಕೆ ಸಮಿಪಿಸಿದಂತೆಲ್ಲ ಜೀವನದ ಪರಿಶುದ್ಧತೆಯೇ ಉತ್ತಮೋತ್ತಮವೂ ಅತ್ಯಂತ

ಸತ್ಯವೂ ಆದ ಕಲೆಯೆಂದು ನಾನು ಮನಗಾಣುತ್ತೇನೆ. ಒಳ್ಳೆ ಪಳಗಿದ ಕಂಠ ದಿಂದ ಇಂಪಾದ ಸಂಗೀತ ಹಾಡುವುದನ್ನು ಅನೇಕರು ಸಾಧಿಸಬಹುದು. ಆದರೆ ಪರಿಶುದ್ಧ ಜೀವನದ ಸಾಮರಸ್ಯದಿಂದ ಹೊರಸೂಸುವ ಇಂಪಾದ ಗೀತವನ್ನು ಕೆಲವರೇ ಸಾಧಿಸಬಲ್ಲರು. (ಹರಿಜನ, ೧೯-೨-೧೯೩೮)

## ಸತ್ಯ ಸ್ವತಸ್ಸಿದ್ಧವಾದುದು

ಸತ್ಯ ಸ್ವಾಭಾವಿಕವಾಗಿ ಸ್ವತಸ್ಸಿದ್ಧವಾದುದು. ಅದನ್ನು ಸುತ್ತಿಕೊಂಡಿರುವ ಅಜ್ಞಾನದ ಪೊರೆಗಳನ್ನು ತೆಗೆದುಹಾಕಿದ ಕೂಡಲೆ ಅದು ಪ್ರಕಾಶಿಸುವುದು. (ಯಂಗ್ ಇಂಡಿಯಾ, ೨೬-೫-೧೯೨೬)

ಸತ್ಯವನ್ನು ವ್ಯಕ್ತಗೊಳಿಸಿದಾಗ—ಅದರಲ್ಲಿ ಪ್ರಸರಿಸುವ ಶಕ್ತಿ ಅಡಕವಾಗಿದೆ—ಸೂರ್ಯ ತನ್ನ ಬೆಳಕನ್ನು ಬಚ್ಚಿಡಲಾಗದಂತೆ. ಈ ಸತ್ಯದ ಉಪಾಸನೆಯೊಂದೇ ನಾವು ಜೀವಿಸುವುದರ ಸಾರ್ಥಕತೆ.

ಸತ್ಯದ ಅಖಂಡರೂಪವನ್ನು ನಾವು ದೇಹಧಾರಿಗಳಾಗಿರುವವರೆಗೂ ಸಾಕ್ಷಾತ್ಕರಿಸಲು ಸಾಧ್ಯವಿಲ್ಲ. ಅದರ ಕಲ್ಪನೆಯನ್ನು ಮಾತ್ರ ಮಾಡಬಲ್ಲೆವು. ಈ ನಶ್ವರ ದೇಹದ ಮುಖಾಂತರ ಆ ಶಾಶ್ವತವಾದ ಸತ್ಯದ ದರ್ಶನವನ್ನು ಮಾಡಲು ಸಾಧ್ಯವಿಲ್ಲ. ಆದುದರಿಂದಲೆ ತುದಿಗೆ ಶ್ರದ್ಧೆಯನ್ನೇ ಅವಲಂಬಿಸಬೇಕು. (ಮಂಗಳ ಪ್ರಭಾತದಿಂದ)

ಈ ಬ್ರಹ್ಮಾಂಡವೆಲ್ಲವೂ ಒಂದು ಸಚೇತನ ನಿಯಮಕ್ಕನುಸಾರವಾಗಿ ಸಾಗುತ್ತಿದೆಯೆಂದು ಅಚಲವಾದ ಶ್ರದ್ಧೆ ಆವಶ್ಯಕ. ಇದಿಲ್ಲದಿದ್ದರೆ ನಮ್ಮ ಜೀವನವು ಪರಿಪೂರ್ಣತೆಯನ್ನು ಹೊಂದಲಾರದು—ಈ ಅರಿವು ನನ್ನ ಸ್ವಾನುಭವದಿಂದ ನನಗುಂಟಾಗಿದೆ. ಇಂತಹ ಶ್ರದ್ಧೆ ಇಲ್ಲದ ಮನುಷ್ಯನು ಸಮುದ್ರದಿಂದ ಹೊರದೂಡಲ್ಪಟ್ಟ ಒಂದು ಬಿಂದುವಿನಂತೆ—ಅಂತಹ ಬಿಂದುವಿಗೆ ನಾಶ ಸಿದ್ಧವಾಗಿರುವುದು. ಆದರೆ ಸಮುದ್ರದೊಂದಿಗೆ ಬೆರೆತಿರುವ ಪ್ರತಿಯೊಂದು ಬಿಂದುವೂ ಆ ಸಮುದ್ರದ ಗಾಂಭೀರ್ಯದಲ್ಲಿ ಪಾಲುಗೊಂಡಿದೆ. ಸಮುದ್ರದ ದಡದಲ್ಲಿ ಸಂಚಾರಮಾಡುವವರಿಗೆ ಸಮುದ್ರವು ಚೇತನಾರೂಪವಾದ ಪ್ರಾಣ

ವಾಯುವನ್ನು (Ozone) ಒದಗಿಸುವುದು. ಆ ಬಿಂದುವು ಈ ಯಶಸ್ಸಿಗೆ ಭಾಗಿಯಾಗುವುದು. (ಹರಿಜನ, ೨೫-೪-೧೯೩೬)

ಜಗದೀಶ್ವರನ ದರ್ಶನ ಪಡೆಯಲು ಕಾತರನಾಗಿದೇನೆ. ಆತ ಸತ್ಯ ಸ್ವರೂಪ. ಆದರೆ ಈ ಸತ್ಯವನ್ನು ನಾನು ಸಾಕ್ಷಾತ್ಕಾರ ಮಾಡಿಕೊಳ್ಳಬೇಕಾದರೆ —ನನ್ನ ಪ್ರಾಣ ಹೋದರೂ— ಪ್ರೇಮದ ನಿಯಮವನ್ನು ಪಾಲಿಸಬೇಕೆಂದು ನನ್ನ ಜೀವನದ ಆರಂಭ ದೆಸೆಯಿಂದಲೆ ನಾನು ಕಂಡುಕೊಂಡೆ.

(ಆತ್ಮಕಥೆಯಿಂದ)

ನಿತ್ಯದಲ್ಲಿ ನನ್ನ ಇರುವಿಕೆಯನ್ನು ಲೀನಗೊಳಿಸಿ ಜಗದೀಶ್ವರನ ಕೈಯಲ್ಲಿ ಕೇವಲ ಒಂದು ಮಣ್ಣಿನ ಹೆಂಟೆಯಂತಿರಲು ನನ್ನ ಹಂಬಲವನ್ನು ನಿಮ್ಮ ಮುಂದಿಟ್ಟಿದೇನೆ. ಹೀಗೆ ಮಾಡಿದೆನಾದರೆ ನನ್ನ ನೀಚವಾದ ಅಹಂಕಾರವನ್ನು ತೊಡೆದುಹಾಕಿ ನನ್ನ ಸೇವೆಯೂ ನಿಶ್ಚಿತ ಸ್ವರೂಪವನ್ನು ತಾಳುವುದು.

ಸೇವಾಪರವಾದ ಜೀವನವು ನಮ್ರತೆಯಿಂದ ಕೂಡಿರಬೇಕು. ಇತರರಿಗಾಗಿ ತನ್ನ ಪ್ರಾಣವನ್ನು ಅರ್ಪಿಸಲು ಬಯಸುವವನು ತನ್ನ ಸ್ಥಾನಮಾನಗಳನ್ನು ಕುರಿತು ಚಿಂತಿಸಲು ಅವಕಾಶವಿಲ್ಲ. ತಾಮಸಿಕವೃತ್ತಿಯನ್ನು ನಮ್ರತೆ ಎಂದು ತಿಳಿಯಬಾರದು. ಹಿಂದೂ ಧರ್ಮದಲ್ಲಿ ಹೀಗಾಗಿದೆ. ನಿಜವಾದ ನಮ್ರತೆಯೆಂದರೆ ಮಾನವರ ಸೇವೆಗಾಗಿ ಅನವರತವೂ ಸತತವೂ ದುಡಿಯುವ ಮನೋವೃತ್ತಿ. ಭಗವಂತನು ಒಂದು ಕ್ಷಣವಾದರೂ ವಿಶ್ರಾಂತಿಯಿಲ್ಲದೆ ಸದಾ ದುಡಿಯುತ್ತಿರುವನು. ಸಮುದ್ರದಿಂದ ಬೇರೆಯಾದ ಬಿಂದುವಿಗೆ ಒಂದು ಕ್ಷಣ ವಿಶ್ರಾಂತಿ ದೊರೆಯಬಹುದು; ಆದರೆ ಸಮುದ್ರದೊಂದಿಗೆ ಸೇರಿಕೊಂಡಿರುವ ಬಿಂದುವಿಗೆ ಆ ವಿಶ್ರಾಂತಿ ಇಲ್ಲ. ಈ ಮಾತು ನಮಗೂ ಅನ್ವಯಿಸುವುದು. ಸಮುದ್ರಕ್ಕೆ ಹೋಲಿಸಬಹುದಾದ ಭಗವಂತನೊಂದಿಗೆ ನಾವು ಸೇರಿಕೊಂಡರೆ ನಮಗೆ ವಿಶ್ರಾಂತಿಯೇ ಇಲ್ಲ. ವಿಶ್ರಾಂತಿಯ ಆವಶ್ಯಕತೆಯೂ ಇರುವುದಿಲ್ಲ. ನಮ್ಮ ನಿದ್ದೆಯೂ ಸಹ ಒಂದು ಕರ್ಮವಾಗುವುದು. ಏಕೆಂದರೆ ಆಗಲೂ ಅಂತರಂಗದಲ್ಲಿ ಭಗವಂತನನ್ನು ಧ್ಯಾನಿಸುತ್ತ ನಿದ್ರಿಸುವೆವು. ಈ ರೀತಿಯ ಅವಿಶ್ರಾಂತಿಯೇ ನಿಜವಾದ ವಿಶ್ರಾಂತಿಯಾಗುವುದು. ಈ ಬಗೆಯ ಎಡೆಯಿಲ್ಲದ ಚಲನವಲನದಲ್ಲಿಯೇ ನಿಜವಾದ ಶಾಂತಿಯ ರಹಸ್ಯ ಅಡಗಿರುವುದು. ಈ ಸಂಪೂರ್ಣ ಆತ್ಮಾರ್ಪಣದ ಸ್ಥಿತಿಯನ್ನು ವರ್ಣಿಸುವುದು ಕಷ್ಟ. ಆದರೆ

ಮಾನವ ಅನುಭವಕ್ಕೆ ನಿಲುಕದ ವಿಷಯವಲ್ಲ. ಆತ್ಮಾರ್ಪಣ ಮಾಡಿದವರು ಅನೇಕರು ಇದನ್ನು ಹೊಂದಿದಾರೆ. ನಾವೂ ಈ ಸ್ಥಿತಿಯನ್ನು ಹೊಂದುವುದು ಸಾಧ್ಯ. ಸತ್ಯಾಗ್ರಹ ಆಶ್ರಮವಾಸಿಗಳಾದ ನಾವು ಈ ಗುರಿಯನ್ನು ನಮ್ಮ ಮುಂದೆ ಇಟ್ಟುಕೊಂಡಿದೇವೆ. ನಮ್ಮ ಎಲ್ಲ ಆಚರಣೆಗಳನ್ನೂ, ಚಟುವಟಿಕೆಗಳನ್ನೂ ಈ ಧ್ಯೇಯವನ್ನು ಸಾಧಿಸಲು ಅಳವಡಿಸಿಕೊಳ್ಳಬೇಕು. ಈ ಮಾರ್ಗದಲ್ಲಿ ನಾವು ಮುಂದುವರಿಯುತ್ತಿರಬೇಕಾದರೆ—ಈ ಉದಾರಕಾರ್ಯ ಆ ಉತ್ತಮ ಕಾರ್ಯ ಹೀಗೆ ಮಾಡುತ್ತಿರಬೇಕಾದರೆ ನಮಗೇ—ತಿಳಿಯದೆ ಈ ಗುರಿಯನ್ನು ಒಂದು ದಿನ ಮುಟ್ಟುವೆವು. ಆದರೆ ಈ ಗುರಿಯನ್ನು ಮುಟ್ಟುವುದೇ ನಮ್ಮ ಉದ್ದೇಶವಾದರೆ ಅದು ಹೇಗೊ ನಮ್ಮನ್ನು ತಪ್ಪಿಸಿಕೊಂಡು ನಮಗೆ ನಿರಾಶೆ ಉಂಟುಮಾಡುವುದು. (ಮಂಗಳ ಪ್ರಭಾತದಿಂದ)

ಗುರಿಯು ಯಾವಾಗಲೂ ನಮಗೆ ದೂರವಾಗಿ ಸರಿಯುತ್ತ ಹೋಗುವುದು—ನಾವು ಮುಂದುವರಿದಂತೆಲ್ಲ. ನಾವು ಎಷ್ಟು ಅನರ್ಹರೆಂಬ ಮನವರಿಕೆಯೇ ಉಂಟಾಗುವುದು. ನಾವು ಮಾಡುವ ಪ್ರಯತ್ನದಿಂದ ನಮಗೆ ತೃಪ್ತಿ—ಗುರಿಸಾಧನೆಯಿಂದಲ್ಲ. ಪೂರ್ಣ ಪ್ರಯತ್ನವೇ ಪೂರ್ಣ ಜಯ.

(ಯಂಗ್ ಇಂಡಿಯಾ, ೯–೩–೧೯೨೮)

## ಸಾಕು ನನಗೊಂದು ಹೆಜ್ಜೆ

ನಮ್ಮನ್ನು ಆವರಿಸುವ ಕಗ್ಗತ್ತಲು ಅನಿಷ್ಟವಲ್ಲ—ಅದೇ ನಮಗೆ ಆಗಿರುವ ಅನುಗ್ರಹ. ನಮ್ಮ ಮುಂದಿರುವ ಒಂದು ಹೆಜ್ಜೆಯನ್ನು ಮಾತ್ರ ನೋಡುವ ಶಕ್ತಿಯನ್ನು ಭಗವಂತನು ನಮಗೆ ದಯಪಾಲಿಸಿದಾನೆ. ಆ ಹೆಜ್ಜೆ, ದೇವರ ಅನುಗ್ರಹದಿಂದ, ಬೆಳಗಿದರೆ ಸಾಕು. ನ್ಯೂಮನ್‌ನೊಂದಿಗೆ 'ಸಾಕು ನನಗೊಂದು ಹೆಜ್ಜೆ' ಎಂದು ನಾವು ಹಾಡಬಹುದು. ನಮ್ಮ ಹಿಂದಿನ ಅನುಭವದಿಂದ ಅದರ ಮುಂದಿನ ಹೆಜ್ಜೆಯೂ ನಮಗೆ ಬೆಳಗುವುದೆಂಬ ಭರವಸೆ ಉಂಟಾಗುವುದು. ಅಂದರೆ ನಮ್ಮನ್ನು ಆವರಿಸುವ ಕಗ್ಗತ್ತಲು ನಾವು ಎಣಿಸುವಷ್ಟು ಅಭೇದ್ಯವಾದುದಲ್ಲ. ಆದರೆ ಅದಕ್ಕೂ ಮುಂದೆ ನೋಡಬೇಕೆಂಬ ಅತ್ಯಾತುರದಲ್ಲಿ ಕತ್ತಲೆ ಅಭೇದ್ಯವಾದುದೆಂದು ತೋರುತ್ತದೆ. (ಹರಿಜನ, ೨೦–೮–೧೯೩೮)

ಮುಂದೆ ಮತ್ತಷ್ಟು ಕಠಿಣವಾದ ಮಾರ್ಗದ ಪ್ರಯಾಣವಿರುವುದೆಂದು ನಾನು ಬಲ್ಲೆ. ನಾನು ಶೂನ್ಯದಂತಾಗಬೇಕು. ತಾನಾಗಿಯೇ ಎಲ್ಲರಿಗಿಂತಲೂ ಕಡೆಯೆಂದು ಭಾವಿಸದವನಿಗೆ ಮೋಕ್ಷವಿಲ್ಲ. ಅಹಿಂಸೆ ನಮ್ರತೆಯ ಪರಾಕಾಷ್ಠೆ. ಸತ್ಯವನ್ನು ಹಿಂಸಾಮಾರ್ಗದಿಂದ ಕಂಡುಹಿಡಿಯಲಾಗದೆಂಬ ನಂಬಿಕೆ ನನ್ನಲ್ಲಿ ದಿನೇ ದಿನೇ ದೃಢವಾಗುತ್ತಲಿದೆ. ಎದುರಾಳಿಗಳೊಂದಿಗೆ ಸೌಜನ್ಯ ವರ್ತನೆ, ಅವರ ಮನೋದೃಷ್ಟಿಯನ್ನು ಅರ್ಥಮಾಡಿಕೊಳ್ಳುವ ಕಾತರತೆ ಅಹಿಂಸೆಯ 'ಓನಾಮ', ಆರಂಭ ಪಾಠ.

ಸತ್ಯದ ಬಗ್ಗೆ ನನ್ನ ಆಗ್ರಹವೇ ಒಪ್ಪಂದದ (ರಾಜಿಯ) ಸೊಗಸನ್ನು ಮನಗಾಣಿಸಿ ಕೊಟ್ಟಿದೆ. ಇದರಿಂದ ಎಷ್ಟೋ ವೇಳೆ ನನ್ನ ಪ್ರಾಣಕ್ಕೇ ಅಪಾಯ ಸಂಭವಿಸಿದೆ, ಮಿತ್ರರ ಅಸಮಾಧಾನಕ್ಕೆ ಗುರಿಯಾಗಿದೇನೆ. ಆದರೆ ಸತ್ಯ ವಜ್ರದಷ್ಟು ಕಠೋರ, ಕುಸುಮದಷ್ಟು ಕೋಮಲ. (ಆತ್ಮಕಥೆಯಿಂದ)

ಕೇವಲ ಸಿದ್ಧಾಂತವಾಗಿ ಉಳಿಯುವ ಸತ್ಯಕ್ಕೆ ಬೆಲೆ ಇಲ್ಲ. ಅದು ಮಾನವರಲ್ಲಿ ಅವತರಿಸಬೇಕು. ಆ ಮಾನವರು ಸತ್ಯಕ್ಕಾಗಿ ತಮ್ಮ ಪ್ರಾಣವನ್ನೂ ಅರ್ಪಿಸಲೂ ಸಿದ್ಧರೆಂದು ತೋರಿಸಬೇಕು.

(ಯಂಗ್ ಇಂಡಿಯಾ, ೨೨-೧೨-೧೯೩೦)

## ಮಾರ್ಗದರ್ಶಕನ ಆವಶ್ಯಕತೆ

ಎಲ್ಲರಲ್ಲಿಯೂ ಉತ್ತಮವಾದ ನೈತಿಕ ದೃಷ್ಟಿಯೂ ಮೇಧಾಶಕ್ತಿಯೂ ಇರುವುದೆಂದು ನಾವು ನಿರೀಕ್ಷಿಸಲಾಗದು. ಒಬ್ಬನು ತನ್ನ ಸ್ವಂತ ಪ್ರಯತ್ನದಿಂದ ಒಂದು ಸತ್ಯವನ್ನು ಕಂಡುಹಿಡಿದಿದ್ದರೆ ಆ ಸತ್ಯವನ್ನು ಇತರರೂ ಒಪ್ಪಬೇಕಾಗುತ್ತದೆ. ಆದರೆ ಈ ಇತರರಲ್ಲಿಯೂ ಇಷ್ಟೇ ಶಕ್ತಿ ಇರಬೇಕಾಗುತ್ತದೆ ಎಂದು ನಾನು ಹೇಳುವ ಹಾಗಿಲ್ಲ. ನಾನು ಇದನ್ನೇ ಒತ್ತಿಹೇಳಲು ಬಯಸುವುದು: ಪ್ರತಿಯೊಬ್ಬನೂ ತಾನೇ ಸ್ವತಂತ್ರವಾಗಿ ತನ್ನ ಸ್ವಂತ ಪ್ರಯತ್ನದಿಂದ ಸತ್ಯವನ್ನು ಕಂಡುಹಿಡಿಯಬೇಕೆಂಬ ಉದ್ದೇಶ್ಯವಿಲ್ಲದಿದ್ದರೆ—ಯಾರು ಸತ್ಯವನ್ನು ಕಂಡುಹಿಡಿದಿರುವರೊ ಅಂತಹವರನ್ನು ಮಾರ್ಗದರ್ಶಕರನ್ನಾಗಿ ಮಾಡಿಕೊಳ್ಳುವುದು ಆವಶ್ಯಕ.

# ಧ್ಯೇಯದಲ್ಲಿ ಶ್ರದ್ಧೆ

ಧ್ಯೇಯಗಳ ವಿಷಯದಲ್ಲಿ ನಾವು ಹೆದರಬೇಕಾಗಿಲ್ಲ. ಅವುಗಳನ್ನು ಕೊನೆಯವರೆಗೂ ಕಾರ್ಯಗತ ಮಾಡುವುದಕ್ಕೂ ಹಿಂಜರಿಯಬೇಕಾಗಿಲ್ಲ. ಒಂದು ಧ್ಯೇಯಕ್ಕೆ ಮೇರೆಯಾಗಲಿ ಮಿತಿಯಾಗಲಿ ಇರುವುದಿಲ್ಲ—ಅದೇ ಅದರ ಗುಣ ವಿಶೇಷ. ದೋಷಯುತ ಮಾನವರು ಆಧ್ಯಾತ್ಮಿಕ ಆದರ್ಶಗಳನ್ನು ಮುಟ್ಟ ಲಾರರು—ಆ ಆದರ್ಶಗಳ ಲಕ್ಷಣ ಅಗಮ್ಯವಾಗಿರುವುದು. ಆದರೆ ಅವು ಅಪರಿಮಿತವಾಗಿರುವುದರಿಂದ ಎಂದಿಗೂ ನಾವು ಹತ್ತಿರ ಹೋದಂತೆಲ್ಲ ನಮ್ಮಿಂದ ದೂರ ದೂರ ಸರಿಯುತ್ತಿರುವಂತೆ ಕಂಡರೂ ಅವು ನಮ್ಮ ಕೈಕಾಲುಗಳಿಗಿಂತಲೂ ನಮಗೆ ಸಮೀಪದಲ್ಲಿವೆ. ಏಕೆಂದರೆ ನಮ್ಮ ಕೈಕಾಲುಗಳಿಗಿಂತಲೂ ಅವು ನಿತ್ಯ ವಾದುವು. ನಮ್ಮ ಧ್ಯೇಯಗಳಲ್ಲಿ ನಮಗೆ ಈ ಬಗೆಯ ಶ್ರದ್ಧೆ ಇರುವುದೇ ನಮ್ಮ ಜೀವನದ ತಥ್ಯಸ್ವರೂಪ. ಇದೇ ಮಾನವನ ಸರ್ವಸ್ವ.

(ಯಂಗ್ ಇಂಡಿಯಾ, ೨೨-೧೧-೧೯೨೮)

# ಸತ್ಯದ ಪ್ರಚಾರ

ನಮ್ಮ ಸತ್ಯಾನ್ವೇಷಣೆಯನ್ನು ನಮ್ಮ ಪೂರ್ತಿಗೆ ಮಾಡಿಕೊಂಡು—ಅದನ್ನು ಜಗತ್ತಿನಲ್ಲಿ ಏತಕ್ಕೆ ಪ್ರಚಾರ ಮಾಡಬೇಕು—ಇತರರ ಮುಂದೆ ಇದನ್ನು ಏತಕ್ಕೆ ಒಡ್ಡಬೇಕು ?—ಏತಕ್ಕೆಂದರೆ ಈ ಅನ್ವೇಷಣೆ ಸೀಮಿತವಾಗಿದೆಯಲ್ಲ ಎಂದು ಆಕ್ಷೇಪಿಸಬಹುದು. ಈ ಪ್ರಶ್ನೆಗೆ ಉತ್ತರವಿಷ್ಟೆ : ಸತ್ಯವನ್ನು—ನೀವು ಏನು ಪ್ರಯತ್ನ ಮಾಡಿದರೂ ಅದನ್ನು ಒಂದು ಮೇರೆಯಲ್ಲಿ ಅಡಗಿಸಿಡಲು ಸಾಧ್ಯವಿಲ್ಲ. ಸೂರ್ಯನು ತನ್ನ ಜ್ಯೋತಿಯನ್ನು ಬಚ್ಚಿಡಲಾಗದಂತೆ—ಸತ್ಯ ಪ್ರಕಾಶಕ್ಕೆ ಬರುವುದರಲ್ಲಿಯೇ ಸತ್ಯದ ಪ್ರಸರಣಶಕ್ತಿಯೂ ಅಡಗಿದೆ.

ಸತ್ಯ—ಸ್ವತಸ್ಸಿದ್ಧ. ಅದನ್ನು ಆವರಿಸುವ ಅಜ್ಞಾನದ ಪೊರೆಯನ್ನು ತೆಗೆದುಹಾಕಿದ ಕೂಡಲೆ ಅದು ಪ್ರಕಾಶಿಸುವುದು.

ಬಲಾತ್ಕಾರ ಮಾಡುವುದರಲ್ಲಿ ನನಗೆ ಸ್ವಲ್ಪವೂ ನಂಬಿಕೆ ಇಲ್ಲ. ನನ್ನ ಅಭಿಪ್ರಾಯವನ್ನು ಜನರು ಒಪ್ಪುವಂತೆ ಮಾಡಲು ಅವರ ವಿವೇಚನೆಗೂ

ಅವರ ಹೃದಯಕ್ಕೂ ಮುಟ್ಟುವಂತೆ ನಾನು ಕೇಳಿಕೊಳ್ಳುತ್ತೇನೆ—ಮತ್ತೆ ಬೇರೆ ಅಲ್ಲ.

## ಸತ್ಯ ಮತ್ತು ಪ್ರಮಾದ

ತಪ್ಪುಗಳನ್ನು ಮಾಡಿ ಅವುಗಳನ್ನು ತಿದ್ದಿಕೊಳ್ಳುವುದರಿಂದಲೇ ಎಲ್ಲ ವಿಧವಾದ ಪ್ರಗತಿಯೂ ಸಾಧ್ಯವಾಗುತ್ತದೆ. ಒಳ್ಳೆಯದು ಯಾವುದೇ ಇದ್ದರೂ ಭಗವಂತನ ಕೈಯಿಂದ ಅದು ಇಳಿದುಬರುವುದಿಲ್ಲ. ಆದರೆ ನಾವು ಪದೇಪದೇ ಪ್ರಯೋಗಗಳನ್ನು ಕೈಗೊಂಡು, ತಪ್ಪುಗಳನ್ನು ಮಾಡಿ ಅವುಗಳನ್ನು ತಿದ್ದಿ ಕೊಳ್ಳುವುದರಿಂದ ನೂರು ಏಟಿನಿಂದ ಒಂದು ಶಿಲ್ಪವು ಸಿದ್ಧವಾಗುವಂತೆ ಒಳ್ಳೆಯದು ಉಂಟಾಗುತ್ತದೆ. ಇದನ್ನೆಲ್ಲ ನಾವೇ ಮಾಡಬೇಕು. ಇದೇ ವ್ಯಕ್ತಿ ವಿಕಾಸದ ನಿಯಮ. ಈ ನಿಯಮವೇ ಸಾಮಾಜಿಕ ಮತ್ತು ರಾಜಕೀಯ ವಿಕಾಸಕ್ಕೂ ಅನ್ವಯಿಸುವುದು. ತಪ್ಪು ಮಾಡುವ ಹಕ್ಕು—ಅಂದರೆ ಪ್ರಯೋಗ ಗಳನ್ನು ಮಾಡಲು ಅವಕಾಶ—ಇದೇ ಎಲ್ಲ ಪ್ರಗತಿಗೂ ಕಾರಣ. ಇದು ಸಾಮಾನ್ಯ ನಿಯಮ.

ಸತ್ಯದ ಉಪಾಸಕನು ವಿಶ್ವಾಸವನ್ನು ತಾಳಿರಬೇಕು. ಹಾಗೆಯೇ ಅವಿಶ್ವಾಸದಿಂದಲೂ ಕೂಡಿರಬೇಕು. ಸತ್ಯದಲ್ಲಿ ಅವನಿಗಿರುವ ಶ್ರದ್ಧೆ ಅವನಲ್ಲಿ ಪೂರ್ಣ ವಿಶ್ವಾಸ ತುಂಬಿರಬೇಕು. ಆದರೆ ಮಾನವಸ್ವಭಾವವು ದೋಷ ಯುತವೆಂಬ ವಿಷಯ ಅವನಲ್ಲಿ ನಮ್ರತೆಯನ್ನುಂಟುಮಾಡಬೇಕು. ಅವನ ತಪ್ಪು ಅವನಿಗೆ ತಿಳಿದ ಕೂಡಲೆ ಅವನು ಹಿಮ್ಮೆಟ್ಟಲು ಸಿದ್ಧನಾಗಿರುವಂತೆ ಮಾಡಬೇಕು. ಅವನು ಹಿಂದೆ ಹಿಮಾಲಯದಷ್ಟು ಪ್ರಬಲವಾದ ತಪ್ಪುಗಳನ್ನು ಮಾಡಿರುವುದು ಅವನ ವಿಶ್ವಾಸವನ್ನು ಕುಗ್ಗಿಸುವುದಿಲ್ಲ. ಅವನು ತಪ್ಪನ್ನು ಒಪ್ಪಿಕೊಂಡು ಪಶ್ಚಾತ್ತಾಪ ಪಡುವುದೇ ಅವನನ್ನು ಮುಂದಿನ ಕಾರ್ಯಕ್ಕೆ ಶಕ್ತಿವಂತನನ್ನಾಗಿ ಮಾಡುವುದು. ತನ್ನ ತಪ್ಪನ್ನು ಗುರುತಿಸುವುದರಿಂದ ಸತ್ಯದ ಸಾಧಕನು ಎಲ್ಲ ವಿಷಯಗಳನ್ನು ನಂಬುವುದರಲ್ಲಿಯೂ, ನಿರ್ಧಾರಗಳಿಗೆ ಬರುವುದರಲ್ಲಿಯೂ ಜಾಗರೂಕನಾಗಿರುವನು. ಒಮ್ಮೆ ನಿರ್ಧಾರಕ್ಕೆ ಬಂದ ಮೇಲೆ ಅವನು ಅಚಲನಾಗಿ ನಿಲ್ಲುವನು. ಅವನು ಮಾಡಿದ ತಪ್ಪುಗಳಿಂದ ಜನರು ಅವನ ವಿಷಯದಲ್ಲಿ ವಿಶ್ವಾಸ ಕಳೆದುಕೊಂಡಿರಬಹುದು. ಆದರೆ ಅವನು

ಒಂದು ನಿರ್ಧಾರಕ್ಕೆ ಬಂದಮೇಲೆ ತನ್ನ ನಿಲುವು ಸತ್ಯವೆನ್ನುವ ವಿಷಯದಲ್ಲಿ ಅವನಿಗೆ ಯಾವ ಶಂಕೆಯೂ ಇರಬಾರದು. ನಾನು ಮಾಡಿರುವ ತಪ್ಪುಗಳು—ಜನರ ವಿಷಯದಲ್ಲಿ ನನ್ನ ಸರಿಯಾದ ತಿಳಿವಳಿಕೆ ಇಲ್ಲದುದರ ಕಾರಣ—ನಾನು ಮಾಡಿದ ಅಂದಾಜುಗಳು ತಪ್ಪಾದುವು. ಅಷ್ಟೇ ಹೊರತು ನಾನು ಗ್ರಹಿಸಿದ ಸತ್ಯದಲ್ಲಿಯಾಗಲಿ ಅಹಿಂಸೆಯಲ್ಲಿಯಾಗಲಿ ನನ್ನ ವಿಶ್ವಾಸ ಕಡಿಮೆಯಾಗಿರಲಿಲ್ಲ—ಅದರ ಪ್ರಯೋಗದಲ್ಲಿಯೂ ದೋಷವಿರಲಿಲ್ಲ. ನಿಜವಾಗಿಯೂ ಈ ತಪ್ಪುಗಳು—ಕೂಡಲೆ ಅವುಗಳನ್ನು ನಾನು ಒಪ್ಪಿಕೊಂಡುದು—ಸತ್ಯ ಮತ್ತು ಅಹಿಂಸೆಯ ಮರ್ಮವನ್ನು ಚೆನ್ನಾಗಿ ಅರಿತು ಅವುಗಳ ಬಗ್ಗೆ ನನ್ನಲ್ಲಿ ನಿಶ್ಚಿತ ಬುದ್ಧಿಯನ್ನುಂಟುಮಾಡಿವೆ.

ನಾನು ಸತ್ಯವನ್ನು ಅರಸುತ್ತ ಸಾಗುತ್ತಿರುವಾಗ ಕೋಪ, ಸ್ವಾರ್ಥ, ದ್ವೇಷ—ಇವು ದೂರವಾಗುತ್ತವೆ; ಇಲ್ಲವಾದರೆ ನಾವು ಸತ್ಯವನ್ನು ಪಡೆಯಲಾರೆವು. ಕಾಮಕ್ರೋಧಾದಿಗಳಿಗೆ ಅಧೀನನಾದ ಮನುಷ್ಯ—ಅವನ ಉದ್ದೇಶ್ಯ ಎಷ್ಟೇ ಸಾಧುವಾಗಿದ್ದರೂ ಸತ್ಯವನ್ನು ಕಾಣಲಾರನು. ಸತ್ಯವನ್ನು ಹೊಂದಲು ಪ್ರೇಮ, ದ್ವೇಷ, ಸುಖ-ದುಃಖ ಮುಂತಾದ ದ್ವಂದ್ವಗಳಿಂದ ಪಾರಾಗಬೇಕು.

(ಆತ್ಮಕಥೆಯಿಂದ)

ಕೇವಲ ಲೋಕರೂಢಿಗೆ ಮರ್ಯಾದೆಯನ್ನು ತೋರಿಸುವುದಕ್ಕೆಂದು ಸತ್ಯದ ಉಪಾಸಕನು ಏನನ್ನೂ ಮಾಡಬಾರದು. ತನ್ನನ್ನು ತಾನು ತಿದ್ದಿಕೊಳ್ಳಲು ಸದಾ ಸಿದ್ಧನಾಗಿರಬೇಕು. ತಪ್ಪು ಮಾಡಿದ ಕೂಡಲೆ ಏನೇ ಆಗಲಿ ಅದನ್ನು ಒಪ್ಪಿಕೊಂಡು ಸೂಕ್ತ ಪ್ರಾಯಶ್ಚಿತ್ತ ಮಾಡಬೇಕು. (ಆತ್ಮಕಥೆಯಿಂದ)

ತಪ್ಪು ಮಾಡಿ ಅದನ್ನು ಒಪ್ಪಿಕೊಳ್ಳದೆ ಇರುವುದಕ್ಕಿಂತಲೂ ದೊಡ್ಡ ಅಪಮಾನವಿಲ್ಲ. (ಹರಿಜನ, ೮-೧೦-೧೯೩೮)

ತಪ್ಪನ್ನು ಒಪ್ಪಿಕೊಳ್ಳುವುದು ಕಸಬರಿಕೆಯಂತೆ—ಕಶ್ಮಲವನ್ನು ಗುಡಿಸಿ ಹಾಕಿ ನೆಲವನ್ನು ಪೂರ್ವಕ್ಕಿಂತಲೂ ಶುದ್ಧವನ್ನಾಗಿ ಮಾಡುವುದು. ನಮಗೆ ನಾವೇ ಅಸತ್ಯವಂತರಾಗಿರುವುದಕ್ಕಿಂತಲೂ ಪ್ರಪಂಚದ ಎದುರಿನಲ್ಲಿ ಅಸತ್ಯವಂತರೆಂದು ಕಾಣಿಸಿಕೊಳ್ಳುವುದು ಲಕ್ಷ ಪಾಲು ಮೇಲು

(ಯಂಗ್ ಇಂಡಿಯಾ, ೧೬-೨-೧೯೨೨)

# ಸತ್ಯದ ಬೆಲೆ

ನೀನು ದುಃಖದಲ್ಲಿ ಮುಳುಗಿ, ಮಲಿನವಸ್ತ್ರ ಧರಿಸಿ, ಬೂದಿಯಲ್ಲಿ ಹೊರಳಾಡಬೇಕಾದೀತು. ಎಷ್ಟು ಯಾತನೆಯನ್ನು ಅನುಭವಿಸುತ್ತೀಯೋ ಅಷ್ಟೇ ಪ್ರಮಾಣದಲ್ಲಿ ನೀನು ಮುಂದುವರಿಯುತ್ತಿರುವೆ. ಯಾತನೆಯು ಶುದ್ಧವಾದರೆ ಪ್ರಗತಿಯೂ ಹೆಚ್ಚಾಗಿರುವುದು. ಆದುದರಿಂದ ಏಸುಕ್ರಿಸ್ತನ ಸಂಕಷ್ಟಗಳು ದುಃಖದಲ್ಲಿ ತೊಳಲುವ ಪ್ರಪಂಚದ ಉದ್ಧಾರಕ್ಕೆ ಸಾಕಾದುವು. ಹೀಗೆ ಮುಂದೆ ಸಾಗುವಾಗ ತನ್ನ ನೆರೆಹೊರೆಯವರು ತಮಗೆ ಐಚ್ಛಿಕವಾಗಿಯೊ ಅನೈಚ್ಛಿಕವಾಗಿಯೊ ಪಟ್ಟ ಕಷ್ಟಗಳನ್ನು ಗಣನೆಗೆ ತೆಗೆದುಕೊಳ್ಳಲಿಲ್ಲ. ಇದೇ ರೀತಿಯಲ್ಲಿ ಹರಿಶ್ಚಂದ್ರನ ಸಂಕಷ್ಟಗಳು ಈ ಭೂಮಂಡಲದಲ್ಲಿ ಸತ್ಯದ ಸಾಮ್ರಾಜ್ಯವನ್ನು ನೆಲೆಗೊಳಿಸಲು ಸಾಕಾದುವು. ತಾನು ರಾಜ್ಯವನ್ನು ಬಿಡುವುದರಿಂದ ತನ್ನ ಪ್ರಜೆಗಳು ಅವರಿಗೆ ಬೇಡವಾದ ಕಷ್ಟಗಳನ್ನನುಭವಿಸುವರೆಂದು ಅವನಿಗೆ ತಿಳಿದಿರಬೇಕು. ಆದರೆ ಇದನ್ನು ಅವನು ಲಕ್ಷ್ಯಮಾಡಲಿಲ್ಲ. ಏಕೆಂದರೆ ಸತ್ಯದ ಮಾರ್ಗವನ್ನು ಹಿಡಿಯುವುದು ಅವನಿಗೆ ಅನಿವಾರ್ಯವಾಯಿತು.

(ಯಂಗ್ ಇಂಡಿಯಾ, ೧೬–೬–೧೯೨೦)

ಬುದ್ಧಭಗವಾನರು, ಏಸುಕ್ರಿಸ್ತ, ಮಹಮದ್ ಪೈಗಂಬರ್ ಇವರೆಲ್ಲರೂ ಏನು ಮಾಡಿದರು? ಸ್ವಾರ್ಥತ್ಯಾಗದಿಂದಲೂ ವೈರಾಗ್ಯದಿಂದಲೂ ಇವರೆಲ್ಲರ ಜೀವನವು ತುಂಬಿದುದು. ಪ್ರಾಪಂಚಿಕ ಸುಖವನ್ನೆಲ್ಲ ಬುದ್ಧನು ತೊರೆದನು —ತ್ಯಾಗವನ್ನೆಸಗಿ ಕಷ್ಟಗಳಿಗೆ ಗುರಿಯಾಗುವವರಿಗೆ ಮಾತ್ರ ಲಭಿಸುವ ಸುಖವನ್ನು ಎಲ್ಲರೊಂದಿಗೆ ಪಾಲುಗೊಳ್ಳಬೇಕೆಂದು ಆತನು ತ್ಯಾಗಮಾಡಿದನು.

ಎವರೆಸ್ಟ್ (ಗೌರೀಶಂಕರ) ಶಿಖರದ ಮೇಲೆ ಹತ್ತುವ ಪ್ರಯತ್ನದಲ್ಲಿ ಬೆಲೆಬಾಳುವ ಅನೇಕ ಪ್ರಾಣಗಳನ್ನು ಬಲಿಗೊಟ್ಟರೂ ಆ ಶಿಖರದ ಮೇಲೆ ಏನೋ ಕೆಲವು ವಿಷಯಗಳನ್ನು ತಿಳಿದುಬರುವುದು ಉತ್ತಮವೆಂದು ಭಾವಿಸುತ್ತಾರೆ. ಭೂಮಂಡಲದ ಬಹಳ ದೂರವಿರುವ ಪ್ರದೇಶಗಳಿಗೆ ಅಲ್ಲಿ ಒಂದು ಬಾವುಟವನ್ನು ಸ್ಥಾಪಿಸಿ—ಈ ಪ್ರಯತ್ನದಲ್ಲಿ ಎಷ್ಟು ಪ್ರಾಣನಷ್ಟವಾದರೂ ಚಿಂತೆಯಿಲ್ಲ— ಇದು ಒಳ್ಳೆಯ ಸಾಹಸಕಾರ್ಯವೆಂದು ತಿಳಿಯುತ್ತಾರೆ. ಹೀಗಿರುವಲ್ಲಿ ಸರ್ವಶಕ್ತವೂ ನಿತ್ಯವೂ ಆದ ಸತ್ಯದ ಅನ್ವೇಷಣೆಯಲ್ಲಿ ಒಬ್ಬರಲ್ಲ, ಲಕ್ಷವಲ್ಲ—

ಕೋಟಿಗಟ್ಟಲೆ ಜೀವಿಗಳು ಬಲಿದಾನ ಮಾಡಿದರೂ ಅದು ತೇಜೋಮಯವಾದ ಯಶಸ್ಸನ್ನು ದೊರಕಿಸುವುದಲ್ಲವೆ ? ನನ್ನಂತಹ ನೂರಾರು ಜನರು ಮಡಿಯಲಿ —ಆದರೆ ಸತ್ಯಕ್ಕೆ ಜಯವಾಗಲಿ. ನನ್ನಂತಹ ದೋಷಯುತರಾದ ಮಾನವರಿಗಾಗಿ ಸತ್ಯದ ಉದಾತ್ತ ಧ್ಯೇಯವನ್ನು ಒಂದು ಕೂದಲೆಳೆಯಷ್ಟೂ ನಾವು ಕಡಮೆ ಮಾಡಲಾಗದು.

ನನ್ನ ವಿಷಯದಲ್ಲಿ ನಾನೊಂದು ತೀರ್ಪು ಕೊಡಬೇಕಾದರೆ ನಾನು ಸತ್ಯದಷ್ಟೇ ಕಠೋರವಾಗಿರಬೇಕು. ಇತರರೂ ನನ್ನ ವಿಚಾರದಲ್ಲಿ ಹೀಗೆಯೇ ನಡೆದುಕೊಳ್ಳಲೆಂದು ನಾನು ಬಯಸುತ್ತೇನೆ. ಈ ರೀತಿಯಲ್ಲಿ ನನ್ನನ್ನು ನಾನು ಪರೀಕ್ಷಿಸಿಕೊಂಡರೆ ಸೂರದಾಸನಂತೆಯೇ ನಾನೂ ಸಹ

> ಮೋ ಸಮ ಕೌನ ಕುಟಿಲ ಖಲ ಕಾಮಿ ?
> ಜಿನ್ ತನ್ ದಿಯೋ ತಾಹಿ ಬಿಸರಾಯೋ ಐಸೊ ನಿಮಕ ಹರಾಮಿ ।

ಎಂದು ಹೇಳಬೇಕಾಗುವುದು. (ನನಗೆ ಸಮನಾದ ಕುಟಿಲವಾದ ಖಳನೂ ಕಾಮಿಯೂ ಯಾರುಂಟು ? ದೇಹವನ್ನು ಕೊಟ್ಟ ದೇವನನ್ನೇ ನಾನು ವಂಚಿಸಿರುವೆನು—ನನಗಿಂತಲೂ ದ್ರೋಹಿಯುಂಟೆ ?)

## ನನ್ನ ಸತ್ಯದ ಪ್ರಯೋಗದಲ್ಲಿ ನಿರಪೇಕ್ಷತೆ ಅಥವಾ ಪರಿಪೂರ್ಣತೆ ಇಲ್ಲ

ನಾನು ಒಬ್ಬ ವಿಜ್ಞಾನಿಯಂತೆ ಪ್ರಯೋಗಗಳನ್ನು ನಡೆಸುತ್ತೇನೆ. ವಿಜ್ಞಾನಿಯೂ ಎಷ್ಟೇ ಖಚಿತವಾಗಿಯೂ ಮುಂದಾಲೋಚನೆಯಿಂದಲೂ ನಾಜೂಕಾಗಿಯೂ ಪ್ರಯೋಗಗಳನ್ನು ನಡೆಸಿದರೂ ತನ್ನ ಸಿದ್ಧಾಂತಗಳೇ ಕೊನೆಯ ಮಾತೆಂದು ಹೇಳಲಾರ. ಯಾವಾಗಲೂ ಅವುಗಳ ವಿಚಾರದಲ್ಲಿ ಬಿಚ್ಚುಮನಸ್ಸಿನಿಂದಿರುವನು. ನಾನು ಆಳವಾಗಿ ಆತ್ಮಶೋಧನೆಯನ್ನು ಮಾಡಿದೇನೆ—ನನ್ನನ್ನು ನಾನೇ ಕೂಲಂಕಷವಾಗಿ ವಿಮರ್ಶೆಮಾಡಿಕೊಂಡಿದೇನೆ. ಪ್ರತಿಯೊಂದು ಮಾನಸಿಕ ಪ್ರವೃತ್ತಿಯನ್ನೂ ವಿಶ್ಲೇಷಣ ಮಾಡಿ ವಿವರಿಸಿಕೊಂಡಿದೇನೆ. ಆದರೂ ನನ್ನ ನಿರ್ಧಾರಗಳು ಅಂತಿಮವೆಂದಾಗಲಿ, ದೋಷರಹಿತವೆಂದಾಗಲಿ ಹೇಳಿಕೊಳ್ಳಲಾರೆ. ನಾನು ಒಂದು ಮಾತನ್ನೇನೊ ಹೇಳಬಯಸು

ತ್ತೇನೆ. ಅದೇನೆಂದರೆ ಆ ಹೊತ್ತಿಗೆ ಅವು ಸತ್ಯವೆಂದು ಅನಿಸುತ್ತವೆ, ಅಷ್ಟರ ಮಟ್ಟಿಗೆ ಅವೇ ನನ್ನ ಪೂರ್ತಿಗೆ ಅಂತಿಮ ಸತ್ಯ. ಹೀಗಿಲ್ಲದಿದ್ದರೆ ಅವುಗಳ ಆಧಾರದ ಮೇಲೆ ನಾನು ಯಾವ ಕಾರ್ಯವನ್ನು ಕೈಗೊಳ್ಳಲೂ ಸಾಧ್ಯವಾಗ ಲಾರದು. ಒಂದೊಂದು ಹೆಜ್ಜೆಗೂ ನಾನು ನಿಂತು ವಿಚಾರ ಮಾಡಿ ಕಾರ್ಯ ಮಾಡಿದೇನೆ. ನನ್ನ ವಿವೇಚನೆಗೂ ಹೃದಯಕ್ಕೂ ಅವು ಸರಿಯೆಂದು ತೋರುವ ಪರ್ಯಂತ ನನ್ನ ಸಿದ್ಧಾಂತಗಳನ್ನೇ ನಾನು ದೃಢವಾಗಿ ಹಿಡಿದಿರಬೇಕು.

(ಆತ್ಮಕಥೆಯಿಂದ)

ಒಂದು ಸಮಯದಲ್ಲಿ ಶುದ್ಧವಾದ ಹೃದಯವು ಏನು ಭಾವಿಸುತ್ತದೆಯೋ ಅದೇ ಸತ್ಯ. ಅದರ ಮೇಲೆ ಅಚಲವಾಗಿ ನಿಂತರೆ ನಿರ್ದುಷ್ಟವಾದ ಸತ್ಯವನ್ನು ಹೊಂದಲು ಸಾಧ್ಯ. (ಹರಿಜನ, ೨೭-೧೧-೧೯೪೯)

## ಸತ್ಯಾನ್ನಾಸ್ತಿ ಪರೋ ಧರ್ಮಃ

### (ಸತ್ಯಕ್ಕೆ ಮಿಗಿಲಾದ ಧರ್ಮವಿಲ್ಲ)

ಸತ್ಯಕ್ಕೆ ಮಿಗಿಲಾದ ಧರ್ಮವಿಲ್ಲ. (ನೀತಿಧರ್ಮದಿಂದ)

ಧರ್ಮವೆಂದರೆ ನನ್ನ ಅರ್ಥ ಕೇವಲ ಹಿಂದೂ ಧರ್ಮವೆಂದಲ್ಲ. ಹಿಂದೂ ಧರ್ಮ ಎಲ್ಲ ಧರ್ಮಕ್ಕಿಂತಲೂ ನನಗೆ ಮಾನ್ಯವಾದುದು. ಆದರೆ ನಾನು ಧರ್ಮವನ್ನು ವ್ಯಾಪಕಾರ್ಥದಲ್ಲಿ—ಹಿಂದೂ ಧರ್ಮಕ್ಕೂ ಅತೀತವಾದ, ಮಾನವ ಸ್ವಭಾವವನ್ನು ಪರಿವರ್ತನೆಮಾಡುವ, ಸತ್ಯಕ್ಕೆ ಎಡೆಬಿಡದೆ ಕೂಡಿಕೊಂಡಿರುವ, ಸದಾ ನಮ್ಮನ್ನು ಪವಿತ್ರಮಾಡುವ ಧರ್ಮ ಯಾವುದೋ—ಆ ಅರ್ಥದಲ್ಲಿ ಬಳಸುತ್ತೇನೆ. ಮಾನವಸ್ವಭಾವದಲ್ಲಿ ಇದು ಅಚ್ಚಳಿಯದ ಅಂಶವಾಗಿದೆ. ಇದು ಪೂರ್ತಿ ವಿಕಾಸಕ್ಕೆ ಬರಲು ಮಾನವನು ಎಲ್ಲ ಬಗೆಯ ತ್ಯಾಗಕ್ಕೂ ಸಿದ್ಧ ನಾಗುತ್ತಾನೆ. ಅದನ್ನು ಪಡೆಯುವವರೆಗೂ ಸದಾ ಜಗತ್ಕರ್ತನನ್ನು ತಿಳಿಯಲು ಪ್ರಯತ್ನಮಾಡುತ್ತ ಆ ಜಗತ್ಕರ್ತನಿಗೂ ತನಗೂ ಇರುವ ಸಂಬಂಧವನ್ನು ತಿಳಿಯುವವರೆಗೂ ಆತ್ಮಶಾಂತಿ ದೊರೆಯುವುದಿಲ್ಲ.

(ಯಂಗ್ ಇಂಡಿಯಾ, ೧೨-೫-೧೯೨೦)

**ನೈತಿಕ ಜೀವನಕ್ಕೂ ಶೀಲಕ್ಕೂ ಸತ್ಯವೇ ಮೂಲಾಧಾರ.**

**(ನೀತಿಧರ್ಮದಿಂದ)**

## ನಿರ್ಭೀತಿ ಮತ್ತು ಸತ್ಯ

ಇತರ ಉತ್ತಮ ಗುಣಗಳು ಬೆಳೆಯಲು ನಿರ್ಭೀತಿ ಅತ್ಯಾವಶ್ಯಕ. ಸತ್ಯವನ್ನು ಅರಸಲು, ಪ್ರೀತಿಯ ಭಾವನೆಯನ್ನು ಪಡೆದಿರಲು ನಿರ್ಭಯವಿಲ್ಲದೆ ಹೇಗೆ ಸಾಧ್ಯವಾದೀತು? ಕವಿ ಪ್ರೀತಮ್ ಹೇಳುವಂತೆ ಹರಿಯ ಮಾರ್ಗ ವೀರರ ಮಾರ್ಗ—ಹೇಡಿಗಳದಲ್ಲ. ಇಲ್ಲಿ ಹರಿಯೆಂದರೆ ಸತ್ಯ—ವೀರರೆಂದರೆ ನಿರ್ಭಯದಿಂದ ಕೂಡಿರುವವರು. (ಮಂಗಳ ಪ್ರಭಾತದಿಂದ)

ಯಾರು ಭಯಗ್ರಸ್ತನಾಗುತ್ತಾನೋ ಅವನು ಸತ್ಯವನ್ನಾಗಲಿ ಅಹಿಂಸೆಯನ್ನಾಗಲಿ ಅನುಸರಿಸುವುದು ದುಸ್ತರ. ನಿಜವಾದ ನಿರ್ಭಯವುಳ್ಳವನು ತನ್ನ ಸತ್ಯದ ಬಲದಿಂದ, ಆತ್ಮಶಕ್ತಿಯಿಂದ, ಇತರರ ದಾಳಿಯಿಂದ ತನ್ನನ್ನು ರಕ್ಷಿಸಿಕೊಳ್ಳುವನು.

## ವಿದ್ಯಾವಂತರ ಕಸಬುಗಳೂ ಸತ್ಯವೂ

(ಒಬ್ಬ ನ್ಯಾಯಾಧೀಶರು ತನ್ನಂತಹವರು ಸಾಕ್ಷ್ಯವನ್ನು ಬರೆದಿಟ್ಟುಕೊಳ್ಳುವುದರಲ್ಲಿಯೂ ತೀರ್ಪುಗಳನ್ನು ಕೊಡುವುದರಲ್ಲಿಯೂ ನ್ಯಾಯಾಸ್ಥಾನಗಳಲ್ಲಿ ಕಂಡುಬರುವ ಸುಳ್ಳುಗಾರಿಕೆಯನ್ನು ಹೇಗೆ ತಡಗಟ್ಟಬೇಕೆಂದು ಗಾಂಧೀಜಿಯನ್ನು ಪ್ರಶ್ನಿಸಿದರು—ಅದಕ್ಕೆ ಗಾಂಧೀಜಿಯ ಉತ್ತರವಿದು.)

ನ್ಯಾಯಾಸ್ಥಾನಗಳ ಸುತ್ತುಮುತ್ತಲಿನ ವಾತಾವರಣ ಹೇಯವಾದುದು ಎಂದು ಅದನ್ನು ನೋಡಿದವರು ಬಲ್ಲರು. ನ್ಯಾಯನಿರ್ಣಯವಿಧಾನ ಹೇಗೆ ಇರಬೇಕೆಂಬ ವಿಚಾರದಲ್ಲಿ ನನ್ನ ಅಭಿಪ್ರಾಯಗಳು ಕ್ರಾಂತಿಕಾರಕವಾದುವು. ಆದರೆ ಅವುಗಳನ್ನು ನಾನು ಸಾರಿದರೆ ಅರಣ್ಯರೋದನವಾದೀತು. ಈ ಪದ್ಧತಿಯಿಂದ ಲಾಭ ಪಡೆಯುತ್ತಿರುವವರು ಯಾವ ದೊಡ್ಡ ಸುಧಾರಣೆಗೂ ಸಮ್ಮತಿಸಲಾರರು. ಅದಕ್ಕೆ ನಮ್ಮ ದೇಶವು ಸತ್ಯ ಮತ್ತು ಅಹಿಂಸಾಮಾರ್ಗದಲ್ಲಿ ಮುಂದುವರಿದು ಸ್ವಾತಂತ್ರ್ಯ ಗಳಿಸಬೇಕು. ಆ ವೈಭವಪೂರ್ಣವಾದ ಘಟನೆ ನಡೆದಾಗ ನ್ಯಾಯ ಮತ್ತು ಔಷಧಗಳ ವಿತರಣೆ ಈಗ ಎಷ್ಟು ತುಟ್ಟಿಯಾಗಿದೆಯೋ ಅಷ್ಟೂ ಅಗ್ಗವಾಗಿರುವುದು. ಈಗ ಎಷ್ಟು ಅಹಿತವೂ ಅನಿಷ್ಟವೂ ಆಗಿದೆಯೋ

ಆಗ ಅಷ್ಟು ಹಿತವೂ ಇಷ್ಟಕರವೂ ಆಗುವುದು. ನೀವು ನಿಮ್ಮ ನ್ಯಾಯಮೂರ್ತಿಗಳ ಗದ್ದುಗೆಯಿಂದಿಳಿದು ಬಡತನವನ್ನು ಸ್ವೀಕಾರಮಾಡಿ ಬಡವರ ಸೇವೆಯನ್ನು ಕೈಗೊಳ್ಳಬೇಕು. ಈ ಉಪದೇಶವು ಬಹಳ ಸಾಹಸಯುತವಾದುದು. ಆದರೆ ಸಾಮಾನ್ಯ ಉಪದೇಶವೆಂದರೆ—ನೀವು ಇರುವ ಸ್ಥಳದಲ್ಲಿಯೇ ಇದ್ದುಕೊಂಡು ನಿಮ್ಮನ್ನು ಸುತ್ತುಗಟ್ಟುವ ಕಷ್ಟಗಳನ್ನು ಎದುರಿಸಿ ನಿಮ್ಮ ಶಕ್ತಿಯನ್ನೆಲ್ಲ ವಿನಿಯೋಗಿಸಿ ಸೇವೆಮಾಡುವುದು, ನಿಮ್ಮ ವೈಯುಕ್ತಿಕ ಜೀವನವನ್ನು ಸರಳವನ್ನಾಗಿ ಮಾಡಿಕೊಳ್ಳುವುದು, ನಿಮ್ಮ ವರಮಾನದ ಉಳಿತಾಯವನ್ನು ಬಡವರ ಸೇವೆಗಾಗಿ ಮೀಸಲಾಗಿಡುವುದು. (ಹರಿಜನ, ೧೭–೨–೧೯೪೦)

ನ್ಯಾಯದ ವಿತರಣೆಯನ್ನು ಒಂದು ಆಧ್ಯಾತ್ಮಿಕ ಸಾಧನೆಯನ್ನಾಗಿ ಮಾಡಲು ನೀವು ಅಪೇಕ್ಷಿಸಿದರೆ ನಿಮ್ಮ ಉದ್ಯೋಗವನ್ನು ಹಣ ಗಳಿಸುವುದಕ್ಕಾಗಿ ಮಾಡದೆ ದೇಶಸೇವೆಗಾಗಿ ಕೈಗೊಳ್ಳಬೇಕು.

(ಸಿಂಹಳದಲ್ಲಿ ಗಾಂಧೀಜಿಯ ಸಂಗಡ—ಮಹಾದೇವ ದೇಸಾಯಿ)

ನಿಮ್ಮ ಶಕ್ತಿವಿಶೇಷಗಳನ್ನು ಹಣವನ್ನು ಗಳಿಸುವುದರಲ್ಲಿ ವ್ಯಯಮಾಡದೆ ದೇಶಸೇವೆಗೆಂದು ಮೀಸಲಾಗಿಡಿ. ನೀವು ವೈದ್ಯರಾದರೆ ಭಾರತದಲ್ಲಿ ಬೇಕಾದಷ್ಟು ರೋಗರುಜಿನಗಳಿವೆ—ಅವುಗಳ ಪರಿಹಾರವನ್ನು ನೀವು ಮಾಡಬಹುದು. ನೀವು ವಕೀಲರಾದರೆ ದೇಶದಲ್ಲಿ ವ್ಯಾಜ್ಯಗಳಿವೆ, ವ್ಯವಹಾರಗಳಿವೆ; ಅವುಗಳನ್ನು ತೀರಿಸಬಹುದು. ಇರುವ ವ್ಯಾಜ್ಯಗಳನ್ನು ಮತ್ತಷ್ಟು ಹೆಚ್ಚಿಸದೆ ಅವುಗಳನ್ನು ರಾಜಿಮಾಡಿಸಿ ಕೋರ್ಟುವ್ಯವಹಾರಗಳನ್ನು ತಪ್ಪಿಸಬಹುದು. ನೀವು ಇಂಜನೀಯರಾದರೆ ನಮ್ಮ ಜನಕ್ಕೆ ಅನುಕೂಲಕ್ಕೂ ಆವಶ್ಯಕತೆಗಳಿಗೂ ತಕ್ಕಂತೆ ಆರೋಗ್ಯಕರವೂ ಆದ ಒಳ್ಳೆಯ ಗಾಳಿ–ಬೆಳಕು ಇರುವ ಮಾದರಿ ಮನೆಗಳನ್ನು ಕಟ್ಟಬಹುದು. ನೀವು ಕಲಿತ ವಿದ್ಯೆಗಳಲ್ಲಿ ಸರಿಯಾಗಿ ವಿನಿಯೋಗ ಮಾಡಲಾಗದುದು ಒಂದಿಲ್ಲ. ಎಲ್ಲಕ್ಕೂ ಅವಕಾಶವಿದೆ.

(ಯಂಗ್ ಇಂಡಿಯಾ, ೫–೧೧–೧೯೩೧)

ಉದ್ಯೋಗದಲ್ಲಿರುವವರು, ವೈದ್ಯರಾಗಲಿ, ವಕೀಲರಾಗಲಿ, ಯಾರೇ ಆಗಲಿ ತಮ್ಮ ವರಮಾನವನ್ನು ಹೆಚ್ಚಿಸಿಕೊಳ್ಳಲು ಜೂಜಾಟಕ್ಕೆ ಹೋಲುವ ಅದೃಷ್ಟಪರೀಕ್ಷೆಯ ಮಾರ್ಗಗಳನ್ನು ಹಿಡಿಯಬಾರದು. ಇಂತಹ ಹವ್ಯಾಸ

ಗಳಿಂದ ಅವರು ಸ್ವಂತ ಕೆಲಸದಲ್ಲಿ ಅಜಾಗರೂಕರಾಗುತ್ತಾರೆ. ಅನೇಕ ವರ್ಷ ಗಳಲ್ಲಿ ಈ ಅಭಿಪ್ರಾಯವನ್ನು ನಾನು ಉಳ್ಳವನಾಗಿದೇನೆ. ವೈದ್ಯರೂ ವಕೀಲರೂ ತಮ್ಮ ವೃತ್ತಿಯನ್ನು ಬಿಟ್ಟು ಬೇರೆ ಮಾರ್ಗಗಳಲ್ಲಿ ಹಣ ಗಳಿಸಿ ತಮ್ಮ ಹೆಸರನ್ನು ಕೆಡಿಸಿಕೊಂಡಿರುವ ನಿದರ್ಶನಗಳಿವೆ. (ಹರಿಜನ, ೧೬-೧೨-೧೯೩೯)

## ಮಾತಿನಲ್ಲಿ ಸತ್ಯ

ಅಹಿತವಾದ ಮಾತನ್ನು—ಆ ಮಾತು ಸತ್ಯವೆಂದು ನಂಬಿ—ಹೇಳಿದರೂ ಸರಿಯೆ, ಬರೆದರೂ ಸರಿಯೆ ಅದು ಹಿಂಸಾಕೃತ್ಯವಾಗಲಾರದು. ಹಿಂಸೆಯ ಮುಖ್ಯ ಲಕ್ಷಣವೇನೆಂದರೆ—ಆ ಮಾತೇ ಆಗಲಿ, ಯೋಚನೆಯೇ ಆಗಲಿ, ಕಾರ್ಯವೇ ಆಗಲಿ ಅದರ ಹಿನ್ನೆಲೆಯಾಗಿ ಹಿಂಸೆಮಾಡುವ, ಎದುರಾಳಿಯನ್ನು ನೋಯಿಸುವ ಉದ್ದೇಶ್ಯವಿರಬೇಕು.

ಸಭ್ಯತೆಯನ್ನು ಕಾಪಾಡಬೇಕೆಂದೊ, ಇತರರನ್ನು ನೋಯಿಸಬಾರ ದೆಂದೊ, ಒಂದು ತಪ್ಪು ತಿಳಿವಳಿಕೆಯಿಂದ ತಮ್ಮ ಮನಸ್ಸಿನಲ್ಲಿರುವುದನ್ನು ಕೆಲವರು ಹೇಳುವುದಿಲ್ಲ. ಇದರಿಂದ ಅವರ ವರ್ತನೆ ಕಪಟವಾಗುತ್ತದೆ; ಆದರೆ ವ್ಯಕ್ತಿಗಳಲ್ಲಿಯೂ ಸಮಾಜದಲ್ಲಿಯೂ ಮಾನಸಿಕವಾಗಿ ಅಹಿಂಸೆಯು ಬೆಳೆಯ ಬೇಕಾದರೆ ನಿಜವನ್ನು ಹೇಳಲೇಬೇಕಾಗುತ್ತದೆ. ಅದು ಆ ಹೊತ್ತಿಗೆ ಕಟು ವಾಗಿರಬಹುದು, ಜನಪ್ರಿಯವಾಗಿಲ್ಲದೆ ಇರಬಹುದು.

(ಹರಿಜನ, ೧೯-೧೨-೧೯೩೬)

## ಸತ್ಯಂ ಬ್ರೂಯಾತ್, ಪ್ರಿಯಂ ಬ್ರೂಯಾತ್ ನ ಬ್ರೂಯಾತ್ ಸತ್ಯಂ ಅಪ್ರಿಯಂ

ನನ್ನ ಅಭಿಪ್ರಾಯದಲ್ಲಿ ಈ ಸಂಸ್ಕೃತ ವಾಕ್ಯದ ಅರ್ಥವಿಷ್ಟೇ—ಸತ್ಯವನ್ನು ಮೃದುವಾದ ಭಾಷೆಯಲ್ಲಿ ಹೇಳಬೇಕೆಂದು. ಅದು ಮೃದುವಾಗಿ ಹೇಳಲಾಗ ದಿದ್ದರೆ—ಹೇಳದೆ ಇದ್ದರೂ ಒಳ್ಳೆಯದೆ. ಅಂದರೆ ತನ್ನ ನಾಲಿಗೆಯನ್ನು ಅಂಕೆ ಯಲ್ಲಿಡಲಾಗದವನಲ್ಲಿ ಸತ್ಯವಿಲ್ಲವೆಂದರ್ಥ.

(ಯಂಗ್ ಇಂಡಿಯಾ, ೧೭-೯-೧೯೨೫)

ಮನಸ್ಸಿನಲ್ಲಿ ಕಹಿಯಾದರೆ ನಮ್ಮ ದೃಷ್ಟಿಯೂ ಮಂದವಾಗುವುದು. ಸ್ವಲ್ಪಮಾತ್ರದ ಸತ್ಯವನ್ನು ಸಹ ಕಾಣಲು ಅಂತಹವರು ಅಶಕ್ತರಾಗುವರು.

(ಯಂಗ್ ಇಂಡಿಯಾ)

ಮೃದುವಾದ ರೀತಿಯಲ್ಲಿ ಒಬ್ಬನಿಗೆ ಸತ್ಯವನ್ನು ಹೇಳಲು ಬಾರದಿದ್ದರೆ ಅಂತಹವನು ಅಸತ್ಯವನ್ನು ಹೇಳದೆ ಇರಲಿ. ಅಹಿಂಸೆಯಿಂದ ಕೂಡಿರದ ಸತ್ಯ ಸತ್ಯವಲ್ಲ—ಅಸತ್ಯ.

(ಯಂಗ್ ಇಂಡಿಯಾ)

ಕಠಿಣವಾದ ಸತ್ಯವನ್ನು ಮೃದುವಾದ ರೀತಿಯಲ್ಲಿಯೂ ಸೌಜನ್ಯದಿಂದಲೂ ಹೇಳಬಹುದು. ಆದರೆ ಅದನ್ನು ಓದುವಾಗ ಕಠಿಣವೆಂದು ತೋರುವುದು. ನಿಜವನ್ನು ಹೇಳಬೇಕಾದರೆ ಒಬ್ಬ ಸುಳ್ಳುಗಾರನನ್ನು ಸುಳ್ಳುಗಾರನೆಂದು ಹೇಳಬೇಕು—ಕಠಿಣವಾದ ಮಾತೇನೋ ಹೌದು—ಆದರೆ ಈ ಮಾತು ಅನಿವಾರ್ಯ.

(ಹರಿಜನ, ೬–೨–೧೯೩೭)

ಏಸುಕ್ರಿಸ್ತನ ಜೀವನಚರಿತ್ರೆಯಲ್ಲಿ ಆತನು ಬೇಸರಗೊಂಡು ತಮ್ಮ ಜನರನ್ನು ಸರ್ಪಗಳೆಂದು ಬೈದ ಪ್ರಸಂಗಗಳಿವೆ. ಆದರೆ ಅವರಿಗೆ ದೇವರು ದಯೆ ತೋರಿಸಬೇಕೆಂದೂ ಪ್ರಾರ್ಥಿಸಿದಾನೆ.

(ಹರಿಜನ, ೧೯–೧೨–೧೯೩೬)

## ಕಾರ್ಯಮಯ ಜೀವನ ಮತ್ತು ಸತ್ಯದ ಪಾಲನೆ

ನಮ್ಮ ಜೀವನದ ಪ್ರತಿಯೊಂದು ಕ್ಷಣವೂ ಮಾನಸಿಕ ಅಥವಾ ದೈಹಿಕ ಚಟುವಟಿಕೆಗಳಿಂದ ತುಂಬಿದುದಾಗಿರಬೇಕು. ಆದರೆ ಈ ಚಟುವಟಿಕೆಗಳು ಸಾತ್ತ್ವಿಕವಾದುವೂ, ಸತ್ಯದ ಕಡೆ ಒಯ್ಯುವಂತಹವೂ ಆಗಿರಬೇಕು. ಯಾವನು ತನ್ನ ಜೀವನವನ್ನು ಸೇವೆಗೆ ಅರ್ಪಣಮಾಡಿರುವನೊ ಅಂತಹವನು ಒಂದು ಕ್ಷಣವನ್ನಾದರೂ ವ್ಯರ್ಥ ಕಾಲಹರಣಮಾಡಲು ಸಾಧ್ಯವಿಲ್ಲ. ಆದರೆ ಒಳ್ಳೆಯ ಚಟುವಟಿಕೆ ಯಾವುದು ಕೆಟ್ಟುದು ಯಾವುದು ಎಂಬುದರ ವಿವೇಚನೆ ಇರಬೇಕು. ಸೇವೆಯಲ್ಲಿ ತದೇಕಚಿತ್ತವಿದ್ದರೂ ಈ ವಿವೇಚನೆಯು ಸ್ವಾಭಾವಿಕವಾಗಿಯೇ ಇರುವುದು.

(ಮಂಗಳ ಪ್ರಭಾತದಿಂದ)

ಬುದ್ಧಿಶಕ್ತಿಯು ಹಿಂಸಾಕ್ಷೇತ್ರದಲ್ಲಿ ಅವಶ್ಯವಿದ್ದರೆ ಅಹಿಂಸಾಕ್ಷೇತ್ರದಲ್ಲಿ ಮತ್ತಷ್ಟು ಮುಖ್ಯವೆಂದು ನನ್ನ ಅಭಿಮತ. (ಹರಿಜನ, ೧೯–೭–೧೯೪೯)

ಅಹಿಂಸೆಯನ್ನು ನಿಜವಾಗಿ ಪಾಲಿಸುವವನಲ್ಲಿ ತೀಕ್ಷ್ಣವಾದ ಬುದ್ಧಿಯೂ ಸದಾ ಜಾಗ್ರತವಾಗಿರುವ ಮನಸ್ಸಾಕ್ಷಿಯ ಪ್ರೇರಣೆಯೂ ಇರಬೇಕು.
(ಹರಿಜನ, ೮–೯–೧೯೪೦)

## ವಿಚಾರಪ್ರಾಮಾಣ್ಯ

ಯಾವುದೇ ಬಗೆಯ ಸುಧಾರಣೆಗಾಗಲಿ ಆ ವಿಷಯದ ಮೇಲೆ ಸ್ವಾಮ್ಯ ನೀಡುವಂಥ ನಿರಂತರ ಅಧ್ಯಯನ ಆವಶ್ಯಕ. ಸುಧಾರಣೆಗಳು ಒಳ್ಳೆಯವೆಂದು ಒಪ್ಪಿದರೂ ಅವುಗಳ ಆಂಶಿಕ ಅಥವಾ ಪೂರ್ಣ ವಿಫಲತೆಗೆ ಅಜ್ಞಾನವೇ ಮೂಲ ಕಾರಣವಾಗುತ್ತದೆ. (ಹರಿಜನ, ೨೪–೪–೧೯೫೭)

ಸತ್ಯ–ಅಹಿಂಸೆ ದಡ್ಡರಿಗಲ್ಲ. ಅವುಗಳ ಅನುಷ್ಠಾನದಿಂದ ಮೈ, ಮನಸ್ಸು ಹಾಗೂ ಹೃದಯಗಳ ಸರ್ವಮುಖ ವಿಕಾಸವಾದೀತು. ಹೀಗಾಗದಿದ್ದಲ್ಲಿ ನಮ್ಮಲ್ಲಿ ಅಸತ್ಯವಿದೆಯೆಂದರ್ಥ. (ಹರಿಜನ, ೮–೫–೧೯೩೭)

ಶೀಲವೂ ಸೇವಾಕಾಂಕ್ಷೆಯೂ ಇದ್ದುದಾದರೆ ಅಗತ್ಯವಾದ ಬುದ್ಧಿಶಕ್ತಿ ಹಾಗೂ ಕಾರ್ಯದಕ್ಷತೆಗಳು ಒದಗಿಬರುತ್ತವೆ. ಕಡೆಗೆ ಮಾರ್ಗದರ್ಶನ ಮಾಡುವುದು ಬುದ್ಧಿಯಲ್ಲ, ಹೃದಯ. ಹೃದಯ ಅಂಗೀಕರಿಸುವ ನಿರ್ಣಯಗಳಿಗೆ ಬುದ್ಧಿ ಆಮೇಲೆ ತರ್ಕವನ್ನು ಹೊಂದಿಸಿಕೊಡುತ್ತದೆ. ನಂಬುಗೆಯನ್ನು ತರ್ಕ ಹಿಂಬಾಲಿಸುತ್ತದೆ. ತಾನು ಮಾಡುವ ಅಥವಾ ಮಾಡಬೇಕೆಂಬುದರ ಸಮರ್ಥನೆಗೆ ಮನುಷ್ಯ ತರ್ಕ ಹುಡುಕುತ್ತಾನೆ. (ಯಂಗ್ ಇಂಡಿಯಾ)

ವಿಚಾರ–ವಿಮರ್ಶೆ ಸಾಧ್ಯವಾದಂಥ ವಿಷಯಗಳಲ್ಲಿ ವಿಚಾರಪ್ರಮಾಣವಲ್ಲದುದನ್ನು ನಿರಾಕರಿಸಬೇಕು. (ಹರಿಜನ, ೬–೩–೧೯೩೭)

ವಿಚಾರಶಕ್ತಿಗೆ ಬಿನ್ನವಿಸಿಕೊಳ್ಳದೆ ಯಾರೊಬ್ಬರನ್ನೂ ನನ್ನೊಡನೆ ಒಯ್ಯುವ ಇಚ್ಛೆ ನನಗಿಲ್ಲ. (ಯಂಗ್ ಇಂಡಿಯಾ)

ಕೇವಲ ತಮ್ಮ ಅಭಿಮತವನ್ನು ಪ್ರಕಟಪಡಿಸಿ ಜನರ ಅಭಿಮತಕ್ಕೆ ಶರಣುಹೋಗುವುದು ಸಾಲದುದಷ್ಟೆ ಅಲ್ಲ, ಮಹತ್ವದ ಸಂಗತಿಗಳ ವಿಷಯದಲ್ಲಿ ಜನಾಭಿಮತ ತಮ್ಮ ವಿಚಾರಶಕ್ತಿಗೆ ವಿರುದ್ಧವಾಗಿ ಕಂಡುಬಂದಲ್ಲಿ ಧುರೀಣರು ಲೋಕಾಭಿಪ್ರಾಯಕ್ಕೆ ವಿರುದ್ಧವಾಗಿಯೇ ನಡೆದುಕೊಳ್ಳಬೇಕು.

(ಯಂಗ್ ಇಂಡಿಯಾ)

ಜನಸೇವಕನಿಗೆ ತನ್ನ ಮನಸ್ಸಾಕ್ಷಿಯ ತೃಪ್ತಿಯೇ ಗಣನೀಯ. ಆತ ದಿಕ್ಕುಗೆಟ್ಟ ದೋಣಿಯಂತೆ ತನ್ನ ಮನಸ್ಸಾಕ್ಷಿಯ ಸದಾ ನಿರ್ದುಷ್ಟ ಸಮಾಧಾನ ವನ್ನು ಪಡೆಯದೆ ಜನಮೆಚ್ಚಿಗೆ ಪಡೆಯುವುದೇ ಮುಖ್ಯವೆಂದು ಭಾವಿಸಬಾರದು. ಸೇವೆಯೊಂದೇ ಅದರ ಸನ್ಮಾನ, ಏಕೈಕ ಪ್ರತಿಫಲ.

---

## ಅಧ್ಯಾಯ – ೩

# ಅಹಿಂಸೆ



### ಶಸ್ತ್ರಸಿದ್ಧಾಂತ

ಪಶುಬಲ ಆಳುತ್ತಿರುವ ಇಂದಿನ ಯುಗದಲ್ಲಿ ಅದರ ಪರಮಸಾರ್ವಭೌಮತ್ವವನ್ನು ಯಾರಾದರೂ ತಿರಸ್ಕರಿಸಬಹುದೆಂದು ನಂಬುವುದು ಯಾರಿಗೂ ಬಹುಪಾಲು ಅಸಾಧ್ಯವೇ. ಅಂತಲೇ ಜನರಿಂದ ಹಿಂಸಾಕೃತ್ಯ ಪ್ರಾರಂಭವಾದರೂ ಅಸಹಕಾರ ಆಂದೋಲನದ ಪ್ರಗತಿಯನ್ನು ತಡೆಯಬಾರದೆಂದು ಹಿತವಚನವೀಯುವ ಹೆಸರಿಲ್ಲದ ಪತ್ರಗಳು ನನಗೆ ಬರುತ್ತಿವೆ. ರಹಸ್ಯವಾಗಿ ನಾನು ಹಿಂಸೆಯ ಪಿತೂರಿ ನಡೆಸುತ್ತಿರಲೇಬೇಕೆಂದು ಭಾವಿಸಿ ಬಹಿರಂಗ ಹಿಂಸೆಯನ್ನು ಘೋಷಿಸುವ ಆ ಸುಮುಹೂರ್ತ ಎಂದು ಬಂದೀತೆಂದು ಇತರರು ಕೇಳುತ್ತಾರೆ. ರಹಸ್ಯ ಅಥವಾ ಬಹಿರಂಗ ಹಿಂಸೆಯ ಹೊರತಾಗಿ ಮತ್ತಾವುದಕ್ಕೂ ಇಂಗ್ಲೀಷರು ಮಣಿಯರೆಂದು ಅವರು ನನಗೆ ಭರವಸೆ ಕೊಡುತ್ತಾರೆ. ನನ್ನ ನಿಜವಾದ ಉದ್ದೇಶ್ಯವನ್ನು ಎಂದೂ ಹೇಳೆ, ಅಂತಲೇ ಭಾರತದಲ್ಲೇ ನಾನು ಅತಿ ದೊಡ್ಡ ಪಟಿಂಗ, ಬಹುಮಂದಿಗೆ ಇರುವಂತೆಯೇ ನನಗೂ ಹಿಂಸೆಯಲ್ಲಿ ವಿಶ್ವಾಸವಿದೆಯೆನ್ನಲು ಸಂದೇಹವೇ ಇಲ್ಲ—ಎಂದೂ ಮತ್ತೆ ಕೆಲವರು ಹೇಳುತ್ತಾರೆಂದೂ ನನಗೆ ತಿಳಿಯಬಂದಿದೆ.

ಮಾನವಕುಲದ ಬಹುಭಾಗದ ಮೇಲೆ ಶಸ್ತ್ರಸಿದ್ಧಾಂತದ ಪ್ರಭಾವ ಇಷ್ಟಿದೆ, ಅಸಹಕಾರದ ಯಶಸ್ಸಾದರೋ ಆ ಅವಧಿಯಲ್ಲಿ ಹಿಂಸೆಯಿಲ್ಲದಿರುವುದನ್ನೇ ಅವಲಂಬಿಸಿದೆ, ಈ ವಿಷಯವಾಗಿ ನನ್ನ ಅಭಿಪ್ರಾಯಗಳು ಬಹುಜನರ ನಡತೆಯ ಮೇಲೆ ಪ್ರಭಾವ ಬೀರುತ್ತವೆ, ಅಂತಲೇ ಅವನ್ನು ಸಾಧ್ಯವಿದ್ದಷ್ಟು ಸ್ಪಷ್ಟವಾಗಿ ತಿಳಿಸಲು ಕಾತುರನಿದೇನೆ.

ಹೇಡಿತನ–ಹಿಂಸೆ ಎರಡರಲ್ಲಿ ಒಂದನ್ನು ಆರಿಸಿಕೊಳ್ಳಬೇಕಾದಾಗ ಹಿಂಸೆಯನ್ನೇ ಸಲಹೆಮಾಡಿಯೇವೆಂದು ನನ್ನ ನೆರೆನಂಬಿಕೆ. ೧೯೦೮ರಲ್ಲಿ ನನ್ನನ್ನು ಇನ್ನೇನು ಸಾಯುವಂತೆ ಹೊಡೆದಾಗ ತಾನು ಇದ್ದಿದ್ದರೆ ಏನು ಮಾಡಬೇಕಿ

ತ್ತೆಂದು ನನ್ನ ಹಿರಿಯ ಮಗ ಕೇಳಿದ, ತಾನು ಓಡಿಹೋಗಿ ನನ್ನನ್ನು ಕೊಲ್ಲಬಿಡ ಬೇಕಿತ್ತೋ ಅಥವಾ ತಾನು ಬಳಸಬಹುದಾಗಿದ್ದ, ಬಳಸಬೇಕೆಂದಿದ್ದ ಶರೀರ ಶಕ್ತಿಯನ್ನು ಬಳಸಿ ನನ್ನನ್ನು ರಕ್ಷಿಸಬೇಕಾಗಿತ್ತೋ? ಎಂದ. ಹಿಂಸೆಯನ್ನು ಉಪಯೋಗಿಸಿಯೂ ನನ್ನನ್ನು ರಕ್ಷಿಸುವುದು ಅವನ ಕರ್ತವ್ಯವೆಂದು ಹೇಳಿದೆ. ಅಂತಲೇ ಬೋಅರ್ ಯುದ್ಧದಲ್ಲಿ, ಜುಲು ದಂಗೆಯೆಂದು ಕರೆದುದರಲ್ಲಿ ಮತ್ತು ಕಳೆದ ಮಹಾಯುದ್ಧದಲ್ಲಿ ನಾನು ಭಾಗವಹಿಸಿದ್ದು. ಹಾಗೆಂದೇ ಹಿಂಸಾ ವಿಧಾನದಲ್ಲಿ ನಂಬಿಕೆಯುಳ್ಳವರು ಶಸ್ತ್ರವಿದ್ಯಾಶಿಕ್ಷಣ ಪಡೆಯಬೇಕೆಂದೂ ನಾನು ಪ್ರತಿಪಾದಿಸುತ್ತೇನೆ. ಭಾರತ ತನ್ನ ಗೌರವಹಾನಿಗೆ ನಿಸ್ಸಹಾಯಕ ಸಾಕ್ಷಿ ಯಾಗಿರುವುದಕ್ಕಿಂತ ತನ್ನ ಗೌರವರಕ್ಷೆಗಾಗಿ ಶಸ್ತ್ರ ಹಿಡಿದರೂ ಹಿಡಿಯಲೆನ್ನು ತ್ತೇನೆ.

ಆದರೆ ಅಹಿಂಸೆ ಹಿಂಸೆಗಿಂತ ಅಪಾರ ಮೇಲು, ಕ್ಷಮೆ ಶಿಕ್ಷೆಗಿಂತ ಹೆಚ್ಚು ಪೌರುಷಯುಕ್ತ—ಎಂದು ನನ್ನ ನಂಬಿಕೆ. 'ಕ್ಷಮಾ ವೀರಸ್ಯ ಭೂಷಣಂ' (ಕ್ಷಮೆಯೇ ವೀರನಿಗೆ ಭೂಷಣ). ಶಿಕ್ಷಿಸುವ ಶಕ್ತಿ ಇದ್ದೂ ಅದರ ವರ್ಜನೆ ಕ್ಷಮೆ; ನಿಸ್ಸಹಾಯಕ ಪ್ರಾಣಿ ನಟಿಸುವ ಕ್ಷಮೆಗೆ ಅರ್ಥವಿಲ್ಲ. ಬೆಕ್ಕಿನ ಕೈಲಿ ಚಿಂದಿಚಿಂದಿಯಾಗುವ ಇಲಿ ಬೆಕ್ಕಿಗೆ ಕ್ಷಮೆ ತೋರದು. ಆದುದರಿಂದ ಜನರಲ್ ಡೈಯರ್ ಮತ್ತು ಆತನ ಗುಂಪಿಗೆ ತಕ್ಕ ಶಾಸ್ತಿಯಾಗಬೇಕೆಂದು ಕೂಗುವವರ ಭಾವನೆಯನ್ನು ನಾನು ಮೆಚ್ಚುತ್ತೇನೆ. ಸಾಧ್ಯವಿದ್ದರೆ ಅವರು ಅವನನ್ನು ತುಂಡುತುಂಡು ಮಾಡಿಯಾರು. ಭಾರತ ನಿರ್ಬಲವೆಂದು ನಾನೆಣಿಸುವುದಿಲ್ಲ. ನಿಸ್ಸಹಾಯಕ ಪ್ರಾಣಿಯೆಂದು ನನ್ನನ್ನು ನಾನು ತಿಳಿಯುವುದಿಲ್ಲ. ಭಾರತದ ಮತ್ತು ನನ್ನ ಶಕ್ತಿಯನ್ನು ಉತ್ತಮತರ ಉದ್ದೇಶ್ಯಕ್ಕಾಗಿ ಬಳಸುವ ಬಯಕೆ ನನ್ನದು.

ನನ್ನನ್ನು ತಪ್ಪು ತಿಳಿಯುವುದು ಬೇಡ. ಶರೀರಸಾಮರ್ಥ್ಯದಿಂದ ಬಲ ಬಾರದು. ಅದಮ್ಯ ಎದೆಗಾರಿಕೆಯಿಂದ ಅದು ಬಂದೀತು. ದೇಹಶಕ್ತಿಯಲ್ಲಿ ಜುಲುವಿಗೆ ಸಾಮಾನ್ಯ ಇಂಗ್ಲೀಷಿನವ ಸಾಟಿಯಲ್ಲ. ಆದರೆ ಅವನು ಇಂಗ್ಲೀಷ್ ಹುಡುಗನನ್ನು ಕಂಡು ಓಡುತ್ತಾನೆ, ಹುಡುಗನ ಪಿಸ್ತೂಲು, ಅದನ್ನು ಅವನಿ ಗಾಗಿ ಬಳಸುವವರನ್ನು ಕಂಡರೆ ಅವನಿಗೆ ಅಂಜಿಕೆ. ಸಾವಿಗೆ ಅಷ್ಟು ಹೆದರು ತ್ತಾನೆ ಅವನು, ದೃಢಕಾಯನಿದ್ದೂ ಅವನು ನರಸತ್ತವ. ಮೂವತ್ತು ಕೋಟಿ

ಭಾರತೀಯರನ್ನು ಒಂದು ಲಕ್ಷ ಇಂಗ್ಲೀಷರು ಹೆದರಿಸಬೇಕಿಲ್ಲವೆಂದು ಕ್ಷಣದಲ್ಲಿ ನಮಗೆ ಅರಿವಾದೀತು. ಆದಕಾರಣ ನಿರ್ದಿಷ್ಟ ಕ್ಷಮೆಯೆಂದರೆ ನಮ್ಮ ಶಕ್ತಿಯ ಸ್ಪಷ್ಟ ಪ್ರಜ್ಞೆ ಎಂದೇ ಅರ್ಥ. ಪ್ರಜ್ಞಾಪೂರ್ವಕ ಕ್ಷಮೆಯೊಂದಿಗೆ ನಮ್ಮಲ್ಲಿ ಶಕ್ತಿಯ ಪ್ರಬಲ ತರಂಗವೇ ಉಕ್ಕೀತು, ಅದರಿಂದಾಗಿ ಭಾರತದ ಗೌರವಯುತ ಶಿರಸ್ಸಿನ ಮೇಲೆ ಒಬ್ಬ ಡೈಯರನಾಗಲಿ, ಒಬ್ಬ ಫ್ರಾಂಕ್ ಜಾನ್‌ಸನ್‌ನಾಗಲಿ ಅಪಮಾನದ ಮಳೆಗರೆಯುವುದು ಅಸಾಧ್ಯವಾದೀತು. ಸದ್ಯದಲ್ಲಿ ನನ್ನ ವಿಚಾರ ವನ್ನು ಮನದಟ್ಟಾಗಿಸಲಾರೆನಾದರೆ ನನಗೇನೂ ಚಿಂತೆಯಿಲ್ಲ. ಕೋಪಗೊಳ್ಳ ದಿರುವಷ್ಟೂ, ಸೇಡುಳ್ಳದಿರುವಷ್ಟೂ ನಾವು ದಲಿತರಾಗಿಬಿಟ್ಟದೇವೆಂದು ನನಗೆ ಅನಿಸುತ್ತದೆ. ಶಿಕ್ಷೆಯ ಅಧಿಕಾರವನ್ನು ಬಿಟ್ಟುಕೊಡುವುದರಿಂದ ಭಾರತಕ್ಕೇ ಹೆಚ್ಚು ಲಾಭವೆಂದು ನಾನು ಹೇಳದಿರಲಾರೆ. ಶಿಕ್ಷೆಗಿಂತ ಉತ್ತಮ ಕೆಲಸ ನಮಗಿದೆ, ಲೋಕಕ್ಕೆ ನೀಡಲು ಉತ್ತಮ ಸಂದೇಶವೊಂದು ನಮ್ಮಲ್ಲಿದೆ.

ನಾನು ಸ್ವಪ್ನಜೀವಿಯಲ್ಲ. ವ್ಯಾವಹಾರಿಕ ಆದರ್ಶವಾದಿ ಎಂದುಕೊಳ್ಳು ತ್ತೇನೆ ನಾನು. ಅಹಿಂಸಾಧರ್ಮ ಕೇವಲ ಋಷಿಮುನಿಗಳಿಗೆ ಮಾತ್ರ ಮೀಸಲಲ್ಲ. ಸಾಮಾನ್ಯ ಜನಕ್ಕೂ ಅದು ಅನ್ವಯಿಸುತ್ತದೆ. ಅಹಿಂಸೆ ನಮ್ಮ ಕುಲದ ನಿಯಮ, ಮೃಗಕುಲಕ್ಕೆ ಹಿಂಸೆ ಎಂತೋ ಅಂತು. ಮೃಗದ ಅಂತಃಕರಣ ಸುಪ್ತ, ಶರೀರಬಲದ ಹೊರತು ಬೇರಾವ ನಿಯಮವೂ ಅದಕ್ಕೆ ಗೊತ್ತೇ ಇಲ್ಲ. ಮಾನವನ ಗೌರವವಾದರೋ ಉನ್ನತತರ ನಿಯಮಕ್ಕೆ, ಆತ್ಮಬಲಕ್ಕೆ ನಿಷ್ಠೆ ಬಯಸುತ್ತದೆ.

ಅಂತಲೇ ನಾನು ಭಾರತದೆದುರು ಆತ್ಮಬಲಿದಾನದ ಪುರಾತನ ನಿಯಮ ವನ್ನು ಇಡುವ ಸಾಹಸಮಾಡಿದೇನೆ. ಸತ್ಯಾಗ್ರಹ, ಅದರ ಪ್ರಕಾರಗಳಾದ ಅಸಹಕಾರ–ಸವಿನಯ ಪ್ರತಿಭಟನೆಗಳು ಕಷ್ಟಸಹನೆಯ ನಿಯಮಕ್ಕೆ ಹೊಸ ಹೆಸರುಗಳು ಮಾತ್ರ. ಹಿಂಸೆಯ ಮಧ್ಯೆ ಅಹಿಂಸೆಯನ್ನು ಆವಿಷ್ಕರಿಸಿದ ಋಷಿ ಗಳು ನ್ಯೂಟನ್‌ನಿಗಿಂತ ದೊಡ್ಡ ಪ್ರತಿಭಾಸಂಪನ್ನರು. ವೆಲಿಂಗ್ಟನ್‌ನಿಗಿಂತ ಮಿಗಿಲಾದ ಯೋಧರೂ ಆಗಿದ್ದರು. ಶಸ್ತ್ರಧಾರಣೆ ಬಲ್ಲವರಾಗಿದ್ದೂ ಅದರ ನಿರರ್ಥಕತೆಯನ್ನು ಕಂಡುಕೊಂಡರು, ಬೇಸತ್ತ ಜಗತ್ತಿಗೆ ಅದರ ವಿಮೋಚನೆ ಹಿಂಸೆಯಲ್ಲಿಲ್ಲ, ಅಹಿಂಸೆಯ ಮೂಲಕವೇ ಎಂಬುದನ್ನು ಕಲಿಸಿದರು.

ಇಚ್ಛಾಪೂರ್ವಕ ಕಷ್ಟಸಹನೆಯೇ ಚೈತನ್ಯಪೂರ್ಣ ಅಹಿಂಸೆ. ಕೇಡಿಗನ

ಇಚ್ಛೆಗೆ ಸೋತು ಮಣಿಯುವುದೆಂದಲ್ಲ; ದಬ್ಬಾಳಿಕೆಗಾರನ ಇಚ್ಛೆಯ ವಿರುದ್ಧ ಇಡೀ ಆತ್ಮವನ್ನೇ ಒಡ್ಡುವುದೆಂದು. ನಮ್ಮ ಈ ಜೀವನನಿಯಮದಂತೆ ಕೆಲಸ ಮಾಡುತ್ತ ತನ್ನ ಗೌರವ, ಧರ್ಮ, ಆತ್ಮ—ಇವನ್ನು ಉಳಿಸಿಕೊಳ್ಳಲು ಕೇವಲ ಒಬ್ಬ ವ್ಯಕ್ತಿಯೇ ಅನ್ಯಾಯಪೂರ್ಣ ಚಕ್ರಾಧಿಪತ್ಯದ ಶಕ್ತಿಯನ್ನೆಲ್ಲ ಇದುರಿಸ ಬಲ್ಲ, ಅದರ ಪತನಕ್ಕೆ ಅಥವಾ ಪುನರುತ್ಥಾನಕ್ಕೆ ತಳಹದಿ ಹಾಕಬಲ್ಲ.

ಭಾರತ ದುರ್ಬಲ, ಆದುದರಿಂದ ಅಹಿಂಸೆಯನ್ನು ಅನುಸರಿಸಲಿ—ಎಂದು ವಾದಿಸುತ್ತಿಲ್ಲ ನಾನು. ಅದು ತನ್ನ ಬಲ-ಶಕ್ತಿ ಅರಿತು ಅಹಿಂಸೆ ಆಚರಿಸ ಬೇಕೆನ್ನುತ್ತೇನೆ. ತನ್ನ ಬಲ ಅರಿಯಲು ಶಸ್ತ್ರವಿದ್ಯೆಯ ಶಿಕ್ಷಣ ಅದಕ್ಕೆ ಬೇಕಿಲ್ಲ. ನಾವು ಕೇವಲ ಮಾಂಸದ ಮುದ್ದೆಯೆಂದು ತಿಳಿಯುವುದರಿಂದಲೋ ಏನೋ ಅದು ಅಗತ್ಯವೆನಿಸೀತು. ಅವಿನಾಶಿಯಾದ, ಪ್ರತಿಯೊಂದು ಭೌತದೌರ್ಬಲ್ಯ ವನ್ನೂ ಗೆದ್ದು ಮೇಲೇರಬಲ್ಲ, ಇಡೀ ಜಗತ್ತಿನ ಭೌತಬಲವನ್ನೆಲ್ಲ ಇದುರಿಸಬಲ್ಲ ಆತ್ಮವೊಂದು ತನಗಿದೆಯೆಂದು ಭಾರತ ಮನಗಾಣಲೆಂದು ನನ್ನ ಆಸೆ. ಮನುಷ್ಯರೂಪಿ ರಾಮ, ಅವನ ವಾನರಸೇನೆ—ಇದುರಾಗಿ ದಶಮುಖ ರಾವಣನ ಪ್ರಚಂಡ ಬಲ, ಸುತ್ತಲೂ ಹಬ್ಬಿದ ವಿಸ್ತಾರವಾರಿಧಿಯ ಸುರಕ್ಷೆ— ಇದರ ಅರ್ಥವಾದರೂ ಏನು? ಪಶುಬಲದ ಮೇಲೆ ಆತ್ಮಬಲದ ವಿಜಯ ಎಂದಲ್ಲವೇ ಅದರ ಅರ್ಥ? ಆದರೆ ವ್ಯವಹಾರಶೀಲ ಮನುಷ್ಯನಾಗಿರುವುದರಿಂದ ರಾಜಕೀಯ ಜಗತ್ತಿನಲ್ಲಿ ಅಧ್ಯಾತ್ಮಜೀವನದ ವ್ಯವಹಾರಯುಕ್ತತೆಯನ್ನು ಭಾರತ ಮನಗಾಣುವವರೆಗೆ ನಾನು ಕಾಯುವುದಿಲ್ಲ. ಇಂಗ್ಲೀಷರ ಮೆಷೀನ್ ಗನ್ನುಗಳು, ಟ್ಯಾಂಕುಗಳು ಹಾಗೂ ವಿಮಾನಗಳ ಎದುರಿನಲ್ಲಿ ತಾನು ನಿರ್ಬಲ ವೆಂದೂ, ಪಂಗುವೆಂದೂ ಭಾರತ ಭಾವಿಸುತ್ತದೆ. ತನ್ನ ದೌರ್ಬಲ್ಯದ ದೆಸೆ ಯಿಂದ ಅಸಹಕಾರಕ್ಕೆ ತೊಡಗಿದೆ. ಹೀಗಿದ್ದೂ ಸಾಕಷ್ಟು ಜನ ಅಸಹಕಾರ ಆಚರಿಸಿದಲ್ಲಿ ಬ್ರಿಟಿಷರ ಅನ್ಯಾಯದ ದುರ್ಭರ ಹೊರೆಯಿಂದ ವಿಮೋಚನೆ ಯನ್ನು ತರುವ ಉದ್ದೇಶ್ಯ ಸಾಧನೆಯಾಗಲೇಬೇಕು. ಈ ಅಸಹಕಾರ 'ಷೀನ್‌ಫೀನ್‌ವಾದ'(ಐರ್ಲೆಂಡಿನ ಹಿಂಸೆ-ಅಹಿಂಸೆ ಕೂಡಿದ ಸ್ವಾತಂತ್ರ್ಯ ಹೋರಾಟ)ದಿಂದ ಭಿನ್ನ, ಏಕೆಂದರೆ ಹಿಂಸೆಯ ಜತೆಜತೆಗೇ ಇದನ್ನು ಹೂಡು ವಂತಿಲ್ಲ. ಈ ಶಾಂತಿಪೂರ್ಣ ಅಸಹಕಾರವನ್ನು ಹಿಂಸಾವಾದಿಗಳೂ ಪ್ರಯೋಗ ಮಾಡಿ ನೋಡಲೆಂದು ಅವರಿಗೆ ಆಮಂತ್ರಣ ನೀಡುತ್ತೇನೆ. ತನ್ನ ಆಂತರಿಕ

ದೌರ್ಬಲ್ಯದಿಂದ ಅಸಹಕಾರ ವಿಫಲವಾಗದು. ಜನರ ಬೆಂಬಲವಿಲ್ಲದೆ ಅದು ವಿಫಲವಾದೀತು. ಆಗಲೇ ನಿಜವಾದ ಅಪಾಯ. ರಾಷ್ಟ್ರದ ಅಪಮಾನವನ್ನು ಸ್ವಲ್ಪ ಕಾಲವೂ ಸಹಿಸದ ಉನ್ನತಾತ್ಮರು ತಮ್ಮ ಕಿಚ್ಚನ್ನು ಪ್ರಕಟಿಸಬಯಸಬಹುದು. ಹಿಂಸೆಗೆ ತೊಡಗಿಯಾರು. ನನಗೆ ತಿಳಿದಮಟ್ಟಿಗೆ ಇದರಿಂದ ತಾವೂ ಮುಕ್ತರಾಗರು, ದೇಶವನ್ನೂ ಅನ್ಯಾಯದಿಂದ ಪಾರುಮಾಡರು, ನಾಶವಾದಾರು. ಭಾರತ ಶಸ್ತ್ರಸಿದ್ಧಾಂತವನ್ನು ಅಪ್ಪಿದರೆ ಕ್ಷಣಿಕ ವಿಜಯ ಅದಕ್ಕೆ ಲಭಿಸೀತು. ಆದರೆ ನನ್ನೆದೆಯ ಹೆಮ್ಮೆಯಾಗಿ ಅದು ಉಳಿಯದು. ನನ್ನ ಸರ್ವಸ್ವವೂ ಭಾರತದ್ದು, ಅಂತಲೇ ಭಾರತಕ್ಕೆ ನಾನು ಬದ್ಧ. ಜಗತ್ತಿಗೆ ಭಾರತದ್ದೊಂದು ಸಂದೇಶ ಉಂಟೆಂದು ನನ್ನ ನಿಸ್ಸ್ಪಷ್ಟ ನಂಬಿಕೆ. ಯೂರೋಪನ್ನು ಅದು ಕಣ್ಣುಮುಚ್ಚಿ ನಕಲುಮಾಡತಕ್ಕದ್ದಲ್ಲ. ಭಾರತ ಶಸ್ತ್ರಸಿದ್ಧಾಂತವನ್ನು ಒಪ್ಪಿದರೆ ಅದೇ ನನ್ನ ಸತ್ತ್ವಪರೀಕ್ಷೆಯ ಗಳಿಗೆ. ಆ ಸಂದರ್ಭದಲ್ಲಿ ನಾನು ಹಿಂದೆ ಬೀಳೆ. ನನ್ನ ಧರ್ಮಕ್ಕೆ ಭೌಗೋಲಿಕ ಇತಿಮಿತಿಯಿಲ್ಲ. ಅದರಲ್ಲಿ ನನಗೆ ಜೀವಂತ ಶ್ರದ್ಧೆಯಿದ್ದಲ್ಲಿ ನನ್ನ ಭಾರತಪ್ರೇಮವನ್ನೂ ಅದು ಮೀರಿ ನಿಂತೀತು. ಅಹಿಂಸಾ ಧರ್ಮದಮೂಲಕ ಭಾರತದ ಸೇವೆಗೆ ನನ್ನ ಬಾಳುವೆ ಸಮರ್ಪಿತ, ಅಹಿಂಸೆಯೇ ಹಿಂದೂ ಧರ್ಮದ ಮೂಲತತ್ತ್ವವೆಂದು ನನ್ನ ನಂಬಿಕೆ.

ಏತನ್ಮಧ್ಯೆ ನನ್ನಲ್ಲಿ ಅಪನಂಬಿಕೆ ಪಡುವವರು ನನಗೂ ಹಿಂಸೆ ಬೇಕು ಎಂದು ನಂಬಿ, ಹಿಂಸೆಯನ್ನು ಪ್ರಚೋದಿಸಿ, ಸುಸೂತ್ರವಾಗಿ ನಡೆಯುತ್ತಿರುವ ಹೋರಾಟವನ್ನು ವ್ಯತ್ಯಸ್ತಗೊಳಿಸದಿರಲೆಂದು ಅವರಿಗೆ ಒತ್ತಾಯಪಡಿಸುತ್ತೇನೆ. ಗುಟ್ಟು ಪಾಪಕರ, ನಾನು ಅದನ್ನು ದ್ವೇಷಿಸುತ್ತೇನೆ. ಆದುದರಿಂದ ಅಹಿಂಸಾತ್ಮಕ ಅಸಹಕಾರಕ್ಕೆ ಅವರು ಒಂದು ಪ್ರಯೋಗಾವಕಾಶ ಕೊಡಲಿ, ಆಗ ನನ್ನಲ್ಲಿ ಯಾವುದೇ ಮಾನಸಿಕ ಹಿಂಜರಿಕೆಯೂ ಇರಲಿಲ್ಲವೆಂದು ಅರ್ಥವಾದೀತು. (ಯಂಗ್ ಇಂಡಿಯಾ, ೧೧-೮-೧೯೨೦)

## ಅಹಿಂಸೆಗಾಗಿ ಒಂದು ಬಿನ್ನಹ

ಪ್ರಪಂಚ ದ್ವೇಷದಿಂದ ಬೇಸತ್ತಿದೆ. ಪಾಶ್ಚಾತ್ಯ ದೇಶಗಳನ್ನು ಈ ಬೇಸರ ಆವರಿಸಿಕೊಂಡಿರುವುದನ್ನು ನಾವು ಕಾಣುತ್ತೇವೆ. ಈ ದ್ವೇಷದ ಪಲ್ಲವಿ ಮಾನವ

ಕೋಟಿಗೆ ಯಾವ ಉಪಕಾರವನ್ನೂ ಮಾಡಿಲ್ಲವೆಂದು ನಾವು ಕಾಣುತ್ತೇವೆ. ಮಾನವನ ಇತಿಹಾಸದಲ್ಲಿ ಒಂದು ಹೊಸ ಅಧ್ಯಾಯವನ್ನು ಆರಂಭಮಾಡಿ ಪ್ರಪಂಚಕ್ಕೆ ಒಂದು ಹೊಸ ಪಾಠವನ್ನು ಕಲಿಸುವ ಗೌರವ ಭಾರತದ್ದಾಗಲಿ.

ಕಳೆದ ಮೂವತ್ತು ವರ್ಷಗಳ ಅನುಭವಸಾರಸರ್ವಸ್ವ ನನಗೆ ಹೇಳುತ್ತದೆ ಅಹಿಂಸೆಯ ಆಚರಣೆಯಲ್ಲಿಯೇ ಭಾರತದ ಹಾಗೂ ಜಗತ್ತಿನ ಭವಿತವ್ಯ ಅಡಕವಾಗಿದೆಯೆಂದು. ದಲಿತ ಮಾನವಕೋಟಿ ತನಗಾಗಿರುವ ರಾಜಕೀಯ, ಆರ್ಥಿಕ ಅನ್ಯಾಯಗಳನ್ನು ಸರಿಪಡಿಸಿಕೊಳ್ಳಲು ಅದೇ ಅತ್ಯಂತ ಹಾನಿರಹಿತ, ಆದರೂ ಅತಿಪರಿಣಾಮಕಾರಿ ಮಾರ್ಗ. ಅಹಿಂಸೆ ವ್ಯಕ್ತಿ ತನ್ನ ಶಾಂತಿ ಹಾಗೂ ಮುಕ್ತಿಸಾಧನೆಗಾಗಿ ವಿವಿಕ್ತನಾಗಿ ಅನುಸರಿಸಬೇಕಾದ ಸದ್ಗುಣವಲ್ಲವೆಂದು ನನ್ನ ಎಳೆಹರೆಯದಿಂದಲೂ ಅರಿತಿದೇನೆ; ಅದು ಸಮಾಜದ ನಡೆಗೊಂದು ಧರ್ಮ, ಯುಗಯುಗಗಳಿಂದ ಅದು ಹಂಬಲಿಸುತ್ತಿರುವ ಶಾಂತಿಯತ್ತ ಪ್ರಗತಿ ಸಾಧಿಸಬೇಕಾದಲ್ಲಿ, ಗೌರವದಿಂದ ಬದುಕಬೇಕಾದಲ್ಲಿ ಅದನ್ನು ಅನುಸರಿಸಲೇ ಬೇಕು. (ಗಾಂಧೀಜಿಯ ಪತ್ರವ್ಯವಹಾರದಿಂದ)

ತನ್ನ ಬಿಡುಗಡೆಗಾಗಿ ಸತ್ಯ ಮತ್ತು ಅಹಿಂಸಾಮಾರ್ಗವನ್ನು ಅರಿತು ಅರಿತೂ ಅನುಸರಿಸುತ್ತಿರುವ ದೇಶವೆಂದರೆ ಭೂಮಂಡಲದಲ್ಲೆಲ್ಲ ಭಾರತ ಒಂದೇ. ಈ ಮಾರ್ಗವನ್ನನುಸರಿಸಿ ಭಾರತದ ಬಿಡುಗಡೆಯಾದರೆ ಇಡೀ ಪ್ರಪಂಚದ ಬಿಡುಗಡೆಯೇ ಆದೀತು.

ಅಹಿಂಸಾವಾದಿ ಭಾರತದ ಪರ ನಾನು ವಾದಿಸಬೇಕಾದುದಿಲ್ಲ. ಒಂದು ಕಡೆ ಸತ್ಯ ಮತ್ತೊಂದು ಕಡೆ ಅಹಿಂಸೆ ಇರುವ ನಾಣ್ಯ ಭಾರತದ ಕೈಯಲ್ಲಿದ್ದರೆ ಆ ನಾಣ್ಯದ ಅಮೂಲ್ಯ ಬೆಲೆ ತಾನಾಗಿಯೇ ಗೊತ್ತಾಗುವುದು. ಸತ್ಯ ಮತ್ತು ಅಹಿಂಸೆಗಳು ಹೆಜ್ಜೆ ಹೆಜ್ಜೆಗೂ ನಮ್ರತೆಯನ್ನು ಮೂಡಿಸಬೇಕು. ಯಾವ ದಿಕ್ಕಿನಿಂದ ಸಹಾಯ ಬಂದರೂ ಅವು ನಿರಾಕರಿಸವು.

(ಸರ್ಕಾರದೊಡನೆ ಗಾಂಧೀಜಿಯ ಪತ್ರವ್ಯವಹಾರದ ಮುನ್ನುಡಿಯಿಂದ)

# ಯುದ್ಧಕ್ಕೆ ನೈತಿಕ ಪರ್ಯಾಯ

೧೯೦೬ರ ತನಕ ನಾನು ವಿಚಾರಶಕ್ತಿಯ ಆವಾಹನೆಯನ್ನೇ ನಂಬಿದವನಾಗಿದ್ದೆ. ಬಹಳ ಉದ್ಯಮಶೀಲ ಸುಧಾರಕನಾಗಿದ್ದೆ. ಹೇಳಿಕೆಗಳನ್ನು ಬರೆಯುವುದರಲ್ಲಿ ನಿಪುಣನಾಗಿದ್ದೆ; ಸತ್ಯವನ್ನು ಸ್ವಲ್ಪವೂ ತಪ್ಪದೆ ಅನುಸರಿಸಿದುದರ ಪರಿಣಾಮವಾಗಿ ವಿಷಯಗಳನ್ನು ಚೆನ್ನಾಗಿ ಸಂಗ್ರಹಮಾಡುವ ಅಭ್ಯಾಸವಾಯಿತು. ಆದರೆ ದಕ್ಷಿಣ ಆಫ್ರಿಕದಲ್ಲಿ ವಿಷಯಸಂದರ್ಭ ಒದಗಿದಾಗ ವಿಚಾರಶಕ್ತಿ ಯಾವ ಪರಿಣಾಮವನ್ನೂ ತಾರದೆ ವಿಫಲವಾಯಿತು. ನಮ್ಮ ಜನ ಉದ್ರೇಕಗೊಂಡಿದ್ದರು. ಕ್ರಿಮಿಕೀಟವೂ ಸಹ ಒಮ್ಮೊಮ್ಮೆ ಎದುರುಬಿದ್ದಿತು, ಸೇಡು ತೀರಿಸಿಕೊಳ್ಳುವ ಮಾತೂ ನಡೆದಿತ್ತು. ಆಗ ಇಲ್ಲವೆ ಹಿಂಸೆಯ ಪರ ನಿಲ್ಲಬೇಕು ಅಥವಾ ಸಂಕಟವನ್ನೆದುರಿಸಲು ಬೇರೆ ಮಾರ್ಗ ಹುಡುಕಿ, ನಾಶ ತಡೆಯಬೇಕಾಗಿ ಬಂತು. ಅಪಮಾನಕರ ಶಾಸನವನ್ನು ಪಾಲಿಸಲು ನಿರಾಕರಿಸೋಣ, ಬೇಕಿದ್ದರೆ ಜೇಲಿಗೆ ಹಾಕಲಿ—ಎಂದು ನನಗನ್ನಿಸಿತು. ಹೀಗೆ ಯುದ್ಧದ ನೈತಿಕ ಪರ್ಯಾಯ ಹುಟ್ಟಿಕೊಂಡಿತು. ಆಗ ನಾನು ಸಾಮ್ರಾಜ್ಯಭಕ್ತ, ಒಟ್ಟಿನಲ್ಲಿ ಬ್ರಿಟಿಷ್ ಸಾಮ್ರಾಜ್ಯದ ಎಲ್ಲ ಚಟುವಟಿಕೆಗಳೂ ಭಾರತಕ್ಕೆ, ಜಗತ್ತಿಗೆ ಹಿತಕರವೇ ಎಂದು ಪೂರಾ ನಂಬಿದ್ದೆ. ಮೊದಲನೆಯ ಮಹಾಯುದ್ಧ ಆರಂಭವಾದ ಕೂಡಲೆ ಇಂಗ್ಲೆಂಡಿಗೆ ಹೋಗಿ ಅದರ ಸಹಾಯಕ ಕಾರ್ಯಗಳಲ್ಲಿ ಮಗ್ನನಾದೆ. ಆಮೇಲೆ ಅಸ್ವಸ್ಥತೆಯ ಕಾರಣದಿಂದ ಭಾರತಕ್ಕೆ ಹೋಗಬೇಕಾಯಿತು. ನನಗೆ ಪ್ಲೂರಿಸಿ ಎನ್ನುವ ವ್ಯಾಧಿ ಇದ್ದಾಗ್ಯೂ ಸೈನ್ಯಕ್ಕೆ ಜನರನ್ನು ಸೇರಿಸುವ ಆ ಕಾರ್ಯದಲ್ಲಿ ತೊಡಗಿದೆ. ಇದರಿಂದ ನನ್ನ ಪ್ರಾಣಕ್ಕೇ ಅಪಾಯವಾಯಿತು. ನನ್ನ ಮಿತ್ರರೆಲ್ಲರಿಗೂ ಗಾಬರಿಯೂ ಕಳವಳವೂ ಉಂಟಾಯಿತು. ಆದರೆ ೧೯೧೯ರಲ್ಲಿ ಕರಾಳಶಾಸನವಾದ ರೌಲಟ್ ಕಾನೂನನ್ನು ವಿಧಿಸಿದರು ಮತ್ತು ನಮಗೆ ನಡೆದಿದ್ದ ಸ್ವಯಂಸಿದ್ಧ ಅನ್ಯಾಯಗಳಿಗೆ ಯಾವ ಪರಿಹಾರವನ್ನೂ ಕೊಡದೆ ನಮ್ಮ ಅಲ್ಪವಾದ ಬೇಡಿಕೆಗಳನ್ನೂ ನಿರಾಕರಿಸಿದರು. ಆಗ ವಸ್ತುಸ್ಥಿತಿ ಅರಿವಾಯಿತು. ಬ್ರಿಟಿಷ್ ಆಡಳಿತದಲ್ಲಿ ನನಗಿದ್ದ ಭ್ರಮೆ ಹಾರಿಹೋಯಿತು. ಆದುದರಿಂದ ೧೯೨೦ರಲ್ಲಿ ನಾನು ಬಂಡುಕೋರನಾದೆ. ಜನತೆಯ ಮೂಲಭೂತ ವಿಷಯಗಳ ಸಾಧನೆ ಕೇವಲ ವಿಚಾರಶಕ್ತಿಯಿಂದಲೇ ಸಾಧ್ಯವಿಲ್ಲ, ಅವರ

ಪರಿಶ್ರಮದಿಂದಲೇ ಅದನ್ನು ಗಳಿಸಬೇಕೆಂದು ನನಗೆ ಅಂದಿನಿಂದ ಅರಿವಾಯಿತು. ಕಷ್ಟಸಹಿಷ್ಣುತೆಯೇ ಮಾನವರ ನಿಯಮ; ಯುದ್ಧ ಅಡವಿಯ ನಿಯಮ. ಎದುರಾಳಿಯನ್ನು ಪರಿವರ್ತಿಸಿ, ವಿಚಾರದ ವಾಣಿಗೆ ಕಿವುಡಾಗಿರುವ ಅವನ ಕಿವಿಗಳನ್ನು ತೆರೆಸಲು ಕಷ್ಟಸಹನೆಯೇ ಅಡವಿಯ ನಿಯಮಕ್ಕಿಂತ ಅಸಂಖ್ಯ ಪಾಲು ಹೆಚ್ಚು ಶಕ್ತಿಶಾಲಿ. ಪ್ರಾಯಶಃ ನನ್ನಷ್ಟು ಅರ್ಜಿಗಳನ್ನು ಬರೆದವರಿಲ್ಲ. ಜಯಪ್ರದವಾಗಲಾರದ ವಿಷಯಗಳಿಗಾಗಿ ನನ್ನಷ್ಟು ಪ್ರಾರ್ಥನೆಗಳನ್ನು ಹೊತ್ತವರೂ ಬೇರೊಬ್ಬರಿರಲಾರರು. ಈ ಅನುಭವಗಳಾದಮೇಲೆ ಒಂದು ನಿಶ್ಚಿತವಾದ ಸಿದ್ಧಾಂತಕ್ಕೆ ಬಂದಿದೇನೆ. ಏನಾದರೂ ಮುಖ್ಯವಾದ ವಿಷಯಗಳನ್ನು ಸಂಪಾದಿಸಬೇಕಾಗಿದ್ದರೆ ಕೇವಲ ವಿಚಾರಶಕ್ತಿಯನ್ನು ತೃಪ್ತಿಪಡಿಸಿದರೆ ಸಾಲದು, ಹೃದಯವನ್ನು ಪರಿವರ್ತಿಸಬೇಕು. ವಿಚಾರಶಕ್ತಿ ಕೇವಲ ಮೆದುಳನ್ನು ಮುಟ್ಟುತ್ತದೆ. ಆದರೆ ಕಷ್ಟಗಳು ಹೃದಯವನ್ನು ಮುಟ್ಟುತ್ತವೆ. ಮನುಷ್ಯನ ಅಂತರಂಗವು ತೆರೆಯುವಂತೆ ಆಗುಮಾಡುತ್ತವೆ. ಕಷ್ಟಸಹಿಷ್ಣುತೆಯೇ ಮನುಷ್ಯಕುಲದ ಪ್ರಾಣಪದಕ—ಶಸ್ತ್ರಧಾರಣೆಯಲ್ಲ.

(ಯಂಗ್ ಇಂಡಿಯಾ, ೫–೧೧–೧೯೩೧)

## ಸಾಮಾಜಿಕ ಬಹಿಷ್ಕಾರ

ಅಸಹಕಾರ ಆಂದೋಲನ ಒಂದು ಶುದ್ಧೀಕರಣದ ಉದ್ಯಮ. ಇದರಲ್ಲಿ ನಮ್ಮ ದೌರ್ಬಲ್ಯಗಳು ಮೇಲಕ್ಕೆ ಬರುತ್ತವೆ. ಹಾಗೆಯೇ ನಮ್ಮ ಶಕ್ತಿವಿಶೇಷಗಳ ಅತಿರೇಕಗಳೂ ಕಾಣಿಸಿಕೊಳ್ಳುತ್ತವೆ. ಸಾಮಾಜಿಕ ಬಹಿಷ್ಕಾರ ಬಹಳ ಹಳೆಯ ಸಂಪ್ರದಾಯ. ಜಾತಿಭೇದ ಹುಟ್ಟಿದಾಗಲೆ ಅದೂ ಹುಟ್ಟಿತು. ಇದು ಬಹಳ ಪರಿಣಾಮಕಾರಿಯಾದ, ಘೋರವಾದ ಶಸ್ತ್ರ. ಬಹಿಷ್ಕೃತನಾದವನಿಗೆ ಸಮಾಜವು ಯಾವ ವಿಧವಾದ ಸೇವೆಯನ್ನಾಗಲಿ ಆದರವನ್ನಾಗಲಿ ಮಾಡಬೇಕಾಗಿಲ್ಲವೆಂಬ ಅಭಿಪ್ರಾಯದ ಮೇಲೆ ಇದರ ಪ್ರಯೋಗವಾಗುತ್ತದೆ. ಪ್ರತಿ ಗ್ರಾಮವೂ ಸ್ವಯಂ ಪೂರ್ಣವಾಗಿದ್ದು—ಅದನ್ನು ಎದುರಿಸುವವರು ಕೆಲವರೇ ಇದ್ದಾಗ ಈ ಶಸ್ತ್ರದ ಪ್ರಯೋಗ ಸರಿಹೋಗುತ್ತಿತ್ತು. ಆದರೆ ಈಗಿನಂತೆ ಅಸಹಕಾರದ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿದ್ದಾಗ, ಅದರ

ಪ್ರಯೋಗವೇ ಹೊಸದಾಗಿದ್ದಾಗ, ಅಲ್ಪಸಂಖ್ಯಾತರನ್ನು ಬಹುಸಂಖ್ಯಾತರು ಈ ಬಹಿಷ್ಕಾರದಿಂದ ತಮ್ಮ ಅಭಿಪ್ರಾಯಕ್ಕೆ ತಿರುಗುವಂತೆ ಒತ್ತಾಯಪಡಿಸುವುದು ಅಕ್ಷಮ್ಯವಾದ ಹಿಂಸಾಕೃತ್ಯವೇ ಆಗುವುದು. ಹೀಗೆ ಬಹಿಷ್ಕಾರವು ಮುಂದುವರಿದರೆ ಈ ಆಂದೋಲನವೇ ನಾಶವಾಗುವುದು. ಸಾಮಾಜಿಕ ಬಹಿಷ್ಕಾರವು ಒಂದು ಶಿಸ್ತಿನ ಕ್ರಮದಂಡನೆಯಲ್ಲವೆಂದು ಬಹಿಷ್ಕೃತರಾದವರು ಒಪ್ಪಿಕೊಂಡರೆ ಬಹಿಷ್ಕಾರದ ಪ್ರಯೋಗ ಪರಿಣಾಮಕಾರಿಯಾಗುವುದು. ಮತ್ತು ಅಹಿಂಸಾತ್ಮಕವಾದ ಆಂದೋಲನದಲ್ಲಿ ಬಹಿಷ್ಕಾರ ಕ್ರಮವನ್ನೂ ಕೈಗೊಳ್ಳಬೇಕಾದರೆ ಇದರಲ್ಲಿ ಕ್ರೌರ್ಯದ ಸುಳಿವೇ ಇರಬಾರದು. ಸಭ್ಯತೆಯಿಂದ ಕೂಡಿರಬೇಕು. ಯಾರ ಮೇಲೆ ಪ್ರಯೋಗವಾಗುವುದೊ ಅವರಿಗೆ ತೊಂದರೆಯಾಗುವಷ್ಟೇ ಪ್ರಯೋಗಮಾಡುವವರಿಗೂ ನೋವಾಗಬೇಕು. ಝಾಂಸಿಯಲ್ಲಿ ವೈದ್ಯಕೀಯ ಸಹಾಯವನ್ನು ಎಲ್ಲರಿಗೂ ನಿಲ್ಲಿಸಲಾಗಿದೆಯೆಂದು ವರದಿಯಾಗಿದೆ. ಇಂತಹ ಕ್ರೌರ್ಯ ನೈತಿಕ ದೃಷ್ಟಿಯಿಂದ ಹತ್ಯಕ್ಕೆ ಸಮವಾಗುತ್ತದೆ. ಕೊಲೆ ಮಾಡುವುದಕ್ಕೂ ಸಾಯುತ್ತಿರುವ ಮನುಷ್ಯನಿಗೆ ವೈದ್ಯಸಹಾಯ ಸಿಗದಂತೆ ಮಾಡುವುದಕ್ಕೂ ನಾನು ಯಾವ ಭೇದವನ್ನೂ ಕಾಣುವುದಿಲ್ಲ. ಹಿಂಸಾತ್ಮಕ ಯುದ್ಧಗಳಲ್ಲಿಯೂ ಸಹ ನೊಂದವರಿಗೆ ಅವರು ಶತ್ರುಪಕ್ಷದರಾಗಿದ್ದರೂ ವೈದ್ಯಸಹಾಯಕ್ಕೆ ಅವಕಾಶ ಮಾಡಿಕೊಡುವುದು ಒಂದು ನಿಯಮವಾಗಿದೆ. ಹಳ್ಳಿಯಲ್ಲಿರುವ ಒಂದೇ ಬಾವಿಯ ಬಳಿ ಬರಬಾರದೆಂದು ಕಟ್ಟುಮಾಡಿದರೆ ಬಹಿಷ್ಕೃತನನ್ನು ಹಳ್ಳಿಯಿಂದ ಓಡಿಸಿದಂತೆಯೇ ಆಗುವುದು. ಅಸಹಕಾರ ಚಳುವಳಿಯಲ್ಲಿ ಭಾಗಿಗಳಾಗುವವರು, ತಮ್ಮ ಅಭಿಪ್ರಾಯಕ್ಕೆ ಒಪ್ಪದೆ ಇರುವವರ ಮೇಲೆ ಈ ರೀತಿಯ ದಬ್ಬಾಳಿಕೆಯನ್ನು ಮಾಡಲು ಅವರಿಗೆ ಯಾವ ಅಧಿಕಾರವೂ ಇಲ್ಲ. ಇದೊಂದು ಆಧ್ಯಾತ್ಮಿಕ ಆಂದೋಲನ. ತಾಳ್ಮೆಗೆಡುವುದರಿಂದಲೂ ಅಸಹನೆಯಿಂದಲೂ ಈ ಆಂದೋಲನಕ್ಕೆ ಸಂಚಕಾರವುಂಟಾಗುವುದು. ಒತ್ತಾಯಪೂರ್ವಕ ಮನುಷ್ಯರನ್ನು ಶುದ್ಧರನ್ನಾಗಿ ಮಾಡಲಾಗದು. ನಮ್ಮ ಅಭಿಪ್ರಾಯಕ್ಕೆ ಮನ್ನಣೆ ಕೊಡಬೇಕೆಂದು ಹಿಂಸೆಯ ಮೂಲಕ ಮೊದಲೇ ಸಾಧ್ಯವಿಲ್ಲ. ನಾವು ಪ್ರಜಾಸತ್ತೆಯನ್ನು ಬೆಳೆಸಬೇಕೆಂದು ಬಯಸುತ್ತೇವೆ. ಈ ನಡವಳಿಕೆಗಳು ಅದಕ್ಕೆ ವಿರುದ್ಧವಾದುವು.

ಆದುದರಿಂದ ಅಸಹಕಾರ ಚಳುವಳಿಯ ಕಾರ್ಯಕರ್ತರು ಸಾಮಾಜಿಕ

ಬಹಿಷ್ಕಾರದ ಅಪಾಯಗಳನ್ನು ಕಂಡು ಎಚ್ಚರಗೊಳ್ಳುವರೆಂದು ನಂಬಿದೇನೆ. ಆದರೆ ಬಹಿಷ್ಕಾರವಿಲ್ಲದಿದ್ದರೆ ಸಹವಾಸ ಸಹಾನುಭೂತಿಯೆಂದು ಅರ್ಥವಲ್ಲ. ಸಾರ್ವಜನಿಕ ಅಭಿಪ್ರಾಯವನ್ನು ತಿರಸ್ಕರಿಸುವವನು ಸಮಾಜದ ಗೌರವಕ್ಕೂ ಅರ್ಹನಲ್ಲ. ಅವನ ಮನೆಯಲ್ಲಿ ಮದುವೆಯಾದರೆ ನಾವು ಹೋಗಬೇಕಾಗಿಲ್ಲ. ಅವನಿಂದ ಯಾವ ಕಾಣಿಕೆಯನ್ನೂ ನಾವು ಸ್ವೀಕರಿಸಲಾಗದು. ಆದರೆ ಅವನಿಗೆ ಅವಶ್ಯವಿದ್ದಾಗ ನಾವು ಸೇವೆಯನ್ನು ಮಾಡಲಾರೆವೆಂದು ಹೇಳಲಾಗದು. ಇದು ನಮ್ಮ ಕರ್ತವ್ಯ. ಔತಣಗಳಿಗೆ ಹೋಗುವುದೂ ಬಿಡುವುದೂ ಐಚ್ಛಿಕ ವಿಷಯ. ಅದು ಅವನಿಗೆ ಗೌರವ ತೋರಿಸುವ ಮಾತು. ಈ ಬಹಿಷ್ಕಾರದ ವಿಷಯದಲ್ಲಿ ನಾವು ವಿಚಕ್ಷಣೆಯಿಂದ ನಡೆದುಕೊಳ್ಳಬೇಕು. ಆಯಾ ಸಂದರ್ಭಗಳಿಗನುಸಾರವಾಗಿ ಅಸಹಕಾರ ಪ್ರಯೋಗವನ್ನು ಮಾಡಬೇಕು. ಈ ಅಸ್ತ್ರ ಪ್ರಯೋಗಿಸುವವರಿಗೆ ಅಪಾಯಕರ—ಇದನ್ನು ಪ್ರಯೋಗಿಸಲೇಬೇಕೆಂಬ ಕರ್ತವ್ಯವೇನಿಲ್ಲ. ನಮ್ಮ ಆಂದೋಲನಕ್ಕೆ ಇದರಿಂದ ಹಾನಿ ಉಂಟಾದರೆ ಯಾರೂ ಈ ಅಸ್ತ್ರವನ್ನು ಪ್ರಯೋಗಿಸಬಾರದು.

## ಎಲ್ಲ ಜೀವರಾಶಿಗಳ ನಿಯಮ—ಅಹಿಂಸೆ

ಒಬ್ಬನು ತಾನು ಅಹಿಂಸಾವಾದಿಯೆಂದು ಹೇಳಿಕೊಂಡರೆ, ಯಾರಾದರೂ ಅವನಿಗೆ ಕೆಡಕು ಮಾಡಿದರೂ ಅವನು ಕೋಪಗೊಳ್ಳಬಾರದು. ಹಿಂಸೆ ಮಾಡಿದವನಿಗೆ ಕೆಡಕಾಗಬೇಕೆಂತಲೂ ಬಯಸಬಾರದು. ಅವನಿಗೆ ಒಳ್ಳೆಯದಾಗಬೇಕೆಂದೇ ಬಯಸಬೇಕು. ಅವನನ್ನು ಶಪಿಸಬಾರದು. ದೇಹಕ್ಕೆ ನೋವಾಗುವಂತಹ ಯಾವ ವಿಧವಾದ ಕಾರ್ಯವನ್ನೂ ಮಾಡಬಾರದು. ಎದುರಾಳಿ ಏನು ಮಾಡಿದರೂ ಅದನ್ನು ಸಹಿಸಬೇಕು. ಹೀಗೆ ಅಹಿಂಸೆಯೆಂದರೆ ಪೂರ್ತಿಯಾಗಿ ಕೆಡಕು ಮಾಡದಿರುವಿಕೆ. ಪೂರ್ಣ ಅಹಿಂಸೆಯೆಂದರೆ ಎಲ್ಲ ಜೀವರಾಶಿಗಳ ವಿಷಯದಲ್ಲಿಯೂ ಅವಕ್ಕೆ ಒಳ್ಳೆಯದಾಗಲೆಂದು ಬಯಸುವುದು. ಆದುದರಿಂದ ಈ ನಿಯಮಕ್ಕೆ ಮನುಷ್ಯವರ್ಗಮಾತ್ರವಲ್ಲದೆ ಕನಿಷ್ಠವಾದ ಎಲ್ಲ ತಿರ್ಯಗ್ಜಂತುಗಳೂ ಕ್ರಿಮಿಕೀಟಾದಿಗಳೂ ಮೃಗಗಳೂ ಸೇರಿಕೊಳ್ಳುತ್ತವೆ. ನಾವು ನಾಶ ಮಾಡಬೇಕೆಂದು ಅವುಗಳ ಸೃಷ್ಟಿ ಆಗಿಲ್ಲ. ಜಗತ್ಕರ್ತನ ಉದ್ದೇಶ್ಯವನ್ನು ನಾವು

ಅರಿಯಲು ಸಾಧ್ಯವಾದರೆ ಅವೆಲ್ಲಕ್ಕೂ ಸೃಷ್ಟಿಯಲ್ಲಿ ಏನೋ ನಿಕರವಾದ ಸ್ಥಾನ ಇದೆ. ಆದುದರಿಂದ ಚಟುವಟಿಕೆಯಿಂದ ಅಹಿಂಸೆಯನ್ನು ಆಚರಿಸಿದರೆ ಎಲ್ಲ ಜೀವರಾಶಿಗಳ ವಿಷಯದಲ್ಲಿಯೂ ಶುಭಾಕಾಂಕ್ಷೆ ಇರಬೇಕು. ಅದು ಶುದ್ಧವಾದ ಪ್ರೇಮ. ಈ ತತ್ತ್ವವನ್ನು ನಾನು ಹಿಂದೂ ಶಾಸ್ತ್ರಗಳಲ್ಲಿ ಕಾಣುತ್ತೇನೆ— ಬೈಬಲ್ ಮತ್ತು ಕುರಾನಿನಲ್ಲಿಯೂ ಕಾಣುತ್ತೇನೆ.

ಅಹಿಂಸೆ ಒಂದು ಸಿದ್ಧಾವಸ್ಥೆ—ಪರಿಪೂರ್ಣತೆಯ ಭೂಮಿಕೆ. ಆ ಗುರಿಯ ಕಡೆ ಮಾನವರು ತಮಗೆ ತಿಳಿಯದೆಯೇ ಸ್ವಾಭಾವಿಕವಾಗಿ ಮುಂದುವರಿಯುತ್ತಿದಾರೆ. ಒಬ್ಬ ಮನುಷ್ಯನು ಇತರರಿಗೆ ಕೆಡಕನ್ನುಂಟುಮಾಡದೆ ಇರುವುದರಿಂದಲೇ ದೈವಾಂಶವನ್ನು ಪಡೆಯುವುದಿಲ್ಲ. ಆಗಲೆ ನಿಜವಾಗಿಯೂ ಅವನು ಮಾನವನಾಗುತ್ತಾನೆ. ಈಗಿನ ಸ್ಥಿತಿಯಲ್ಲಿ ನಾವು ಒಂದು ಅಂಶ ಮಾನವರು, ಒಂದು ಅಂಶ ಮೃಗಗಳು. ಏಟಿಗೆ ಏಟು ಕೊಟ್ಟು ಸೇಡು ತೀರಿಸಿಕೊಂಡು, ಅವಶ್ಯವಿದ್ದಷ್ಟು ಕೋಪವನ್ನು ತಾಳುವುದರಿಂದಲೆ ನಮ್ಮ ಮಾನವಜಾತಿಯ ಗೌರವವನ್ನು ಕಾಪಾಡುತ್ತೇವೆಂದು ಹೇಳುತ್ತೇವೆ. ಇದು ಅಜ್ಞಾನದಿಂದಲೂ ಅಹಂಕಾರದಿಂದಲೂ ಹುಟ್ಟುವ ಮಾತು. ಪ್ರತಿರೋಧ, ಮುಯ್ಯಿಗೆ ಮುಯ್ಯಿ— ಇದೇ ಮಾನವಜಾತಿಯ ನಿಯಮವೆಂದು ನೆವ ಮಾಡಿಕೊಂಡು ವರ್ತಿಸುತ್ತೇವೆ. ಆದರೆ ಧರ್ಮಗ್ರಂಥಗಳಲ್ಲಿ ಹೀಗೆ ಮಾಡಬೇಕೆಂದು ಎಲ್ಲಿಯೂ ವಿಧಿಸಿಲ್ಲ. ಇದೊಂದು ಅಪವಾದವಾಗಿ ಮುಯ್ಯಿಗೆ ಮುಯ್ಯಿ ತೀರಿಸಿಕೊಳ್ಳುವ ಅವಕಾಶ ಕೊಟ್ಟಿರಬಹುದು. ಸಂಯಮವನ್ನೇ ಶಾಸ್ತ್ರಗಳು ವಿಧಿಸಿವೆ. ಮುಯ್ಯಿಗೆ ಮುಯ್ಯಿ ತೀರಿಸಿಕೊಳ್ಳುವುದು ಸ್ವೇಚ್ಛಾವೃತ್ತಿ. ಅದಕ್ಕೆ ವಿಪುಲವಾದ ನಿಯಮಗಳನ್ನು ಹಾಕಬೇಕಾಗುತ್ತದೆ. ಸಂಯಮವೇ ಜೀವನದ ನಿಯಮ. ಏಕೆಂದರೆ ಅತ್ಯುತ್ತಮವಾದ ಪೂರ್ಣತೆಯನ್ನು ಅತ್ಯುತ್ತಮವಾದ ಸಂಯಮವಿಲ್ಲದೆಯೆ ಸಾಧಿಸಲು ಸಾಧ್ಯವಿಲ್ಲ. (ಯಂಗ್ ಇಂಡಿಯಾ, ೯–೩–೧೯೨೨)

## ಹಿಂದೂ ಧರ್ಮ ಮತ್ತು ಅಹಿಂಸೆ

ನಾನು ಅಹಿಂಸಾವಾದವನ್ನು ತೀವ್ರವಾಗಿ ಮಾಡುತ್ತಿರುವುದರಿಂದ ನಾನು ಹಿಂದುವೆಂದು ಹೇಳಿಕೊಳ್ಳುವುದನ್ನೇ ಕೆಲವರು ಒಪ್ಪುವುದಿಲ್ಲ. ನಾನು ವೇಷ

ಧಾರಿಯಾದ ಕ್ರಿಸ್ತಮತಾವಲಂಬಿಯೆಂದು ಹೇಳುತ್ತಾರೆ. ಗೀತೆ ಶುದ್ಧವಾದ ಅಹಿಂಸೆಯನ್ನು ಉಪದೇಶಮಾಡುತ್ತದೆ ಎಂದು ನಾನು ಹೇಳುವುದರಿಂದ ಗೀತೆಗೆ ಅಪಾರ್ಥವನ್ನು ಮಾಡುತ್ತೇನೆಂದೂ ಹೇಳುತ್ತಾರೆ. ಕೆಲವು ಸಂದರ್ಭಗಳಲ್ಲಿ ಕೊಲ್ಲುವುದೇ ಕರ್ತವ್ಯವೆಂದು, ಗೀತೆಯ ಉಪದೇಶವೆಂದು ಕೆಲವು ಹಿಂದೂ ಮಿತ್ರರು ನನಗೆ ಹೇಳುತ್ತಾರೆ. ದೊಡ್ಡ ವಿದ್ವಾಂಸರೊಬ್ಬರು, ಕೆಲವೇ ದಿನಗಳ ಹಿಂದೆ, ನಾನು ಗೀತೆಗೆ ಮಾಡಿದ್ದ ಅರ್ಥವನ್ನು ಅಲ್ಲಗಳೆದು ತಳ್ಳಿಹಾಕಿದರು. ಗೀತೆಯಲ್ಲಿ ವಿವರಿಸಿರುವುದು ದೈವಿಕ ಮತ್ತು ಆಸುರೀ ಶಕ್ತಿಗಳ ಮಧ್ಯೆ ನಿತ್ಯವೂ ನಡೆಯುತ್ತಿರುವ ಯುದ್ಧದ ವರ್ಣನೆಯೆಂದೂ, ನಮ್ಮಲ್ಲಿರುವ ದುಷ್ಟ ಶಕ್ತಿಗಳನ್ನು ಯಾವ ದಯೆ–ದಾಕ್ಷಿಣ್ಯವಿಲ್ಲದೆ ಕಿತ್ತುಹಾಕುವುದೇ ನಮ್ಮ ಕರ್ತವ್ಯವೆಂದೂ ಕೆಲವು ವ್ಯಾಖ್ಯಾನಕಾರರು ಹೇಳುವ ಅಭಿಪ್ರಾಯಕ್ಕೆ ಆಧಾರವೇ ಇಲ್ಲವೆಂದರು. (ನನ್ನನ್ನುದ್ದೇಶಿಸಿ ಹೇಳಿದ ಮಾತಿದು.)

ಅಹಿಂಸೆಯ ವಿರುದ್ಧವಾಗಿ ಮಾಡುವ ಆಕ್ಷೇಪಣೆಗಳನ್ನೂ ಅವಕ್ಕೆ ನನ್ನ ಪರಿಹಾರಗಳನ್ನೂ ತಿಳಿಯಬೇಕಾದರೆ ಈ ವಿವರಗಳನ್ನು ತಿಳಿಯುವುದು ಆವಶ್ಯಕ. ಅಹಿಂಸೆಯು ವ್ಯಾಪಕವಾಗದಂತೆ ಪ್ರತಿಭಟನಾಶಕ್ತಿಗಳು ಕೆಲಸ ಮಾಡುತ್ತಿರುವುದನ್ನು ನಾನು ಸುತ್ತಲೂ ಕಾಣುತ್ತೇನೆ. ಹಿಂಸೆಯ ತರಂಗಗಳು ಏಳುತ್ತಿರುವಂತೆ ನನಗೆ ತೋರುತ್ತದೆ. ಹಿಂದೂ–ಮುಸಲ್ಮಾನ ವೈಷಮ್ಯ ನಾವು ಆಯಾಸಗೊಂಡಿರುವುದಕ್ಕೆ ಒಂದು ನಿದರ್ಶನ.

ನನ್ನ ವಿಷಯವನ್ನು ಜನರು ಮರೆಯಲಿ. ನನ್ನ ಧರ್ಮ–ಮತ ಇವು ನನಗೂ ಭಗವಂತನಿಗೂ ಸಂಬಂಧಿಸಿದುದು. ಹಿಂದೂ ಜನರೆಲ್ಲ ನನ್ನನ್ನು ಒಪ್ಪಿಕೊಳ್ಳದಿದ್ದರೂ ನಾನು ಹಿಂದುವಾಗಿರದೆ ಹೋಗಲಾರೆ. ಆದರೆ ನಾನು ಹೇಳ ಬಯಸುವುದಿಷ್ಟೆ : ಅಹಿಂಸೆಯೇ ಎಲ್ಲ ಮತ–ಧರ್ಮಗಳ ಅಂತಿಮಧ್ಯೇಯ.

ಅಹಿಂಸೆಯ ಪರಮಾವಧಿಯ ಸ್ವರೂಪವನ್ನು ನಾನು ಭಾರತದೇಶದ ಮುಂದೆ ಇಡುತ್ತಿಲ್ಲ. ಈ ಪ್ರಾಚೀನ ತತ್ತ್ವವನ್ನು ಸಾರಲು ನನ್ನಲ್ಲಿ ಸಾಕಷ್ಟು ಯೋಗ್ಯತೆ ಇಲ್ಲದಿರುವುದು ಇದಕ್ಕೆ ಕಾರಣ. ನನ್ನ ಬುದ್ಧಿಶಕ್ತಿಯಿಂದ ನಾನಿದನ್ನು ಚೆನ್ನಾಗಿ ಗ್ರಹಿಸಿದ್ದರೂ ಅದನ್ನು ನನ್ನ ಜೀವನದಲ್ಲಿ ಪೂರ್ತಿಯಾಗಿ ಅಳವಡಿಸಿಕೊಂಡಿಲ್ಲ. ನಾನು ಪದೇ ಪದೇ ಅನುಷ್ಠಾನಕ್ಕೆ ತಂದುದನ್ನು ಮಾತ್ರ ಜನರನ್ನು ಮಾಡಿರೆಂದು ಹೇಳುತ್ತೇನೆ. ಇದೇ ನನ್ನ ಬಲ. ಈಗ ನಾನು ದೇಶ

ವನ್ನು ಕೇಳುತ್ತಿರುವುದಿಷ್ಟೆ: ನಮ್ಮ ದೇಶದಲ್ಲಿರುವ ಜಾತಿ-ಕುಲಗಳ ಮಧ್ಯೆ ಇರಬೇಕಾದ ಸಂಬಂಧವನ್ನು ಸರಿಪಡಿಸಲು ಮತ್ತು ಸ್ವರಾಜ್ಯವನ್ನು ಸಂಪಾದಿಸಲು ಅಹಿಂಸೆಯ ನಿಯಮವನ್ನು ಪೂರ್ಣವಾಗಿ ಒಪ್ಪಿಕೊಳ್ಳಿರೆಂದು. ಹಿಂದೂಗಳು, ಮುಸಲ್ಮಾನರು, ಕ್ರೈಸ್ತರು, ಸಿಕ್ಕರು, ಪಾರಸೀಗಳು ತಮ್ಮ ಪರಸ್ಪರ ವ್ಯಾಜ್ಯಗಳನ್ನು ತೀರಿಸಿಕೊಳ್ಳಲು ಹಿಂಸಾಮಾರ್ಗವನ್ನು ಹಿಡಿಯಬಾರದು. ಸ್ವರಾಜ್ಯವನ್ನು ಪ್ರಾಪ್ತಿಸಿಕೊಳ್ಳಲು ನಾವು ಅಹಿಂಸಾಮಾರ್ಗವನ್ನು ಹಿಡಿಯಬೇಕು. ಇದನ್ನು ನಾನು ದೇಶದ ಮುಂದೆ ಇಡುವುದು ನಾವು ದುರ್ಬಲರೆಂಬ ಕಾರಣದಿಂದಲ್ಲ, ಶಕ್ತಿಯುತರೆಂದು. ಹಿಂದೂಗಳೂ ಮುಸಲ್ಮಾನರೂ ಧರ್ಮದಲ್ಲಿ ಯಾವ ಬಲೋದ್ಬಂಧವೂ ಇರಬಾರದೆಂದು ಹೇಳುವರು. ಬರಿ ಬಾಯಿಮಾತು. ಗೋರಕ್ಷಣೆಗಾಗಿ ಹಿಂದೂಗಳು ಮುಸಲ್ಮಾನರನ್ನು ಕೊಲ್ಲಲಿಚ್ಛಿಸಿದರೆ ಅದು ಬಲೋದ್ಬಂಧವಲ್ಲವೆ? ಒಬ್ಬ ಮುಸಲ್ಮಾನನನ್ನು ಹಿಂದುವನ್ನಾಗಿ ಬಲಪ್ರಯೋಗದಿಂದ ಮಾಡಿದಂತೆ ಆಗುವುದು. ಹೀಗೆಯೇ ಹಿಂದೂಗಳು ಮಸೀದಿಗಳ ಮುಂದೆ ವಾದ್ಯಗಳನ್ನು ಬಾರಿಸದಂತೆ ತಡೆಗಟ್ಟುವುದೂ ಬಲಪ್ರಯೋಗವೇ ಆಗುವುದು. ಪ್ರಾರ್ಥನೆಯಲ್ಲಿರುವವರು ಸುತ್ತುಮುತ್ತಲು ಗದ್ದಲವಿದ್ದರೂ ತಮ್ಮ ಪ್ರಾರ್ಥನೆಯಲ್ಲಿ ಮಗ್ನರಾಗಿರುವುದೇ ಗುಣವಿಶೇಷ. ನಾವು ಪರಸ್ಪರ ಈ ರೀತಿಯ ವ್ಯರ್ಥವಾದ ಬಲಪ್ರಯೋಗದಿಂದ ನಮ್ಮ ಮತಕ್ಕೆ ಗೌರವ ಕೊಡಬೇಕೆಂದು ಅನ್ಯಮತೀಯರನ್ನು ನಿರ್ಬಂಧಪಡಿಸಿದರೆ, ಮುಂದಿನ ಪೀಳಿಗೆಯುವರು ನಮ್ಮಿಬ್ಬರನ್ನು ಯಾವ ಧರ್ಮದ ಗಂಧವೂ ಇಲ್ಲದ ಕಾಡುಜನರೆಂದು ಅಭಿಪ್ರಾಯಪಡುವರು. ಮತ್ತು ಒಂದು ಲಕ್ಷ ಇಂಗ್ಲೀಷ್ ಜನರಿಗೆ ಬುದ್ಧಿ ಕಲಿಸಲು ಮೂವತ್ತು ಕೋಟಿ ಜನರಿರುವ ಜನಾಂಗ ಹಿಂಸಾಮಾರ್ಗವನ್ನು ಹಿಡಿಯಬೇಕಾದರೆ ಇದು ನಾಚಿಕೆಗೇಡು. ಅವರ ಮನಸ್ಸನ್ನು ಪರಿವರ್ತನೆಗೊಳಿಸಲು —ಹಾಗೆ ನೀವು ಬಯಸಿದರೆ, ಅವರನ್ನು ದೇಶದಿಂದ ಓಡಿಸಲು ಶಸ್ತ್ರಬಲ ಬೇಡ—ಸಂಕಲ್ಪಬಲ ಸಾಕು. ಸಂಕಲ್ಪಬಲವಿಲ್ಲದೆ ಶಸ್ತ್ರಬಲವೂ ದೊರೆಯಲಾರದು. ನಾವು ನಮ್ಮ ಸಂಕಲ್ಪಶಕ್ತಿಯನ್ನು ಬೆಳೆಸಿಕೊಂಡರೆ ಶಸ್ತ್ರಬಲವೇ ನಮಗೆ ಅವಶ್ಯವಿಲ್ಲವೆಂದು ಗೊತ್ತಾಗುವುದು.

ನಮ್ಮ ಜನಾಂಗ ಉಳಿಯಬೇಕಾದರೆ ನಾನು ವಿವರಿಸಿರುವ ಕಾರಣಗಳಿಗಾಗಿ ನಾವು ಅಹಿಂಸಾ ಮಾರ್ಗವನ್ನು ಅವಲಂಬಿಸಬೇಕು. ಇದೇ

ಸಹಜವೂ ಆವಶ್ಯಕವೂ ಆದ ಉಪಾಯ. ನಮ್ಮ ಸಾಮೂಹಿಕ ದೈಹಿಕಶಕ್ತಿಯನ್ನು ವ್ಯರ್ಥಮಾಡದೆ ಅದನ್ನು ಸಂಚಯಿಸಿ ಉತ್ತಮವಾದ ಮಾರ್ಗಗಳಲ್ಲಿ ವಿನಿಯೋಗ ಮಾಡಲು ಇದರಿಂದ ನಾವು ಪಾಠ ಕಲಿಯುವೆವು. ಈಗ ನಮ್ಮ ಶಕ್ತಿಯನ್ನು ಪರಸ್ಪರ ಯಾದವೀ ಕಲಹಗಳಲ್ಲಿ ಕಳೆದುಕೊಳ್ಳುತ್ತಿದೇವೆ. ಎಲ್ಲ ಪಕ್ಷಗಳೂ ಈ ವ್ಯಯದಿಂದ ದುರ್ಬಲರಾಗಿ ಬಳಲಿದಾರೆ. ಇಡೀ ಜನಾಂಗದ ಬೆಂಬಲವಿದ್ದರೆ ಸಶಸ್ತ್ರಪಾಣಿಗಳಾಗಿ ಬಂಡಾಯವನ್ನೆಬ್ಬಿಸುವುದು ಹುಚ್ಚು ಕೆಲಸವಾದೀತು. ಆದರೆ ಅಸಹಕಾರದ ಪ್ರತಿಯೊಂದು ವಿಷಯವೂ ಜನರ ಪೂರ್ಣ ಬೆಂಬಲವಿದ್ದ ಪಕ್ಷಕ್ಕೆ ಒಂದು ತೊಟ್ಟು ರಕ್ತವನ್ನೂ ಸುರಿಸದೆ ನಮ್ಮ ಗುರಿಯನ್ನು ಮುಟ್ಟಿಸೀತು. (ಯಂಗ್ ಇಂಡಿಯಾ, ೨೮–೫–೧೯೨೪)

## ಎಲ್ಲಕ್ಕೂ ಉತ್ತಮವಾದ ಶೌರ್ಯ

ರಾವಣನ ಮೇಲೆ ರಾಮನು ಗಳಿಸಿದ ಜಯವನ್ನು ದಸರಾ ಮಹೋತ್ಸವದಲ್ಲಿ ಕೊಂಡಾಡುತ್ತೇವೆ. ಆದರೆ ಈ ಜಯ ಹಿಂಸಾಮಾರ್ಗದಿಂದ ಸಾಧಿಸಿದುದಲ್ಲ. ವಿಭೀಷಣನು ರಾಮನನ್ನು ಪ್ರಶ್ನಿಸಿದನು : 'ರಾಮ ! ಆಯುಧಗಳಿಲ್ಲದೆ, ಕವಚವಿಲ್ಲದೆ ಅನೇಕ ರಥಗಳನ್ನುಳ್ಳ, ಶಸ್ತ್ರಸಜ್ಜಿತನಾಗಿ ಅಪಾರ ಬಲವನ್ನುಳ್ಳ ರಾವಣನನ್ನು ಹೇಗೆ ಎದುರಿಸುವಿ ?' ಅದಕ್ಕೆ ರಾಮನು ಉತ್ತರ ಕೊಟ್ಟನು : 'ನನ್ನ ಶ್ರದ್ಧೆಯೂ ನನ್ನ ಪಾರಿಶುದ್ಧತೆಯೂ ನನಗೆ ಜಯವನ್ನು ದೊರಕಿಸುವುದು. ಆತ್ಮಸಂಯಮವೇ ನನ್ನ ಕೋದಂಡ. ಒಳ್ಳೆಯದು ಕೆಟ್ಟುದನ್ನು ಗೆಲ್ಲುವುದೇ ನನ್ನ ಗೆಲುವು.'

ಗಾಂಧೀಜಿ ಮುಂದುವರಿಯುತ್ತ ತಮ್ಮನ್ನು ಬೈದು ಬರೆಯುವ ಪತ್ರಗಳು ಬರುತ್ತಿವೆಯೆಂದರು. ತಾವು ಉಪದೇಶ ಮಾಡುತ್ತಿರುವ ಅಹಿಂಸೆಯಿಂದ ಹಿಂದೂಗಳು ನಿರ್ವೀರ್ಯವಾಗುತ್ತಿರುವರೆಂದೂ, ತಾವು ಮಹಾತ್ಮರಲ್ಲವೆಂದೂ, ತಮ್ಮಿಂದ ಹಾನಿಯಾಗುತ್ತಿರುವುದೆಂದೂ, ತಾವು ತಪ್ಪುದಾರಿಯಲ್ಲಿ ಜನರನ್ನು ಕೊಂಡೊಯ್ಯುತ್ತಿರುವುದಾಗಿಯೂ ಬರೆದಿರುವರು. ತಾವು ಮಹಾತ್ಮರೆಂದು ಎಂದೂ ಹೇಳಿಕೊಳ್ಳಲಿಲ್ಲವೆಂದು ಗಾಂಧೀಜೀ ಉತ್ತರ ಕೊಟ್ಟರು. ಇತರರಂತೆಯೆ ತಾವೂ ಸಾಮಾನ್ಯ ಮನುಷ್ಯರು. ತಾವು ಯಾರಿಗೂ ಹಾನಿಯುಂಟುಮಾಡ

ಲಿಲ್ಲವೆಂದು ತಮ್ಮ ನಂಬಿಕೆ. ತಾವು ಹೇಳಿದ ಮಾತೆಲ್ಲ ಜನರ ಹಿತಕ್ಕಾಗಿ, ಲೋಕಹಿತಕ್ಕಾಗಿ. ಅಹಿಂಸಾಮಾರ್ಗದಿಂದ ತಮ್ಮನ್ನು ತಾವು ರಕ್ಷಿಸಿಕೊಳ್ಳಲಾಗದಿದ್ದರೆ ಹಿಂಸಾಮಾರ್ಗವನ್ನು ಹಿಡಿಯಲಿ. ಆದರೆ ಹೇಡಿತನ ಬೇಡ. ಆದರೆ ಯಾವ ಪ್ರತಿಭಟನೆಯೂ ಮಾಡದೆ ಸೋದರರನ ಕೈಯಿಂದ ಸಾಯುವುದು ಉತ್ತಮೋತ್ತಮ ಶೌರ್ಯ. (ಹರಿಜನ, ೧೩-೧೦-೧೯೪೬)

## ಅಹಿಂಸೆಗೆ ಪರಿಶುದ್ಧತೆ ಅವಶ್ಯ

ಪ್ರಾರ್ಥನಾಸಭೆಯಲ್ಲಿ ಮಾತನಾಡುತ್ತ ಅಹಿಂಸೆಯು ಶೂರರ ಗುಣ, ಹೇಡಿಗಳದಲ್ಲ—ಆದರೂ ಇದು ಶೂರರ ಗುಣವೆಂಬುದನ್ನು ಪ್ರಚಾರಗೊಳಿಸಲು ಅಶಕ್ತರಾಗಿರುವರೆಂದು ಒಪ್ಪಿಕೊಂಡರು. ಹೀಗೆ ಒಪ್ಪಿದರೂ ಶೂರರು ಈ ಉತ್ತಮ ಗುಣವನ್ನು ಹೇಗೆ ಬೆಳೆಸಬೇಕೆಂಬುದು ಅವರಿಗೆ ತಿಳಿಯದ ವಿಷಯವಲ್ಲ. ಭಗವಂತನು ಚೇತನಮಯನಾಗಿ ನಮ್ಮ ಅಂತರ್ಯಾಮಿಯಾಗಿರುವನೆಂಬ ಪ್ರಜ್ಞೆ ಮೊದಲು ಅವಶ್ಯವಾಗಿರಬೇಕು. ಈ ಪ್ರಜ್ಞೆ ಹುಟ್ಟಬೇಕಾದರೆ ದೇವಸ್ಥಾನಕ್ಕೆ ಹೋಗಬೇಕಾಗಿಲ್ಲ. ನಿತ್ಯಪಾರಾಯಣ ಮಾಡುವುದರಲ್ಲಿ ಕೆಲವು ವಿಷಯಗಳನ್ನು ಗಮನದಲ್ಲಿಡಬೇಕು. ಒಂದುವೇಳೆ ಏಕಕಾಲದಲ್ಲಿ ಲಕ್ಷಾಂತರ ಜನರು ದೇವರನ್ನು ಕುರಿತು ರಾಮನೆಂದೋ, ಅಲ್ಲಾನೆಂದೋ, ಖುದಾನೆಂದೋ, ಅಹುದಾಮಜ್ದಾನೆಂದೋ, ಎಹೋವಾ ಎಂದೋ ಪ್ರಾರ್ಥನೆಯನ್ನು ಸಲ್ಲಿಸಿದರೆಂದು ಇಟ್ಟುಕೊಳ್ಳೋಣ. ಆದರೆ ಅಲ್ಲಿ ಕುಡುಕತನವೂ, ವ್ಯಭಿಚಾರವೂ, ಜೂಜಾಟವೂ, ಕಾಳಸಂತೆ ವ್ಯಾಪಾರವೂ ಸೇರಿದ್ದರೆ ಇಂತಹ ರಾಮನಾಮ ಭಜನೆ ಡಂಭಾಚಾರ—ನೀಚವಾದ ಪ್ರಯತ್ನ. ಯಾರ ಹೃದಯ ಕೆಟ್ಟುದಾಗಿರುವುದೊ ಅಂತಹವರಲ್ಲಿ ಪರಿಶುದ್ಧ ಮಾಡುವ ದೇವರ ಸಾನ್ನಿಧ್ಯದ ಪ್ರಜ್ಞೆ ಇರಲು ಸಾಧ್ಯವಿಲ್ಲ. (ಹರಿಜನ, ೨೯-೬-೧೯೪೭)

## ಸಸ್ಯಾಹಾರ

ಹಿಂದೂ–ಮುಸಲ್ಮಾನರ ಮಧ್ಯೆ ದೊಂಬಿ ನಡೆಯುವುದನ್ನು ತಪ್ಪಿಸಲು ತಮ್ಮ ಶಕ್ತಿಸರ್ವಸ್ವವನ್ನು ಉಪಯೋಗಿಸಬೇಕಾಗಿತ್ತೆಂದು ಜವಾಬ್ದಾರಿಯುಳ್ಳ

ಎಲ್ಲ ಹಿಂದೂ ನಾಯಕರೂ ಮುಸಲ್ಮಾನ ನಾಯಕರೂ ನನಗೆ ಹೇಳಿದರು. ಈ ನಾಯಕರು ಕಾರಣವಿಲ್ಲದೆ ಗಾಬರಿಯಾಗುವ ಜನರಲ್ಲ. ನಾನು ಮಾಂಸಾಹಾರವನ್ನು ಹಿಂದೂಗಳಿಗೂ ಮುಸಲ್ಮಾನರಿಗೂ ನಿಷೇಧಿಸಿರುವೆನೆಂದು ಕೆಲವು ಹಿಂದೂಗಳು (ಉದಾಹರಣೆಗೆ ಗಂಗಾರಾಂ ಶರ್ಮ, ಭೂತನಾಥ್, ವಿದ್ಯಾನಂದ) ಜನರಿಗೆ ಹೇಳಿದರಂತೆ. ಸಸ್ಯಾಹಾರಿ ತೀವ್ರವಾದಿಗಳು ಜನರಿಂದ ಮಾಂಸವನ್ನೂ ಮೀನನ್ನೂ ಬಲಾತ್ಕಾರವಾಗಿ ಕಸಿದುಕೊಂಡರಂತೆ. ನನ್ನ ಹೆಸರನ್ನು ಅನೇಕ ಕಡೆ ಅನ್ಯಾಯವಾಗಿ ದುರುಪಯೋಗಮಾಡುತ್ತಿರುವುದನ್ನು ನಾನು ಬಲ್ಲೆ. ಆದರೆ ಮೇಲೆ ಹೇಳಿದ ಸಂದರ್ಭದಲ್ಲಿ ಮಾಡಿದ ದುರುಪಯೋಗ ತೀರ ಹೊಸ ರೀತಿಯದು. ನಾನು ಕಟ್ಟುನಿಟ್ಟಾದ ಸಸ್ಯಾಹಾರಿಯೆಂದೂ, ಆಹಾರದ ವಿಷಯದಲ್ಲಿ ಸುಧಾರಕನೆಂದು ಎಲ್ಲರಿಗೂ ತಿಳಿದ ವಿಷಯ. ಆದರೆ ಅಹಿಂಸೆಯು ಮೂಕಪ್ರಾಣಿಗಳವರಿಗೆ ಅನ್ವಯಿಸುವಂತೆ ಮನುಷ್ಯರಿಗೂ ಸಹ ಅನ್ವಯಿಸುವುದೆಂದೂ, ನಾನು ಯಾವ ಸಂಕೋಚವೂ ಇಲ್ಲದೆ ಮಾಂಸಾಹಾರಿಗಳ ಸಹವಾಸ ಮಾಡುವನೆಂದೂ ಎಲ್ಲರೂ ತಿಳಿದುಕೊಂಡಿರುವುದಿಲ್ಲ.

ಅಸಹಕಾರದ ಅಂಗವಾಗಿ ಸಸ್ಯಾಹಾರದ ಪ್ರಚಾರವನ್ನೂ ಮಾಡಬೇಕೆಂದು ನಾನು ಯಾರಿಗೂ ಅಧಿಕಾರ ಕೊಟ್ಟಿಲ್ಲ. ಮೇಲೆ ಹೇಳಿರುವ ಹೆಸರಿನವರು ನನಗೆ ಗೊತ್ತಿಲ್ಲ. ಯಾವ ರೀತಿಯ ಪ್ರಚಾರವೇ ಆಗಲಿ ಅದು ಹಿಂಸೆಯೊಂದಿಗೆ ಕೂಡಿದ್ದರೆ ನಮ್ಮ ಉದ್ದೇಶ್ಯ ನಿಷ್ಫಲವಾಗುವುದೆಂದು ನಿಶ್ಚಯವಾಗಿ ತಿಳಿದಿದೇನೆ. ಮುಸಲ್ಮಾನರನ್ನು ಮಾಂಸ ಅಥವಾ ಗೋಮಾಂಸ ತಿನ್ನಬಾರದೆಂದು ಹಿಂದೂಗಳು ಒತ್ತಾಯಮಾಡಲಾಗದು. ಸಸ್ಯಾಹಾರಿಗಳಾದ ಹಿಂದೂಗಳು ಇತರ ಹಿಂದೂಗಳನ್ನು ಮೀನು, ಮಾಂಸ, ಕೋಳಿ ಮುಂತಾದ ಆಹಾರವನ್ನು ಬಿಡಬೇಕೆಂದು ಒತ್ತಾಯಮಾಡಲಾಗದು. ಬೆದರಿಕೆಯನ್ನು ತೋರಿಸಿ ಭಾರತದಲ್ಲಿ ಮದ್ಯಪಾನನಿಷೇಧವನ್ನು ಮಾಡಲು ನಾನು ಇಚ್ಛಿಸುವುದಿಲ್ಲ. ಹಿಂಸೆಯಿಂದ ಜನರ ವರ್ತನೆಯು ಕೆಟ್ಟಷ್ಟು ಬೇರೆ ಯಾವುದರಿಂದಲೂ ಕೆಡಲಿಲ್ಲ. ಭಯಗೊಳ್ಳುವುದೇ ಜನರ ಗುಣವಿಶೇಷವಾಗಿಬಿಟ್ಟಿದೆ. ಅಸಹಕಾರಿಗಳು ಹಿಂಸೆಯ ಮೂಲಕ ಇತರರನ್ನು ತಮ್ಮ ಸಿದ್ಧಾಂತಕ್ಕೆ ಒಲಿಸಲು ನೋಡಿದರೆ ಬಹಳ ತಪ್ಪನ್ನು ಮಾಡುವರು. (ಯಂಗ್ ಇಂಡಿಯಾ, ೧೮–೫–೧೯೨೧)

ನನಗೆ ಪತ್ರ ಬರೆಯುವ ಒಬ್ಬಾತನು ಮಾಂಸಾಹಾರಿಗಳ ಮನೆಯಲ್ಲಿ ಹುಟ್ಟಿದಾನೆ. ಅವನ ತಂದೆತಾಯಿಗಳು ಎಷ್ಟೇ ಒತ್ತಾಯ ಮಾಡಿದರೂ ಆತನು ಮಾಂಸಾಹಾರ ಮಾಡಲೊಲ್ಲ. 'ಆದರೆ' ಆತನು ಬರೆಯುತ್ತಾನೆ, 'ನಾನು ಓದುತ್ತಿರುವ ಒಂದು ಪುಸ್ತಕದಲ್ಲಿ ಸ್ವಾಮಿ ವಿವೇಕಾನಂದರ ಅಭಿಪ್ರಾಯವನ್ನು ಓದಿ ನನ್ನ ಮನಸ್ಸಿನಲ್ಲಿ ಬಹಳ ಕಳವಳ ಉಂಟಾಗಿದೆ. ಪ್ರಕೃತ ಸ್ಥಿತಿಯಲ್ಲಿ ಭಾರತೀಯರು ಮಾಂಸಾಹಾರಿಗಳಾಗುವುದು ಅವಶ್ಯವೆಂದು ಸ್ವಾಮೀಜಿಯವರು ಹೇಳುತ್ತಾರೆ. ನಿರಾತಂಕವಾಗಿ ಮಾಂಸಾಹಾರವನ್ನು ಮಾಡಬೇಕೆಂದು ತಮ್ಮ ಮಿತ್ರರಿಗೆ ಬೋಧಿಸುತ್ತಾರೆ. ಅಷ್ಟೇ ಅಲ್ಲದೆ ಮುಂದುವರಿದು 'ಹೀಗೆ ಮಾಡುವುದರಿಂದ ನಿನಗೇನಾದರೂ ಪಾಪವಾದರೆ ಅದನ್ನು ನನ್ನ ಮೇಲೆ ಹಾಕು. ನಾನು ಹೊರುತ್ತೇನೆ' ಎಂತಲೂ ಹೇಳುತ್ತಾರೆ. ಈಗ ಮಾಂಸಾಹಾರ ಮಾಡಬೇಕೇ ಬೇಡವೇ ಎಂಬ ವಿಚಾರದಲ್ಲಿ ನನ್ನ ಮನಸ್ಸಿನಲ್ಲಿ ಪೇಚಾಟವುಂಟಾಗಿದೆ.'

ಒಂದು ಪ್ರಮಾಣವಾಕ್ಯಕ್ಕೆ ಕಣ್ಣುಮುಚ್ಚಿಕೊಂಡು ಶರಣುಹೋಗುವುದು ಮನೋದೌರ್ಬಲ್ಯದ ಲಕ್ಷಣ. ಈ ಪತ್ರಲೇಖಕರು ಮಾಂಸಾಹಾರ ಸರಿಯಲ್ಲ ಎಂಬ ನಂಬಿಕೆಯನ್ನು ದೃಢವಾಗಿ ಉಳ್ಳವರಾದರೆ ತದ್ವಿರುದ್ಧವಾಗಿ ಇಡೀ ಪ್ರಪಂಚವೇ ಅಭಿಪ್ರಾಯಪಟ್ಟರೂ ಅದರಿಂದ ಅವರ ಮನಸ್ಸು ಏತಕ್ಕೆ ಚಲಿಸಬೇಕು ? ಒಂದು ದೃಢವಾದ ನಂಬಿಕೆಯನ್ನು ಮಾಡಿಕೊಳ್ಳುವುದು ನಿಧಾನವಾಗಿ ಆಗಬೇಕಾದ ಕೆಲಸ. ಆದರೆ ನಂಬಿಕೆಯು ಗಾಢವಾದಮೇಲೆ ಅದಕ್ಕೆ ವಿರುದ್ಧವಾಗಿ ಏನೇ ಪ್ರಬಲವಾದ ಅಭಿಪ್ರಾಯಗಳಿರಲಿ ಆ ನಂಬಿಕೆಯನ್ನು ರಕ್ಷಿಸಿಕೊಳ್ಳಬೇಕು.

ಇನ್ನು ಸ್ವಾಮಿಜಿಯವರಂತಹ ಮಹಾಪುರುಷರ ಅಭಿಪ್ರಾಯದ ಬಗೆಗೆ ಒಂದು ಮಾತು. ನಾನು ಅವರ ಲೇಖನವನ್ನು ನೇರವಾಗಿ ನೋಡಿಲ್ಲ. ಆದರೆ ನನಗೆ ಪತ್ರ ಬರೆದಿರುವವರು ಅದರ ಉಲ್ಲೇಖನವನ್ನು ಸರಿಯಾಗಿಯೇ ಮಾಡಿರುವರೆಂದು ತೋರುತ್ತದೆ. ನನ್ನ ಅಭಿಪ್ರಾಯ ಎಲ್ಲರಿಗೂ ತಿಳಿದಿದೆ.

ಸಾಮಾನ್ಯವಾಗಿ ಮಾನವರು ಯಾವ ಪ್ರದೇಶದಲ್ಲಿ ಜೀವಿಸಲಿ, ಆ ಪ್ರದೇಶದ ಹವಾಗುಣ ಏನೇ ಇರಲಿ, ಅವರು ಜೀವಿಸಿರುವುದಕ್ಕೆ ಮಾಂಸಾಹಾರ ಅಗತ್ಯವೆಂದು ನಾನು ಒಪ್ಪುವುದಿಲ್ಲ. ಮಾನವಜಾತಿಗೇ ಮಾಂಸಾಹಾರ

ಹೊಂದುವುದಿಲ್ಲವೆಂಬುದು ನನ್ನ ಅಭಿಪ್ರಾಯ. ತಿರ್ಯಗ್ ಜಂತುಗಳ ಜೀವನ ಕ್ರಮವನ್ನು ನಾವು ಅನುಕರಣ ಮಾಡಲಾಗದೆ ಏನಾದರೂ ನಾವು ಉತ್ತಮ ಜೀವರಾಶಿಗಳು ಇಂದ್ರಿಯನಿಗ್ರಹವನ್ನು ಮಾಡಬೇಕೆಂಬುವವರಿಗೆ ಮಾಂಸಾ ಹಾರವು ಯೋಗ್ಯವಲ್ಲವೆಂದು ಅನುಭವದಿಂದ ವೇದ್ಯವಾಗಿದೆ.

ಆದರೆ ಒಬ್ಬನ ಶೀಲವನ್ನು ಬೆಳೆಸುವುದಕ್ಕೂ ಇಂದ್ರಿಯನಿಗ್ರಹಕ್ಕೂ ಆಹಾರದ ಪ್ರಾಮುಖ್ಯವನ್ನು ಉತ್ಪ್ರೇಕ್ಷೆ ಮಾಡುವುದು (ದೇಹದಮನ) ಸರಿ ಯಲ್ಲ. ಆಹಾರನಿಯಮವಿರಬೇಕು—ಅದನ್ನು ದುರ್ಲಕ್ಷ್ಯ ಮಾಡಬಾರದು. ಆದರೆ ಧರ್ಮಾಚರಣೆಗಳೆಲ್ಲವನ್ನೂ ಆಹಾರನಿಯಮಗಳಿಂದಲೇ ಅಳೆಯುವುದು ತಪ್ಪು. ಹೀಗೆ ಭಾರತದಲ್ಲಿ ನಾವು ಮಾಡುತ್ತಿದೇವೆ. ಅಂತೆಯೇ ಆಹಾರ ನಿಯಮಗಳನ್ನು ಲಕ್ಷ್ಯಮಾಡದೆ ನಮ್ಮ ಕ್ಷುದ್ಬಾಧೆಯನ್ನು ಸ್ವೇಚ್ಛೆಯಾಗಿ ಪರಿಹಾರ ಮಾಡಿಕೊಳ್ಳುವುದೂ ತಪ್ಪು. ಹಿಂದೂ ಧರ್ಮದ ಅಮೌಲ್ಯವಾದ ಕಾಣಿಕೆಗಳಲ್ಲಿ ಸಸ್ಯಾಹಾರವೂ ಒಂದು. ಅದನ್ನು ನಾವು ಹಗುರವಾಗಿ ಬಿಡು ವಂತಿಲ್ಲ. ಸಸ್ಯಾಹಾರವು ನಮ್ಮನ್ನು ದೈಹಿಕವಾಗಿಯೂ ಮಾನಸಿಕವಾಗಿಯೂ ದುರ್ಬಲರನ್ನಾಗಿ ಮಾಡಿದೆ, ತಾಮಸಿಗಳನ್ನಾಗಿಯೂ ಸೋಮಾರಿಗಳನ್ನಾ ಗಿಯೂ ಮಾಡಿದೆ ಎಂಬ ತಪ್ಪು ತಿಳುವಳಿಕೆಯನ್ನು ತಿದ್ದಬೇಕು. ಅತಿಪ್ರಭಾವ ಶಾಲಿಗಳಾದ ಹಿಂದೂ ಧರ್ಮಸುಧಾರಕರು ಎಲ್ಲರಿಗಿಂತಲೂ ತಮ್ಮ ಕಾಲದಲ್ಲಿ ಬಹಳ ಕ್ರಿಯಾಶೀಲರಾಗಿದ್ದು ತಮ್ಮ ಕಾರ್ಯಗಳನ್ನು ಚಟುವಟಿಕೆಯಿಂದ ಸಾಧಿಸಿ ದರು. ಅವರೆಲ್ಲರೂ ಸಸ್ಯಾಹಾರಿಗಳಾಗಿದ್ದವರೇ. ಅವರ ಕಾಲದಲ್ಲಿ ಶಂಕರಾ ಚಾರ್ಯರಿಗಿಂತಲೂ ದಯಾನಂದಸರಸ್ವತಿಗಿಂತಲೂ ಚುರುಕಾಗಿ ಕೆಲಸ ಮಾಡಿ ದವರಿರಲಿಲ್ಲ.

ಆದರೆ ನನಗೆ ಪತ್ರ ಬರೆದವರು ನನ್ನನ್ನೇ ಪ್ರಮಾಣವೆಂದು ಸ್ವೀಕರಿಸ ಬಾರದು. ಒಬ್ಬನು ಯಾವ ಆಹಾರವನ್ನು ಸೇವಿಸಬೇಕೆಂಬುದನ್ನು ತನ್ನ ವಿಶ್ವಾಸ–ನಂಬಿಕೆಗಳ ಆಧಾರದ ಮೇಲೆ ನಿಷ್ಕರ್ಷಿಸಬಾರದು. ಪ್ರತಿಯೊಬ್ಬರೂ ತಮ್ಮ ವಿಚಾರಶಕ್ತಿಯಿಂದ ಇದನ್ನು ನಿರ್ಧರಿಸಿಕೊಳ್ಳಬೇಕು. ಪಾಶ್ಚಾತ್ಯ ದೇಶ ಗಳಲ್ಲಿ ಆಹಾರದ ವಿಷಯವಾಗಿ ಬೇಕಾದಷ್ಟು ಸಾಹಿತ್ಯ ಬೆಳೆದುಬಂದಿದೆ. ಸತ್ಯವನ್ನರಸುವವನು ಇದನ್ನು ಓದಿ ಪ್ರಯೋಜನ ಪಡೆಯಬಹುದು. ಪ್ರಸಿದ್ಧ ರಾದ ವೈದ್ಯರು ಇದರ ವಿಚಾರವನ್ನು ಬರೆದಿದಾರೆ. ಇಲ್ಲಿ ಭಾರತ ದೇಶದಲ್ಲಿ

ಸಸ್ಯಾಹಾರಕ್ಕಾಗಿ ಯಾವ ಉತ್ತೇಜನವೂ ಆವಶ್ಯಕವಿಲ್ಲ. ಇದುವರೆಗೂ ಇದೇ ಸರಿಯೆಂದೂ ಗೌರವಯುತವೆಂದೂ ಒಪ್ಪಿದೇವೆ. ಆದರೆ ಈ ಮಿತ್ರರಂತೆ ಯಾರಿಗೆ ಮನಸ್ಸಿನಲ್ಲಿ ಗೊಂದಲ ಉಂಟಾಗಿದೆಯೊ ಅಂಥವರು ಪಾಶ್ಚಾತ್ಯ ದೇಶಗಳಲ್ಲಿ ಸಸ್ಯಾಹಾರಕ್ಕಾಗಿ ಆಗುತ್ತಿರುವ ಉದ್ಯಮವನ್ನು ಅಧ್ಯಯನ ಮಾಡಬಹುದು. (ಯಂಗ್ ಇಂಡಿಯಾ, ೭-೧೦-೧೯೨೬)

## ದ್ವೇಷ ಪ್ರಯೋಜನಕಾರಿಯಾದೀತು ಹೇಗೆ ?

ಎಲ್ಲೆಲ್ಲಿಯೂ ದ್ವೇಷಭಾವವಿದೆ. ತಾಳ್ಮೆಯಿಲ್ಲದ ದೇಶಭಕ್ತರು ಹಿಂಸಾಮಾರ್ಗದ ಮೂಲಕ ಸಾಧ್ಯವಾದರೆ ದೇಶದ ಸ್ವಾತಂತ್ರ್ಯವನ್ನು ಸಾಧಿಸಲು ಇದನ್ನು ಉಪಯೋಗಿಸಲು ಇಚ್ಛಿಸುವರು. ಎಲ್ಲ ಕಾಲಕ್ಕೂ ಎಲ್ಲ ಕಡೆಗೂ ಇದು ತಪ್ಪಾದ ಮಾರ್ಗವೆಂಬುದು ನನ್ನ ಸೂಚನೆ. ಆದರೆ ಇಲ್ಲಿ ದೇಶ ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿರುವ ನಾವು ನಮ್ಮ ಮಾರ್ಗವು ಸತ್ಯ ಮತ್ತು ಅಹಿಂಸೆಯದೆಂದು ಪ್ರಪಂಚಕ್ಕೆಲ್ಲ ಸಾರಿದಮೇಲೆ ಈ ಬಗೆಯ ಯೋಚನೆ ಮತ್ತಷ್ಟು ತಪ್ಪಾಗುವುದು ; ಅಯೋಗ್ಯವಾಗುವುದು. ದ್ವೇಷವನ್ನು ಪ್ರೇಮವನ್ನಾಗಿ ಮಾರ್ಪಡಿಸಲು ಸಾಧ್ಯವಿಲ್ಲವೆಂದು ವಾದಿಸುತ್ತಾರೆ. ಹಿಂಸಾಮಾರ್ಗದಲ್ಲಿ ನಂಬಿಕೆಯುಳ್ಳವರು ಅದನ್ನು ಸಹಜವಾಗಿಯೇ ಉಪಯೋಗಿಸುವರು. 'ನಿಮ್ಮ ಶತ್ರುವನ್ನು ಕೊಲ್ಲಿರಿ, ಅವನಿಗೂ ಅವನ ಸೊತ್ತಿಗೂ ಎಲ್ಲೆಲ್ಲಿ ಸಾಧ್ಯವೊ ಬಹಿರಂಗವಾಗಿಯೋ ರಹಸ್ಯವಾಗಿಯೋ ಸಂದರ್ಭಾನುಸಾರ ಹಾನಿ ಮಾಡಿರಿ' ಎಂದು ಹೇಳುವರು. ಇದರ ಪರಿಣಾಮವಾಗಿ ದ್ವೇಷ ದೃಢಗೊಳ್ಳುವುದು. ಶತ್ರುಗಳೂ ಅದಕ್ಕೆ ಪ್ರತಿಯಾಗಿ ದ್ವೇಷವನ್ನು ಸಾಧಿಸುವರು. ಎರಡು ಕಡೆಗಳಿಂದಲೂ ಸೇಡನ್ನು ತೀರಿಸಿಕೊಳ್ಳುವ ಕೃತ್ಯಗಳು ಪ್ರಬಲಗೊಳ್ಳುವುವು. ಈಗತಾನೆ ಮುಗಿದಿರುವ ಮಹಾಯುದ್ಧದ ದಾವಾಗ್ನಿಯ ಕಿಡಿಗಳು ಇನ್ನೂ ಶಾಂತವಾಗಲಿಲ್ಲ—ದ್ವೇಷದ ನಿರರ್ಥಕತೆಯನ್ನು ಗಟ್ಟಿಯಾಗಿ ಸಾರುತ್ತಲಿವೆ. ಈ ಯುದ್ಧದಲ್ಲಿ ಜಯ ಗಳಿಸಿದವರೆಂದು ಹೇಳಿಕೊಳ್ಳುವವರು ನಿಜವಾಗಿ ಗೆದ್ದರೆ ಅಥವಾ ತಮ್ಮ ಶತ್ರುಗಳನ್ನು ತುಳಿಯುವ ಪ್ರಯತ್ನದಲ್ಲಿ ತಾವೇ ಕುಗ್ಗಿರುವರೆ ಎನ್ನುವುದನ್ನು ಮುಂದೆ ನೋಡಬೇಕಾಗಿದೆ. ಎಷ್ಟೇ ಒಳ್ಳೆಯ ದೃಷ್ಟಿಯಿಂದ

ನೋಡಿದರೂ ಇದು ದುಷ್ಟ ವ್ಯವಹಾರ. ಈ ಮಾದರಿಯನ್ನು ತಮ್ಮ ಮುಂದೆ ಇಟ್ಟುಕೊಂಡು ಅದನ್ನು ಮೀರಲು ಯತ್ನಿಸುವ ನಮ್ಮ ದೇಶದಲ್ಲಿನ ಕ್ರಿಯಾಶೀಲ ರಾದ ತತ್ತ್ವಜ್ಞಾನಿಗಳು 'ನಮ್ಮ ಶತ್ರುವನ್ನು ಕೊಲ್ಲುವುದಿಲ್ಲ—ಅವನ ಆಸ್ತಿ ಪಾಸ್ತಿಗಳನ್ನು ನಾಶಮಾಡುತ್ತೇವೆ' ಎಂದು ಹೇಳುವರು. 'ಆಸ್ತಿಪಾಸ್ತಿ' ಎಂದು ಹೇಳುವುದರಿಂದ ಪ್ರಾಯಶಃ ನಾನು ಅವರಿಗೆ ಅನ್ಯಾಯಮಾಡುತ್ತೇನೆ. ಏಕೆಂದರೆ ಈ ಶತ್ರುವೆಂದೆನಿಸಿಕೊಳ್ಳುವವನು ತನ್ನೊಂದಿಗೆ ಯಾವ ಆಸ್ತಿಯನ್ನೂ ತಂದಿರುವುದಿಲ್ಲ. ಹಾಗೆ ತಂದ ಅಲ್ಪಸ್ವಲ್ಪಕ್ಕೂ ನಾವೇ ಹಣ ಕೊಟ್ಟಿದೇವೆ. ಆದುದರಿಂದ ನಾವು ನಾಶಮಾಡುವುದು ನಮ್ಮ ಸೊತ್ತನ್ನೇ. ತನ್ನ ಆಸ್ತಿಯ ಬಹುಭಾಗವನ್ನು—ಜನರೇ ಆಗಲಿ, ಪದಾರ್ಥಗಳೇ ಆಗಲಿ—ಅವನು ಇಲ್ಲಿಯೇ ನಿರ್ಮಾಣ ಮಾಡುತ್ತಾನೆ. ಆದುದರಿಂದ ಅವನು ಮಾಡುವುದು ಆ ಸೊತ್ತನ್ನು ಕಾಯುವುದು ಮಾತ್ರ. ಈ ನಾಶಕ್ಕೂ ನಾವೇ ಪ್ರತಿಯೊಂದು ಕಾಸೂ ಕೊಡ ಬೇಕು; ಅದನ್ನೂ ನಿರಪರಾಧಿಗಳೇ ತೆರಬೇಕು. ಪುಂಡುಕಂದಾಯ ಅದರ ಪರಿಣಾಮವೆಂದರೆ ಇದೇ ಅರ್ಥ. ಆದುದರಿಂದ ಕೇವಲ ಕೊಲ್ಲದಿರುವಿಕೆಯೆಂಬ ಅರ್ಥದಲ್ಲಿ ಅಹಿಂಸೆಯನ್ನು ಈ ರೀತಿಯಲ್ಲಿ ಪ್ರಯೋಗಮಾಡಿದರೆ ಇದಕ್ಕೂ ಹಿಂಸೆಯ ಘೋರಣೆಗೂ ನನಗೆ ಯಾವ ವ್ಯತ್ಯಾಸವೂ ಕಾಣುವುದಿಲ್ಲ. ಇದು ವಿಳಂಬವಾಗಿ ಮಾಡುವ ಚಿತ್ರಹಿಂಸೆ. ಈ ವಿಳಂಬತೆಯು ಪರಿಣಾಮ ಕಾರಿಯಾಗದಿದ್ದಾಗ ಕೂಡಲೆ ನಾವು ಕೊಲ್ಲುವುದಕ್ಕೂ ಮೊದಲುಮಾಡುವೆವು. ಅನಂತರ ಈಗಿನ ಹಿಂಸಾಪ್ರಯೋಗದಲ್ಲಿ ಪರಮಾವಧಿಯಾಗಿರುವ ಅಣುಶಸ್ತ್ರ ವನ್ನು ಪ್ರಯೋಗ ಮಾಡುವೆವು. ಆದುದರಿಂದ ಈ ದ್ವೇಷವನ್ನು ಸರಿಯಾದ ರೀತಿಯಲ್ಲಿ ಮಾರ್ಪಡಿಸಲು ಅ ಹಿಂ ಸೆ ಯ ಪ್ರಯೋಗವನ್ನೂ ಅಹಿಂಸೆಗೆ ಅವಳಿಯೂ ಅಭೇದ್ಯವೂ ಆದ ಗುಣವಾದ ಸತ್ಯವನ್ನು ೧೯೨೦ರಲ್ಲಿ ನಾನು ಸೂಚಿಸಿದೆನು. ದ್ವೇಷಮಾಡುವವನ ಉದ್ದೇಶ್ಯ ದ್ವೇಷವಲ್ಲ—ತನ್ನ ದ್ವೇಷಕ್ಕೆ ಗುರಿಯಾದವರನ್ನು ದೇಶದಿಂದ ಓಡಿಸುವುದೇ ಅವನ ಉದ್ದೇಶ್ಯ. ಆದುದರಿಂದ ಈ ಉದ್ದೇಶ್ಯವನ್ನು ಹಿಂಸಾಮಾರ್ಗದಲ್ಲಿ ಸಾಧಿಸುವಷ್ಟು ಕ್ಷಿಪ್ರವಾಗಿ ಅಹಿಂಸಾ ಮಾರ್ಗದಿಂದಲೂ ಸಾಧಿಸಬಲ್ಲನು. ನಾವು ಕಳೆದುಕೊಂಡಿರುವ ಸ್ವಾತಂತ್ರ್ಯ ವನ್ನು ಮತ್ತೆ ಪಡೆಯುವುದಕ್ಕಾಗಿ ಹಿಂಸಾಮಾರ್ಗಕ್ಕಿಂತಲೂ ಅಹಿಂಸಾ ಮಾರ್ಗವೇ ಉತ್ತಮವೆಂದು ಈ ೨೫ ವರ್ಷಗಳಿಂದ ರಾಷ್ಟ್ರಮಹಾಸಭೆಯು

ನಮ್ಮ ಜನರ ಮುಂದೆ — ಇಷ್ಟವಿದ್ದೊ ಇಲ್ಲದೆಯೊ — ಸಾರುತ್ತಬಂದಿದೆ. ಅಹಿಂಸಾಪ್ರಯೋಗದಿಂದ ವಿಶೇಷವಾಗಿ ಮುಂದುವರಿದು, ಈ ಮುನ್ನಡೆಯಲ್ಲಿ ನಮ್ಮ ಜನರ ಮನಸ್ಸನ್ನು ಮುಟ್ಟದೇವೆ. ಹಿಂದೆ ಎಂದೂ ಇಷ್ಟು ಶೀಘ್ರ ವಾಗಿಯೂ ವ್ಯಾಪಕವಾದ ರೀತಿಯಲ್ಲಿಯೂ ನಾವು ಅವರನ್ನು ಮುಟ್ಟರಲಿಲ್ಲ. ಆದರೂ ಹೇಳಲೇಬೇಕಾದ ನಿಜವನ್ನು ಹೇಳುವುದಾದರೆ ನಮ್ಮ ಅಹಿಂಸೆಯು ಆಚರಣೆ ಅರೆಮನಸ್ಸಿನದೇ. ಅನೇಕರು ಬಾಯಿಂದ ಅಹಿಂಸೆಯ ಉಪದೇಶ ಮಾಡಿದಾರೆ; ಆದರೆ ಅಂತರಂಗದಲ್ಲಿ ಹಿಂಸೆಯನ್ನುಳ್ಳವರಾಗಿದಾರೆ. ಆದರೆ ಕಪಟವನ್ನರಿಯದ ಜನಸಾಮಾನ್ಯರು ಅಂತರಂಗದಲ್ಲಿ ಮರೆಯಾಗಿದ್ದುದನ್ನು ತಿಳಿದುಕೊಂಡಿದಾರೆ. ತಮಗೆ ತಿಳಿಯದೆಯೇ ಉಂಟಾದ ಅವರ ಪ್ರತಿಕ್ರಿಯೆ ಏನಿರಬಹುದಾಗಿತ್ತೊ ಅದಾಗಲಿಲ್ಲ. ಈ ಕಪಟ ವರ್ತನೆಯು ಸದ್ಗುಣಕ್ಕೆ ಪ್ರಶಂಸೆ ಸಲ್ಲಿಸಿದಂತೆ ಆದೀತೆ ಹೊರತು, ಅದು ಸದ್ಗುಣವೇ ಆಗಲಾರದು. ಆದುದರಿಂದಲೇ ನಾನು ಅಹಿಂಸೆ— ಪುನಃ ಅಹಿಂಸೆ—ಎಂದು ಬಿನ್ನವಿಸಿಕೊಳ್ಳು ತ್ತಿದೇನೆ. ಇದು ಅಜ್ಞಾನದಿಂದ ಮಾಡುವ ಬಿನ್ನಹವಲ್ಲ. ಇದರ ಹಿನ್ನೆಲೆ ಯಲ್ಲಿ ನನ್ನ ಅರವತ್ತು ವರ್ಷದ ಅನುಭವವಿದೆ. ಇದು ವಿಷಮ ಸಂಧಿ— ಬಾಯಿಲ್ಲದ ನಮ್ಮ ಕೋಟ್ಯಂತರ ಜನ ಅನ್ನ-ಆಹಾರವಿಲ್ಲದೆ ಇದಾರೆ. ದೇಶದ ಈಗಿನ ಪರಿಸ್ಥಿತಿಯಲ್ಲಿ ಅವರ ಆವಶ್ಯಕತೆಗಳನ್ನು ಪೂರೈಸಲು ಅಹಿಂಸೆಯ ನಿಯಮಗಳನ್ನು ಹೇಗೆ ಪ್ರಯೋಗ ಮಾಡಬೇಕೆಂದು ನನ್ನ ಓದುಗರಲ್ಲಿ ಅರಿತ ವರಿಗೆ ಅನೇಕ ಮಾರ್ಗಗಳು ತೋರುವುವು. (ಹರಿಜನ, ೨೪-೨-೧೯೪೬)

## ಏಕಾಕಿಯಲ್ಲ

ಜನಸಮೂಹದ ಮಧ್ಯೆ ತಾನು ಎಷ್ಟು ಏಕಾಕಿಯಾಗಿರುವೆನೆಂದು ಮಿತ್ರ ರೊಬ್ಬರು ಕೆಲವು ದಿನಗಳ ಹಿಂದೆ ನನಗೆ ಬರೆದರು. ಸರಕಾರಿ ಉದ್ಯೋಗಸ್ಥರು ಹೇಳುವ ಮಾತಿನಲ್ಲಿ ನನಗೆ ವಿಶ್ವಾಸವಿಲ್ಲವೆಂದು ನಾನು ಹೇಳಿದ್ದೆ. ಅದಕ್ಕೆ ಉತ್ತರವಾಗಿ ಈ ಮಾತನ್ನು ಹೇಳಿದರು. ಆತನಿಗೂ ಉದ್ಯೋಗಸ್ಥರ ಮಾತಿನಲ್ಲಿ ವಿಶ್ವಾಸವಿರಲಿಲ್ಲ. ಈ ಬಗೆಯಲ್ಲಿ ತಮ್ಮ ಅಂತರಂಗವನ್ನು ನನಗೆ

ತಿಳಿಸಿದರು. ನಾನೂ ಸಹಾನುಭೂತಿಯನ್ನು ತೋರಿಸುವೆನೆಂದು ಭಾವಿಸಿದರು. ಆದರೆ ನನ್ನ ವಿಷಯದಲ್ಲಿ ಅವರಿಗೆ ಬಹಳ ನಿರಾಶೆ ಆಯಿತು. ಸೂತ್ರರೂಪ ವಾಗಿ ಬರೆದ ಅವರ ಕೆಲವೇ ಮಾತುಗಳಿಗೆ ಈ ಅರ್ಥ ಇದ್ದಿರಬಹುದು. ಆದರೆ ನಾನು ಹಾಗೆಯೇ ಅರ್ಥಮಾಡಿಕೊಂಡು ಭಗವದ್ಭಕ್ತರಾಗಿ ತಾವು ಎಂದೂ ಏಕಾಕಿಯೆಂದು ಭಾವಿಸಬಾರದೆಂದು ಉತ್ತರ ಕೊಟ್ಟೆ. ಏಕೆಂದರೆ ಭಗವಂತನು ಸದಾ ಜೊತೆಯಲ್ಲಿರುವವನು. ಪ್ರಪಂಚವೆಲ್ಲ ಅವನ ಕೈಬಿಟ್ಟರೂ ತಾವೇಕೆ ಚಿಂತಿಸಬೇಕು? ಉದ್ಯೋಗಸ್ಥರಲ್ಲಿ ಅವರಿಗಿರುವ ವಿಶ್ವಾಸವು ಮನಸ್ಸಿನಿಂದಲ್ಲದೆ ಹೃದಯದಿಂದ ಹುಟ್ಟಿದ ಪಕ್ಷಕ್ಕೆ ನಾನು ಏನೇ ಹೇಳಲಿ ಅವರ ವಿಶ್ವಾಸ ಬದಲಾಗಬಾರದು.

ನನ್ನ ಭಾವನೆ ಬೇರೆ. ಪರಸ್ಪರ ವಿಶ್ವಾಸ ಪ್ರೇಮುವಿಶ್ವಾಸ, ಪ್ರೇಮುವಲ್ಲ. ನಿಮ್ಮನ್ನು ದ್ವೇಷಿಸುವವರನ್ನು ಪ್ರೀತಿಸುವುದು ನಿಜವಾದ ಪ್ರೇಮು—ನಿನ್ನ ನೆರೆಹೊರೆಯವನನ್ನು ಅವನನ್ನು ನೀನು ನಂಬದಿದ್ದರೂ ಪ್ರೀತಿಸುವುದು. ಇಂಗ್ಲೀಷ್ ಸರಕಾರೀ ವಲಯಗಳನ್ನು ನಂಬದಿರಲು ನನಗೆ ಸಾಕಾದಷ್ಟು ಕಾರಣಗಳಿವೆ. ನನ್ನ ಪ್ರೇಮುವು ನಿಜವಾಗಿದ್ದ ಪಕ್ಷಕ್ಕೆ ಈ ಅಪನಂಬಿಕೆ ಇದ್ದರೂ ಇಂಗ್ಲೀಷ್ ಜನರನ್ನು ನಾನು ಪ್ರೀತಿಸಬೇಕು. ನನ್ನ ಮಿತ್ರನಲ್ಲಿ ನನಗೆ ನಂಬಿಕೆ ಇರುವವರೆಗೆ ಮಾತ್ರ ನಾನವನನ್ನು ಪ್ರೀತಿಸಿದರೆ ಏನು ಫಲ? ಕಳ್ಳರೂ ಹೀಗೆ ಮಾಡುತ್ತಾರೆ. ನಂಬಿಕೆ ಹೋದ ಕೂಡಲೆ ಅವರು ಶತ್ರುಗಳೇ ಆಗುತ್ತಾರೆ.

ಬೊಂಬಾಯಿಯಲ್ಲಿ ಏನು ನಡೆಯುತ್ತಿದೆ ನೋಡಿ. ಬೊಂಬಾಯಿಯಲ್ಲಿ ನಾನು ಎಷ್ಟೋ ಕಾಲ ಕಳೆದಿದೇನೆ. ಸಾರ್ವಜನಿಕ ಕೆಲಸಗಳಿಗಾಗಿ ಎಷ್ಟೋ ಆವಶ್ಯಕ ಹಣ ಆ ನಗರ ಒದಗಿಸಿದೆ. ಅಹಿಂಸೆಯನ್ನು ತಕ್ಕಮಟ್ಟಿಗೆ ಬೊಂಬಾಯಿ ಅರಗಿಸಿಕೊಂಡಿದೆಯೆಂದು ನನ್ನ ಭಾವನೆ ಇತ್ತು. ಈಗ ಬೊಂಬಾಯಿಯಲ್ಲಿ ಅಹಿಂಸೆಯ ಗೋರಿಯಾಗುವುದೆ? ಬೆಂಕಿ ಹಚ್ಚುವುದು, ಲೂಟಿ ಮಾಡುವುದು, ಇಂಗ್ಲೀಷ್ ಜನರ ಮೇಲೆ ಅತ್ಯಾಚಾರ ನಡೆಸುವುದು ಪೋಕರಿಗಳ–ಪುಂಡರ ಕೆಲಸವಾಗಿದೆ ಅಥವಾ ಇತ್ತು ಎಂದು ನಾನೆಣಿಸಲಾರೆ. ಈ ಪುಂಡರು ಯಾರು? ಇಂಗ್ಲೀಷರ ಆಧಿಪತ್ಯ ಹೋದಮೇಲೆ ಇವರು ಇರುವುದಿಲ್ಲವೇನು? ಎಲ್ಲಕ್ಕೂ ಪುಂಡರನ್ನು ದೂಷಿಸುವುದನ್ನು ಬಿಡಬೇಕು. ಅಂತಹವರನ್ನು ನಿರ್ಮಿಸುವವರು

ನಾವೇ. ತಮ್ಮ ಸುತ್ತುಮುತ್ತಲಿನ ವಾತಾವರಣಕ್ಕೆ ತಕ್ಕಂತೆ ಅವರು ನಡೆದು ಕೊಳ್ಳುತ್ತಾರೆ.

ದಿನಸಿ ಅಂಗಡಿಗಳನ್ನು ಲೂಟಿ ಮಾಡುವ ತಿಳಿಗೇಡಿತನವನ್ನು ತೆಗೆದು ಕೊಳ್ಳಿ. ಲೂಟಿಗಾರರು ತಮ್ಮ ಸ್ವಂತಕ್ಕೆ ಇದನ್ನು ಮಾಡಲಿಲ್ಲ. ಹೀಗೆ ಮಾಡಿದ್ದರೂ ಅವರು ಹಸಿದಿರಲಿಲ್ಲ. ಹಸಿದವರಿಗೆಂದು ಈ ಧಾನ್ಯಗಳಿದ್ದುದು. ಅದು ದುರುಪಯೋಗವಾಗುತ್ತಿದ್ದರೆ ಲೂಟಿ ಮಾಡುವುದರಿಂದ ಆ ದುರುಪಯೋಗ ತಪ್ಪಲಿಲ್ಲ. ಬಲಾತ್ಕಾರವಾಗಿ ಕಸಿದುಕೊಳ್ಳುವವರಿದ್ದರೆ ಲೂಟಿ ಮಾಡಿದ ಧಾನ್ಯವನ್ನು ಮತ್ತೆ ಅವರು ತಂದು ತುಂಬುವರು. ಈ ಎರಡು ಬಗೆಯ ಲೂಟಿಗಾರರ ಮಧ್ಯೆ ಹಸಿದವರು ಮತ್ತಷ್ಟು ಹಸಿದುಕೊಂಡಿರುವರು.

ಈ ದಂಗೆಕೋರರನ್ನು ಪ್ರೇರಿಸಿದವರು ತಾವು ಮಾಡುವ ಕಾರ್ಯವನ್ನು ಅರ್ಥಮಾಡಿಕೊಳ್ಳದೆ ಮಾಡಿದಾರೆ. ದಂಗೆಕೋರರು ಕೊನೆಗೆ ಶರಣಾಗುವರು. ಅಥವಾ ಹಿಂಸೆಯಲ್ಲಿ ಇದೊಂದು ಮಾದರಿ ಪಾಠವೆಂದು ಮಾಡಿದರೆ? ಚರಿತ್ರೆ ಯನ್ನು ಈ ರೀತಿಯಲ್ಲಿ ಅರ್ಥಮಾಡಿಕೊಳ್ಳಲಾಗದು.

ಚೌರಿಚೌರ ಆದಮೇಲೆ ನಾನು ಮಾಡಿದುದನ್ನು ಮತ್ತೆ ಏಕೆ ಮಾಡ ಲಿಲ್ಲವೆಂದು ನನ್ನನ್ನು ನಾನೇ ಪ್ರಶ್ನಿಸಿಕೊಳ್ಳುತ್ತೇನೆ. ಪ್ರಾಯಶಃ ಇತರರೂ ಹೀಗೆ ಪ್ರಶ್ನಿಸುತ್ತಿರಬಹುದು. ಹಾಗೆ ಮಾಡಲು ನನಗೆ ಪ್ರೇರಣೆ ಆಗಿಲ್ಲ. ಆ ಪ್ರೇರಣೆ ಬಂದಾಗ—ನಾನು ಆರೋಗ್ಯದಿಂದಿರಲಿ ಇಲ್ಲದಿರಲಿ—ಅದನ್ನು ಯಾರೂ ತಡೆಯಲು ಸಾಧ್ಯವಿಲ್ಲ. ನಾನು ಭಾರತೀಯರನ್ನು ಪ್ರೀತಿಸುವಷ್ಟೇ ಇಂಗ್ಲೀಷ್ ಜನರನ್ನೂ ಪ್ರೀತಿಸುತ್ತೇನೆಂದು ಮತ್ತೆ ಒತ್ತಿ ಹೇಳುತ್ತೇನೆ. ಇಬ್ಬರೂ ಮಾನವರು. ಆದರೂ ಭಾರತೀಯ ಜನಸಾಮಾನ್ಯರು ಆಳಬೇಕು ಅಥವಾ ಅವರ ಪರವಾಗಿ ದೇಶದ ಆಳ್ವಿಕೆ ನಡೆಯಬೇಕೆಂದು ನನ್ನ ಇಚ್ಛೆ. ಸ್ವರಾಜ್ಯವು ಅವರ ಆಜನ್ಮಸಿದ್ಧ ಹಕ್ಕೆಂದು ಲೋಕಮಾನ್ಯರು ಕಲಿಸಿದಾರೆ.

(ಪುಣೆ, ೨೪–೨–೧೯೪೬)
(ಹರಿಜನ, ೩–೩–೧೯೪೬)

# ಅಹಿಂಸೆಯ ಫಲಗಳು

ಏನೇ ಅವಾಂತರವಾಗಲಿ, ಸ್ವಾತಂತ್ರ್ಯವನ್ನು ಗಳಿಸಬೇಕೆಂದು ಹೇಳಿದ ಮಿತ್ರರೊಬ್ಬರಿಗೆ ಗಾಂಧೀಜೀ ಹೇಳಿದರು :

‘ ಇಟಲಿಯ ಕಡೆ ನೋಡಿ. ಗ್ಯಾರಿಬಾಲ್ಡಿ ಮಹಾಪುರುಷ. ಆತನು ಇಟಲಿಯ ಸ್ವಾತಂತ್ರ್ಯವನ್ನು ಸಾಧಿಸಿದನು. ಮುಸೋಲಿನಿ ಇಟಲಿಯ ಪ್ರತಿಷ್ಠೆಯನ್ನು ಹೆಚ್ಚಿಸಿದನು. ಆದರೆ ಇಂದು ಇಟಲಿ ಏನಾಗಿದೆ? ಜಪಾನ್ ಕಡೆ ನೋಡಿ; ಜರ್ಮನಿಯ ಕಡೆ ನೋಡಿ. ಯಾವ ಹಿಂಸಾತತ್ತ್ವವು ಅವರನ್ನು ಶಿಖರಕ್ಕೆ ಏರಿಸಿತೊ ಅದೇ ಅವರ ಅಧಃಪತನಕ್ಕೆ ಕಾರಣವಾಗಿದೆ. ಈ ಅಣುಶಸ್ತ್ರ ಇಂದು ಹಿಂಸಾಮಾರ್ಗದ ನಿರರ್ಥಕತೆಯನ್ನು ಸಾರುವುದಿಲ್ಲವೆ? ಆದರೂ ನಮ್ಮಲ್ಲಿ ಹುಚ್ಚರು ಕೆಲವು ಬುರುಡೆಗಳನ್ನು ಹಾರಿಸಿ, ನಮ್ಮದೇ ಆದ ಆಸ್ತಿಪಾಸ್ತಿಗಳನ್ನು ನಾಶಮಾಡಿ ಸ್ವರಾಜ್ಯವನ್ನು ಗಳಿಸಬಹುದೆಂಬ ಭ್ರಾಂತಿ ಉಳ್ಳವರಾಗಿದೇವೆ.’

ಈ ಘಟನೆಗಳೆಲ್ಲವೂ ಗಾಂಧೀಜಿಯವರಿಗೆ ಬಹಳ ಸಂಕಟವನ್ನುಂಟುಮಾಡಿವೆಯೆಂದು ಮತ್ತೆ ಬೇರೆ ಹೇಳಬೇಕಾಗಿಲ್ಲ. ಆದರೂ ಎಂದಿಗೂ ಎದೆಗುಂದದ ಆಶಾವಾದಿ ಅವರು. ‘ ಹಿಂಸಾಕೃತ್ಯಗಳ ಭೀಷಣತಾಂಡವದ ಮೂಲಕ ಜನರು ಅಹಿಂಸೆಯ ಪಾಠ ಕಲಿಯುವರೆಂದು ನನ್ನ ದೃಢವಿಶ್ವಾಸ ’ ಎಂದರು. ಸತ್ಯ ಮತ್ತು ಅಹಿಂಸೆಯೇ ಅವರ ದೇವತೆಗಳು.

(ಪುಣೆ, ೩-೩-೧೯೪೬)
(ಹರಿಜನ, ೧೦-೩-೧೯೪೬)

---

## ಅಧ್ಯಾಯ – ೪

# ಭೂತದಯೆ



## ಇದು ಭೂತದಯೆಯೆ?

### ೧

ಅಹಮದಾಬಾದಿನ ಭೂತದಯಾ ಸಂಘದವರು ನನಗೆ ಪತ್ರವೊಂದನ್ನು ಬರೆದಿದಾರೆ—ಅದರಲ್ಲಿ ಕೆಲವು ಭಾಗವನ್ನು ಇಲ್ಲಿ ಕೊಡುತ್ತಿದೇನೆ:

'ಸೇಠ್—ಅವರ ಗಿರಣಿಯ ಆವರಣದಲ್ಲಿ ೬೦ ನಾಯಿಗಳನ್ನು ಕೊಂದು ಹಾಕಿದರು. ಈ ಮಾತೇ ಅಹಮದಾಬಾದಿನಲ್ಲೆಲ್ಲ ಎಲ್ಲರ ಬಾಯಲ್ಲೂ ಇದೆ. ಜೀವಕಾರುಣ್ಯವಿರುವ ಎಲ್ಲರ ಮನಸ್ಸೂ ಇದರಿಂದ ಕಲಕಿಹೋಗಿದೆ. ಹಿಂದೂ ಧರ್ಮ ಯಾವ ಜೀವವನ್ನು ಕೊಲ್ಲುವುದೂ ಪಾಪವೆಂದು ಹೇಳುವಾಗ—ಹುಚ್ಚು ನಾಯಿಗಳು ಮನುಷ್ಯರನ್ನೊ ಇತರ ನಾಯಿಗಳನ್ನೊ ಕಚ್ಚಬಹುದೆಂಬ ಕಾರಣಕ್ಕಾಗಿ ಅವನ್ನು ಕೊಲ್ಲುವುದು ಸರಿಯೆಂದು ನಿಮಗೆ ತೋರುತ್ತದೆಯೆ? ನಾಯಿಯನ್ನು ಕೊಲ್ಲುವವನೂ ಕೊಲ್ಲಿಸುವವನೂ ಇಬ್ಬರೂ ಪಾಪಕ್ಕೆ ಗುರಿಯಾಗುವುದಿಲ್ಲವೆ?

'ಹೋದ ತಿಂಗಳು ೨೮ನೇ ದಿನಾಂಕ ನಮ್ಮ ಸಂಘದ ಮೂವರು ಪ್ರತಿನಿಧಿಗಳು ಸೇಠರನ್ನು ಭೇಟಿ ಮಾಡಿದರು. ಮನುಷ್ಯರ ಪ್ರಾಣವನ್ನು ಉಳಿಸಲು ಅವರು ಹೀಗೆ ಮಾಡಬೇಕಾಗಿತ್ತೆಂದು ಅವರು ಹೇಳಿಕೊಂಡರು. ಮುಂದುವರಿಸಿ ಅವರು ಹೀಗೆಂದರು: 'ಈ ತೀರ್ಮಾನವನ್ನು ಮಾಡಿದಮೇಲೆ ಆ ರಾತ್ರಿ ನನಗೆ ನಿದ್ದೆ ಬರಲಿಲ್ಲ. ಮಹಾತ್ಮಾಜಿಯವರನ್ನು ಬೆಳಗಾಗುತ್ತಲೆ ಭೇಟಿಯಾಗಿ ಅವರ ಅಭಿಪ್ರಾಯವನ್ನು ಕೇಳಿದೆ. 'ಬೇರೆ ಏನು ಮಾಡಲಾದೀತು?' ಎಂದು ಅವರು ಹೇಳಿದರು.'

ಇದು ನಿಜವೆ? ಹಾಗಾದರೆ ಇದರ ಅರ್ಥವೇನು? ಈ ವಿಷಯದಲ್ಲಿ ನಿಮ್ಮ ಅಭಿಪ್ರಾಯವನ್ನು ಸ್ಪಷ್ಟಪಡಿಸಬೇಕೆಂದು ಕೋರುತ್ತೇವೆ. ಈ ವಿವಾದವನ್ನು ಬಗೆಹರಿಸಬೇಕು. ಸೇಠರಂತಹ ಪ್ರತಿಷ್ಠಿತ ಜನರ ಕಾರ್ಯಗಳಿಂದ ದಿಗ್ಭ್ರಾಂತರಾಗಿ ಕಳವಳಗೊಳ್ಳುವ ಜೀವಕಾರುಣ್ಯವಿರುವವರಿಗೆ ಸಮಾಧಾನವನ್ನುಂಟು

ಮಾಡಬೇಕು. ಅಹಮದಾಬಾದ್ ಮ್ಯುನಿಸಿಪಾಲಿಟಿಯವರು ಇಷ್ಟರಲ್ಲಿಯೇ ಒಂದು ಠರಾವನ್ನು ಮಾಡಿ ಬೀದಿನಾಯಿಗಳನ್ನು ಬೀಜರಹಿತವನ್ನಾಗಿ ಮಾಡಬೇಕೆಂದಿದಾರೆಂದು ನಾವು ಕೇಳುತ್ತೇವೆ. ಇದು ನ್ಯಾಯವೆ? ಒಂದು ಪ್ರಾಣಿಯನ್ನು ಬೀಜರಹಿತವನ್ನಾಗಿ ಮಾಡಲು ಧರ್ಮವು ಎಡೆಗೊಡುತ್ತದೆಯೆ? ಇದರ ವಿಷಯದಲ್ಲಿಯೂ ತಮ್ಮ ಅಭಿಪ್ರಾಯವನ್ನು ತಿಳಿಸಿದರೆ ಕೃತಜ್ಞರಾಗಿರುವೆವು.'

ಈ ಪತ್ರದಲ್ಲಿ ಹೇಳಿರುವಂತೆ ಸೇಠರಿಗೆ ನಾನು ಉತ್ತರ ಕೊಟ್ಟುದು ನಿಜ.

ಇದರ ವಿಷಯವಾಗಿ ಅನಂತರ ವಿಚಾರ ಮಾಡಿದೇನೆ. ನಾನು ಕೊಟ್ಟ ಉತ್ತರವೇ ಸೂಕ್ತವೆಂದು ತೋರುತ್ತದೆ.

ಅಪೂರ್ಣರೂ ದೋಷಯುತರೂ ಆದ ನಾವು ಹುಚ್ಚುನಾಯಿಗಳನ್ನು ಕೊಲ್ಲದೆ ಬೇರೆ ಏನನ್ನು ಮಾಡಲೂ ಸಾಧ್ಯವಿಲ್ಲ. ಒಮ್ಮೊಮ್ಮೆ ಮನುಷ್ಯರನ್ನು ಕೊಲ್ಲಲು ಉದ್ಯುಕ್ತನಾಗಿರುವ ಮನುಷ್ಯನನ್ನೂ ಕೊಲ್ಲುವ ಅನಿವಾರ್ಯ ಕರ್ತವ್ಯವೂ ನಮ್ಮ ಪಾಲಿಗೆ ಬರಬಹುದು.

ಬೀದಿನಾಯಿಗಳ ಗೋಜಿಗೆ ಹೋಗದೇನೇ ಇದ್ದರೆ—ಇಷ್ಟರಲ್ಲಿಯೇ ಅವುಗಳು ಸಂತಾನವನ್ನು ಪಡೆಯದಂತೆ ಮಾಡುವುದೂ ಅಥವಾ ಅವುಗಳನ್ನು ಕೊಲ್ಲುವುದೂ ನಮ್ಮ ಮುಂದಿನ ಕರ್ತವ್ಯವಾದೀತು. ನಾಯಿಗಳಿಗಾಗಿಯೇ ಪ್ರತ್ಯೇಕವಾದ ಪಿಂಜ್ರಾಪೋಲನ್ನು ಸ್ಥಾಪಿಸುವುದು ಮೂರನೆಯ ಮಾರ್ಗ. ಆದರೆ ಅದು ನಡೆಯುವ ಮಾತಲ್ಲ. ನಗರದಲ್ಲಿ ಯಥೇಚ್ಛೆಯಾಗಿ ಓಡಾಡುವ ದನಗಳಿಗೇ ಪಿಂಜ್ರಾಪೋಲ್ ಇಲ್ಲದಿರುವಾಗ ನಾಯಿಗಳಿಗೆ ಈ ಏರ್ಪಾಡು ಮಾಡುವುದೆಂದರೆ ಹಾಸ್ಯಾಸ್ಪದ.

ಹಿಂದೂ ಧರ್ಮದಲ್ಲಿ ಜೀವರಾಶಿಯನ್ನು ಕೊಲ್ಲಬಾರದೆಂಬ ನಿಷೇಧವಿದೆ ಎಂಬುದರಲ್ಲಿ ಭಿನ್ನಾಭಿಪ್ರಾಯವಿಲ್ಲ. ಎಲ್ಲ ಧರ್ಮಗಳಲ್ಲಿಯೂ ಈ ನಿಯಮವಿದೆ. ಒಂದು ತತ್ತ್ವವನ್ನು ಪ್ರತಿಪಾದಿಸುವುದು ಕಷ್ಟವಲ್ಲ. ಅದನ್ನು ಅನುಷ್ಠಾನಕ್ಕೆ ತರುವಾಗಲೇ ಪ್ರಶ್ನೆಗಳು ಹುಟ್ಟುತ್ತವೆ. ಒಂದು ತತ್ತ್ವವೆಂದರೆ ಅದು ಪೂರ್ಣವಾದ ಧ್ಯೇಯ. ನಮ್ಮಂತಹ ಅಪೂರ್ಣರು ಅದನ್ನು ಸಂಪೂರ್ಣವಾಗಿ ಅನುಷ್ಠಾನಕ್ಕೆ ತರಲು ಸಾಧ್ಯವಾಗದಿರುವುದರಿಂದ ಪ್ರತಿ ಕ್ಷಣವೂ ಎಷ್ಟರಮಟ್ಟಿಗೆ ಅದರ ಆಚರಣೆಯನ್ನು ಮಾಡಬಹುದೆಂಬ ವಿಷಯದಲ್ಲಿ ಯೋಚಿಸುತ್ತಿರುತ್ತಾರೆ. ಉದಾಹರಣೆಗೆ ಯಜ್ಞದಲ್ಲಿ ಮಾಡುವ ಹತ್ಯೆ ಹಿಂಸೆಯಲ್ಲವೆಂದು ಹೇಳಿದಾರೆ.

ಇದು ಅರ್ಧ ಸತ್ಯ. ಹಿಂಸೆಯೆಂಬುದು ಎಂದಿಗೂ ಹಿಂಸೆಯೇ. ಹಿಂಸೆಯೆಲ್ಲ ಪಾಪಕರ. ಆದರೆ ಅನಿವಾರ್ಯವಾಗಿ ಮಾಡಬೇಕಾದುದು ಪಾಪವಲ್ಲ. ಹೀಗಾಗಿ ನಿತ್ಯಾಚಾರದಲ್ಲಿ ಈ ರೀತಿಯ ಯಜ್ಞದಲ್ಲಿ ನಡೆಸುವ ಅನಿವಾರ್ಯ ಹಿಂಸೆಯನ್ನು ಮಾಡಬಹುದೆಂದು ಹೇಳಲಾಗಿದೆ. ಅಷ್ಟೇ ಅಲ್ಲ, ಇದರಿಂದ ಪುಣ್ಯ ಬರುವುದೆಂದೂ ಹೇಳಲಾಯಿತು.

ಆದರೆ ಹಿಂಸೆ ಯಾವಾಗ ಅನಿವಾರ್ಯವೆಂಬುದನ್ನು ವಿವರಿಸಲು ಸಾಧ್ಯವಿಲ್ಲ. ಏಕೆಂದರೆ ಕಾಲ, ದೇಶ, ವ್ಯಕ್ತಿ ಇದಕ್ಕನುಸಾರವಾಗಿ ಬದಲಾಯಿಸುತ್ತದೆ. ಒಂದು ಕಾಲದಲ್ಲಿ ಕ್ಷಮ್ಯವಾದ ಆಚರಣೆ ಮತ್ತೊಂದು ಕಾಲದಲ್ಲಿ ಅಕ್ಷಮ್ಯವಾದೀತು. ಚಳಿಯ ಕಾಲದಲ್ಲಿ ಮೈಯನ್ನು ಬೆಚ್ಚಗಿಡಲು ಸೌದೆ–ಇದ್ದಲನ್ನು ಉರಿಸುವುದು ಹಿಂಸೆಯಿಂದ ಕೂಡಿದ್ದಾದರೂ ದುರ್ಬಲ ಮನುಷ್ಯನಿಗಾಗಿ ಅನಿವಾರ್ಯ—ಆದುದರಿಂದ ಒಂದು ಕರ್ತವ್ಯವಾಗಬಹುದು. ಆದರೆ ಬೇಸಿಗೆಯ ಕಾಲದಲ್ಲಿ ಈ ರೀತಿ ಉರಿ ಮಾಡಿದರೆ ಅದು ಸ್ಪಷ್ಟವಾಗಿ ಹಿಂಸೆಯಾಗುವುದು.

ವಿಷಕ್ರಿಮಿಗಳನ್ನು ಕೊಲ್ಲಲು ಕೆಲವು ಶುದ್ಧಿಮಾಡುವ ಔಷಧ ದ್ರಾವಕಗಳನ್ನು ಪ್ರಯೋಗ ಮಾಡುವುದು ಕರ್ತವ್ಯವೆಂದು ಮನಗಂಡಿದೇವೆ. ಇದು ಹಿಂಸೆ—ಆದರೂ ಕರ್ತವ್ಯ. ಅಷ್ಟು ದೂರ ಏಕೆ ಹೋಗಬೇಕು ? ಒಂದು ಕತ್ತಲು ಕೋಣೆಯ ಗಾಳಿಯಲ್ಲಿ ಕೆಟ್ಟ ಕ್ರಿಮಿಗಳು ತುಂಬಿರುತ್ತವೆ. ಆ ಕೋಣೆಯಲ್ಲಿ ಗಾಳಿ-ಬೆಳಕು ಪ್ರವೇಶ ಮಾಡಿಸುವುದು ವಿನಾಶಕಾರಿಯಾದ ಕೆಲಸವೇ ಹೌದು. ಆದರೆ ಎಲ್ಲಕ್ಕೂ ಉತ್ತಮವಾಗಿ ಶುದ್ಧಿಮಾಡುವ ಶುದ್ಧವಾದ ಗಾಳಿಯನ್ನು ಬಿಡುವುದು ಯಾವಾಗಲೂ ಕರ್ತವ್ಯವೇ ಆಗುವುದು.

ಇಂತಹ ಉದಾಹರಣೆಗಳನ್ನೆಷ್ಟೊ ಹೇಳಬಹುದು. ಈ ಮೇಲೆ ಹೇಳಿರುವ ಉದಾಹರಣೆಗಳಿಗಾಗಿ ಅನ್ವಯಿಸುವ ತತ್ತ್ವ ಹುಚ್ಚುನಾಯಿಗಳನ್ನು ಕೊಲ್ಲುವುದಕ್ಕೂ ಅನ್ವಯಿಸುವುದು. ಒಂದು ಹುಚ್ಚುನಾಯನ್ನು ಕೊಲ್ಲುವುದು ಕನಿಷ್ಠ ಪ್ರಮಾಣದ ಹಿಂಸೆಯನ್ನಾಚರಿಸಿದಂತಾಗುವುದು. ಅರಣ್ಯದ ಏಕಾಂತದಲ್ಲಿ ವಾಸಿಸುವ ಸಾಧು—ಆತನು ಕರುಣೆಯ ಅವತಾರವೇ ಆಗಿದ್ದರೆ—ಹುಚ್ಚುನಾಯನ್ನು ಕೊಲ್ಲದೆ ಇರಬಹುದು. ಏಕೆಂದರೆ ಆತನ ಕರುಣಾಶಕ್ತಿಯಿಂದ ಅದನ್ನು ಗುಣಪಡಿಸುವ ಶಕ್ತಿ ಆತನಲ್ಲಿರಬಹುದು. ಆದರೆ ನಗರವಾಸಿಯು ತನ್ನ ಅಧೀನದಲ್ಲಿರುವವರ ಪ್ರಾಣವನ್ನು ರಕ್ಷಿಸಲು ಆತನಲ್ಲಿ ಆ ಸಾಧುವಿನಲ್ಲಿರುವ

ಮಹಿಮಾಶಕ್ತಿ ಇಲ್ಲದಿರುವುದರಿಂದಲೂ ಆತನು ಆ ಹುಚ್ಚುನಾಯನ್ನು ಕೊಲ್ಲ ಬಲ್ಲವನಾದುದರಿಂದಲೂ ಆತನ ಮನಸ್ಸಿನಲ್ಲಿ ಧರ್ಮಸಂಕಟ ಉಂಟಾಗುತ್ತದೆ. ನಾಯಿಯನ್ನು ಕೊಂದರೆ ಪಾಪವನ್ನು ಮಾಡುತ್ತಾನೆ. ಕೊಲ್ಲದಿದ್ದರೆ ಮತ್ತಷ್ಟು ಪಾಪಕ್ಕೆ ಗುರಿಯಾಗುತ್ತಾನೆ. ಆದುದರಿಂದ ಕಡಮೆಯಾದ ಪಾಪವನ್ನು ಮಾಡಿ ದೊಡ್ಡ ಪಾಪದಿಂದ ಪಾರಾಗುತ್ತಾನೆ.

ನಾನು ಅಹಿಂಸಾತತ್ತ್ವವನ್ನು ಪೂರ್ತಿಯಾಗಿ ಮೈಗೂಡಿಸಿಕೊಂಡಿದೇನೆ ಎಂದು ನನ್ನ ನಂಬಿಕೆ. ಅಹಿಂಸೆ ಮತ್ತು ಸತ್ಯ ನನ್ನ ಎರಡು ಶ್ವಾಸಕೋಶ ಗಳಂತೆ. ಅವುಗಳಿಲ್ಲದೆ ನಾನು ಬದುಕಿರಲಾರೆ. ಆದರೂ ಪ್ರತಿಕ್ಷಣದಲ್ಲಿಯೂ ಅಹಿಂಸೆಯ ಅಪಾರ ಶಕ್ತಿಯನ್ನೂ ಮಾನವನೆಷ್ಟು ಸಣ್ಣವನೆಂದೂ ಹೆಚ್ಚು ಹೆಚ್ಚು ಸ್ಪಷ್ಟವಾಗಿ ಕಾಣುತ್ತಿದೇನೆ. ಅರಣ್ಯವಾಸಿಯೂ ಕೂಡ ಅವನಲ್ಲಿ ಅಮಿತವಾದ ಕರುಣೆಯಿದ್ದರೂ ಹಿಂಸೆಯಿಂದ ಪೂರ್ತಿಯಾಗಿ ಬಿಡುಗಡೆ ಹೊಂದಲಾರ. ಪ್ರತಿಯೊಂದು ಶ್ವಾಸ-ನಿಃಶ್ವಾಸದಿಂದಲೂ ಸ್ವಲ್ಪಮಟ್ಟಿಗೆ ಹಿಂಸೆ ಯನ್ನು ಮಾಡುತ್ತಾನೆ. ಈ ದೇಹವೇ ಒಂದು ಕಟುಕರ ಶಾಲೆಯಂತಿದೆ. ಆದುದರಿಂದ ಮೋಕ್ಷ ಮತ್ತು ಶಾಶ್ವತವಾದ ಆನಂದ ಪಡೆಯಬೇಕಾದರೆ ದೇಹದಿಂದ ಬಿಡುಗಡೆಯಾಗಬೇಕು. ಆದುದರಿಂದ ಮೋಕ್ಷಸುಖವನ್ನುಳಿದು ಎಲ್ಲ ಸುಖವೂ ನಶ್ವರ, ಅಸಂಪೂರ್ಣ.

ಹೀಗಿರುವುದರಿಂದ ನಿತ್ಯಜೀವನನಲ್ಲಿ ಹಿಂಸೆಯನ್ನು ಆಗಾಗ್ಗೆ ಮಾಡುವ ಕಹಿ ಪ್ರಸಂಗಗಳು ಬಂದೇ ಬರುತ್ತವೆ.

ಆದುದರಿಂದ ಅಹಿಂಸೆಯ ಪವಿತ್ರ ಕ್ಷೇತ್ರವಾದ ನಮ್ಮ ದೇಶದಲ್ಲಿ ಈ ಬೀದಿನಾಯಿಗಳನ್ನು ಕೊಲ್ಲುವ ವಿಚಾರ ವಿಪರೀತ ವಿವಾದಗಳಿಗಿಟ್ಟುಕೊಂಡಿರು ವುದು ಬಹಳ ಶೋಚನೀಯ. ಅಹಿಂಸೆಯೆಂದು ಹೇಳುತ್ತ ಬಹಳ ಹಿಂಸೆಯನ್ನು ನಾವು ಆಚರಿಸುತ್ತೇವೆಂದು ನನ್ನ ದೃಢವಾದ ನಂಬಿಕೆ. ಈ ದೊಡ್ಡ ತತ್ತ್ವ ವನ್ನು ನಾವು ಅರ್ಥಮಾಡಿಕೊಳ್ಳದೆ ಇರುವುದೇ ಇದಕ್ಕೆ ಕಾರಣ. ಹುಚ್ಚು ನಾಯಿಗಳನ್ನೂ, ಹುಚ್ಚು ಹಿಡಿಯಬಹುದಾದ ನಾಯಿಗಳನ್ನೂ ಕೊಲ್ಲುವುದು ಪಾಪವಿರಬಹುದು. ಆದರೆ ಈ ಪರಿಸ್ಥಿತಿಗೆ ನಾವು ಹೊಣೆಗಾರರು; ಜನರ ಮುಖಂಡರು ಹೊಣೆಗಾರರು. ಅವರು ನಾಯಿಗಳನ್ನು ತಿರುಗಾಡಲು ಬಿಡ ಬಾರದು. ಅಲೆದಾಡುವ ನಾಯಿಗಳಿಗೆ ಆಹಾರ ಕೊಡುವುದು ಪಾಪವೆಂಬ

ಭಾವನೆ ಬರಬೇಕು. ಬೀದಿಯಲ್ಲಿ ಅಲೆಯುವ ನಾಯಿಗಳನ್ನು ಗುಂಡುಹಾಕಿ ಕೊಲ್ಲಬಹುದೆಂದು, ಕಾನೂನಿದ್ದರೆ ನೂರಾರು ನಾಯಿಗಳನ್ನು ನಾವು ರಕ್ಷಿಸಬಹುದು. ಈ ಬೀದಿನಾಯಿಗಳಿಗೆ ಆಹಾರ ಕೊಡುವ ದಾನಿಗಳು ತಮ್ಮ ಕರುಣೆ ತಪ್ಪು ದಾರಿಯಲ್ಲಿ ಹೋದ ಅಪರಾಧಕ್ಕೆ ದಂಡವನ್ನು ತೆರುವುದಾದರೆ ಈ ಬೀದಿನಾಯಿಗಳ ಹಾವಳಿಯಿಂದ ನಾವು ತಪ್ಪಿಸಿಕೊಳ್ಳಬಹುದು.

ಕರುಣೆಯೆಂಬುದು ಆತ್ಮದ ಉದಾತ್ತ ಹಣ. ಕೆಲವು ಮೀನುಗಳನ್ನೂ ನಾಯಿಗಳನ್ನೂ ರಕ್ಷಿಸುವುದರಿಂದ ಅದರ ಪೂರೈಕೆ ಆಗುವುದಿಲ್ಲ. ಈ ರೀತಿಯಲ್ಲಿ ರಕ್ಷಿಸುವುದೂ ಪಾಪವಾಗಬಹುದು. ನನ್ನ ಮನೆಯಲ್ಲಿ ಒಂದು ಇರುವೆಯ ಹಿಂಡಿದ್ದರೆ ಅದಕ್ಕೆ ಆಹಾರವನ್ನು ಕೊಡಲು ತೊಡಗುವವನು ಪಾಪವನ್ನು ಆಚರಿಸುವನು. ದೇವರು ಇರುವೆಗಳಿಗೆ ಧಾನ್ಯ ಒದಗಿಸಿದಾನೆ. ಆದರೆ ಅದಕ್ಕೆ ಧಾನ್ಯ ಕೊಡುವ ಮನುಷ್ಯನು ನನ್ನನ್ನೂ ನನ್ನ ಕುಟುಂಬವನ್ನೂ ನಾಶ ಮಾಡಬಹುದು. ಜನರ ಪಂಚಾಯತು, ನನ್ನ ಜಮೀನಿನ ಬಳಿ ನಾಯಿಗಳನ್ನು ಬಿಡುವುದರಿಂದ ತಮಗೆ ಕ್ಷೇಮವಾಯಿತೆಂದೂ ತಮ್ಮ ಪ್ರಾಣವನ್ನು ಕಾಪಾಡಿಕೊಂಡರೆಂದೂ ನಂಬಬಹುದು. ಆದರೆ ನನ್ನ ಪ್ರಾಣಕ್ಕೆ ಅಪಾಯ ಉಂಟುಮಾಡುವ ಹೆಚ್ಚಿನ ಪಾಪಕ್ಕೆ ಗುರಿಯಾಗುವರು. ತಿಳುವಳಿಕೆ, ವಿವೇಚನೆ, ಔದಾರ್ಯ, ನಿರ್ಭಯ, ನಮ್ರತೆ, ಸ್ಪಷ್ಟವಾದ ದೃಷ್ಟಿ—ಇವಿಲ್ಲದಿದ್ದರೆ ಕರುಣೆ ಸಾಧ್ಯವಿಲ್ಲ. ಹಿಂಸೆಯಿಂದ ತುಂಬಿರುವ ಈ ಪ್ರಪಂಚದಲ್ಲಿ ಅಹಿಂಸೆ ಎಂಬ ಅಸಿಧಾರೆಯ ಮೇಲೆ ನಡೆಯುವುದು ಸುಲಭವಲ್ಲ. ಧನದಿಂದ ಪ್ರಯೋಜನವಿಲ್ಲ. ಕೋಪ ಅಹಿಂಸೆಯ ಶತ್ರು. ಅಹಂಭಾವ ಎಲ್ಲವನ್ನೂ ನುಂಗುವ ರಾಕ್ಷಸ. ಹೀಗೆ ಬಹಳ ಇಕ್ಕಟ್ಟಾದ ದಾರಿಯಲ್ಲಿ ಈ ಅಹಿಂಸೆಯ ಪ್ರದೇಶದಲ್ಲಿ ನಡೆಯಬೇಕಾದರೆ—ಹಿಂಸೆಯೆಂದು ಅನಿಸಿಕೊಳ್ಳುವುದೂ ಅತ್ಯುತ್ತಮ ರೀತಿಯ ಅಹಿಂಸೆಯಾಗುವುದೆಂದು ಪದೇ ಪದೇ ಮನಗಾಣಬೇಕು.

ಈ ಪ್ರಪಂಚದಲ್ಲಿ ಪದಾರ್ಥಗಳು ಕಾಣುವಂತೆ ಇರುವುದಿಲ್ಲ—ಇರುವಂತೆ ಕಾಣುವುದಿಲ್ಲ. ಒಮ್ಮೆ ಇದ್ದಂತೆ ಕಂಡರೂ—ಅದು ಕೆಲವರಿಗೆ ಮಾತ್ರ—ಯಾರು ದೀರ್ಘಕಾಲ ತಪಸ್ಸನ್ನಾಚರಿಸಿ ಪರಿಪೂರ್ಣತೆಯನ್ನು ಪಡೆದಿದ್ದಾರೊ ಅಂಥವರಿಗೆ ಮಾತ್ರ. ಆದರೆ ಆ ಇರುವ ನಿತ್ಯವಸ್ತುವನ್ನು ವರ್ಣಿಸಲು ಸಾಧ್ಯವಾಗಲಿಲ್ಲ; ಸಾಧ್ಯವೂ ಇಲ್ಲ. (ಯಂಗ್ ಇಂಡಿಯಾ, ೨೧-೧೦-೧೯೨೬)

೨

ನಮ್ಮ ಮನೆಬಾಗಿಲಿಗೆ ಬರುವ ಭಿಕ್ಷುಕನಿಗೆ ಒಂದು ಹಿಡಿ ಎಸೆದು ನಾವು ಪುಣ್ಯಮಾಡಿದೆವೆಂದು ಭಾವಿಸುತ್ತೇವೆ. ಆದರೆ ಇದರಿಂದ ಭಿಕ್ಷುಕರ ಸಂಖ್ಯೆಯನ್ನು ಹೆಚ್ಚುಮಾಡುತ್ತೇವೆ. ಭಿಕ್ಷೆಯೆತ್ತುವ ದೋಷವನ್ನು ಅಧಿಕರಿಸುತ್ತೇವೆ. ಸೋಮಾರಿತನಕ್ಕೆ ಉತ್ತೇಜನ ಕೊಡುತ್ತೇವೆ. ಅಧರ್ಮ ಬೆಳೆಯಲು ಕಾರಣರಾಗುತ್ತೇವೆ. ಭಿಕ್ಷೆಗೆ ಪಾತ್ರರಾದವರಿಗೆ ಭಿಕ್ಷೆ ಹಾಕಬಾರದೆಂದು ಇದರ ಅರ್ಥವಲ್ಲ. ಕುರುಡರನ್ನೂ ಹೆಳವರನ್ನೂ ರಕ್ಷಿಸುವುದು ಸಮಾಜದ ಕರ್ತವ್ಯ. ಆದರೆ ಪ್ರತಿಯೊಬ್ಬನೂ ಈ ಕಾರ್ಯವನ್ನು ಕೈಗೊಳ್ಳಬಾರದು. ಸಮಾಜದ ಮುಖಂಡರು—ಮಹಾಜನರು (ಪಂಚಾಯತು) ಅಥವಾ ಸರಕಾರ—ಇವು ಸರಿಯಾಗಿ ವ್ಯವಸ್ಥೆಯಾಗಿದ್ದ ಪಕ್ಷಕ್ಕೆ—ಈ ಕೆಲಸವನ್ನು ಮಾಡಬೇಕು. ಸಮಾಜದಲ್ಲಿನ ದಾನಶೀಲರು ಇದಕ್ಕೆ ನೆರವಾಗಬೇಕು. ಪಂಚಾಯತು ಶುದ್ಧ ಮನಸ್ಸುಳ್ಳುದಾದರೆ ಭಿಕ್ಷುಕರ ಪರಿಸ್ಥಿತಿಯನ್ನು ಚೆನ್ನಾಗಿ ಪರಿಶೀಲಿಸಿ ಅವರಲ್ಲಿ ಯೋಗ್ಯರಾದವರ ರಕ್ಷಣೆಯನ್ನು ಮಾಡಬೇಕು. ಇದಾಗದಿದ್ದರೆ—ಅಂದರೆ ಕೊಡುವ ಸಹಾಯ ಯಾವ ವಿಚಕ್ಷಣೆಯಿಂದಲೂ ಮಾಡಿದುದಲ್ಲದಿದ್ದರೆ—ಪೋಕರಿ-ಪುಂಡರು ಭಿಕ್ಷುಕರಂತೆ ವೇಷಹಾಕಿ ಸಹಾಯವನ್ನು ಪಡೆಯುವರು. ದೇಶದ ದಾರಿದ್ರ್ಯ ಬೆಳೆಯುತ್ತಲೇ ಹೋಗುವುದು.

ಈ ರೀತಿಯಲ್ಲಿ ಭಿಕ್ಷುಕರಿಗೆ ಆಹಾರವನ್ನು ಕೊಡುವುದು ಒಬ್ಬ ವ್ಯಕ್ತಿಗೆ ಪಾಪಕೃತ್ಯವಾದರೆ, ಬೀದಿನಾಯಿಗಳಿಗೆ ಆಹಾರವನ್ನು ಕೊಡುವುದು ಇದಕ್ಕೂ ಕಡಮೆಯ ಪಾಪವಲ್ಲ. ಇದು ಕರುಣೆಯ ವಿಕಟಸ್ವರೂಪ. ಒಂದು ಹಸಿದ ನಾಯಿಗೆ ಒಂದು ಚೂರು ರೊಟ್ಟಿಯನ್ನು ಎಸೆಯುವುದು ಅದಕ್ಕೆ ಅಪಮಾನ. ಬೀದಿಯಲ್ಲಿ ಅಲೆದಾಡುವ ನಾಯಿಗಳು ಸಮಾಜದ ನಾಗರಿಕತೆಗಾಗಲಿ ಕರುಣೆಗಾಗಲಿ ನಿದರ್ಶನವಲ್ಲ—ಆ ಸಮಾಜದವರ ಸೋಮಾರಿತನವನ್ನೂ ತಾಮಸ ವೃತ್ತಿಯನ್ನೂ ತೋರಿಸುತ್ತವೆ. ಈ ಮೂಕ ಪ್ರಾಣಿಗಳು ನಮ್ಮ ಸಹೋದರರು. ಇವುಗಳ ಗುಂಪಿಗೆ ಸಿಂಹ, ಹುಲಿ ಇವುಗಳನ್ನೂ ನಾನು ಸೇರಿಸುತ್ತೇನೆ. ಈ ಕ್ರೂರ ಮೃಗಗಳೊಂದಿಗೂ ವಿಷಸರ್ಪಗಳೊಂದಿಗೂ ನಮ್ಮ ಅಜ್ಞಾನದ ಪ್ರಯುಕ್ತ ನಾವು ಸಹಜೀವನವನ್ನು ಮಾಡಲಾರದವರಾಗಿದೇವೆ. ಮಾನವನು ತನ್ನನ್ನು ತಾನು ಚೆನ್ನಾಗಿ ಅರಿತುಕೊಂಡಾಗ, ಇವುಗಳೊಂದಿಗೂ ಸ್ನೇಹ

ವಾಗಿರುವುದನ್ನು ಕಲಿಯುವನು. ಇಂದು ಬೇರೆ ಧರ್ಮವನ್ನಾಚರಿಸುವವ ರೊಂದಿಗೂ ಬೇರೆ ದೇಶದವರೊಂದಿಗೂ ಸಹ ಅವನು ಸ್ನೇಹಪರನಾಗಿರಲು ಕಲಿತಿರುವುದಿಲ್ಲ.

ನಾಯಿ ಬಹಳ ವಿಶ್ವಾಸವುಳ್ಳ ಜೊತೆಗಾರ. ನಾಯಿಗಳ ಮತ್ತು ಕುದುರೆ ಗಳ ವಿಶ್ವಾಸದ ಗುಣವನ್ನು ತೋರಿಸುವ ಅನೇಕ ನಿದರ್ಶನಗಳುಂಟು. ಇದರ ಅರ್ಥವೇನು? ನಾವು ಅವುಗಳನ್ನು ಕಾಪಾಡಬೇಕು, ನಮ್ಮ ಜೊತೆಗಾರರನ್ನು ಗೌರವಿಸುವಂತೆ ಗೌರವಿಸಬೇಕು—ಬೀದಿಯಲ್ಲಿ ತಿರುಗಾಡಲು ಬಿಡಬಾರದು. ಸ್ವೇಚ್ಛೆಯಾಗಿ ತಿರುಗಾಡುವಂತೆ ಬಿಡುವುದು ತಪ್ಪು. ಈ ತಪ್ಪು ಬೆಳೆಯು ವಂತೆ ಮಾಡುವುದರಿಂದ ನಾವು ಅವುಗಳ ವಿಷಯದಲ್ಲಿ ನಮ್ಮ ಕರ್ತವ್ಯವನ್ನು ಮಾಡಿದಂತಾಗುವುದಿಲ್ಲ. ಆದರೆ ಇಂತಹ ತಿರುಕನಾಯಿಗಳಿರುವುದು ನಮಗೆ ಅಪಮಾನಕರವೆಂದು ಎಣಿಸಿದೆವಾದರೆ ಅವುಗಳಿಗೆ ಆಹಾರ ಕೊಟ್ಟು ಬೆಂಬಲ ಕೊಡುವುದನ್ನು ನಿಲ್ಲಿಸುತ್ತಿದ್ದೆವು. ಹಾಗಾದರೆ ನಾಯಿಜಾತಿಗೇ ಸೇವೆಯನ್ನು ಸಲ್ಲಿಸಿ ಅವುಗಳ ಸುಖವನ್ನು ಬಯಸಿದಂತಾಗುವುದು.

ಅಂದಮೇಲೆ ಒಬ್ಬ ಕರುಣೆಯುಳ್ಳ ಮನುಷ್ಯನು ತಿರುಕನಾಯಿಗಳಿಗಾಗಿ ಏನು ಮಾಡಲು ಸಾಧ್ಯ? ಅವನ ವರಮಾನದ ಒಂದು ಭಾಗವನ್ನು ಅವುಗಳ ರಕ್ಷಣೆಗಾಗಿ ಯಾವುದಾದರೂ ಸಂಸ್ಥೆಯಿದ್ದರೆ ಅದಕ್ಕೆ ಕಳುಹಿಸಬೇಕು. ಇಂತಹ ಸಂಸ್ಥೆಗಳು ಸಾಧ್ಯವಿಲ್ಲದಿದ್ದರೆ—ಅಸಾಧ್ಯವಲ್ಲದಿದ್ದರೂ ಬಹಳ ಕಷ್ಟಕರವೆಂದು ನಾನು ಬಲ್ಲೆ—ಆತನು ಒಂದೆರಡು ಇಂತಹ ನಾಯಿಗಳನ್ನು ತನ್ನದನ್ನಾಗಿ ಮಾಡಿಕೊಳ್ಳಬೇಕು. ಹೀಗೆ ಮಾಡಲಾಗದಿದ್ದರೆ ಈ ನಾಯಿಗಳ ಚಿಂತೆಯನ್ನು ಬಿಟ್ಟುಕೊಡಬೇಕು. ಬೇರೆ ಮೂಕಪ್ರಾಣಿಗಳ ವಿಷಯದಲ್ಲಿ ತನ್ನ ಕರುಣೆ ಯನ್ನು ವಿನಿಯೋಗಿಸಬೇಕು.

'ಆದರೆ ಅವುಗಳನ್ನು ಕೊಲ್ಲಬೇಕೆಂದು ನಮಗೆ ನೀವು ಹೇಳುತ್ತಿರುವಿರಿ, ಅಲ್ಲವೆ?' ಈ ಪ್ರಶ್ನೆಯನ್ನು ಕೋಪದಿಂದಲೋ ಪ್ರೀತಿಯಿಂದಲೋ ಇತರರು ನನ್ನನ್ನು ಕೇಳುತ್ತಿದಾರೆ. ನಾನು ಅವುಗಳನ್ನು ಮೂಲೋತ್ಪಾಟನೆ ಮಾಡು ವುದು ಕರ್ತವ್ಯವೆಂದು ಹೇಳುತ್ತಿಲ್ಲ. ಕೆಲವು ನಾಯಿಗಳನ್ನು ಕೆಲವು ಸಂದರ್ಭ ದಲ್ಲಿ ಕೊಲ್ಲುವುದು ಒಂದು ಆಪದ್ಧರ್ಮವಾಗುವುದೆಂದು ಸೂಚಿಸುತ್ತಿದೇನೆ. **ಸರಕಾರ ಈ ತಿರುಕನಾಯಿಗಳ ವಿಷಯದಲ್ಲಿ ಗಮನವನ್ನು ಕೊಡದೆ ಇದ್ದಾಗ,**

ಪಂಚಾಯತುಗಳೂ ಕೊಡದೆ ಇದ್ದಾಗ, ಯಾರೂ ವೈಯಕ್ತಿಕವಾಗಿ ಅವುಗಳ ರಕ್ಷಣೆಯನ್ನು ಮಾಡಲು ಸಿದ್ಧವಿಲ್ಲದಿದ್ದಾಗ—ಅವು ಸಮಾಜಕ್ಕೆ ಅಪಾಯಕರವೆಂದು ಎಣಿಸುವ ಪಕ್ಷಕ್ಕೆ—ಅವುಗಳನ್ನು ನಿಧಾನವಾಗಿ ನರಳುತ್ತ ಸಾಯುವಂತೆ ಬಿಡುವುದಕ್ಕಿಂತಲೂ ಅವುಗಳನ್ನು ಕೊಲ್ಲುವುದೇ ಉತ್ತಮ. ಇದು ಕಹಿಯಾದ ಪ್ರಸಂಗವೇನೋ ಹೌದು. ಆದರೆ ಹೀಗೆ ಮಾಡುವುದು ನಿಜವಾದ ಕಾರುಣ್ಯವೆಂದು ನನ್ನ ದೃಢನಂಬಿಕೆ.

ಪ್ರಾಣವನ್ನು ತೆಗೆಯುವುದು ಒಂದು ಕರ್ತವ್ಯವಾಗಬಹುದು. ಇದನ್ನು ವಿಚಾರಮಾಡೋಣ. ನಮ್ಮ ದೇಹಪೋಷಣೆಗೆ ಅಗತ್ಯವಿದ್ದಷ್ಟು ಪ್ರಾಣನಾಶವನ್ನು ನಾವು ಮಾಡುತ್ತೇವೆ. ನಮ್ಮ ಆಹಾರಕ್ಕಾಗಿ ಸಸ್ಯಾದಿಗಳನ್ನೂ ಇತರ ಪ್ರಾಣಿಗಳನ್ನೂ ತೆಗೆದುಕೊಳ್ಳುತ್ತೇವೆ. ನಮ್ಮ ಆರೋಗ್ಯಕ್ಕಾಗಿ ಸೊಳ್ಳೆಗಳನ್ನೂ ಇತರ ಕೀಟಕಗಳನ್ನೂ ದ್ರಾವಕಗಳನ್ನು ಹಾಕಿ ಕೊಲ್ಲುತ್ತೇವೆ. ಇವೆಲ್ಲ ಅಧರ್ಮವೆಂದು ನಾವು ಭಾವಿಸುವುದಿಲ್ಲ.

ಇದು ನಮ್ಮ ಸ್ವಂತ ವಿಚಾರವಾಯಿತು. ಇತರರಿಗಾಗಿ, ಅಂದರೆ ನಮ್ಮ ಮಾನವಜಾತಿಯ ಸಂರಕ್ಷಣೆಗಾಗಿ, ಕ್ರೂರಮೃಗಗಳನ್ನು ಕೊಲ್ಲುತ್ತೇವೆ. ಸಿಂಹಗಳೂ ಹುಲಿಗಳೂ ಹಳ್ಳಿಗಳನ್ನು ಹಾವಳಿಮಾಡಿದರೆ ಹಳ್ಳಿಯವರು ಅವುಗಳನ್ನು ಕೊಲ್ಲುವುದು ಅಥವಾ ಇತರರಿಂದ ಕೊಲ್ಲಿಸುವುದು ತಮ್ಮ ಕರ್ತವ್ಯವೆಂದು ಭಾವಿಸುತ್ತಾರೆ.

ಮಾನವರ ಕೊಲೆಯೂ ಕೆಲವು ವೇಳೆ ಅವಶ್ಯವಾಗಬಹುದು. ಒಬ್ಬ ಮನುಷ್ಯನು ಹುಚ್ಚುಹಿಡಿದು ಕೈಯಲ್ಲಿ ಕತ್ತಿಯನ್ನೆತ್ತಿಕೊಂಡು ಅದನ್ನು ಝಳಪಿಸುತ್ತ ಜನರ ಮಧ್ಯೆ ಕೋಪಾವೇಶದಿಂದ ಭೀಕರವಾಗಿ ಓಡಾಡುತ್ತಾನೆಂದು ಭಾವಿಸೋಣ. ತನ್ನ ಎದುರಿಗೆ ಬರುವವರೆಲ್ಲರನ್ನೂ ಕೊಲ್ಲುತ್ತ ಹೋಗುತ್ತಾನೆ. ಯಾರೂ ಅವನನ್ನು ಜೀವಂತವಾಗಿ ಹಿಡಿಯಲು ಧೈರ್ಯಗೊಳ್ಳುವುದಿಲ್ಲ. ಇಂತಹವನನ್ನು ಕೊಲ್ಲುವವನು ಸಮಾಜದ ಕೃತಜ್ಞತೆಗೆ ಪಾತ್ರನಾಗುವನು, ಜನೋಪಕಾರಿಯೆಂದು ಅನಿಸಿಕೊಳ್ಳುವನು.

ಅಹಿಂಸೆಯ ದೃಷ್ಟಿಯಿಂದ ಇಂತಹ ಮನುಷ್ಯನನ್ನು ಕೊಲ್ಲುವುದು ಪ್ರತಿಯೊಬ್ಬನ ಕರ್ತವ್ಯವೆಂಬುದು ಸ್ಪಷ್ಟವಾಗಿದೆ. ಆದರೆ ಒಂದು ಅಪವಾದ ಉಂಟು. ಇದನ್ನು ಅಪವಾದವೆಂದು ಹೇಳಬಹುದಾದರೆ, ಅಪಾಯಕರವಾದ

ಈ ಭೀಕರ ಮನುಷ್ಯನನ್ನು ದಮನಮಾಡಬಲ್ಲ ಯೋಗಿಯು ಇವನನ್ನು ಕೊಲ್ಲ ಲಾಗದು. ಆದರೆ ಇಂತಹ ಸಿದ್ಧಪುರುಷರ ಮಾತನ್ನು ನಾವು ಇಲ್ಲಿ ಪ್ರಸ್ತಾಪಿ ಸುತ್ತಿಲ್ಲ. ಸಮಾಜದಲ್ಲಿರುವ ಸಾಮಾನ್ಯ ಪಾಮರರ ಕರ್ತವ್ಯವೇನೆಂಬುದನ್ನು ವಿಚಾರಮಾಡುತ್ತಿದೇವೆ.

ನಾನು ಕೊಟ್ಟಿರುವ ಉದಾಹರಣೆಗಳು ಸಮಂಜಸವಾದುವೆ ಎನ್ನುವ ವಿಚಾರದಲ್ಲಿ ಭಿನ್ನಾಭಿಪ್ರಾಯವಿರಬಹುದು. ಆದರೆ ಅವು ಅಸಮರ್ಪಕವಾಗಿದ್ದರೆ ಬೇರೆ ಉದಾಹರಣೆಗಳನ್ನು ಕಲ್ಪಿಸಿಕೊಳ್ಳಬಹುದು. ಇವುಗಳ ಉದ್ದೇಶ್ಯವಿಷ್ಟೆ: ಕೊಲ್ಲದೆ ಇರುವುದು ಪರಮ ಕರ್ತವ್ಯ; ಅದಕ್ಕೆ ಅಪವಾದವೇ ಇಲ್ಲವೆಂದು ಹೇಳುವುದು ಸಾಧ್ಯವಿಲ್ಲ.

ವಸ್ತುತಃ ಅಹಿಂಸೆಯೆಂದರೆ ಕೊಲ್ಲದೆ ಇರುವುದೆಂದು ಮಾತ್ರ ಅರ್ಥವಲ್ಲ. ಕೋಪದಿಂದ ಅಥವಾ ಸ್ವಾರ್ಥಕ್ಕಾಗಿ ಅಥವಾ ನೋವನ್ನುಂಟುಮಾಡುವ ಉದ್ದೇಶ್ಯದಿಂದ ಹೆರರಿಗೆ ನೋವನ್ನುಂಟುಮಾಡುವುದು, ಪ್ರಾಣವನ್ನು ತೆಗೆಯು ವುದು ಹಿಂಸೆ. ಇದನ್ನು ಮಾಡದಿರುವುದು ಅಹಿಂಸೆ.

ನಿಮಗೆ ಕಹಿಯಾದ ಔಷಧವನ್ನು ಕೊಡುವ ವೈದ್ಯನು ತೊಂದರೆಯನ್ನು ಉಂಟುಮಾಡುತ್ತಾನೆ. ಅದು ಹಿಂಸೆಯಲ್ಲ. ಅಗತ್ಯವಿದ್ದಾಗ ಅಂತಹ ಔಷಧ ವನ್ನು ಅವನು ಕೊಡದಿದ್ದರೆ ಅವನ ಅಹಿಂಸಾಕರ್ತವ್ಯಕ್ಕೆ ಲೋಪಮಾಡಿದವ ನಾಗುತ್ತಾನೆ. ತನ್ನ ರಕ್ಷಣೆಯಲ್ಲಿರುವವನನ್ನು ಕೊಲ್ಲಲು ಬಂದ ಕೊಲೆಗಾರ ನನ್ನು, ಬೇರೆ ಮಾರ್ಗವಿಲ್ಲದಿದ್ದಾಗ, ಕೊಲ್ಲದೆ ಬಿಟ್ಟರೆ ಅವನು ಪುಣ್ಯ ಮಾಡಿ ದಂತಾಗಲಿಲ್ಲ—ಪಾಪವನ್ನೇ ಮಾಡುತ್ತಾನೆ. ಇದು ಅಹಿಂಸೆಯಲ್ಲ—ಹಿಂಸೆ. ಅಹಿಂಸೆಯೆಂಬ ಭ್ರಾಂತಿಯಿಂದ ಹಿಂಸೆಯ ಪಾಪಕ್ಕೆ ಗುರಿಯಾಗುತ್ತಾನೆ.

ಈಗ ಅಹಿಂಸೆಯ ಮೂಲವನ್ನು ಪರೀಕ್ಷೆಮಾಡೋಣ. ಅದು ಅತೀವ ನಿಸ್ಸ್ವಾರ್ಥತೆ. ನಿಸ್ಸ್ವಾರ್ಥತೆಯೆಂದರೆ ದೇಹಾಭಿಮಾನವನ್ನು ಪೂರ್ತಿಯಾಗಿ ಬಿಡುವುದು. ಯಾವನೋ ಒಬ್ಬ ಜ್ಞಾನಿಯು, ಮನುಷ್ಯನು ತನ್ನ ದೇಹಾಭಿ ಮಾನದಿಂದ ಸಣ್ಣ ದೊಡ್ಡ ಅಸಂಖ್ಯಾತ ಜೀವರಾಶಿಗಳನ್ನು ಕೊಲ್ಲುತ್ತಿದ್ದುದನ್ನು ಕಂಡಾಗ ಆ ಜ್ಞಾನಿಗೆ ಈ ಮನುಷ್ಯನ ಅಜ್ಞಾನ ನೋಡಿ ಬಹಳ ಚಕಿತನಾಗಿರ ಬೇಕು. ಆ ಮನುಷ್ಯನಿಗೆ ಈ ನಶ್ವರವಾದ ದೇಹದಿಂದ ಹೊದಿಸಲ್ಪಟ್ಟ ಆತ್ಮವು ಅಮರನೆಂಬ ಜ್ಞಾನವಿಲ್ಲವಲ್ಲ, ಆತ್ಮನ ಶಾಶ್ವತವಾದ ಸುಖಕ್ಕಿಂತಲೂ ಈ ನಶ್ವರ

ದೈಹಿಕ ಸುಖವನ್ನು ಬಯಸುವನಲ್ಲ ಎಂದು ಆ ಜ್ಞಾನಿ ಕನಿಕರ ತಾಳಿರಬೇಕು. ಅದರಿಂದ ಆ ಜ್ಞಾನಿಗೆ ಪೂರ್ಣ ಸ್ವಾರ್ಥರಹಿತವಾಗಿರುವುದು ಮಾನವನ ಕರ್ತವ್ಯವೆಂದು ಭಾಸವಾಯಿತು. ಮನುಷ್ಯನು ತನ್ನ ಆತ್ಮವನ್ನು ಅರಿಯ ಬೇಕಾದರೆ—ಅಂದರೆ ಸತ್ಯವನ್ನು ಅರಿಯಬೇಕಾದರೆ—ದೇಹಾಭಿಮಾನ ಪೂರ್ತಿ ಯಾಗಿ ವರ್ಜಮಾಡಿದರೇನೇ ಸಾಧ್ಯವೆಂದು ಕಂಡನು. ಅಂದರೆ ಇತರರಲ್ಲಿ ತನ್ನಿಂದ ಯಾವ ಅಪಾಯವೂ ಇಲ್ಲವೆಂಬ ನಂಬಿಕೆಯನ್ನುಂಟುಮಾಡಬೇಕು. ಇದೇ ಅಹಿಂಸೆಯ ಮಾರ್ಗ.

ಈ ಸತ್ಯವನ್ನು ನಾವು ಮನಗಂಡರೆ ಪ್ರಾಣವನ್ನು ತೆಗೆಯುವುದು ಮಾತ್ರವೇ ಹಿಂಸೆಯ ಪಾಪವಲ್ಲ, ತನ್ನ ನಶ್ವರ ದೇಹಕ್ಕಾಗಿ ಪ್ರಾಣವನ್ನು ತೆಗೆಯುವುದು ಪಾಪವೆಂದು ಗೋಚರವಾಗುವುದು. ಉಣ್ಣುವುದರಲ್ಲಿ ಕುಡಿಯು ವುದರಲ್ಲಿ ಯಾವ ಪ್ರಾಣನಾಶವನ್ನು ಮಾಡುವೆವೊ ಅದೆಲ್ಲವೂ ಸ್ವಾರ್ಥ— ಆದುದರಿಂದ ಹಿಂಸೆ. ಆದರೆ ಮಾನವನು ಇದನ್ನು ಅನಿವಾರ್ಯವೆಂದು ಭಾವಿಸಿ ಸಹಿಸುತ್ತಾನೆ. ಆದರೆ ಚಿತ್ರಹಿಂಸೆಯಿಂದ ನರಳುತ್ತಿರುವ ಪ್ರಾಣಿಗಳನ್ನು ಆ ಪ್ರಾಣಿಗಳ ಹಿತಕ್ಕಾಗಿಯೇ ಕೊಲ್ಲುವುದು ಹಿಂಸೆಯಲ್ಲ. ನಮ್ಮ ರಕ್ಷಣೆಯಲ್ಲಿರು ವವರ ಹಿತಕ್ಕಾಗಿ ಅನಿವಾರ್ಯವಾಗಿ ಮಾಡಬೇಕಾಗುವ ಪ್ರಾಣಹಾನಿ ಹಿಂಸೆ ಎಂದು ಭಾವಿಸಲಾಗದು.

ಈ ವಿಚಾರಸರಣಿಯನ್ನು ದುಷ್ಟವಾದ ರೀತಿಯಲ್ಲಿಯೂ ಉಪಯೋಗ ಮಾಡಿಕೊಳ್ಳಬಹುದು. ಇದು ವಿಚಾರಸರಣಿಯ ದೋಷವಲ್ಲ; ಮನುಷ್ಯನಲ್ಲಿ ಸ್ವಾಭಾವಿಕವಾಗಿರುವ ದೌರ್ಬಲ್ಯದಿಂದ ಯಾವುದಾದರೂ ನೆಪವನ್ನು ತೆಗೆದು ತನ್ನ ಸ್ವಾರ್ಥತೆ ಅಥವಾ ಅಹಂಕಾರದ ತೃಪ್ತಿಗಾಗಿ ತನ್ನನ್ನೇ ತಾನು ಮೋಸ ಮಾಡಿಕೊಳ್ಳುವ ದೋಷ. ಈ ಅಪಾಯವಿದ್ದರೂ ಅಹಿಂಸೆಯ ನಿಜ ಲಕ್ಷಣ ವನ್ನು ಸ್ಪಷ್ಟಪಡಿಸದೆ ಇದ್ದರೂ ಅದು ಅಕ್ಷಮ್ಯ. ಆದುದರಿಂದ ಮೇಲೆ ಮಾಡಿದ ವಿಚಾರದಿಂದ ಈ ಕೆಳಗೆ ಕಂಡ ಸಿದ್ಧಾಂತಗಳನ್ನು ನಾವು ಸಾರಾಂಶವಾಗಿ ಗ್ರಹಿಸಬಹುದು :

(೧) ಇತರ ಪ್ರಾಣಿಗಳನ್ನು ಸ್ವಲ್ಪಮಟ್ಟಿಗಾದರೂ ನಾಶಮಾಡದೆ ನಮ್ಮ ದೇಹದ ಪೋಷಣೆ ಸಾಧ್ಯವಾಗುವುದಿಲ್ಲ.

(೨) ಎಲ್ಲರೂ ಸ್ವಲ್ಪಮಟ್ಟಿಗಾದರೂ ಪ್ರಾಣಹಾನಿ ಮಾಡಬೇಕಾಗುತ್ತದೆ :

[ಅ] ತಮ್ಮ ದೇಹದ ಪೋಷಣೆಗಾಗಿ,

[ಆ] ತಮ್ಮ ರಕ್ಷಣೆಯಲ್ಲಿರುವವರನ್ನು ಪೋಷಿಸುವುದಕ್ಕಾಗಿ,

[ಇ] ಕೆಲವು ವೇಳೆ ಯಾರ ಪ್ರಾಣಹಾನಿ ಮಾಡುತ್ತೇವೆಯೊ ಅವರ ಹಿತಕ್ಕಾಗಿ.

(೩) ಮೇಲೆ (೨–ಆ) ಸ್ವಲ್ಪ ಪ್ರಮಾಣದಲ್ಲಿಯೋ ಹೆಚ್ಚಿನ ಪ್ರಮಾಣದಲ್ಲಿಯೋ ಹಿಂಸೆಯಿಂದ ಕೂಡಿದ್ದು. (ಇ) ಇದರಲ್ಲಿ ಹಿಂಸೆಯಿಲ್ಲ. ಆದುದರಿಂದ ಇದು ಅಹಿಂಸೆ. (ಅ–ಆ) ಇಲ್ಲಿ ಹಿಂಸೆ ಅನಿವಾರ್ಯ.

(೪) ಅಹಿಂಸಾಮಾರ್ಗದಲ್ಲಿ ಪ್ರಗತಿ ಸಾಧಿಸಬೇಕೆನ್ನುವವನು ಮೇಲೆ ಹೇಳಿದ (ಅ–ಆ—ಯಲ್ಲಿ ಹೇಳಿದ) ಹಿಂಸೆಯನ್ನು ಆದಷ್ಟು ಕಡಮೆ ಮಾಡುವನು. ಆಗಲೂ ಅನಿವಾರ್ಯವಾದಾಗ—ಕೂಲಂಕಷವಾಗಿ ವಿಚಾರಮಾಡಿದ ಮೇಲೆ—ಅದನ್ನು ತಪ್ಪಿಸಲು ಇತರ ಎಲ್ಲ ಉಪಾಯಗಳೂ ಸಾಧ್ಯವಿಲ್ಲದೆ ಹೋದಾಗ.

ನಾನು ಸೂಚಿಸಿರುವ ನಾಯಿಗಳನ್ನು ಕೊಲ್ಲುವ ವಿಷಯ ಮೇಲೆ ಹೇಳಿದ ನಾಲ್ಕರಲ್ಲಿ ಸೇರುತ್ತದೆ. ಆದುದರಿಂದ ಬೇರೆ ಉಪಾಯವಿಲ್ಲದಿದ್ದರೆ ಅನಿವಾರ್ಯವಾದಾಗ, ಚೆನ್ನಾಗಿ ವಿಚಾರಮಾಡಿದ ಬಳಿಕ ಇದನ್ನು ಮಾಡಬಹುದು. ಆದರೆ ಒಂದು ವಿಷಯವನ್ನು ನಾನು ಖಚಿತವಾಗಿ ಹೇಳಬಲ್ಲೆ—ಈ ಕೊಲ್ಲುವುದು ಅನಿವಾರ್ಯವಾದಾಗ ಮಾಡದಿದ್ದರೆ ಅದರಿಂದ ಹೆಚ್ಚಿನ ಕೇಡು ಸಂಭವಿಸುವುದು. ಆದುದರಿಂದ ನಾಯಿಗಳನ್ನೂ ಇತರ ಪ್ರಾಣಿಗಳನ್ನೂ ಕೊಲ್ಲಲೇಬೇಕೆಂಬ ಯಾವ ಪರಮ ನಿಯಮವಿಲ್ಲದಿದ್ದರೂ, ಕೆಲವರಿಗೆ, ಕೆಲವು ವೇಳೆಗಳಲ್ಲಿ ಕೆಲವು ಸಂದರ್ಭಗಳಲ್ಲಿ ಅವಶ್ಯವಾದ ಕರ್ತವ್ಯವಾಗುತ್ತದೆ.

(ಯಂಗ್ ಇಂಡಿಯಾ, ೪–೧೧–೧೯೨೬)

೩

ತನ್ನ ಸಮಸ್ಯೆಗಳನ್ನು ವಿವರಿಸುತ್ತ, ಜೈನಧರ್ಮವು ಈ ವಿಷಯವಾಗಿ ಹೇಳುವುದನ್ನು ಉಲ್ಲೇಖಿಸಿ ಒಬ್ಬ ಶ್ರಾವಕರು ಒಂದು ದೀರ್ಘವಾದ ಪತ್ರವನ್ನು ಬರೆದಿದಾರೆ. ಅವರು ಕೇಳಿದ ಪ್ರಶ್ನೆಗಳಲ್ಲಿ ಇದೊಂದು : 'ನಾವು ತಿರುಕ ನಾಯಿಗಳನ್ನು ನಮ್ಮ ಪೋಷಣೆಯಲ್ಲಿಟ್ಟುಕೊಳ್ಳಲು ಸಾಧ್ಯವಿಲ್ಲದೆ ಇದ್ದಾಗಲೂ, ಅವಕ್ಕಾಗಿ ಒಂದು ಪಿಂಜ್ರಾಪೋಲನ್ನು ನಿರ್ಮಾಣಮಾಡದೆ ಇದ್ದಾಗಲೂ, ಉಳಿದಿರುವ ಮಾರ್ಗ ಒಂದೇ—ಅವುಗಳನ್ನು ಕೊಲ್ಲುವುದು ಎಂದು ನೀವು ಹೇಳುತ್ತೀರಿ. ಅಂದರೆ ತಿರುಕನಾಯಿಗಳೆಲ್ಲವನ್ನೂ ಅವು ಹುಚ್ಚಾಗಿಲ್ಲದಿದ್ದರೂ ಕೊಂದುಹಾಕಬೇಕೆ? ದುಷ್ಟಮೃಗಗಳನ್ನೂ, ಪಕ್ಷಿಗಳನ್ನೂ, ಸರ್ಪಗಳನ್ನೂ—ಅವು ನಮಗೆ ಕೆಡಕುಮಾಡದೆ ಇದ್ದರೆ ಅವುಗಳ ತಂಟೆಗೆ ಹೋಗದೆ ನಾವು ಬಿಡುತ್ತೇವೆಂದು ನೀವು ಒಪ್ಪುವಿರಲ್ಲವೆ? ಹೀಗಿದ್ದಮೇಲೆ ನಾಯಿಗಳಿಗೆ ಮಾತ್ರ ಬೇರೆ ನಿಯಮವೇತಕ್ಕೆ? ತಿರುಗುತ್ತಿರುವ ನಾಯಿಗಳೆಲ್ಲವನ್ನೂ ಕೊಲ್ಲುವುದರಲ್ಲಿ ಏನು ಜೀವಕಾರುಣ್ಯವಿದೆ? ಸಮಸ್ತ ಭೂತಗಳ ಕ್ಷೇಮವನ್ನು ಕೋರುವವರು ಹೀಗೆ ಮಾಡಬಹುದೆ?'

ಇವರು ನನ್ನ ಲೇಖನವನ್ನು ತಪ್ಪಾಗಿ ಅರ್ಥಮಾಡಿಕೊಂಡಿದಾರೆ. ಹುಚ್ಚುನಾಯಿಗಳನ್ನು ಸಹ ಕೊಲ್ಲುವ ಸಲುವಾಗಿ ಕೊಲ್ಲಬೇಕೆಂದು ನಾನು ಹೇಳುವವನಲ್ಲ. ಹೀಗಿರುವಲ್ಲಿ ಯಾವ ಹಾನಿಯನ್ನೂ ಮಾಡದ ತಿರುಕನಾಯಿಗಳನ್ನು ಕೊಲ್ಲಬೇಕೆಂದು ಏಕೆ ಹೇಳಲಿ? ಈ ತಿರುಕನಾಯಿಗಳನ್ನು ಕಂಡ ಕಡೆ ಕೊಲ್ಲಬೇಕೆಂದೂ ನಾನು ಹೇಳಿಲ್ಲ. ಈ ಬಗೆಯ ಕಾನೂನನ್ನು ಮಾಡಬಹುದೆಂದು ನನ್ನ ಸೂಚನೆ. ಇಂತಹ ಕಾನೂನಾದಮೇಲೆ ಜೀವಕಾರುಣ್ಯವಿರುವವರು ಎಚ್ಚತ್ತು ಈ ತಿರುಕನಾಯಿಗಳ ಪೋಷಣೆಗಾಗಿ ಏನಾದರೂ ವ್ಯವಸ್ಥೆ ಮಾಡಬಹುದೆಂಬುದು ನನ್ನ ಸಲಹೆ. ಇವುಗಳಲ್ಲಿ ಕೆಲವನ್ನು ಸಾಕಬಹುದು, ಕೆಲವನ್ನು ನಿರ್ಬಂಧದಲ್ಲಿಡಬಹುದು. ಈ ರೀತಿಯ ವ್ಯವಸ್ಥೆಯನ್ನು ಒಮ್ಮೆಗೆ ಕೈಗೊಳ್ಳಬೇಕು. ಈ ತಿರುಕನಾಯಿಗಳು ಆಕಾಶದಿಂದ ಉದುರುವುವಲ್ಲ. ಇವು ಸಮಾಜದ ಆಲಸ್ಯ, ಉದಾಸೀನ, ಅಜ್ಞಾನದ ಚಿಹ್ನೆಗಳು. ಅವುಗಳಿಂದ ಕಿರುಕುಳವಾದಾಗ ಅದೂ ನಮ್ಮ ಅಜ್ಞಾನ, ನಿರ್ದಯೆಯಿಂದಲೆ. ನೀವು ಆಹಾರವನ್ನು ಕೊಡದಿದ್ದರೆ ಈ ನಾಯಿಗಳು ಪರಾರಿಯಾಗುವುವು. ನಾನು

ಹೇಳುವ ಉಪಾಯ ಈ ನಾಯಿಗಳ ಹಿತಕ್ಕೆ ಮಾತ್ರವಲ್ಲ ಸಮಾಜದ ಹಿತಕ್ಕಾಗಿ. ಯಾವ ಪ್ರಾಣಿಯೂ ಅನಾಥವಾಗಿ ತಿರುಗಾಡಲು ಬಿಡುವುದು ಕಾರುಣ್ಯ ಧರ್ಮಕ್ಕೆ ವಿರುದ್ಧ. ತನ್ನ ಕರ್ತವ್ಯಪಾಲನೆಯಲ್ಲಿ ಒಮ್ಮೊಮ್ಮೆ ಇಂತಹ ನಾಯಿ ಗಳನ್ನು ನಾಶಮಾಡಬೇಕಾದೀತು.

ಮತ್ತೊಂದು ಪ್ರಶ್ನೆ :

'ಸಮಾಜಕ್ಕೆ ಅಪಾಯಕರವಾದಾಗಲೆಲ್ಲ ನಾಯಿಗಳನ್ನು ಮನುಷ್ಯರು ಕೊಂದುಹಾಕುವರೆಂಬುದನ್ನು ನಾವು ಒಪ್ಪುತ್ತೇವೆ. ಆದರೆ 'ಅವಕ್ಕೆ ಹುಚ್ಚು ಹಿಡಿಯುವವರೆಗೂ ಕಾದಿರುವುದು ಅವುಗಳಿಗೆ ದಯೆ ತೋರಿಸಿದಂತಾಗಲಿಲ್ಲ' ಎಂದು ನೀವು ಹೇಳುತ್ತೀರಿ. ಅಂದರೆ ಪ್ರತಿಯೊಂದು ನಾಯಿಗೂ ಹುಚ್ಚು ಹಿಡಿಯಬಹುದೆಂದೂ ಆದುದರಿಂದ ಮುನ್ನೆಚ್ಚರಿಕೆಗಾಗಿ ಅವುಗಳನ್ನು ಕೊಲ್ಲ ಬೇಕೆಂದು ಅರ್ಥವಾಗುತ್ತದೆ. ನಿಮ್ಮ ಆಶ್ರಮದ ಒಬ್ಬ ಮಿತ್ರರನ್ನು ಭೇಟಿ ಮಾಡಿದೆ. ಇದು ನಿಮ್ಮ ಅರ್ಥವಲ್ಲವೆಂದು ಭರವಸೆ ಇತ್ತರು. ನಾಯಿಗಳು ಅಪಾಯಕರವಾದಾಗ ಬೇರೆ ಮಾರ್ಗವಿಲ್ಲದೆ ಅನುಸರಿಸಬಹುದಾದ ಕೊನೆಯ ಉಪಾಯವಿದೆಂದು ನಿಮ್ಮ ಸಲಹೆಯೆಂದು ಹೇಳಿದರು. ಇದು ನಿಮ್ಮ ಲೇಖನ ಗಳಿಂದ ಸ್ಪಷ್ಟವಾಗಲಿಲ್ಲ. ದಯೆಯಿಟ್ಟು ಸ್ಪಷ್ಟಪಡಿಸುವಿರಾ ?'

ನನ್ನ ಹಿಂದಿನ ಲೇಖನಗಳೂ, ಮೊದಲನೆಯ ಪ್ರಶ್ನೆಗೆ ನಾನು ಕೊಟ್ಟ ಉತ್ತರವೂ ಎಲ್ಲವನ್ನೂ ಸ್ಪಷ್ಟಪಡಿಸಿವೆ. ನಾಯಿಗೆ ಹುಚ್ಚು ಹಿಡಿಯುವವರೆಗೂ ಕಾದಿರಲು ಸಾಧ್ಯವಿಲ್ಲವೆಂದು ನಾನು ಹೇಳಿದುದನ್ನು ನಾನು ಸ್ವಲ್ಪ ವಿವರಿಸ ಬೇಕು. ಪ್ರತಿಯೊಂದು ತಿರುಕನಾಯಿಯಿಂದಲೂ ತೊಂದರೆಯೇ. ಈ ತೊಂದರೆ ದೊಡ್ಡ ಪಟ್ಟಣಗಳಲ್ಲಿ ಮಾತ್ರ—ಇದು ನಿಲ್ಲಬೇಕು. ಒಂದು ಸರ್ಪ ನಮ್ಮನ್ನು ಕಡಿಯುವವರೆಗೂ ನಾವು ಕಾದಿರುವುದಿಲ್ಲ. ನಾಯಿಗೆ ಹಿಡಿಯುವ ಹುಚ್ಚು ಅದು ಕಡಿಯುವ ಶಕ್ತಿಯಲ್ಲಿ ಮರೆಯಾಗಿರುತ್ತದೆ. ಅಹಮದಾಬಾದಿ ನಲ್ಲಿ ನಾಯಿಯು ಕಡಿತದಿಂದ ಎಷ್ಟು ರೋಗಿಗಳಿಗೆ ಚಿಕಿತ್ಸೆ ಆಯಿತೆಂಬ ವಿವರ ಗಳನ್ನು ಒಬ್ಬ ಮಿತ್ರರು ಕಳುಹಿಸಿಕೊಟ್ಟಿದಾರೆ :

| | | ನಗರದಿಂದ | ಜಿಲ್ಲೆಯ ಇತರ ಕಡೆಗಳಿಂದ | ಒಟ್ಟು |
|---|---|---|---|---|
| ೧೯೩೫ | ಜನವರಿ – ಡಿಸೆಂಬರ್‌ವರೆಗೂ | ೧೯೪ | ೯೨೩ | ೧೧೧೭ |
| ೧೯೩೬ | ,, ,, | ೨೯೫ | ೬೯೫ | ೯೯೦ |

ಈ ಅಂಕಿಗಳು ಸಮಾಜದ ಹಿತಚಿಂತಕರಲ್ಲಿ—ವಿಶೇಷವಾಗಿ ಅವರು ಜೀವಕಾರುಣ್ಯಸೇವಕರಾದರೆ ಅವರಲ್ಲಿ—ಹೆಚ್ಚಿನ ಕಳವಳವನ್ನುಂಟುಮಾಡ ಬೇಕು. ಇಲ್ಲಿ ಕೊಟ್ಟಿರುವ ಅಂಕಿಗಳಲ್ಲಿ ಎಲ್ಲವೂ ಹುಚ್ಚುನಾಯಿ ಕಡಿತದಿಂದ ಆದ ರೋಗವಾಗಿರದೆ ಇರಬಹುದು. ಒಂದು ನಾಯಿಗೆ ಹುಚ್ಚು ಹಿಡಿದಿದೆಯೇ ಇಲ್ಲವೆ ಹೇಳುವುದು ಕಷ್ಟ. ಅನೇಕರು ನಾಯಿ ಕಡಿದ ಕೂಡಲೆ ಆಸ್ಪತ್ರೆಗೆ ಧಾವಿಸುವರು. ಏಕೆಂದರೆ ಆ ನಾಯಿಗಳು ಹುಚ್ಚೆಂದು ಆಮೇಲೆ ಗೊತ್ತಾಗು ತ್ತದೆ. ಈ ಭಯದಿಂದ ತಪ್ಪಲು ಒಂದೇ ಉಪಾಯ—ನಾಯಿಗಳು ತಿರುಗಾಡ ದಂತೆ ಮಾಡುವುದು.

ಈ ಹಾವಳಿಯನ್ನು ನಿರ್ಮೂಲ ಮಾಡಲು ಇಂಗ್ಲೆಂಡಿನಲ್ಲಿ ೪೦ ವರ್ಷಗಳ ಹಿಂದೆ ಕ್ರಮಗಳನ್ನು ಕೈಗೊಂಡಾಗ ನಾನಲ್ಲಿದ್ದೆ. ಅಲ್ಲಿಯಂತೂ ತಿರುಕನಾಯಿ ಗಳೂ ಇರಲಿಲ್ಲ. ಮಾಲೀಕರುಳ್ಳ ನಾಯಿಗಳಿಗೂ ಅವು ಕೊರಳುಪಟ್ಟಿ, ಮಾಲೀಕನ ಹೆಸರು, ಪತ್ತೆ ಇಲ್ಲದೆ—ಅವುಗಳಿಗೆ ಮುಖಬಂಧನವಿಲ್ಲದಿದ್ದರೆ ಅವುಗಳನ್ನು ಕೊಲ್ಲಬಹುದೆಂದು ಆಜ್ಞೆ ಹೊರಡಿಸಿದ್ದರು. ಕೇವಲ ಸಾರ್ವ ಜನಿಕ ಕ್ಷೇಮರಕ್ಷಣೆಗಾಗಿ ಈ ಏರ್ಪಾಡಾಗಿತ್ತು. ಮರುದಿನವೇ ಲಂಡನ್ ನಗರದ ಎಲ್ಲ ನಾಯಿಗಳಿಗೂ ವಿಧಿಸಿದ್ದಂತೆ ಕೊರಳುಪಟ್ಟಿಗಳೂ ಮುಖ ಬಂಧನಗಳೂ ಇದ್ದವು. ಆದುದರಿಂದ ಕೆಲವೇ ನಾಯಿಗಳನ್ನು ಕೊಲ್ಲಬೇಕಾ ಯಿತು. ಪಾಶ್ಚಾತ್ಯ ದೇಶಗಳಲ್ಲಿ ಜೀವಕಾರುಣ್ಯವಿಲ್ಲವೆಂದು ಯಾರಾದರೂ ತಿಳಿದಿದ್ದರೆ ಆ ಭಾವನೆ ಶುದ್ಧ ತಪ್ಪು. ಪ್ರಾಯಶಃ ಅವರ ಸಿದ್ಧಾಂತದಲ್ಲಿ ಜೀವಕಾರುಣ್ಯವು ನಮ್ಮಲ್ಲಿ ವಿವರಿಸಿರುವಷ್ಟು ಇಲ್ಲದೆ ಇರಬಹುದು. ಆದರೆ ಅನುಷ್ಠಾನ ನಮಗಿಂತಲೂ ಸಮರ್ಪಕವಾದುದು. ನಾವು ದೊಡ್ಡ ಆದರ್ಶವನ್ನು ಇಟ್ಟುಕೊಂಡು ತೃಪ್ತಿಹೊಂದುತ್ತೇವೆ. ಅವುಗಳ ಆಚರಣೆಯ ವಿಷಯದಲ್ಲಿ ಆಲಸ್ಯವನ್ನು ತೋರಿಸುತ್ತೇವೆ. ನಮ್ಮ ಭಿಕ್ಷುಕರ ಸಂಖ್ಯೆ—ನಮ್ಮ ದನಗಳ ಇತರ ಮೂಕಪ್ರಾಣಿಗಳ ಸ್ಥಿತಿ—ಇವೆಲ್ಲವೂ ನಾವು ಮುಳುಗಿರುವ ಗಾಢಾಂಧ ಕಾರವನ್ನು ತೋರಿಸುತ್ತವೆ. ಇವು ನಮ್ಮ ಅಧರ್ಮವನ್ನು ಸಾರುತ್ತವೆ— ಧರ್ಮವನ್ನಲ್ಲ. (ಯಂಗ್ ಇಂಡಿಯಾ, ೧೧–೧೧–೧೯೨೬)

೪

ನಾವು ಮೇಲೆ ವಿಚಾರಮಾಡಿದ ಪತ್ರದಲ್ಲಿಯೂ ಇತರ ಪತ್ರಗಳಲ್ಲಿಯೂ ಪ್ರಾಣಿಗಳನ್ನು ಯಾವ ಸಂದರ್ಭದಲ್ಲಿಯೇ ಆಗಲಿ ಕೊಲ್ಲಲು ಇಂದು ಸಹಜವಾದ ಅತಿಭೀತಿಯ ಭಾವನೆ ಎದ್ದುಕಾಣುತ್ತದೆ. ಉದಾಹರಣೆಗೆ ಹುಚ್ಚು ನಾಯಿಗಳನ್ನು ಒಂದು ಆವರಣದಲ್ಲಿ ಕೂಡಿಹಾಕಿ ಅವು ಕ್ರಮೇಣ ಸಾಯಲು ಬಿಡಬಹುದೆಂದು ಬೇರೊಂದು ಮಾರ್ಗವನ್ನು ಸೂಚಿಸಲಾಗಿದೆ. ಇದು ಅಸಾಧ್ಯ ಕೆಲಸವೆಂದು ನನ್ನ ಜೀವಕಾರುಣ್ಯ ಹೇಳುತ್ತದೆ. ನಾಯಿಯೇ ಆಗಲಿ, ಯಾವ ಪ್ರಾಣಿಯೇ ಆಗಲಿ ಈ ರೀತಿ ಕ್ರಮೇಣ ಸಾಯುವುದನ್ನು ನಾನು ಸಹಿಸಲಾರೆ. ಈ ಪರಿಸ್ಥಿತಿಯಲ್ಲಿಯೇ ಒಂದು ಮಾನವಜೀವವನ್ನು ಚಿಕಿತ್ಸೆಯ ಆಸೆ ಇರುವುದರಿಂದ ನಾವು ಕೊಲ್ಲುವುದಿಲ್ಲ. ಆದರೆ ಬೇರೆ ಉಪಾಯವಿಲ್ಲದ ಕಾರಣ ಇಂತಹ ಪರಿಸ್ಥಿತಿಯಲ್ಲಿ ನಾಯಿಯನ್ನು ಕೊಲ್ಲಬೇಕಾದುದು ಕರ್ತವ್ಯವೆಂದು ನನಗೆ ತೋರುತ್ತದೆ. ಎಲ್ಲವೂ ವಿಧಿವಿಲಾಸವೆಂದು ಹೇಳುವುದಕ್ಕೆ ಒಂದು ಮಿತಿ ಇದೆ. ನಾವು ಮಾಡುವುದೆಲ್ಲವನ್ನೂ ಮಾಡಿದಮೇಲೆ ವಿಧಿನಿಯಮದಂತೆ ಆಗಲಿ ಎಂದು ಬಿಡುತ್ತೇವೆ. ಅತಿಸಂಕಟದಲ್ಲಿರುವ ಮಗುವನ್ನು ಅದರಿಂದ ಪಾರುಮಾಡಲು— ಒಂದು ಉಪಾಯ, ಅದೇ ಕೊನೆಯದು—ಅದರ ಪ್ರಾಣವನ್ನು ತೆಗೆಯುವುದು.

ಈ ವಿಷಯದ ಚರ್ಚೆಯನ್ನು ಬೆಳೆಸಲು ನನಗೆ ಇಷ್ಟವಿಲ್ಲ. ಅಹಿಂಸಾ ಉಪಾಸಕರ ದೌರ್ಬಲ್ಯವೆಂದು ನನಗೆ ಯಾವುದು ಅನಿಸುತ್ತೊ ಅದೇ ಈ ಧರ್ಮವನ್ನೂ ಅದರ ಮರ್ಮವನ್ನೂ ಅರ್ಥಮಾಡಿಕೊಳ್ಳಲು ಅಡ್ಡಿಯಾಗಿದೆ. ಆದುದರಿಂದ ನನ್ನ ಅಭಿಪ್ರಾಯವನ್ನು ಒಪ್ಪದೆ ಇರುವವರು ಸದ್ಯಕ್ಕೆ ನನ್ನ ವಿಷಯದಲ್ಲಿ ಸಹನೆಯನ್ನು ತಾಳಬೇಕೆಂದು ನನ್ನ ಕೋರಿಕೆ.

ವಿಚಾರಪೂರ್ವಕವಾಗಿ ಒಬ್ಬ ಮಿತ್ರರು ಬರೆದ ಪತ್ರಕ್ಕೆ ಇಷ್ಟು ಉತ್ತರವಾಯಿತು. ಇನ್ನು ಕೋಪದಿಂದ ಬರೆದ ಒಂದು ಪತ್ರದ ಪ್ರಸ್ತಾಪ ಮಾಡುತ್ತೇನೆ:

'ನೀವು ಪಾಶ್ಚಾತ್ಯ ಪ್ರಭಾವಗಳಿಗೆ ಒಳಗಾಗಿರುವುದರಿಂದ ಮೂಕ ಪ್ರಾಣಿಗಳನ್ನು ಮನುಷ್ಯನ ಸಲುವಾಗಿ ಕೊಲ್ಲುವುದು ಸರಿಯೆಂದು ಹೇಳುತ್ತೀರಿ. ನೀವು ಮಾಡಿದ ತಪ್ಪನ್ನು ಒಪ್ಪಿಕೊಂಡು ಲೋಕದೆದುರಿಗೆ ಕ್ಷಮಾಯಾಚನೆಯನ್ನು ಮಾಡಿದರೆ ಒಳಿತು. ಎಲ್ಲವನ್ನೂ ಕೂಲಂಕಷವಾಗಿ ಶೋಧನೆಮಾಡಿದ

ಬಳಿಕ ನೀವು ಈ ತೀರ್ಮಾನಕ್ಕೆ ಬರಬೇಕಾಗಿತ್ತು. ಹಾಗೆ ಮಾಡದೆ ಒಂದು ಪಕ್ಷವನ್ನು ಹಿಡಿದು ನಿಮ್ಮ ಗೌರವಕ್ಕೆ ಕುಂದನ್ನು ತಂದುಕೊಂಡಿದೀರಿ.'

ಈ ಬಗೆಯ ಪತ್ರಗಳಲ್ಲಿ ಬರೆದಿರುವ ವಾಕ್ಯಗಳ ಪೈಕಿ ಹೆಚ್ಚು ಬೈಗಳಿಲ್ಲದ ವಾಕ್ಯಗಳನ್ನು ಎತ್ತಿ ಬರೆದಿದೇನೆ. ನಾನು ಚೆನ್ನಾಗಿ ವಿಚಾರಮಾಡದೆ ತೀರ್ಮಾನಕ್ಕೆ ಬಂದಿದೇನೆಂದು ಒಪ್ಪಿಕೊಳ್ಳಲಾರೆ. ಇದು ನಾನು ಈಚೆಗೆ ಮಾಡಿರುವ ನಿರ್ಧಾರವಲ್ಲ. ಆತುರದಲ್ಲಿಯೂ ಮಾಡಿದುದಲ್ಲ. ತಾನು ದೊಡ್ಡವನೆಂಬ ಭಾವನೆ ಇಂತಹ ನಿರ್ಧಾರಮಾಡುವುದಕ್ಕೆ ಅಡ್ಡಿಯಾಗಬಾರದು. ಹಾಗೆ ಬಂದರೆ ಸತ್ಯವನ್ನು ಕಂಡುಹಿಡಿಯಲು ಸಾಧ್ಯವಿಲ್ಲ.

ಪಾಶ್ಚಾತ್ಯ ದೇಶದಲ್ಲಿರುವುದೆಲ್ಲವನ್ನೂ ನಿರಾಕರಿಸಬೇಕೆಂದು ನಾನು ಒಪ್ಪಲಾರೆ. ಪಾಶ್ಚಾತ್ಯ ನಾಗರಿಕತೆಯನ್ನು ಮಿತಿಮೀರಿ ನಾನು ಖಂಡಿಸಿದೇನೆ. ಈಗಲೂ ಮಾಡುತ್ತಿದೇನೆ. ಅಂದಮಾತ್ರಕ್ಕೆ ಪಾಶ್ಚಾತ್ಯ ದೇಶಗಳಲ್ಲಿರುವುದು ಎಲ್ಲವೂ ಖಂಡನೀಯವೆಂದು ಅರ್ಥವಲ್ಲ. ನಾನು ಅವರಿಂದ ಬಹಳ ಕಲಿತಿದೇನೆ—ಅದಕ್ಕೆ ನಾನು ಋಣಿಯಾಗಿದೇನೆ. ಪಾಶ್ಚಾತ್ಯ ದೇಶಗಳ ಸಾಹಿತ್ಯ ನನ್ನ ಮೇಲೆ ಯಾವ ಪ್ರಭಾವವೂ ಉಂಟುಮಾಡಲಿಲ್ಲವೆಂದರೆ ದುರದೃಷ್ಟಶಾಲಿ ಎಂದು ನಾನು ಭಾವಿಸುತ್ತೇನೆ. ಆದರೆ ನಾಯಿಗಳನ್ನು ಕೊಲ್ಲುವ ವಿಚಾರಕ್ಕೂ ನನ್ನ ಪಾಶ್ಚಾತ್ಯ ಶಿಕ್ಷಣಕ್ಕೂ ಪಾಶ್ಚಾತ್ಯ ಪ್ರಭಾವಕ್ಕೂ ಯಾವ ಸಂಬಂಧವೂ ಇಲ್ಲ. ಕೆಲವು ಸಣ್ಣ ಗುಂಪುಗಳನ್ನು ಬಿಟ್ಟು ಪಾಶ್ಚಾತ್ಯ ದೇಶಗಳಲ್ಲಿ ಮನುಷ್ಯನ ಪ್ರಯೋಜನಕ್ಕಾಗಿ ಮೂಕಪ್ರಾಣಿಗಳನ್ನು ಕೊಲ್ಲುವುದರಲ್ಲಿ ಪಾಪವೇನೂ ಇಲ್ಲ ಎಂಬ ಅಭಿಪ್ರಾಯವಿದೆ. ಆದುದರಿಂದ ಶಾಸ್ತ್ರಸಂಶೋಧನೆಗಾಗಿ ಪ್ರಾಣಿಗಳನ್ನು ಕುಯ್ಯುತ್ತಾರೆ. ಇದಕ್ಕೆ ಉತ್ತೇಜನವಿದೆ. ಜಿಹ್ವಾಚಾಪಲ್ಯವನ್ನು ತೃಪ್ತಿಮಾಡಿಕೊಳ್ಳಲು ಯಾವ ಬಗೆಯ ಹಿಂಸೆಯನ್ನು ಮಾಡಿದರೂ ತಪ್ಪಲ್ಲವೆಂದು ಭಾವಿಸುತ್ತಾರೆ. ಇದಕ್ಕೆಲ್ಲ ನನ್ನ ಸಮ್ಮತಿ ಇಲ್ಲ. ಅಪ್ರಯೋಜಕವಾದ ದನಗಳನ್ನೂ ಪ್ರಾಣಿಗಳನ್ನೂ ಕೊಲ್ಲುವುದು ಪಾಪವಲ್ಲ ಮಾತ್ರವೆಂದಲ್ಲ, ಅದು ಪುಣ್ಯಕಾರ್ಯ ಎಂದು ಪಾಶ್ಚಾತ್ಯ ಜನರೆಣಿಸುವರು. ಪ್ರತಿ ಹೆಜ್ಜೆಯಲ್ಲಿಯೂ ಮೇಕೆಗಳಿರುವುದೆಂದು ನಾನು ಕಾಣುವುದಾದರೂ ಸಸ್ಯಗಳ ಪ್ರಾಣಿಹಾನಿಯೂ ಹಿಂಸೆಯೆಂದು ನಾನು ಭಾವಿಸುತ್ತೇನೆ. ಇದು ಪಾಶ್ಚಾತ್ಯ ದೇಶದವರ ಬೋಧೆಯಲ್ಲ. ಮನುಷ್ಯರ **ಮೇಲಣ ಅಭಿಮಾನ-ದುರಭಿಮಾನಗಳಿಂದ ತತ್ತ್ವಗಳ ವಿಮರ್ಶೆಯನ್ನು**

ಮಾಡಬಾರದು. ನನ್ನ ಅಭಿಪ್ರಾಯಗಳು—ಅವು ಪೌರಸ್ತ್ಯವಾಗಲಿ ಪಾಶ್ಚಾತ್ಯ ವಾಗಲಿ—ಅವುಗಳ ಯೋಗ್ಯತೆಯ ಮೇಲೆ ವಿಚಾರ ನಡೆಯಬೇಕು. ಅವು ಸತ್ಯ ಅಥವಾ ಅಸತ್ಯ, ಹಿಂಸೆ ಅಥವಾ ಅಹಿಂಸೆ ಇವುಗಳಲ್ಲಿ ಯಾವುದರ ಆಧಾರದ ಮೇಲೆ ಪ್ರತಿಪಾದನೆಯಾಗಿದೆ— ಇದೊಂದೇ ವಿಚಾರಯೋಗ್ಯ. ನನ್ನ ಅಭಿ ಪ್ರಾಯಗಳು ಸತ್ಯ ಮತ್ತು ಅಹಿಂಸೆಗಳ ಆಧಾರದ ಮೇಲೆ ನಿಂತಿವೆಯೆಂದು ನನ್ನ ದೃಢನಂಬಿಕೆ. (ಯಂಗ್ ಇಂಡಿಯಾ, ೧೮–೧೧–೧೯೨೬)

೫

ಕೆಲವು ಸಂದರ್ಭಗಳಲ್ಲಿ ನಾಯಿಗಳನ್ನು ಕೊಲ್ಲಬಹುದೆಂಬ ಸಲಹೆಗೆ ಮೂಲಭೂತವಾದ ವಿಚಾರವನ್ನು ನನಗೆ ಪತ್ರ ಬರೆಯುವವರು ಮನಗಂಡಂತೆ ನನಗೆ ತೋರುವುದಿಲ್ಲ. ಅಂದರೆ ಈ ಸಲಹೆಯನ್ನು ನಾನು ಕೇವಲ ಉಪ ಯುಕ್ತತೆಯ ದೃಷ್ಟಿಯಿಂದ ಮಾಡುತ್ತಿಲ್ಲ. ಸಮಾಜಕ್ಕೇನೋ ಇದರಿಂದ ಉತ್ತ ರೋತ್ತರ ಉಪಯೋಗವಾಗಬಹುದು. ಈ ಮೂಕಪ್ರಾಣಿಗಳ ಸದ್ಯಸ್ಥಿತಿಯನ್ನು ನನಗೆ ಸಹಿಸಲಸಾಧ್ಯವಾಗಿರುವುದರಿಂದ ಈ ದೀರ್ಘವಾದ ನರಕಯಾತನೆ ಯಿಂದ ಅವುಗಳನ್ನು ಕಾಪಾಡುವುದು ನನ್ನ ಮುಖ್ಯ ವಿಚಾರ. ನಾನು ಈ ವಿಷಯದಲ್ಲಿ ಬರೆದಿರುವ ಲೇಖನಮಾಲೆಯಲ್ಲಿ ಮೂಕಪ್ರಾಣಿಗಳನ್ನು ಏನು ಬೇಕಾದರೂ ಮಾಡಲು ಸ್ವಾತಂತ್ರ್ಯವುಂಟೆಂದಾಗಲಿ, ಆದುದರಿಂದ ಅವುಗಳನ್ನು ತನ್ನ ಇಷ್ಟಬಂದಂತೆ ತನ್ನ ಸುಖಕ್ಕೆ ಕೊಲ್ಲಬಹುದೆಂದಾಗಲಿ ಅರ್ಥಮಾಡಿ ಕೊಳ್ಳಲು ಲೇಶಮಾತ್ರವೂ ಅವಕಾಶವಿಲ್ಲ. ಮಹಾತ್ಮರ ಒಂದು ಲಕ್ಷಣ ತಮ್ಮ ಸುತ್ತಮುತ್ತಲಿನ ದುಃಖದಿಂದ ಯಾವ ವಿಧದಲ್ಲಿಯೂ ಮನಗೆಡದಿರುವುದು ಎಂದು ಒಬ್ಬರು ಬರೆಯುತ್ತಾರೆ. ಇದು ವಿಚಾರಗೊಂದಲ. ಅಂತಹವರು ಕಠಿಣಹೃದಯರು, ಭಾವನಾಶೂನ್ಯರು—ಮಹಾತ್ಮರಲ್ಲ. ಮಹಾತ್ಮರು ಇತರರ ಕಷ್ಟವನ್ನು ಕಂಡು ಕರಗುತ್ತಾರೆ, ತನ್ನನ್ನು ಇತರರಲ್ಲಿ ಕಾಣುತ್ತಾರೆ, ಇತರರನ್ನು ತನ್ನಲ್ಲಿ ಕಾಣುತ್ತಾರೆ. ಇತರರ ಸುಖದ ಉತ್ಕಟ ಆಕಾಂಕ್ಷೆಯೇ ಅಹಿಂಸಾ ತತ್ತ್ವದ ಆವಿಷ್ಕಾರಕ್ಕೆ ಜನನ. ಯಾವದೋ ಪೂರ್ವದಲ್ಲಿದ್ದ ಜ್ಞಾನಿಯು ತನ್ನ ದೈಹಿಕ ಸುಖವನ್ನು ತೊರೆದು ತನ್ನ ಸುತ್ತಮುತ್ತಲಿದ್ದ ಮೂಕಪ್ರಾಣಿ ಗಳನ್ನು ತನ್ನ ಸುಖಕ್ಕಾಗಿ ಕೊಲ್ಲುವುದನ್ನು ಬಿಟ್ಟನು. ಇದರಿಂದ ಆತ್ಮಾನಂದ

ವನ್ನು ಪಡೆದನು. ಇಂತಹ ಜ್ಞಾನಿಯು ಕರುಣಾಮೂರ್ತಿಯಾಗಿದ್ದನು.

ಒಂದು ಸರ್ಪವು ನನ್ನನ್ನು ಕಡಿಯಲು ಬಂದರೆ ನಾನೇನು ಮಾಡ ಬೇಕೆಂದು ನಾನು ಒಮ್ಮೆ ಶ್ರೀ ರಾಯಚಂದ್ರರನ್ನು ಕೇಳಿದೆನು. ಅವರು ನನಗೆ ಕೊಟ್ಟ ಉಪದೇಶವನ್ನು ಒಬ್ಬ ಪತ್ರಲೇಖಕರು ನನ್ನ ನೆನಪಿಗೆ ತಂದಿದಾರೆ. ಆ ಸರ್ಪವನ್ನು ಕೊಲ್ಲುವುದಕ್ಕಿಂತಲೂ ಅದರಿಂದ ಕೊಲ್ಲಿಸಿಕೊಳ್ಳಬೇಕೆಂದು ಅವರು ಹೇಳಿದುದು ನಿಜವೆ. ಆದರೆ ಪ್ರಸ್ತುತ ಚರ್ಚೆಯ ವಿಷಯ ನಾನಲ್ಲ—ಒಟ್ಟು ಸಮಾಜ—ಮತ್ತು ಕಷ್ಟವನ್ನನುಭವಿಸುತ್ತಿರುವ ಮೂಕಪ್ರಾಣಿಗಳು. ಇದನ್ನು ಪತ್ರಲೇಖಕರು ಮರೆಯುತ್ತಾರೆ.

ಯಾವ ಉಪಾಯದಿಂದಲೂ ಪರಿಹಾರಮಾಡಲಾಗದ ಯಾತನೆಯಿಂದ ಒದ್ದಾಡುತ್ತಿರುವ ಹಾವನ್ನು ಕೊಲ್ಲಬಹುದೇ ಕೊಲ್ಲಬಾರದೆ? ಅಥವಾ ನನ್ನ ರಕ್ಷಣೆಯಲ್ಲಿರುವ ಮಗುವನ್ನು ಕಡಿಯಲು ಬಂದ ಹಾವನ್ನು ಅದನ್ನು ಓಡಿಸ ಲಾಗದಿದ್ದಾಗ ನಾನು ಕೊಲ್ಲಬಹುದೇ ಕೊಲ್ಲಬಾರದೆ? ಈ ಪ್ರಶ್ನೆಯನ್ನು ನಾನು ಶ್ರೀ ರಾಯಚಂದಭಾಯಿಗೆ ಹಾಕಿದ್ದರೆ ಅವರು ಏನು ಉತ್ತರ ಕೊಡುತ್ತಿದ್ದರೋ ಕಾಣೆ. ನನ್ನ ಮಟ್ಟಿಗೆ ಉತ್ತರ ಸ್ಪಷ್ಟವಾಗಿದೆ. ಅದನ್ನು ನಾನು ಕೊಟ್ಟಿದೇನೆ.

ಅಧ್ಯಯನಶೀಲರಾದ ಒಬ್ಬ ಪತ್ರಲೇಖಕರು ಒಬ್ಬ ಜೈನತತ್ತ್ವಜ್ಞಾನಿ ಗಳು ಬರೆದ ಕೆಲವು ಶ್ಲೋಕಗಳನ್ನು ನನಗೆ ಕಳುಹಿಸಿ, ಅಲ್ಲಿ ಹೇಳಿರುವ ಅಭಿಪ್ರಾಯಕ್ಕೆ ನನ್ನ ಸಮ್ಮತಿ ಇದೆಯೇ ಎಂದು ಪ್ರಶ್ನಿಸಿದಾರೆ. ಒಂದು ಶ್ಲೋಕ ಹೇಳುತ್ತದೆ: 'ಕ್ರೂರ ಮೃಗಗಳನ್ನು ಕೊಲ್ಲುವುದರಿಂದ ಒಬ್ಬನು ಅನೇಕ ಪ್ರಾಣಗಳನ್ನು ರಕ್ಷಿಸುತ್ತಾನೆ ಎಂಬ ನಂಬಿಕೆಯಿಂದ ಕ್ರೂರ ಮೃಗ ಗಳನ್ನು ಸಹ ಕೊಲ್ಲಬಾರದು.' ಮತ್ತೊಂದು ಶ್ಲೋಕ ಹೇಳುತ್ತದೆ: 'ಕೆಲವು ದುಷ್ಟ ಮೃಗಗಳನ್ನು ದೀರ್ಘಕಾಲ ಜೀವಿಸಲು ಬಿಡುವುದರಿಂದ ಅವು ಮತ್ತಷ್ಟು ಪಾಪವನ್ನು ಮಾಡುವುವು ಎಂಬ ಕಾರುಣ್ಯಭಾವದಿಂದ ಅವುಗಳನ್ನು ಕೊಲ್ಲ ಬಾರದು.' ಮೂರನೆಯ ಶ್ಲೋಕ ಹೇಳುತ್ತದೆ: 'ಸಂಕಟದಲ್ಲಿರುವ ಪ್ರಾಣಿ ಗಳನ್ನು ಅವುಗಳ ಸಂಕಟಪರಿಹಾರಕ್ಕೆಂದು ಕೊಲ್ಲಬಾರದು.'

ಈ ಶ್ಲೋಕಗಳ ಅರ್ಥ ನನ್ನ ಮಟ್ಟಿಗೆ ಸ್ಪಷ್ಟವಾಗಿದೆ. ಯಾವ ಒಂದು ಸನ್ನಿವೇಶಕ್ಕೂ ಕೇವಲ ಒಂದು ಸಿದ್ಧಾಂತ ಪ್ರೇರಕವಾಗಬಾರದು. ನೀನು

ಹಿಂಸೆಯನ್ನು ಮಾಡಬಹುದು. ಆದರೆ ನಿನಗೆ ಪ್ರಿಯವಾದ ಸಿದ್ಧಾಂತವನ್ನು ಕಾರ್ಯರೂಪಕ್ಕೆ ತರುವ ವ್ಯಾಜದಿಂದಲ್ಲ—ಬೇರೆ ಉಪಾಯವಿಲ್ಲದೆ ಅಗತ್ಯವಾಗಿ ಮಾಡಲೇಬೇಕಾದ ಕರ್ತವ್ಯವಾಗಿ ಮಾಡಬಹುದು. ತನಗೆ ಸಹಜವಾಗಿ ಒದಗಿಬರುವ ಕರ್ಮ ಅಥವಾ ಅನಾಸಕ್ತ ಕರ್ಮ (ಗೀತೆಯ ಮಾತುಗಳಲ್ಲಿ ಹೇಳುವುದಾದರೆ) ಪ್ರತಿಯೊಬ್ಬ ಮೋಕ್ಷಸಾಧಕನ ಕರ್ತವ್ಯ. ನಿನ್ನ ದಾರಿಯಲ್ಲಿ ಬರುವ ಕರ್ಮಕ್ಕೆ ಗಮನ ಕೊಡು. (ಈ ಬಗೆಯಲ್ಲಿ ಆ ಜೈನತತ್ತ್ವಜ್ಞಾನಿಗಳು ಹೇಳಿದರೆಂದು ನಾನು ಭಾವಿಸುತ್ತೇನೆ.) ನಿನ್ನ ಕರ್ಮಕ್ಕಾಗಿ ಹೊಸ ಕ್ಷೇತ್ರಗಳನ್ನು ಹುಡುಕುತ್ತ ಹೋಗಬೇಡ. ಎಲ್ಲ ಹಿಂಸೆಯೂ ಅನಿವಾರ್ಯ ಅಗತ್ಯ ಎಂದು ಕಾಣುವುದೋ ಅಂತಹ ಸಂದರ್ಭಗಳಲ್ಲಿ ನಿನ್ನ ಕರ್ಮವನ್ನು ನಿರ್ಲಿಪ್ತನಾಗಿ ಆಚರಿಸು. ಇದು ಈ ಶ್ಲೋಕಗಳ ಇಂಗಿತವೆಂದು ನನಗನಿಸುತ್ತದೆ.

ಆದರೆ ನಾನು ಹೇಳುವ ಅಭಿಪ್ರಾಯಗಳನ್ನು ಯಾವ ಪ್ರಮಾಣ ಅಥವಾ ಶಾಸ್ತ್ರದ ಆಧಾರವನ್ನಿಟ್ಟುಕೊಂಡು ಹೇಳುತ್ತಿಲ್ಲ. ಅವಕ್ಕೆ ಉಗಮಸ್ಥಾನಗಳು ಅನೇಕವಿರಬಹುದು. ಆದರೆ ನನ್ನ ವಿಜ್ಞಾಪನೆ ಇಷ್ಟೆ—ಆ ತತ್ತ್ವಜ್ಞಾನಿಯ ಉಪದೇಶಕ್ಕೆ ವಿರೋಧವಾಗಿದೆಯೆಂದು ನಿರೂಪಣೆಯಾದರೂ ಅವು ಅಹಿಂಸಾ ತತ್ತ್ವಕ್ಕೆ ಅನುಗುಣವಾಗಿದೆ. (ಯಂಗ್ ಇಂಡಿಯಾ, ೨೫-೧೧-೧೯೨೬)

## ಎಲ್ಲರ ಹೆಚ್ಚಿನ ಹಿತ

'ಯಂಗ್ ಇಂಡಿಯಾ' ಪತ್ರಿಕೆಯನ್ನು ಕ್ರಮವಾಗಿ ಓದುವವರೊಬ್ಬರು ಇದನ್ನು ಕಳುಹಿಸಿದಾರೆ.

'ಇದು ಭೂತದಯೆಯೆ?' ಎಂಬ ನೀವು ಬರೆದ ಲೇಖನಮಾಲೆಯಲ್ಲಿ, ವಿಶೇಷವಾಗಿ ನಾಲ್ಕನೆಯ ಲೇಖನದಲ್ಲಿ, ಕೆಲವು ಸಂದರ್ಭಗಳಲ್ಲಿ ಪ್ರಾಣವನ್ನು ತೆಗೆಯಬೇಕಾದ ಕರ್ತವ್ಯ ಸಂಭವಿಸುವುದೆಂದು ನೀವು ವಿಶದಗೊಳಿಸಿರುವಿರಿ. ಈ ಅಭಿಪ್ರಾಯವನ್ನು ಪುಷ್ಟೀಕರಿಸುವ ಒಂದು ವರ್ಷದ ಹಿಂದೆ ಪಾಶ್ಚಾತ್ಯ ದೇಶದಲ್ಲಿ ಪ್ರಕಟವಾದ ಒಂದು ಲೇಖನವನ್ನು ಒಂದು ಪತ್ರಿಕೆಯಿಂದ ಕತ್ತರಿಸಿ ತೆಗೆದು ಕಳುಹಿಸುತ್ತಿದೇನೆ.

ಟೈಮ್ಸ್ ಆಫ್ ಇಂಡಿಯಾ ಪತ್ರಿಕೆಗೆ ವಿಶೇಷವಾಗಿ
ಲಿಟ್ಲ್‌ಟನ್ (ಕೊಲೊರಾಡೊ, ೧೨-೧೧-೧೯೩೪)

ಹ್ಯಾರೋಲ್ಡ್ ಬ್ಲೇಸರ್ ಎಂಬುವವರು ನಗರದ ಹೊರಪ್ರದೇಶದಲ್ಲಿರುವ ವೈದ್ಯರು. ಅವರ ವಯಸ್ಸು ೬೧. ಅವರ ಅಂತಿಮಕಾಲ ಸಮೀಪಿಸಿತೆಂದು ತನ್ನ ಮಗಳಿಗೆ ಪ್ರಜ್ಞೆ ತಪ್ಪುವ ಕ್ಲೋರೋಫಾರ್ಮ್ ಕೊಟ್ಟರು. ಆಕೆ ಮೃತಳಾದಳು. ಆತ ಕಾಲವಾದಮೇಲೆ ಆಕೆಗೆ ರಕ್ಷಕರಾರೂ ಇಲ್ಲವೆಂಬುದೇ ಇದರ ಕಾರಣ. ಈ ಮೊಕದ್ದಮೆಯು ವಿಚಾರಣೆಯಾದಾಗ ಪಂಚಾಯತುದಾರರು ೧೪ ಘಂಟೆಗಳ ದೀರ್ಘಕಾಲದ ಚರ್ಚೆಯನಂತರ ಒಮ್ಮತವನ್ನು ಹೇಳಲಾಗದೆ ಹೋದರು. ಅವರಲ್ಲಿ ೧೧ ಪಂಚಾಯತುದಾರರು ವೈದ್ಯರು ನಿರಾಪರಾಧಿ ಎಂದೂ ಅವರನ್ನು ಬಿಡುಗಡೆ ಮಾಡಬೇಕೆಂದೂ ಸಲಹೆ ಮಾಡಿದರು. ನ್ಯಾಯಾಧೀಶರು ಇದನ್ನು ಒಪ್ಪಿ ಬಿಡುಗಡೆ ಮಾಡಿದರು. ಬ್ಲೇಸರ್ ಪರ ವಾದಿಸಿದ ಹೌರೀ ಎಂಬ ವಕೀಲರು ಈ ರೀತಿ ವಾದಿಸಿದರು: 'ಬ್ಲೇಸರ್ ಮಾಡಿದ್ದು ಸರಿಯಾದ ಕಾರ್ಯ. ಅವರ ಮಗಳನ್ನು ೩೨ ವರ್ಷಗಳು ಕಾಪಾಡುತ್ತ ಬಂದಿದ್ದರು. ಆಕೆ ಬುದ್ಧಿಹೀನಳು, ಹೆಳವಳು, ಮೂಕಳು. ಇತರರು ಅಗಿದ ಆಹಾರವನ್ನು ಅವಳಿಗೆ ಕೊಡಬೇಕಾಗಿತ್ತು. ಇಂತಹವಳನ್ನು ಹೆರರ ವಶಕ್ಕೆ ಒಪ್ಪಿಸಲು ಅವರಿಗೆ ಇಷ್ಟವಿರಲಿಲ್ಲ. ಆಕೆಗೆ ಆತ್ಮವೇ ಇದ್ದಿರಲಾರದು.'

ಹೋದ ವರ್ಷ ಇದೇ ಸಮಯದಲ್ಲಿ ಪ್ಯಾರಿಸ್‌ನಲ್ಲಿ ನಡೆದ ಒಂದು ಘಟನೆಯನ್ನು ಓದಿದ ನೆನಪಿದೆ. ಒಬ್ಬ ನಟಿಯನ್ನು ಪ್ರೀತಿಸುತ್ತಿದ್ದ ಒಬ್ಬಾತನು ರೋಗಗ್ರಸ್ತನಾಗಿ ಬಹಳ ಯಾತನೆಯನ್ನನುಭವಿಸುತ್ತಿದ್ದನು. ಅದು ಗುಣಮುಖವಾಗುವ ಆಸೆ ಇರಲಿಲ್ಲ. ತನ್ನ ಪ್ರಾಣವನ್ನು ತೆಗೆಯಬೇಕೆಂದು ಅವನ ತೀವ್ರವಾದ ಇಚ್ಛೆಗನುಸಾರ ಆ ನಟಿ ಅವನನ್ನು ಗುಂಡಿನಿಂದ ಹೊಡೆದು ಅವನ ಪ್ರಾಣನಷ್ಟಮಾಡಿದಳು. ಕೊಲೆ ಮಾಡಿದ ಅಪರಾಧಕ್ಕಾಗಿ ಆ ನಟಿಯನ್ನು ವಿಚಾರಣೆಗೆ ಗುರಿಮಾಡಿದರು. ಆದರೆ ಎಲ್ಲ ಸಂದರ್ಭಗಳನ್ನೂ ಪರಿಶೀಲಿಸಿ ಆ ನಟಿಯು ನಿರಾಪರಾಧಿಯೆಂದು ಪಂಚಾಯತುದಾರರು ಬಿಡುಗಡೆ ಮಾಡಿದರು. ಈ ತೀರ್ಮಾನವನ್ನು ಪುಷ್ಟೀಕರಿಸಲು ಫ್ರಾನ್ಸ್ ದೇಶದಲ್ಲಿ ಯಾವ ಕಾನೂನೂ ಇಲ್ಲ. ಆದರೆ ಡೆನ್ಮಾರ್ಕ್ ದೇಶದಲ್ಲಿ ಇಂತಹ ಕಾನೂನಿದೆಯೆಂದು ನಾನು ಓದಿದೇನೆ. ಸುಖವಾದ ರೀತಿಯಲ್ಲಿ ಜೀವ ಕೊನೆಗಾಣುವಂತೆ ಇಂತಹ

ಸನ್ನಿವೇಶಗಳಲ್ಲಿ ಪ್ರಾಣವನ್ನು ತೆಗೆಯಲು ಕೆಲವರಿಗೆ ಕಾನೂನು ಅಧಿಕಾರ ಕೊಟ್ಟಿದೆ. ಈ ಉದಾಹರಣೆಗಳು ನಿಮಗೂ, ನನ್ನಂತಹ ನಿಮ್ಮ ಪತ್ರಿಕೆಯ ಇತರ ಓದುಗರಿಗೂ ಗಮನಾರ್ಹವಾಗಬಹುದೆಂದು ಇದನ್ನು ಬರೆದಿದೇನೆ.

ನನ್ನ ನಿಲುವನ್ನು ಸ್ಪಷ್ಟಪಡಿಸಲು ಸಹಾಯಮಾಡುವುದರಿಂದ ಈ ಪತ್ರವನ್ನು ಪ್ರಕಟಿಸುತ್ತಿದೇನೆ. ಕ್ರಮವಾಗಿ 'ಯಂಗ್ ಇಂಡಿಯಾ' ಪತ್ರಿಕೆಯನ್ನು ತಪ್ಪದೇ ಓದುವ ಈ ಪತ್ರಲೇಖಕರೇ ನನ್ನ ವಿಚಾರವನ್ನು ತಪ್ಪಾಗಿ ಗ್ರಹಿಸಿದ ಮೇಲೆ ಇತರರು—ಒಮ್ಮೊಮ್ಮೆ ನನ್ನ ಪತ್ರಿಕೆಯನ್ನು ನೋಡುವವರು—ಇದೇ ರೀತಿಯ ಪ್ರಮಾದಕ್ಕೆ ಒಳಗಾಗಿರಬಹುದು. ಸಂದರ್ಭ ಸಿಕ್ಕೀತೆ ಎಂದು ಕಾದಿದ್ದು ಹಿಂಸೆಯನ್ನು ಆಚರಿಸಲು ಬಯಸುವ ಒಂದು ಸಾಂಪ್ರದಾಯಿಕವಾಗಿ ಬೆಳೆದು ಬಂದಿರುವ ಕಠಿಣಹೃದಯವುಳ್ಳವರಾಗಿದೇವೆ. ಈ ಪರಿಸ್ಥಿತಿಯಲ್ಲಿ ನನ್ನ ಲೇಖನವು ಅಪಾರ್ಥಕ್ಕೆ ಎಡೆಗೊಡುವುದೆಂದು ಕೆಲವರು ನನ್ನ ಅವಗಾಹನೆಗೆ ತಂದರು. ಮಾರ್ಮಿಕ ವಿಚಾರಗಳ ಪರಿಶೀಲನೆಯನ್ನು ಬಹಳ ಜಾಗರೂಕತೆಯಿಂದ ಮಾಡಬೇಕು. ಇದು ನಮ್ಮ ಕರ್ತವ್ಯ. ಆದರೆ ಮೂಲಭೂತವಾದ ತತ್ತ್ವಗಳ ವಿಚಾರವನ್ನು ಬಿಚ್ಚುಮನಸ್ಸಿನಿಂದಲೂ ಪ್ರಾಮಾಣಿಕವಾಗಿಯೂ ಮಾಡುವುದಕ್ಕೆ ನಮ್ಮ ವಾಕ್ಯಗಳನ್ನು ದುರುಪಯೋಗಮಾಡಬಹುದೆಂಬ ಭೀತಿ ತಡೆಯಾಗಿರಬಾರದು. ನನ್ನ ಮಟ್ಟಿಗೆ ಹೇಳಬಹುದಾದರೆ ನಾನು ಬಹಳ ಶ್ರದ್ಧಾಭಕ್ತಿಗಳಿಂದ ಚರ್ಚೆಮಾಡಿ, ನನ್ನ ವಿಚಾರವನ್ನು ವಿಶದಗೊಳಿಸಿ, ವಿಚಾರ ವಿನಿಮಯ ಮಾಡಿದ ಬಳಿಕ ನನಗೆ ಸರಿಯೆಂದು ತೋರುವ ದಾರಿಯಲ್ಲಿ ಸಾಗಲು ಕಲಿಯುತ್ತೇನೆ—ಆ ದಾರಿಯಲ್ಲಿ ಮುಂದುವರಿಯುತ್ತೇನೆ. ನಾನು ಮೇಲೆ ಎತ್ತಿಬರೆದಿರುವ ಪತ್ರ ಇದಕ್ಕೆ ನಿದರ್ಶನ. ಈ ಚರ್ಚೆಯಿಂದ ಆ ಪತ್ರಲೇಖಕರಿಗೂ ನನಗೂ ಒಂದೇ ತತ್ತ್ವದ ಅರ್ಥನಿರೂಪಣೆಯಲ್ಲಿ ಭಿನ್ನಾಭಿಪ್ರಾಯ ಇದೆಯೆಂದು ವೇದ್ಯವಾಗಿದೆ.

ನನ್ನ ನಿಲುವಿನ ಪ್ರಕಾರ ಡಾ|| ಬ್ಲೇಸರರನ್ನು ಬಿಡುಗಡೆ ಮಾಡಿದ್ದು ಸರಿಯೇ. ಆದರೆ ಆತನು ತನ್ನ ಮಗಳ ಜೀವವನ್ನು ಕೊನೆಗಾಣಿಸಿದ್ದು ತಪ್ಪೆಂದು ನನ್ನ ಅಭಿಪ್ರಾಯ. ತನ್ನ ಸುತ್ತಮುತ್ತಲಿನವರ ಜೀವಕಾರುಣ್ಯದಲ್ಲಿ ಆತನಿಗೆ ಸಾಕಷ್ಟು ನಂಬಿಕೆ ಇಲ್ಲವೆಂದು ಅರ್ಥವಾಗುತ್ತದೆ. ಇತರರು ತನ್ನ ಮಗಳನ್ನು ಸರಿಯಾಗಿ ನೋಡಿಕೊಳ್ಳಲಾರರೆಂದು ಆತ ಭಾವಿಸಬಾರದಾಗಿತ್ತು. ನಾನು

ವಿವರಿಸಿರುವ ಸಂದರ್ಭಗಳಲ್ಲಿ ನಾಯಿಗಳ ಪರಿಸ್ಥಿತಿ ಬೇರೆ ತರಹದ್ದು. ಡಾ|| ಬ್ಲೇಸರರ ಉದಾಹರಣೆ ಹೊಂದುವುದಿಲ್ಲ. ಬುದ್ಧಿಹೀನನಿಗೆ ಆತ್ಮವೇ ಇಲ್ಲವೆಂದು ನಾನು ಒಪ್ಪಲಾರೆ. ಮೂಕಪ್ರಾಣಿಗಳಿಗೂ ಆತ್ಮವಿದೆಯೆಂದು ನನ್ನ ನಂಬಿಕೆ.

ಇದಕ್ಕೂ ಕಠಿಣವಾದ ಸಮಸ್ಯೆಯನ್ನು ಮತ್ತೊಬ್ಬ ಪತ್ರಲೇಖಕರು ನನ್ನ ಮುಂದೆ ಇಟ್ಟಿದಾರೆ. ಅವರ ಹೇಳಿಕೆಯನ್ನು ಹೀಗೆ ಸಂಗ್ರಹಿಸಬಹುದು :

'ನಿಮ್ಮ ನಿಲುವಿಗೆ ನನ್ನ ಮೆಚ್ಚಿಗೆ ಇದೆ. ಅದೊಂದೇ ಸರಿಯಾದ ನಿಲುವು. ಆದರೆ ನಿಮ್ಮ ತರ್ಕದಿಂದ ಬಹುಜನರ ಹೆಚ್ಚಿನ ಹಿತಸಾಧನೆ ಎಂಬ ತತ್ತ್ವವನ್ನೇ ಮುಟ್ಟುವುದಲ್ಲವೆ ? ಈ ಸಿದ್ಧಾಂತವನ್ನೇ 'ಯುಟಿಲಿಟೇರಿಯನ್' (ಉಪ ಯುಕ್ತತೆ) ಎಂದು ಹೇಳುತ್ತಾರೆ. ಹೀಗೆಂದಮೇಲೆ ಈ ಸಿದ್ಧಾಂತಕ್ಕೂ ಅಹಿಂಸೆಯ ಸಿದ್ಧಾಂತಕ್ಕೂ ಏನು ಭೇದ ? ಈ 'ಪ್ರಯೋಜನ' ಸಿದ್ಧಾಂತದಲ್ಲಿ ಅಹಿಂಸೆಯ ಸೋಗಿಲ್ಲ—ಬಹುಜನರ ಹೆಚ್ಚಿನ ಹಿತವನ್ನು ಸಾಧಿಸಲು ಪ್ರಾಣ ನಾಶವನ್ನು ಮಾಡಲು ಅಲ್ಲಿ ಹಿಂಜರಿಯುವುದಿಲ್ಲ.'

ಪ್ರಥಮತಃ ಒಂದು ಕರ್ಮದ ಬಾಹ್ಯರೂಪ ಒಂದೇ ಆಗಿದ್ದರೂ ಅದರ ಉದ್ದೇಶ್ಯವೇನೆಂಬುದರಲ್ಲಿ ಅದರ ಅರ್ಥ ಬೇರೆಯಾಗುತ್ತದೆ. ಉದಾಹರಣೆಗೆ ಪಾಶ್ಚಾತ್ಯ ದೇಶಗಳಲ್ಲಿ ಅಹಿಂಸೆಯ ಆಚರಣೆಯೆಂದರೆ ಅದು ಮಾನವ ವರ್ಗ ದೊಂದಿಗೆ ಮಾತ್ರ ನಿಲ್ಲುತ್ತದೆ. ಅದರಲ್ಲಿಯೂ ಎಷ್ಟು ಸಾಧ್ಯವೊ ಅಷ್ಟರಮಟ್ಟಿಗೆ ಅದರ ಆಚರಣೆ—ಮಾನವ ಹಿತದೃಷ್ಟಿಯೆಂದು ಅವರಿಗೆ ತೋರುವುದನ್ನು ಸಾಧಿಸಲು ಮೂಕಪ್ರಾಣಿಗಳಿಗೆ ಹಿಂಸೆಯನ್ನು ಕೊಟ್ಟು ಶಾಸ್ತ್ರೀಯ ಸಂಶೋಧನೆ ಯನ್ನು ಮಾಡಲು ಯಾವ ಕರುಣೆಯೂ ಇರುವುದಿಲ್ಲ. ಅಥವಾ ಇದೇ 'ಉಪಯುಕ್ತತೆ'ಯ ಸಿದ್ಧಾಂತದ ಆಧಾರದ ಮೇಲೆ ಯುದ್ಧದ ಅಸ್ತ್ರಗಳನ್ನು ಹೇರಳವಾಗಿ ಸಿದ್ಧಗೊಳಿಸಿ ರಾಶಿಹಾಕುವರು. ಆದರೆ ಅಹಿಂಸಾ ಉಪಾಸಕ ಇದೇ ರೀತಿಯಲ್ಲಿ ಯಾವುದಾದರೊಂದು ಹಿಂಸಾಕೃತ್ಯವನ್ನು ಮಾಡಿರಬಹುದು. ಆದರೆ ಶಾಸ್ತ್ರೀಯ ಸಂಶೋಧನೆಗಾಗಿ ಮೂಕಪ್ರಾಣಿಗಳನ್ನು ಹಿಂಸೆಗೆ ಗುರಿ ಮಾಡಲಾರ. ಯುದ್ಧದ ಅಸ್ತ್ರಗಳನ್ನು ಹೇರಳವಾಗಿ ಕೂಡಿಹಾಕಲು ಒಪ್ಪ ಲಾರ. ಹೀಗೆಲ್ಲ ಮಾಡುವುದಕ್ಕಿಂತಲೂ ತನ್ನ ಪ್ರಾಣವನ್ನೇ ಬಲಿಕೊಡಲು ಸಿದ್ಧವಾದಾನು.

ವಸ್ತುತಃ ಈ ‘ ಉಪಯುಕ್ತತೆ ’ ಎನ್ನುವ ಸೂತ್ರಕ್ಕೆ ಅಹಿಂಸೆಯ ಉಪಾಸಕನು ಮನ್ನಣೆ ಕೊಡಲಾರನು. ಎಲ್ಲರ ಹಿತಕ್ಕಾಗಿ ಶ್ರಮಿಸುವನು. ಈ ಧ್ಯೇಯಸಾಧನೆಗಾಗಿ ಪ್ರಾಣವನ್ನರ್ಪಿಸಲೂ ಸಹ ಸಿದ್ಧನಾಗಿರುವನು. ಇತರರು ಬದುಕಿರುವುದಕ್ಕಾಗಿ ತನ್ನ ಪ್ರಾಣವನ್ನೇ ಬಲಿಕೊಡುವನು. ಎಲ್ಲರ ಹಿತದಲ್ಲಿ ಬಹುಜನರ ಹಿತವೂ ಸೇರಿದೆ. ಆದುದರಿಂದ ಬಹುಜನರ ಹಿತಕ್ಕಾಗಿ ಶ್ರಮಿಸುವ ಉಪಯುಕ್ತತೆ ಸಿದ್ಧಾಂತದ ಪ್ರಕಾರ ಕೆಲಸಮಾಡುವವರೂ ಇವನೂ ಬಹುಮಟ್ಟಿಗೆ ಸಹಕರಿಸುವರು. ಆದರೆ ಒಂದು ಮಟ್ಟದಲ್ಲಿ ಅವರು ಬೇರೆ ಬೇರೆ ಮಾರ್ಗವನ್ನು ಅವಲಂಬಿಸಬೇಕಾಗುವುದು. ಪರಸ್ಪರ ವಿರೋಧವಾದ ರೀತಿಯಲ್ಲಿಯೂ ವರ್ತಿಸಬೇಕಾಗಬಹುದು. ‘ ಉಪಯುಕ್ತತೆ ’ಯನ್ನು ಗುರಿಯಾಗಿ ಉಳ್ಳವನು ತಾನೇ ಬಲಿಯಾಗಲು ಒಪ್ಪಲಾರನು. ನಿರಪೇಕ್ಷವಾದಿ ತನ್ನ ಬಲಿಗೆ ಸಿದ್ಧನಾಗಿರುವನು. ಇಂತಹವನು ನಾಯಿಯನ್ನು ಕೊಂದರೆ—ಅದು ದೌರ್ಬಲ್ಯದಿಂದ ಅಥವಾ ಕೆಲವೇ ಸಂದರ್ಭಗಳಲ್ಲಿ ನಾಯಿಯ ಹಿತದೃಷ್ಟಿಯಿಂದ. ನಾಯಿಯ ಹಿತವೇನೆಂಬುದನ್ನು ನಿರ್ಧರಿಸುವುದು ಅಪಾಯಕರ. ಈ ನಿರ್ಧಾರ ಮಾಡುವುದರಲ್ಲಿ ತಾನು ದೊಡ್ಡ ತಪ್ಪು ಮಾಡಿರಬಹುದು. ಇವಕ್ಕೂ ಅವನ ಕಾರ್ಯವನ್ನು ಪ್ರೇರೇಪಿಸಿದ ಉದ್ದೇಶ್ಯಕ್ಕೂ ಸಂಬಂಧವಿಲ್ಲ. ನಿರಪೇಕ್ಷವಾದಿ ಯಾವಾಗಲೂ ಆದಷ್ಟು ಕಡಮೆ ಪ್ರಾಣನಾಶಮಾಡುವನು. ‘ ಉಪಯುಕ್ತತೆ ’ ಎಂದು ವಾದಿಸುವವನಿಗೆ ಯಾವ ಮಿತಿಯೂ ಇಲ್ಲ. ಅಹಿಂಸಾ ತತ್ತ್ವದ ದೃಷ್ಟಿಯಿಂದ ವಿಚಾರಮಾಡಿದರೂ ಹೋದ ಮಹಾಯುದ್ಧ ತೀರ ತಪ್ಪಾದುದು. ಆದರೆ ‘ ಉಪಯುಕ್ತತೆ ’ಯ ದೃಷ್ಟಿಯಿಂದ ಒಂದೊಂದು ಪಕ್ಷದವರೂ ತಮ್ಮ ದೃಷ್ಟಿಯಿಂದ ಇದನ್ನು ಸಮರ್ಥಿಸಿರುವರು. ಜಲಿಯನ್‌ವಾಲಾಬಾಗಿನಲ್ಲಿ ಆದ ಕೊಲೆ ಪ್ರಕರಣವನ್ನೂ ‘ ಉಪಯುಕ್ತತೆ ’ಯ ವಾದಿಗಳು ಸಮರ್ಥನೆ ಮಾಡಿದರು. ಹೀಗೆಯೇ ಬಾಂಬನ್ನೆಸೆಯುವ ಅರಾಜಕ ದಂಗೆಕೋರನು ತನ್ನ ಕೊಲೆಗಳನ್ನು ಸಮರ್ಥನೆ ಮಾಡುತ್ತಾನೆ. ಆದರೆ ಎಲ್ಲರ ಉತ್ತಮ ಹಿತಸಾಧನೆಯ ದೃಷ್ಟಿಯಿಂದ ಈ ಕೃತ್ಯಗಳನ್ನು ಸಮರ್ಥನೆ ಮಾಡಲು ಸಾಧ್ಯವಿಲ್ಲ.

(ಯಂಗ್ ಇಂಡಿಯಾ, ೯–೧೨–೧೯೨೬)

## ಸುಖ ಸಾಗಾಣಿಕೆ ?

'ಎಲ್ಲರ ಹೆಚ್ಚಿನ ಹಿತ'—ಎಂಬ ಲೇಖನಕ್ಕೆ ಪ್ರೇರಕವಾದ ಪತ್ರವನ್ನು ಬರೆದ ಮಾನ್ಯ ಮಿತ್ರರು ಹೀಗೆ ಬರೆಯುತ್ತಾರೆ :

ನೀವು ಪ್ರಸ್ತಾಪಿಸಿದ ಮೂರು ಉದಾಹಣೆಗಳಲ್ಲಿ ಡಾ|| ಬ್ಲೇಸರ್ ಅವರ ವಿಷಯವನ್ನು ಮಾತ್ರ ವಿಮರ್ಶೆ ಮಾಡಿದೀರಿ. ಉಳಿದ ಎರಡರ ವಿಚಾರವಾಗಿ —ಅಂದರೆ ಪ್ಯಾರಿಸ್ ನಗರದಲ್ಲಿ ನಡೆದ ನಟಿ ಕೊಲೆಮಾಡಿದ ಪ್ರಸಂಗ— ಡೆನ್ಮಾರ್ಕಿನ ಕಾನೂನು—ಇವುಗಳ ಬಗ್ಗೆ ತಮ್ಮ ಅಭಿಪ್ರಾಯವನ್ನು ತಿಳಿಸಿಲ್ಲ. ಬಿಟ್ಟುಹೋದ ಈ ಎರಡು ವಿಷಯಗಳನ್ನು ಕುರಿತು ನಿಮ್ಮ ನೈತಿಕ ಸಿದ್ಧಾಂತ ಗಳ ದೃಷ್ಟಿಯಿಂದ ನಿಮ್ಮ ತೀರ್ಮಾನವನ್ನು ವಿಶದಗೊಳಿಸಿದರೆ ನಾನೂ ಇತರ ವಾಚಕರೂ ಕೃತಜ್ಞರಾಗಿರುವೆವು.

ನನ್ನ ಅಭಿಪ್ರಾಯದಲ್ಲಿ ಇಂತಹ ಕೊಲೆ—ಸದುದ್ದೇಶದಿಂದ ಮಾಡಿದ್ದರೆ —ನನ್ನ ಅರ್ಥದ ಪ್ರಕಾರ ಕೊಲೆಯೆಂದು ಎನಿಸಿಕೊಳ್ಳಲಾರದು. ಆದರೆ ಮೂರನೆಯವರು ಯಾರಾದರೂ ಹೀಗೆ ಮಾಡಿದ್ದರೆ ನನಗೆ ಇದು ಸದುದ್ದೇಶವೇ ಎಂದು ತೀರ್ಮಾನಿಸಲು ಸಾಕಷ್ಟು ಸಾಮುಗ್ರಿ ಇಲ್ಲದುದರಿಂದ, ಇದು ಸರಿ ಎಂದು ಹೇಳುವಷ್ಟು ಹೊಣೆಯನ್ನು ಹೊರಲಾರೆ. ಇದರ ಸಮರ್ಥನೆ ಕೇವಲ ಉದ್ದೇಶ್ಯದ ಮೇಲೆ ಅವಲಂಬಿಸುತ್ತದೆ. ದೇವರಲ್ಲದೆ ಬೇರೆ ಯಾರೂ ಉದ್ದೇಶ್ಯ ವನ್ನು ನಿರ್ದುಷ್ಟವಾಗಿ ಗ್ರಹಿಸಲು ಸಾಧ್ಯವಿಲ್ಲ. ಪ್ರತಿಯೊಬ್ಬರೂ ಕಾರ್ಯಕ್ಕೆ ಪೂರ್ಣ ಜವಾಬ್ದಾರಿಯನ್ನೂ ವಹಿಸಬೇಕು—ಅದರ ಫಲಕ್ಕೆ ಸಿದ್ಧವಾಗಿರಬೇಕು. ಡೆನ್ಮಾರ್ಕಿನ ಕಾನೂನು ಈ ದೃಷ್ಟಿಯಿಂದ ಸರಿಯೆಂದು ಹೇಳಲು ಸಾಧ್ಯವಿಲ್ಲ. ಯಾತನೆಯಲ್ಲಿರುವವನು ಸಾಯಲು ಇಚ್ಛಿಸುತ್ತಾನೆಂದು ಕೊಲೆಯನ್ನು ಸಮರ್ಥನೆ ಮಾಡುವುದು ಬಹಳ ಅಪಾಯಕರವೆಂದು ನನಗನಿಸುತ್ತದೆ. ಅತಿ ಯಾತನೆಯನ್ನು ಅನುಭವಿಸುವುದಕ್ಕಿಂತಲೂ ಸಾಯುವುದೇ ಮೇಲೆಂದು ಅನೇಕ ವೇಳೆ ಆ ಕ್ಷಣದಲ್ಲಿ ರೋಗಿಗಳು ಹೇಳಬಹುದು. ಆದರೆ ಗುಣವಾದ ಬಳಿಕ ಆತನೇ ತನ್ನ ಮಾತನ್ನು ನಡೆಸದೆ ತನ್ನನ್ನು ಜೀವಂತವಾಗಿ ಬಿಟ್ಟುದಕ್ಕಾಗಿ ಬಹಳ ಕೃತಜ್ಞನಾಗಿರಬಹುದು. ಬದುಕಿಸುವುದಕ್ಕೆ ಸಾಧ್ಯವಿಲ್ಲವೆಂದು ಖಚಿತ ವಾಗಿ ತಿಳಿದಮೇಲೆ ಅಂತಹ ಪ್ರಾಣವನ್ನು ತೆಗೆಯುವುದೇ ಉತ್ತಮ. ಉದಾ

ಹರಣೆಗೆ, ಯುದ್ಧಭೂಮಿಯಲ್ಲಿ ವಿಪರೀತವಾದ ಗಾಯಕ್ಕೆ ಗುರಿಯಾಗಿ ವೈದ್ಯಕೀಯ ಸಹಾಯವೇ ಇಲ್ಲದಿರುವಾಗ, ಆತನು ಸಾಯುವುದು ನಿಶ್ಚಯ ವಿದ್ದಾಗ, ಆತನ ಜೊತೆಗಾರನು ಗಾಯಗೊಂಡವನ ಪ್ರಾಣವನ್ನು ತೆಗೆಯ ಬಹುದು. ಇಲ್ಲಿ ಕಾರಣವೇನೆಂದರೆ ಗಾಯಗೊಂಡವನ ಇಚ್ಛೆಯಲ್ಲ—ಅವನು ತೀರ ಅಸಹಾಯನಾಗಿ ನರಳುತ್ತ ಯಾವ ವೈದ್ಯಕೀಯ ಸಹಾಯವಾಗಲಿ ಹೆರರ ಪ್ರೀತಿಯ ಉಪಚಾರವಾಗಲಿ ಇಲ್ಲದೆ ನಿಧಾನವಾಗಿ ಪ್ರಾಣವನ್ನು ಕಳೆದು ಕೊಳ್ಳಲೇಬೇಕಾಗುವುದೆಂದು. ಇಲ್ಲಿ ತನ್ನ ಜೊತೆಗಾರನು ಆ ಗಾಯಗೊಂಡವನ ಶುಶ್ರೂಷೆಯನ್ನು ಮಾಡಲಾಗದವನೆಂದು ಊಹಿಸಬೇಕು.

(ಯಂಗ್ ಇಂಡಿಯಾ, ೩೦-೧೨-೧೯೨೬)

## ಮತ್ತೆ ಅಹಿಂಸೆ

ಮ್ಯಾಂಡಲೆಯ ಒಬ್ಬ ಎಂ.ಬಿ.ಬಿ.ಎಸ್. ಪದವೀಧರರು ಹೀಗೆಂದು ಬರೆಯುತ್ತಾರೆ :

೯-೧೨-೨೬ರಲ್ಲಿ ಪ್ರಕಟವಾದ 'ಯಂಗ್ ಇಂಡಿಯಾ' ಪತ್ರಿಕೆಯಲ್ಲಿ ಡಾ|| ಹಾರೊಲ್ಡ್ ತಮ್ಮ ಮಗಳಿಗೆ ತನ್ನ ಅಂತಿಮ ಕಾಲ ಸಮಿಾಪಿಸಿದಾಗ ಆತ ಕಾಲವಾದನಂತರ ಬೇರೆ ಯಾರೂ ಆಕೆಗೆ ರಕ್ಷಕರಿರಲಾರರೆಂಬ ಕಾರಣ ದಿಂದ ಕ್ಲೋರೋಫಾರ್ಮ್ ಕೊಟ್ಟುದಕ್ಕೆ ಆ ಡಾಕ್ಟರರು ವಿಚಾರಣೆಗೆ ಗುರಿ ಯಾಗಿ ಬಿಡುಗಡೆಯಾದರೆಂಬ ವಿಷಯ ಯಾವುದೋ ಪತ್ರಿಕೆಯಿಂದ ತೆಗೆದು ಹಾಕಿರುವ ಸುದ್ದಿ ಇದೆ. ಡಾ|| ಬ್ಲೇಸರ್ ಅವರ ವಕೀಲರು ಮಿ|| ಹೌರಿ ಅವರು ಈ ರೀತಿ ವಾದಿಸಿದರು: 'ಆ ಹುಡುಗಿಯು ಬೇರೊಬ್ಬರಿಗೆ ಭಾರವಾಗಿರದಂತೆ ಬ್ಲೇಸರ್ ಆಕೆಯನ್ನು ಕೊಂದುದು ನ್ಯಾಯಸಮ್ಮತ ಮತ್ತು ಸರಿಯಾದ ಕಾರ್ಯ.' ಅದರ ಮೇಲೆ ನೀವು ಬರೆಯುತ್ತ ಡಾ|| ಬ್ಲೇಸರ್‌ರವರ ವರ್ತನೆ ಸರಿಯಾದು ದಲ್ಲ, ಏಕೆಂದರೆ ಇತರ ಜನರ ಕರುಣೆಯ ವಿಷಯದಲ್ಲಿ ಆತನಿಗೆ ನಂಬಿಕೆ ಇರಲಿಲ್ಲ. ತನ್ನ ಮಗಳನ್ನು ಯಾರೂ ಕಾಪಾಡಿರಲಾರರೆಂಬ ಆತನ ಊಹೆ ನಿಷ್ಕಾರಣವಾದುದು ಎಂದು ಟೀಕೆ ಮಾಡಿದೀರಿ. ಈ ಅಭಿಪ್ರಾಯವನ್ನು ಮಂಡಿಸಿದುದರಲ್ಲಿ ನೀವು ಸರಿಯಾದ ವಕೀಲರಂತೆ ವಾದಿಸಿಲ್ಲ. ಇದು ಸಾಮಾನ್ಯ

ವಿಷಯವಲ್ಲವಾದುದರಿಂದ ಇದನ್ನು ಮತ್ತೊಮ್ಮೆ ವಿಚಾರ ಮಾಡಬೇಕೆಂದು ಪ್ರಾರ್ಥಿಸುತ್ತೇನೆ. ಏಕೆಂದರೆ ಸಮಾಜದವರು ಭಾರ ಹೊರುವರೆಂಬ ವಿಶ್ವಾಸ ವಿರುವ ಮಾತ್ರದಿಂದಲೇ ಅಪ್ರಯೋಜಕವಾದ ಒಂದು ಭಾರವನ್ನು ಸಮಾಜದ ಮೇಲೆ ನೀವು ಹೊರಿಸಲು ಅಳುಕುತ್ತಿಲ್ಲವೆಂಬುದು ಸ್ಪಷ್ಟವಾಗುತ್ತದೆ. ನಿಮ್ಮ ವಿಶ್ವಾಸ ನಿರುಪಯುಕ್ತವಾದುದು, ಹಾನಿಕರವೂ ಹೌದು. ಆ ವಿಶ್ವಾಸ ನಮ್ಮಲ್ಲಿ ಇಲ್ಲ—ಕ್ಷಮಿಸಿ. ನೀವು ತಾಳುವ ವಿಶ್ವಾಸ ಭಾರತಹಿತದೃಷ್ಟಿಯಿಂದ ಬಹಳ ಹಾನಿಕರವೆಂಬುದು ನನ್ನ ನಿಜವಾದ ನಂಬಿಕೆ. ಡಾ|| ಬ್ಲೇಸರ್ ಅವರ ವಕೀಲರು ಏನು ವಾದವನ್ನು ಮಾಡಿದರು—ಗಮನವಿಟ್ಟು ನೋಡಿ. ಅಸಹಾಯ ಳಾದ, ಅಪ್ರಯೋಜಕಳಾದ ಒಬ್ಬ ಹುಡುಗಿ ಸಮಾಜಕ್ಕೆ ಭಾರವಾಗಿ ಉಳಿಯ ದಂತೆ ಬ್ಲೇಸರ್ ಮಾಡಿದ ಕೃತ್ಯ ನ್ಯಾಯಸಮ್ಮತವೆಂದರು. ಸಮಾಜ ಆ ಹುಡುಗಿಯನ್ನು ಕಾಪಾಡಿರಬಹುದೇ ಇಲ್ಲವೆ ಎನ್ನುವುದು ಬೇರೆ ಪ್ರಶ್ನೆ. ನಾನು ನಿಮ್ಮನ್ನು ಒಂದು ಪ್ರಶ್ನೆ ಕೇಳಲು ಬಯಸುತ್ತೇನೆ: 'ಭಾರತದೇಶದ ಸೇವೆ ಯನ್ನು ಅನೇಕ ವರ್ಷಗಳು ಮಾಡಿದ ಬಳಿಕ ನೀವು ಕುರುಡರೂ, ಮೂಕರೂ, ಕಿವುಡರೂ—ಅಂದರೆ ಸಮಾಜಕ್ಕೆ ಪೂರ್ತಿ ಅಪ್ರಯೋಜಕರಾಗುತ್ತೀರೆಂದು ತಿಳಿಯೋಣ. ಆಗಲೂ ನೀವು ಪ್ರಾಣವನ್ನುಳಿಸಿಕೊಳ್ಳುವುದಕ್ಕಾಗಿ, ನಿಮ್ಮ ಹಿಂದಿನ ಸೇವೆಗಾಗಿ ಸಮಾಜವು ನಿಮ್ಮನ್ನು ಕಾಪಾಡಬೇಕೆಂದು ಬಯಸು ವಿರಾ ? ಅಹಿಂಸೆಯ ವಿಚಾರದಲ್ಲಿ ನಿಮ್ಮ ವಿಚಿತ್ರ ಅಭಿಮತಗಳೇನಿರಬಹುದೊ ನನಗೆ ಗೊತ್ತಿಲ್ಲ. ಆದರೆ ನನ್ನ ಮಟ್ಟಿಗೆ ಉತ್ತರವು ಸ್ಪಷ್ಟವಾಗಿದೆ. ಅನೇಕ ವರ್ಷಗಳು ಸೇವೆಯನ್ನು ಸಲ್ಲಿಸಿದ ಬಳಿಕ ನಾನು ತೀರ ಅಪ್ರಯೋಜಕನಾದರೆ ನಾನು ಸಮಾಜಕ್ಕೆ ಭಾರವಾಗುವುದಕ್ಕೆ ಬದಲಾಗಿ ನನ್ನ ಪ್ರಾಣ ತೆಗೆದುಹಾಕು ವುದೇ ಮೇಲು. ಏಕೆಂದರೆ ನಾನು ಪ್ರೀತಿಸುವ ಸಮಾಜದ ಮೇಲಿನ ಭಾರವನ್ನು ಕಡಮೆ ಮಾಡುವುದರಿಂದ ಸಮಾಜಕ್ಕೆ ಉಪಕಾರ ಮಾಡುತ್ತೇನೆಂದು ಸಕಾರಣ ವಾಗಿ ನಾನು ನಂಬುತ್ತೇನೆ. ಪ್ರಯೋಜನಕಾರಿಯಾಗಬಲ್ಲ ಮಾನವರನ್ನೂ, ಪ್ರಾಣಿಗಳನ್ನೂ ಕಾಪಾಡುವುದು ಸಮಾಜದ ಕರ್ತವ್ಯವೆಂಬುದು ಬೇರೆ ವಿಷಯ.'

ಡಾ|| ಬ್ಲೇಸರ್ ಅವರನ್ನು ಆ ಮೊಕದ್ದಮೆಯಲ್ಲಿ ಪಂಚಾಯತುದಾರರು ಬಿಡುಗಡೆ ಮಾಡಿದುದು ಸರಿಯೆಂದೇ ನನ್ನ ನಂಬಿಕೆ. ಆದರೂ ಕೇವಲ ನೈತಿಕ

ದೃಷ್ಟಿಯಿಂದ ವಿಚಾರಮಾಡಿದರೆ ಡಾ|| ಬ್ಲೇಸರ್ ಅಪರಾಧವನ್ನು ಮಾಡಿದರು. ನನಗೆ ಪತ್ರ ಬರೆದವರು ಕೇವಲ ಉಪಯುಕ್ತತೆಯ ವಾದವನ್ನೇ ಮಂಡಿಸುವ ಉತ್ಸಾಹದಲ್ಲಿ ಅವರು ಪ್ರತಿಪಾದಿಸುವ ಸಿದ್ಧಾಂತದ ಭಯಾನಕವಾದ ಪರಿಣಾಮ ಗಳನ್ನೂ ಅರ್ಥವನ್ನೂ ಮರೆಯುತ್ತಿದಾರೆ. ನಿಜವಾಗಿಯೂ ಆ ಸಿದ್ಧಾಂತವು ಅವರ ವೈದ್ಯಕೀಯವೃತ್ತಿಗೇ ಧಕ್ಕೆಯುಂಟುಮಾಡೀತು. ಉದಾಹರಣೆಗೆ, ಒಬ್ಬ ಕಿರಿಯ ವೈದ್ಯರು (ಹೆಚ್ಚು ಅನುಭವವಿಲ್ಲದವರು) ಒಬ್ಬ ರೋಗಿಯನ್ನು ಗುಣ ಮಾಡಲು ಸಾಧ್ಯವಿಲ್ಲವೆಂದು ನಿರ್ಧರಿಸಿ, ಅವನು ಸಮಾಜಕ್ಕೆ ಹೊರೆಯಾಗ ಬಾರದೆಂದು ಕ್ಲೋರೋಫಾರ್ಮ್ ಕೊಟ್ಟು ಕೊಂದರೆಂದು ಇಟ್ಟುಕೊಳ್ಳೋಣ. ಅನಂತರ ಹಿರಿಯರಾದ ಮತ್ತೊಬ್ಬ ವೈದ್ಯರು ಆ ರೋಗಿಯನ್ನು ಗುಣಪಡಿಸ ಬಹುದಾಗಿತ್ತೆಂದು ಅಭಿಪ್ರಾಯಪಟ್ಟರೆ, ಆ ಕಿರಿಯ ವೈದ್ಯರ ವರ್ತನೆಯ ವಿಷಯದಲ್ಲಿ ನಮ್ಮ ಪತ್ರಲೇಖಕರು ಏನು ಹೇಳಿಯಾರು? ಯಾವ ರೋಗ ವನ್ನೂ ಗುಣಪಡಿಸಲು ಸಾಧ್ಯವಿಲ್ಲವೆಂದು ಹೇಳಲಾರೆವು—ಇದೇ ಅಲ್ಲವೇ ವೈದ್ಯಶಾಸ್ತ್ರದ ಹೆಮ್ಮೆ? ಈಗ ನನ್ನ ವಿಷಯದಲ್ಲಿ ನಾನು ಅಪ್ರಯೋಜಕನಾಗಿ, ಕೇವಲ ಹೊರೆಯಾಗಿ ಉಳಿದಾಗಲೂ (ನಾನು ಆಗಲೂ ಜೀವಿಸಬೇಕೆಂಬ ಇಚ್ಛೆ ಉಳ್ಳವನಾಗಿದ್ದರೆ) ನನ್ನ ದೇಶಬಾಂಧವರು ನನ್ನನ್ನು ಕಾಪಾಡುವರೆಂಬ ನಿರೀಕ್ಷೆ ನನಗಿದೆ. ಅಂತಹ ಘಟನೆ ಸಂಭವಿಸಿದಾಗ ನನ್ನ ದೇಶದ ಜನ ನನ್ನನ್ನು ಪೋಷಿಸುವರೆಂಬ ಪೂರ್ಣ ಭರವಸೆ ನನಗಿದೆ. ಎಲ್ಲ ಕುಷ್ಠರೋಗಿಗಳನ್ನೂ, ಕುರುಡರನ್ನೂ, ಕಿವುಡರನ್ನೂ ಕ್ಲೋರೋಫಾರ್ಮ್ ಕೊಟ್ಟು ಒಂದು ರಾತ್ರಿ ಯಲ್ಲಿ ಮುಗಿಸಿಬಿಡಲು ಪತ್ರಲೇಖಕರು ಬಯಸುವರೋ ಏನೋ ನಾನು ಕಾಣೆ. ಡ್ಯಾಮಿಯನ್ ಎಂಬಾತ ಕುಷ್ಠರೋಗಿಯಾಗಿದ್ದ. ಮಿಲ್ಟನ್ ಮಹಾಕವಿ ಕುರುಡನಾಗಿದ್ದ. ಮನುಷ್ಯನೆಂದರೆ ಕೇವಲ ಅವನ ದೇಹ ಮಾತ್ರವಲ್ಲ; ಅದಕ್ಕೂ ಹಿರಿದಾದ ವಸ್ತು ಅವನು.

ಮುಂದಿನ ಪ್ರಶ್ನೆ ಹೀಗಿದೆ :

'ಅದೇ ಲೇಖನದಲ್ಲಿ ನೀವು ಅಹಿಂಸೆಯ ಉಪಾಸಕ ಉಪಯುಕ್ತತೆಯ ಸೂತ್ರಕ್ಕೆ ಒಪ್ಪಲಾರನೆಂದು ಬರೆದಿರಿ. ಎಲ್ಲರ ಉತ್ತಮೋತ್ತಮ ಶ್ರೇಯಸ್ಸಿಗಾಗಿ ಆತನು ದುಡಿಯುವನೆಂದೂ, ಈ ಧ್ಯೇಯವನ್ನು ಸಾಧಿಸುವುದರಲ್ಲಿ ಮಡಿಯಲೂ

ಸಿದ್ಧನಿರುವನೆಂದು ಹೇಳುತ್ತೀರಿ. ಇತರರು ಬದುಕಲೆಂದು ತಾನು ಸಾಯಲು ಸಿದ್ಧನಾಗಿರುತ್ತಾನೆಂದು ಅರ್ಥವಾಗುತ್ತದೆ. ಹಾಗೆಂದರೆ ಒಂದು ವಿಷಸರ್ಪವು ನಿಮ್ಮನ್ನು ಕಡಿದರೆ ಹಾವನ್ನು ಕೊಂದು ಆತ್ಮರಕ್ಷಣೆಯನ್ನು ಮಾಡಿಕೊಳ್ಳುವ ಬದಲು, ಆ ಹಾವನ್ನು ಬದುಕಿರುವಂತೆ ಮಾಡಲು ನೀವು ಸಾಯುವಿರಿ ಎಂದು ನಾನು ಎಣಿಸಲೇ? ಈ ಎಣಿಕೆ ಸರಿಯಾದ ಪಕ್ಷಕ್ಕೆ ಹೀಗೆ ಹಾವನ್ನು ಬದುಕಿಸಿ, ಪ್ರಾಣವನ್ನರ್ಪಿಸಿದರೆ ನೀವು ದೊಡ್ಡ ಪಾಪಕ್ಕೆ ಗುರಿಯಾಗುವಿರಿ ಎಂದು ನನ್ನ ಅಭಿಪ್ರಾಯ. ಹೀಗೆ ಮಾಡುವುದರಿಂದ ಎಲ್ಲರ ಉತ್ತಮ ಹಿತ ಎಂಬ ಸಿದ್ಧಾಂತ ನೆರವೇರುವುದಕ್ಕಾಗಿ ಕೆಟ್ಟ ಜೀವವನ್ನು ಬದುಕಲು ಬಿಟ್ಟು ನಿಮ್ಮ ಪ್ರಾಣವನ್ನು ಕಳೆದುಕೊಳ್ಳುವುದರಿಂದ ದೇಶಕ್ಕೆ ದೊಡ್ಡ ಹಾನಿಯನ್ನು ಮಾಡುವಿರಿ. ಈಗಲಾದರೂ ಈ ವಿಷಯ ನಿಮಗೆ ಸ್ಪಷ್ಟವಾಗಲಿಲ್ಲವೆ? ಎಲ್ಲರ ಕಲ್ಯಾಣವೆಂಬ ನಿಮ್ಮ ಅಭಿಪ್ರಾಯವನ್ನು ಬದಲಾಯಿಸಿಕೊಳ್ಳಬಾರದೆ? ಪ್ರಪಂಚಕ್ಕೆಲ್ಲ ಉಪಕಾರಮಾಡಬೇಕೆಂಬ ಪ್ರಯತ್ನದಲ್ಲಿ ಭಾರತಕ್ಕೆ ಹಾನಿ ಮಾಡಬಹುದೆಂಬ ಭಯ ನನಗಿದೆ. ನೀವು ಸಿದ್ಧಪುರುಷರಲ್ಲವೆಂದು ಒಪ್ಪಿ ಕೊಳ್ಳುತ್ತೀರಿ. ಆದುದರಿಂದ ಪ್ರಪಂಚಕ್ಕೆಲ್ಲ ಉಪಕಾರ ಮಾಡುವುದು ನಿಮಗೆ ಸಾಧ್ಯವಿಲ್ಲ. ಇಡೀ ಭಾರತದೇಶಕ್ಕೂ ಸಹ ಎಲ್ಲ ಬಗೆಯಲ್ಲಿಯೂ ನೀವು ಉಪಕಾರಮಾಡುವುದೂ ಸಾಧ್ಯವಿಲ್ಲ. ಆದುದರಿಂದ ಬಹುಜನರ ಬಹುಮಟ್ಟಿನ ಹಿತವನ್ನು ಸಾಧಿಸುವುದರಲ್ಲಿಯೇ ತೃಪ್ತರಾಗಿರುವುದು ಯುಕ್ತ. ಕೆಟ್ಟವರು, ಒಳ್ಳೆಯವರು, ಪ್ರಯೋಜಕರು, ಅಪ್ರಯೋಜಕರು, ಮಾನವ, ಮೂಕಪ್ರಾಣಿ —ಇತ್ಯಾದಿಯಾಗಿ ಯಾವ ತಾರತಮ್ಯವೂ ಇಲ್ಲದೆ ಎಲ್ಲರ ಹಿತಸಾಧನೆಯೆಂಬ ಸೋಗು ಹಾಕಿಕೊಳ್ಳಬೇಡಿ.'

ಈ ಪ್ರಶ್ನೆಗೆ ಉತ್ತರ ಹೇಳಲು ನನಗೆ ಇಷ್ಟವಿಲ್ಲ. ನನ್ನ ತತ್ತ್ವದಲ್ಲಿ ಶ್ರದ್ಧೆ ಇಲ್ಲವೆಂದಲ್ಲ—ನನ್ನಲ್ಲಿ ಧೈರ್ಯವಿಲ್ಲ. ಆದರೆ ನನ್ನ ಶ್ರದ್ಧೆಯನ್ನು ಮುಚ್ಚಿಡಲಾರೆ —ಸತ್ತ್ವಪರೀಕ್ಷೆ ಒದಗಿದ ಕಾಲಕ್ಕೆ ಅದಕ್ಕನುಗುಣವಾಗಿ ನಡೆದುಕೊಳ್ಳಲು ನನಗೆ ಧೈರ್ಯವಿಲ್ಲದಿದ್ದರೂ ಚಿಂತೆಯಿಲ್ಲ. ನನ್ನ ಉತ್ತರ ಹೀಗಿದೆ: ಒಂದು ಹಾವಿನ ಪ್ರಾಣವನ್ನು ತೆಗೆದು ನಾನು ಬದುಕಿರಬೇಕೆಂಬ ಇಷ್ಟ ನನಗಿಲ್ಲ. ಅದನ್ನು ಕೊಲ್ಲುವುದಕ್ಕಿಂತ ನನ್ನ ಪ್ರಾಣವನ್ನು ಕಳೆದುಕೊಳ್ಳುವೆನು. ಆದರೆ ದೇವರು ಕ್ರೂರ ಪರೀಕ್ಷೆ ನನಗೆ ಒದಗಿಸಿದಾಗ, ಹಾವು ನನ್ನ ಮೇಲೆ ಬರುವಂತೆ

ಮಾಡಿದಾಗ, ನನಗೆ ಸಾಯಲು ಧೈರ್ಯವಿಲ್ಲದೆ ಹೋಗಬಹುದು, ನನ್ನ ಪಾಶವೀ ಸ್ವಭಾವವು ಮೇಲಕ್ಕೆ ಬಂದು ಈ ನಶ್ವರ ದೇಹವನ್ನು ಉಳಿಸಿಕೊಳ್ಳಲು ನಾನು ಹಾವನ್ನು ಕೊಲ್ಲಬಹುದು. ನಾನು ಅಹಿಂಸಾ ತತ್ತ್ವವನ್ನು ಪೂರ್ತಿಯಾಗಿ ಮೈಗೂಡಿಸಿಕೊಂಡಿಲ್ಲವೆಂದು ಒಪ್ಪಿಕೊಳ್ಳುತ್ತೇನೆ. ನಾನಿಚ್ಛಿಸುವಂತೆ ಹಾವುಗಳೊಂದಿಗೆ ಸ್ನೇಹವನ್ನು ಬೆಳೆಯಿಸಿ ಅವುಗಳ ಭಯವನ್ನು ಸಂಪೂರ್ಣವಾಗಿ ತೊರೆದೆನೆಂದು ಖಂಡಿತವಾಗಿ ಹೇಳುವ ಸ್ಥಿತಿಯಲ್ಲಿ ನಾನಿಲ್ಲ. ನಮ್ಮಲ್ಲಿಯೇ ನಾವು ಭಾವಿಸಿಕೊಳ್ಳುವ ವಿಷಮಯವಾದ ದುರಾಲೋಚನೆಗಳಿಗೆ ಈ ಸರ್ಪಗಳೂ ಸಿಂಹಶಾರ್ದೂಲಗಳೂ ದೇವರ ಪ್ರತಿಧ್ವನಿಯೆಂದು ನನ್ನ ದೃಢನಂಬಿಕೆ. ಆನಾ ಕಿಂಗ್ಸ್‌ಫರ್ಡ್ ಎನ್ನುವವರು ಪ್ಯಾರಿಸಿನ ರಸ್ತೆಗಳಲ್ಲಿ ಮನುಷ್ಯರನ್ನು ಹುಲಿಗಳಾಕೃತಿಯಲ್ಲಿ ಕಂಡರಂತೆ! ಎಲ್ಲ ಪ್ರಾಣವೂ ಒಂದೇ ಎಂದು ನಾನು ನಂಬುತ್ತೇನೆ. ನಮ್ಮ ಚಿಂತನೆಗಳು ಆಕೃತಿಗಳಾಗುತ್ತವೆ. ಹುಲಿಗಳೂ, ಹಾವುಗಳೂ ನಮ್ಮ ಸಂಬಂಧಿಕರು. ನಮ್ಮಲ್ಲಿ ದುರಾಲೋಚನೆಗಳೂ, ದುಷ್ಟ ಚಿಂತನೆಗಳೂ, ಕಾಮವಿಚಾರಗಳೂ ನೆಲೆಗೊಂಡಿರಬಾರದೆಂದು ಅವು ನಮ್ಮನ್ನು ಎಚ್ಚರಿಸುತ್ತವೆ. ಈ ಪ್ರಪಂಚದಿಂದ ಎಲ್ಲ ವಿಷಸರ್ಪಗಳನ್ನೂ ಜಂತುಗಳನ್ನೂ ಓಡಿಸಿಬಿಡಬೇಕೆಂದು ನಾನು ಇಚ್ಛಿಸಬೇಕಾದರೆ ನನ್ನಲ್ಲಿರುವ ವಿಷಮಯ ವಿಚಾರಗಳನ್ನು ನಾನು ತೊಡೆದುಹಾಕಬೇಕು. ವಿಷಜಂತುಗಳೆಂದೆನಿಸಿಕೊಂಡಿರುವ ಈ ಸರ್ಪಗಳನ್ನೂ ಇತರ ಪ್ರಾಣಿಗಳನ್ನೂ ಕೊಲ್ಲಲು ಬಯಸುವುದರಿಂದ, ಈ ಅಜ್ಞಾನಾವಸ್ಥೆಯಲ್ಲಿ, ಈ ದೇಹವನ್ನು ಹೇಗಾದರೂ ಉಳಿಸಿಕೊಳ್ಳಬೇಕೆಂಬ ಆಸೆಯಲ್ಲಿ ಇದನ್ನು ನಾನು ಸಾಧಿಸಲಾರೆ. ವಿಷಜಂತುಗಳು ಬಂದರೂ ನನ್ನನ್ನು ರಕ್ಷಿಸಿಕೊಳ್ಳಲು ಪ್ರಯತ್ನವನ್ನು ಮಾಡದೆ ನಾನು ಸತ್ತೆನೆಂದರೆ ಉತ್ತಮನೂ, ಪೂರ್ಣನೂ ಆದ ಮನುಷ್ಯನಾಗಿ ಮತ್ತೆ ಹುಟ್ಟುವೆನು. ಆ ದೃಢನಂಬಿಕೆ ನನ್ನಲ್ಲಿದ್ದರೆ ನನ್ನಂತೆ ಪ್ರಾಣಿಯಾದ ಒಂದು ಹಾವನ್ನಾದರೂ ನಾನು ಹೇಗೆ ಕೊಂದೇನು? ಆದರೆ ಇದು ತತ್ತ್ವವಿಚಾರ. ಈ ವಿಚಾರಕ್ಕೆ ಅನುಗುಣವಾಗಿ ನಾನು ಜೀವಿಸುವಂತೆ ನನಗೆ ಭಗವಂತನು ಶಕ್ತಿಯನ್ನು ಕೊಡಲೆಂದು ನಾನು ಪ್ರಾರ್ಥಿಸುತ್ತೇನೆ. ನನ್ನ ವಾಚಕರೂ ನನ್ನೊಡನೆ ಪ್ರಾರ್ಥನೆಯನ್ನು ಸಲ್ಲಿಸಲಿ. ಏಕೆಂದರೆ ತತ್ತ್ವವಿಚಾರ ಜೀವಂತವಾಗದಿದ್ದರೆ ಪ್ರಾಣವಿಲ್ಲದ ದೇಹದಂತೆಯೇ ಆಗುವುದು.

ಈ ನಮ್ಮ ದೇಶದಲ್ಲಿ ತತ್ತ್ವವಿಚಾರ ಬೇಕಾದಷ್ಟಿದೆ. ಅದಕ್ಕೆ ಅನುಗುಣವಾದ ಜೀವನದ ಅನುಷ್ಠಾನ ಅಷ್ಟಿಲ್ಲವೆಂದು ನಾನು ಬಲ್ಲೆ. ಮನುಷ್ಯನ ಆಚರಣೆಗಳನ್ನು ರೂಪಿಸಬೇಕಾದ ನಿಯಮಗಳ ವಿಷಯದಲ್ಲಿ ನಾವಿನ್ನೂ ಸಂಶೋಧನೆ ಮಾಡಬೇಕಾಗಿದೆ. ಈ ಸಂಶೋಧನೆಯು ಅಗತ್ಯ. ಸ್ಥಿರವಾದ ನಿಯಮಗಳನುಸಾರ ಸಾಗತಕ್ಕವು. ಈ ಸಂಶೋಧನೆಯನ್ನು ಕೊಲ್ಲುವುದಕ್ಕಿಂತಲೂ ಸಾಯುವುದರಿಂದಲೇ ನಾವು ಮುಂದುವರಿಸುವೆವು. ನಾವು ಸತ್ಯದ ಹಾಗೂ ಪ್ರೇಮದ ಜೀವಂತ ಪ್ರತೀಕಗಳಾಗಬೇಕು. ಏಕೆಂದರೆ ದೇವರು ಸತ್ಯಸ್ವರೂಪನು, ಪ್ರೇಮಸ್ವರೂಪನು. (ಯಂಗ್ ಇಂಡಿಯಾ, ೧೪–೪–೧೯೨೭)

## ಎತ್ತುಗಳಿಗೆ ಚಿತ್ರಹಿಂಸೆ

ಒಬ್ಬ ಇಂಗ್ಲೀಷ್ ಮಹಿಳೆಯು ಹೀಗೆಂದು ಬರೆಯುತ್ತಾಳೆ :

'ಈ ದೇಶದ ಜನರು—ಮುಖ್ಯವಾಗಿ ಹಿಂದೂಗಳು—ಗೋರಕ್ಷಣೆಯನ್ನು ಮಾಡುತ್ತೇವೆಂದು ಹೇಳಿಕೊಳ್ಳುತ್ತಾರೆ. ಎತ್ತುಗಳಿಗೆ ಹಿಂಸೆ ಕೊಡುವುದು ಅವರಿಗೆ ರೂಢಿಯಾಗಿಬಿಟ್ಟಿದೆ. ಇದನ್ನು ಕಂಡು ನನಗೆ ಬಹಳ ದುಃಖವೂ ಕಳವಳವೂ ಉಂಟಾಗಿದೆ. ಈ ಪ್ರಾಣಿಗಳು ಭಾರಗಳನ್ನು ಎಳೆಯುತ್ತ ಸಾಗುತ್ತಿರುವಾಗ ಅವುಗಳ ಬಾಲವನ್ನು ತಿರುವಿಹಾಕಿ ಮುರಿಯುವಂತೆಯೂ ವಿಕಾರಗೊಳ್ಳುವಂತೆಯೂ ಮಾಡುವ ದೃಶ್ಯ ಈ ದೇಶಕ್ಕೆ ಹೊಸದಾಗಿ ಬರುವವರು ಯಾರೂ ಮರೆಯುವಂತಿಲ್ಲ. ಅವನ್ನು ಓಡಿಸುವವರು ಕ್ರೂರವಾಗಿ ತಮ್ಮ ಕೈಗಳಿಂದ ದನಗಳ ಹಿಮ್ಮಡಿಯನ್ನು ಹಿಡಿದು ಬಾಲವನ್ನು ಕಿತ್ತುಹಾಕುವಂತೆ ಹಿಸುಕುವ ರೀತಿ ಹಿಂದೂ ಧರ್ಮಕ್ಕೇ ದೊಡ್ಡ ಅಪಮಾನವನ್ನು ತರುವಂತಹ ದೃಶ್ಯ. ಆ ಬಾಲವು ವಿಕೃತಿಗೊಂಡು ಮುರಿದಂತೆ ಆಗಿರುತ್ತದೆ. ಈ ಮೂಕ ಪ್ರಾಣಿಗಳ ಪರವಾಗಿ ನಿಮ್ಮ ಪತ್ರಿಕೆಯಲ್ಲಿ ಏನಾದರೂ ಬರೆಯಬಾರದೆ? ಹಾಗೆಯೇ ಕೊಲ್ಲುವುದಕ್ಕೆಂದು ಒಯ್ಯುತ್ತಿರುವ ಹುಂಜಗಳನ್ನೂ ಇತರ ಪಕ್ಷಿಗಳನ್ನೂ ಅವುಗಳ ಕಾಲು ಕಟ್ಟಿಹಾಕಿ ತಲೆಕೆಳಗಾಗಿ ನೇತಾಡುವಂತೆ ಹಿಡಿದುಕೊಂಡು ಮೈಲಿಗಳ ದೂರ ಎತ್ತಿಕೊಂಡು ಹೋಗುವರು. ಇದರ ವಿಷಯವನ್ನೂ

ಪ್ರಸ್ತಾಪಿಸಬಾರದೆ? ಇದರೊಂದಿಗೆ ಇಂಗ್ಲೀಷ್ ದನಗಳು ಕೆಲಸಮಾಡುತ್ತಿರುವ ಚಿತ್ರವೊಂದನ್ನು ಕಳುಹಿಸಿದೇನೆ. ಭಾರತೀಯರು ಮೋಟಾರ್‌ಕಾರನ್ನು ತಮ್ಮ ಉಪಯೋಗಕ್ಕಾಗಿ ಬರಮಾಡಿಕೊಂಡಿದಾರೆ. ಹಾಗೆಯೇ ತಮ್ಮ ದನಗಳಿಗೂ ಕೋಗೀರು ಮುಂತಾದ ಸಲಕರಣೆಗಳನ್ನೂ ಬರಮಾಡಿಕೊಳ್ಳಬಾರದೆ?'

ಈ ಮಹಿಳೆಯು ಎಲ್ಲರೂ ಹೀಗೆಯೇ ಕ್ರೂರವಾಗಿ ಚಿತ್ರಹಿಂಸೆ ಮಾಡುವರೆಂಬ ರೀತಿಯಲ್ಲಿ ಸಾಮಾನ್ಯ ಆರೋಪಣೆ ಮಾಡಿದಾರೆ. ಹೀಗೆ ಮಾಡುವವರು ಹತ್ತರಲ್ಲಿ ಒಬ್ಬರಿರಬಹುದು; ಅಷ್ಟೆ. ಆದರೂ—ವಿಶೇಷವಾಗಿ ದೊಡ್ಡ ಪಟ್ಟಣಗಳಲ್ಲಿ—ಈ ಕ್ರೂರವಾದ ನಡವಳಿಕೆಯು ಇರುವುದು ನಿಜ. ಅದನ್ನು ನೋಡುತ್ತ ಏನನ್ನೂ ಮಾಡದೆ ಇತರರು ಉದಾಸೀನರಾಗಿರುವುದೂ ನಿಜ. ಹುಂಜಗಳನ್ನು ಇವರು ಹೇಳುವಂತೆ ತಲೆಕೆಳಗಾಗಿ ಎತ್ತಿಕೊಂಡು ಹೋಗುವುದೂ ಉಂಟು. ಅಹಿಂಸೆಯನ್ನು ಮಾತಾಡುವವರು ನಾವು ಅನೇಕ ವೇಳೆ ಕುಂಬಳಕಾಯಿಯನ್ನು ಕಳೆದುಕೊಂಡು ಸಾಸಿವೆ ಕಾಳಿನ ಲೆಕ್ಕವನ್ನು ಮಾಡುತ್ತೇವೆ. ಒಂದು ಹುಚ್ಚು ನಾಯಿಯನ್ನು ಕೊಂದರೆ ಉದ್ರೇಕಗೊಂಡು ರಂಪಮಾಡುತ್ತೇವೆ; ಆದರೆ ಈ ಪತ್ರದಲ್ಲಿ ವರ್ಣಿಸಿರುವ ಚಿತ್ರಹಿಂಸೆಗಳನ್ನು ಕಂಡು ಉದಾಸೀನರಾಗಿರುತ್ತೇವೆ. ನಾವೇ ಸ್ವತಃ ಕೊಲ್ಲದೆ ಇರುವವರೆಗೂ ನಾವು ಅಹಿಂಸಾತತ್ತ್ವವನ್ನು ಪಾಲಿಸುವುದಾಗಿ ತಿಳಿದುಕೊಂಡಿದೇವೆ. ಇದು ಅಹಿಂಸೆಯ ಆಭಾಸಸ್ವರೂಪವೆಂದು ನನ್ನ ಅಭಿಪ್ರಾಯ. ಯಾವ ಪ್ರಾಣಿಗೇ ಆದರೂ ನೋವನ್ನುಂಟುಮಾಡುವುದಾಗಲಿ, ಅಂತಹ ನೋವಾದಾಗ ಅದನ್ನು ಅಹಿಂಸಾಮಾರ್ಗದಲ್ಲಿ ತಡೆಯದೆ ತಟಸ್ಥರಾಗಿ ನೋಡಿಕೊಂಡಿರುವುದೂ ಅಹಿಂಸಾಧರ್ಮಕ್ಕೆ ವಿರುದ್ಧವಾದ ವರ್ತನೆ. ದೊಡ್ಡ ಪಟ್ಟಣಗಳಲ್ಲಿ ಮೂಕಪ್ರಾಣಿಗಳಿಗೆ ಆಗುತ್ತಿರುವ ಹಿಂಸೆಯನ್ನು ತಡೆಗಟ್ಟಲು ಧಾರ್ಮಿಕ ಸಂಸ್ಥೆಗಳು ಬೇಕಾದಷ್ಟು ತಮ್ಮ ಸಿದ್ಧಾಂತಕ್ಕೆ ಅನುಗುಣವಾದ ಕಾರ್ಯ ಮಾಡಬಹುದು. ನೊಗಕ್ಕೆ ಬದಲಾಗಿ ಪಾಶ್ಚಾತ್ಯ ಪದ್ಧತಿಯಂತೆ ಇತರ ಸಲಕರಣೆಗಳನ್ನು ಎತ್ತುಗಳಿಗೆ ಹಾಕುವ ಸಲಹೆ ಒಳ್ಳೆಯದೆ.

(ಯಂಗ್ ಇಂಡಿಯಾ, ೩೦-೮-೧೯೨೮)

# ಧರ್ಮ – ಅಧರ್ಮ ವಿಚಾರ

ಒಬ್ಬರು ಹೀಗೆ ಬರೆಯುತ್ತಾರೆ :

' ಮೇ ೫ನೇ ದಿನಾಂಕದ ' ಹರಿಜನಬಂಧು ' ಪತ್ರಿಕೆಯಲ್ಲಿ ಮಾನವರಿಗೆ ಅಪಾಯಕರವಾದ ಜಂತುಗಳನ್ನು—ಅಂದರೆ ಚಿರತೆ, ತೋಳ, ಹಾವು, ಚೇಳು ಮುಂತಾದುವನ್ನು ಕೊಲ್ಲುವುದನ್ನು ನಿಮ್ಮ ಅಹಿಂಸೆ ಅಂಗೀಕಾರ ಮಾಡುತ್ತದೆ ಎಂದು ಬರೆದಿದ್ದೀರಿ.

ನಾಯಿ ಮುಂತಾದ ಪ್ರಾಣಿಗಳಿಗೆ ಆಹಾರ ಕೊಡುವುದರಲ್ಲಿ ನಿಮಗೆ ನಂಬಿಕೆ ಇಲ್ಲ. ಗುಜರಾತಿಗಳಲ್ಲದೆ ಇತರರೂ ಹೀಗೆ ಪ್ರಾಣಿಗಳಿಗೆ ಆಹಾರ ಕೊಡುವುದು ಪುಣ್ಯಕಾರ್ಯವೆಂದು ಭಾವಿಸುತ್ತಾರೆ. ಆಹಾರದ ಕೊರತೆ ಇರುವ ಈಗಿನಂತಹ ಸಂದರ್ಭಗಳಲ್ಲಿ ಈ ಭಾವನೆ ನ್ಯಾಯವಾಗಿಲ್ಲದೆ ಇರಬಹುದು. ಆದರೆ ಈ ಪ್ರಾಣಿಗಳಿಂದ ಮನುಷ್ಯನಿಗೆ ಬಹಳ ಪ್ರಯೋಜನ ಉಂಟೆಂದು ನಾವು ನೆನಪಿನಲ್ಲಿಡಬೇಕು. ಅವುಗಳಿಗೆ ಆಹಾರವನ್ನು ಕೊಟ್ಟು ಅವುಗಳಿಂದ ಕೆಲಸ ತೆಗೆದುಕೊಳ್ಳಬಹುದು.

ತಾವು ಶ್ರೀ ರಾಯಚಂದ್‌ಭಾಯಿ ಅವರಿಗೆ ಡರ್ಬನಿನಿಂದ ೨೭ ಪ್ರಶ್ನೆಗಳನ್ನು ಹಾಕಿದ್ದೀರಿಯಷ್ಟೆ. ' ಹಾವು ಕಡಿದರೆ ಒಬ್ಬ ಸಾಧಕನು ಏನು ಮಾಡಬೇಕು ? ' ಎಂದು ಆ ಪ್ರಶ್ನೆಗಳ ಪೈಕಿ ಒಂದು. ಅದಕ್ಕೆ ಅವರ ಉತ್ತರ : ' ಅವನು ಹಾವನ್ನು ಕೊಲ್ಲಬಾರದು—ಅದು ಕಡಿದರೆ ಕಡಿಸಿಕೊಳ್ಳಬೇಕು ' ಎಂದು. ಈಗ ಬೇರೆ ರೀತಿಯಲ್ಲಿ ಏತಕ್ಕೆ ಮಾತನಾಡುತ್ತಿರುವಿರಿ ? '

ಈ ವಿಷಯವನ್ನು ಈಗಾಗಲೇ ನಾನು ಸಾಕಷ್ಟು ಬರೆದಿದ್ದೇನೆ. ಆ ಆ ಸಮಯದಲ್ಲಿ ಹುಚ್ಚು ನಾಯಿಗಳನ್ನು ಕೊಲ್ಲುವುದೇ ಮುಖ್ಯ ವಿಷಯವಾಗಿತ್ತು. ಆ ವಿಷಯದಲ್ಲಿ ಬೇಕಾದಷ್ಟು ಚರ್ಚೆ ನಡೆಯಿತು. ಅದೆಲ್ಲವೂ ಮರೆತುಹೋದಂತೆ ತೋರುತ್ತದೆ.

ಎಲ್ಲ ಪ್ರಾಣಿಗಳಿಗೆ ದಯೆ ತೋರಿಸುವುದೊಂದೇ ನನ್ನ ಅಹಿಂಸೆಯಲ್ಲ. ಜೈನಧರ್ಮದಲ್ಲಿ ಮನುಷ್ಯನಿಗೆ ಕೀಳಾದ ಜೀವರಾಶಿಗಳ ಪ್ರಾಣದ ವಿಚಾರದಲ್ಲಿರುವ ಪೂಜ್ಯಭಾವವನ್ನು ನಾವು ಅರ್ಥಮಾಡಿಕೊಳ್ಳಬಹುದು. ಆದರೆ

ಮನುಷ್ಯ ಪ್ರಾಣಕ್ಕಿಂತಲೂ ಹೆಚ್ಚೆಂದು ಅವುಗಳನ್ನು ಭಾವಿಸಿ ಅವುಗಳಿಗೆ ದಯೆ ತೋರಬೇಕೆಂದು ಅರ್ಥವಲ್ಲ. ಈ ಮೂಕಪ್ರಾಣಿಗಳ ಜೀವವನ್ನೂ ಪೂಜ್ಯ ಭಾವದಿಂದ ಕಾಣಬೇಕೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಈ ಕನಿಷ್ಠ ಜೀವ ರಾಶಿಗಳ ಪ್ರಾಣದ ರಕ್ಷಣೆಯ ವಿಷಯ ಅತಿಯಾಗಿ ಎತ್ತಿ ಆಡಲಾಗಿದೆ. ಅದನ್ನು ಆಚರಣೆಗೆ ತಂದಾಗ ಮೂಲತತ್ತ್ವದ ಆಭಾಸ ಉಂಟಾಗುತ್ತದೆ. ಉದಾ ಹರಣೆಗೆ, ಇರುವೆಗಳಿಗೆ ಮೇವನ್ನು ಹಾಕಿ ಕೆಲವರು ಸಂತೃಪ್ತರಾಗುತ್ತಾರೆ. ಇದು ಒಂದು ಅರ್ಥವಿಲ್ಲದ ಬರಡಾದ ಆಚಾರವಾಗಿ ಪರಿಣಮಿಸಿದೆ. ಇದರಿಂದ ಧರ್ಮದ ಹೆಸರಿನಲ್ಲಿ ಮಿಥ್ಯಾಚಾರವೂ ಆಭಾಸವಾದ ಆಚರಣೆಗಳೂ ರೂಢಿಗೆ ಬಂದಿವೆ.

ಅಹಿಂಸೆ ಪರಮ ಧ್ಯೇಯ. ಅದು ಶೂರರ ಧ್ಯೇಯ—ಹೇಡಿಗಳಿಗೆಂದೂ ಅಲ್ಲ. ಇತರರು ಕೊಲ್ಲುವುದರ ಪ್ರಯೋಜನವನ್ನು ತಾನು ಹೊಂದಿ, ತಾನು ಧರ್ಮಿಷ್ಠನಾಗಿಯೂ, ಅಹಿಂಸಾಧರ್ಮಪಾಲಕನಾಗಿಯೂ ಇರುವನೆಂದು ಭ್ರಾಂತಿಗೊಳ್ಳುವುದು ಆತ್ಮವಂಚನೆ.

ಅಹಿಂಸೆಯ ಉಪಾಸಕನೆಂದು ಹೇಳಿಕೊಳ್ಳುವವನು ಹಳ್ಳಿಯಲ್ಲಿ ಚಿರತೆಯ ಹಾವಳಿ ನಿತ್ಯವೂ ಇದ್ದರೆ ಆ ಹಳ್ಳಿಯನ್ನು ಬಿಟ್ಟು ಹೋಗುವನು. ಅವನು ಓಡಿಹೋದನಂತರ ಯಾರಾದರೂ ಆ ಚಿರತೆಯನ್ನು ಕೊಂದುಹಾಕಿದ ಮೇಲೆ ಮತ್ತೆ ಹಳ್ಳಿಗೆ ಹಿಂತಿರುಗಿ ತನ್ನ ಮನೆಗೆ ಸೇರಿಕೊಂಡು ಮನೆಯ ಸಂರಕ್ಷಣೆಯನ್ನು ಮಾಡುವನು. ಇದು ಅಹಿಂಸೆಯಲ್ಲ—ಇದು ಹೇಡಿ ಆಚರಿಸುವ ಹಿಂಸೆ. ಚಿರತೆಯನ್ನು ಕೊಂದವನಾದರೊ ತನ್ನ ಶೌರ್ಯವನ್ನು ತೋರಿಸಿದನು. ಹೀಗೆ ಕೊಂದುದರಿಂದ ಆದ ಪ್ರಯೋಜನವನ್ನು ಮಾತ್ರ ಅನುಭವಿಸುವವನು ಹೇಡಿ. ಆತನು ನಿಜವಾದ ಅಹಿಂಸೆಯನ್ನು ಅರಿಯಲಾರ.

ನಿತ್ಯಜೀವನದಲ್ಲಿ ಹಿಂಸೆಯನ್ನು ಪೂರ್ಣವಾಗಿ ವರ್ಜಿಸುವುದು ಸಾಧ್ಯವಿಲ್ಲ. ಎಲ್ಲಿಯವರೆಗೂ ಅಹಿಂಸೆ ಸಾಧ್ಯ ? ಈ ಗೆರೆಯನ್ನು ಎಳೆಯುವುದೇ ಕಷ್ಟ. ಈ ಗೆರೆ ಎಲ್ಲರಿಗೂ ಒಂದೇ ಇರಲಾರದು. ಮೂಲತಃ ತತ್ತ್ವವು ಒಂದೇ ಆದರೂ ಆಚರಣೆಯಲ್ಲಿ ಒಬ್ಬೊಬ್ಬರದೂ ಒಂದೊಂದು ರೀತಿ. ಒಬ್ಬರಿಗೆ ಪಥ್ಯವಾಗುವುದು ಮತ್ತೊಬ್ಬರಿಗೆ ವಿಷವಾಗಬಹುದು. ಮಾಂಸಾಹಾರ ನನ್ನ ಮಟ್ಟಿಗೆ ಪಾಪ. ಆದರೆ ಮತ್ತೊಬ್ಬರು ಯಾವಾಗಲೂ ಮಾಂಸಾಹಾರಿಯಾಗಿಯೇ ಇದ್ದು ಅದರಲ್ಲಿ

ಯಾವ ದೋಷವನ್ನೂ ಕಾಣದವರು— ನನ್ನನ್ನು ಅನುಕರಣಮಾಡುವುದಕ್ಕಾಗಿ ತಮ್ಮ ಪದ್ಧತಿಯನ್ನು ಬಿಡುವುದು ಪಾಪವಾಗುವುದು.

ನಾನು ಭೂವ್ಯವಸಾಯವನ್ನವಲಂಬಿಸಿ, ಕಾಡಿನಲ್ಲಿ ಉಳಿದರೆ ನನ್ನ ಗದ್ದೆಗಳನ್ನು ಕಾಪಾಡಲು ಎಷ್ಟು ಮಾತ್ರ ಹಿಂಸೆಯನ್ನು ಅನಿವಾರ್ಯವಾಗಿ ಉಪ ಯೋಗಿಸಬೇಕೊ ಅಷ್ಟೇ ಮಾಡಬೇಕು. ನನ್ನ ಬೆಳೆಯನ್ನು ನಾಶಮಾಡುವ ಕೋತಿಗಳನ್ನೂ, ಪಕ್ಷಿಗಳನ್ನೂ, ಕ್ರಿಮಿಕೀಟಗಳನ್ನೂ ನಾನು ಕೊಲ್ಲಬೇಕಾಗು ವುದು. ಇದನ್ನು ನಾನೇ ಮಾಡದಿದ್ದರೂ ಮತ್ತೊಬ್ಬರಿಂದ ಮಾಡಿಸಬೇಕು. ಈ ಎರಡರಲ್ಲಿಯೂ ಯಾವ ಭೇದವೂ ಇಲ್ಲ. ದೇಶದಲ್ಲಿ ಕ್ಷಾಮದ ಪರಿಸ್ಥಿತಿ ಇದ್ದಾಗ ಅಹಿಂಸೆಯ ಪಾಲನೆಯೆಂದು ಹೇಳಿ ಈ ಜಂತುಗಳು ಬೆಳೆಯನ್ನು ನಾಶಮಾಡಲು ಬಿಟ್ಟರೆ ಅದು ಖಂಡಿತವಾಗಿಯೂ ಪಾಪವೇ. ಕೆಟ್ಟದು, ಒಳ್ಳೆಯದು—ಇವು ಸಾಪೇಕ್ಷ ಪದಗಳು. ಕೆಲವು ಸಂದರ್ಭಗಳಲ್ಲಿ ಒಳ್ಳೆಯ ದಾಗಿರುವುದು, ಬೇರೆ ಸಂದರ್ಭಗಳಲ್ಲಿ ಕೆಟ್ಟುದಾಗಬಹುದು.

ಶಾಸ್ತ್ರಗಳೆಂಬ ಬಾವಿಯಲ್ಲಿ ಮನುಷ್ಯನು ಮುಳುಗಿಬಿಡಬಾರದು. ಆದರೆ ಅವುಗಳ ವಿಶಾಲಸಾಗರದಲ್ಲಿ ಮುಳುಗಿ ಮುತ್ತುಗಳನ್ನು ಹೊರಕ್ಕೆ ತರಬೇಕು. ಹೆಜ್ಜೆಹೆಜ್ಜೆಗೂ ತನ್ನ ವಿವೇಕದಿಂದ ಅಹಿಂಸೆ ಯಾವುದು, ಹಿಂಸೆ ಯಾವುದು ಎಂಬುದನ್ನು ನಿರ್ಧರಿಸಿಕೊಳ್ಳಬೇಕು.

ಇದರಲ್ಲಿ ನಾಚಿಕೆಗಾಗಲಿ ಹೇಡಿತನಕ್ಕಾಗಲಿ ಅವಕಾಶವಿಲ್ಲ. ಭಗವಂತನ ಕಡೆ ಒಯ್ಯುವ ದಾರಿ ಶೂರರಿಗೇ ಹೊರತು ಹೇಡಿಗಳಿಗಲ್ಲವೆಂದು ಕವಿ ಹಾಡಿದಾನೆ.

ಕೊನೆಯದಾಗಿ ರಾಯಚಂದ್‌ಭಾಯಿಯವರು ನನಗೆ ಮಾಡಿದ ಸಲಹೆ ಏನೆಂದರೆ: ನನಗೆ ಧೈರ್ಯವಿದ್ದಪಕ್ಷಕ್ಕೆ, ನಾನು ದೇವರ ಪ್ರತ್ಯಕ್ಷದರ್ಶನವನ್ನು ಪಡೆಯಲು ಇಚ್ಛಿಸುವುದಾದರೆ ಹಾವನ್ನು ಕೊಲ್ಲದೆ ಅದನ್ನು ಕಡಿಯಲು ಬಿಡ ಬೇಕು. ಈ ಪತ್ರ ಬರುವುದಕ್ಕೆ ಹಿಂದೆಯಾಗಲಿ ಅನಂತರವಾಗಲಿ ನಾನು ಹಾವನ್ನು ಕೊಲ್ಲಲಿಲ್ಲ. ಹಾವುಗಳೊಂದಿಗೂ ಚೇಳುಗಳೊಂದಿಗೂ ನಿರ್ಭಯವಾಗಿ ಆಟವಾಡಬೇಕೆಂಬುದು ನನ್ನ ಒಂದು ಆದರ್ಶ. ಆದರೆ ಈವರೆಗೂ ಇದು ಕೇವಲ ಹಂಬಲವಾಗಿ ಉಳಿದಿದೆ. ಅದನ್ನು ಯಾವಾಗ ಸಾಧಿಸುವೆನೊ ನಾನರಿಯೆ. ಎಲ್ಲೆಡೆಯಲ್ಲಿಯೂ ಅವನ್ನು ಕೊಲ್ಲಬಹುದೆಂದು ನಮ್ಮವರಿಗೆ ಹೇಳಿದೇನೆ.

ನಾನು ಇಚ್ಛಿಸಿದ್ದಲ್ಲಿ ಹಾಗೆ ಮಾಡಬಾರದೆಂದು ನಾನು ಹೇಳಬಹುದಾಗಿತ್ತು. ಆದರೆ ಹೇಗೆ ಸಾಧ್ಯ? ಅವುಗಳನ್ನು ನನ್ನ ಕೈಯಲ್ಲಿ ಹಿಡಿಯುವ ನಿರ್ಭಯ ನನ್ನಲ್ಲಿರಲಿಲ್ಲ. ನನ್ನವರಿಗೆ ನಿರ್ಭಯದ ಪಾಠವನ್ನು ಕಲಿಸಲಾಗಲಿಲ್ಲ. ಹೀಗೆ ಮಾಡಲಾಗಲಿಲ್ಲವಲ್ಲ ಎಂದು ನನಗೆ ನಾಚಿಕೆಯಾಗುತ್ತದೆ. ಆದರೆ ನನ್ನ ನಾಚಿಕೆಯಿಂದ ಅವರಿಗಾಗಲಿ ನನಗಾಗಲಿ ಯಾವ ಪ್ರಯೋಜನವೂ ಇಲ್ಲ.

ನನಗೆ ರಾಮನಾಮದ ಅನುಗ್ರಹವಾದರೆ ಈ ನಿರ್ಭಯವನ್ನು ಎಂದಾದರೂ ಪಡೆಯಬಹುದು. ಅದುವರೆಗೂ ಮೇಲೆ ಹೇಳಿದಂತೆ ನಾನು ನಡೆದುಕೊಳ್ಳುವುದು ನನ್ನ ಕರ್ತವ್ಯ. ಧರ್ಮವು ಜೀವನದೊಂದಿಗೆ ಬೆರೆತಿರಬೇಕು. ಅದು ಕೇವಲ ಬುದ್ಧಿವಂತಿಕೆಯ ವಾದದ ವಿಷಯವಲ್ಲ.

(ಮುಸ್ಸೂರಿ—ಹರಿಜನ, ೯-೬-೧೯೪೫)

## ಮೂಕಪ್ರಾಣಿಗಳ ಹಿಂಸೆ

ಮೈಸೂರಿನವರೊಬ್ಬರು ನನ್ನ ಗಮನಕ್ಕೆ ತರುವುದೇನೆಂದರೆ: ‘ ಬೆಂಗಳೂರು ನಗರದ ದೊಡ್ಡಿಗಳಲ್ಲಿ ದುರ್ದೆಸೆಯಲ್ಲಿರುವ ನಾಯಿಗಳೂ, ದನಗಳೂ ಪಡುವ ಹಿಂಸೆ—ಇದು ಸಣ್ಣ ವಿಷಯವೇ ಆದರೂ ಆ ಪ್ರಾಣಿಗಳಿಗೆ ಪ್ರಾಣಾಪತ್ತಿನ ವಿಷಯ. ಅವು ಬಹಳ ಕೆಟ್ಟ ಪರಿಸ್ಥಿತಿಯಲ್ಲಿವೆ. ಈ ಪ್ರಾಣಿಗಳಿಗೆ ಆಹಾರ ನೀರು ಕೊಡದೆ ಅಲ್ಲಿ ನಿರ್ಬಂಧಿಸಿರುತ್ತಾರೆ. ನಾಯಿಗಳನ್ನು ಕೊಲ್ಲುವ ಮಾರಕ ಸಲಕರಣೆಗಳು ಕೆಲವು ದಿನಗಳಿಂದ ಕೆಟ್ಟುಹೋಗಿವೆ. ಅವುಗಳನ್ನು ಸರಿಪಡಿಸುವ ಪ್ರಯತ್ನ ಯಾವುದೂ ನಡೆದಂತಿಲ್ಲ. ಈ ಪ್ರಾಣಿಗಳಿಗೆ ವಿಷ ಕೊಟ್ಟು ಕೊಲ್ಲುವ ಒರಟೂ, ಕ್ರೂರವೂ ಆದ ಮಾರ್ಗವನ್ನು ಅನುಸರಿಸಲಾಗಿದೆ.’

ಬೀದಿಯಲ್ಲಿ ತಿರುಗುವ ನಾಯಿಗಳನ್ನು ಕೊಲ್ಲುವ ಸಲಹೆಯನ್ನು ಮಾಡಿದ ದೌರ್ಭಾಗ್ಯ ನನ್ನದು. ಈ ನಾಯಿಗಳಿಗೆ ಆಹಾರ ಕೊಟ್ಟು ಜನರಿಗೆ ಇವುಗಳಿಂದ ಅಪಾಯ ಉಂಟಾಗುವಂತೆ ತಪ್ಪಾದ ಕಾರುಣ್ಯಭಾವದಿಂದ ಇವುಗಳನ್ನು ಸ್ವೇಚ್ಛೆಯಾಗಿ ತಿರುಗಾಡಲು ಬಿಡುತ್ತಾರೆ. ಈ ನಡತೆಯು ಕ್ರೌರ್ಯವೇ ಆಗುವುದು. ಆದುದರಿಂದಲೇ ಈ ನಾಯಿಗಳನ್ನು ಕೊಲ್ಲಬಹುದೆಂದು ನಾನು ಸಲಹೆ

ಮಾಡಬೇಕಾಯಿತು. ಆದರೆ ಈ ಪತ್ರಲೇಖಕರು ವರ್ಣಿಸಿರುವಂತೆ ಅವು ಗಳನ್ನು ದೊಡ್ಡಿಯಲ್ಲಿ ಕೂಡಿಹಾಕಿ ಹಿಂಸೆಗೊಳಿಸಬೇಕೆಂಬುದು ನನ್ನ ಸಲಹೆಯಲ್ಲಿ ಸೇರಿದ ಅಂಶವಲ್ಲ. ಯಾತನೆಯಿಲ್ಲದಂತೆ ಇಂತಹ ಪ್ರಾಣಿಗಳ ಜೀವ ತೆಗೆಯು ವಂತೆ ನಮ್ಮ ಕಾರುಣ್ಯಸ್ವಭಾವ ಹೇಳುತ್ತದೆ. ಈ ಪತ್ರದಲ್ಲಿ ಯಾವ ಉತ್ಪ್ರೇಕ್ಷೆಯೂ ಇಲ್ಲವೆಂದು ನಾನು ನಂಬಿದೇನೆ. ಏನೇ ಇರಲಿ, ಮ್ಯುನಿಸಿ ಪಾಲಿಟಿಗಳೂ ಇಂತಹ ಇತರ ಸಂಸ್ಥೆಗಳೂ ಜೀವಕಾರುಣ್ಯದ ದೃಷ್ಟಿಯಿಂದ ತಮ್ಮ ವರ್ತನೆಯನ್ನು ಸುಧಾರಿಸಿಕೊಳ್ಳಬೇಕು.

(ಕಲ್ಕತ್ತೆಗೆ ಹೋಗುತ್ತ ರೈಲ್‌ಗಾಡಿಯಲ್ಲಿ, ೨೯–೧೦–೧೯೪೫)
(ಹರಿಜನ, ೧೦–೧೧–೧೯೪೫)

---

### ಅಧ್ಯಾಯ – ೫

# ಅಗ್ನಿಪರೀಕ್ಷೆ



ರೋಗದಿಂದ ನರಳಾಡುತ್ತಿದ್ದ ಒಂದು ಕರುವನ್ನು ಆಶ್ರಮದಲ್ಲಿ ಈ ಕೆಳಗೆ ವಿವರಿಸಿರುವ ಸಂದರ್ಭಗಳ ಕಾರಣದಿಂದ ಕೊಲ್ಲಲಾಯಿತು. ಅಹಮದಾಬಾದಿನಲ್ಲಿ ಇದರ ಪರಿಣಾಮವಾಗಿ ಒಂದು ಗೊಂದಲವೇ ಎದ್ದಿತು. ಅನೇಕರು ಕೋಪಾವೇಶದಲ್ಲಿ ಗಾಂಧೀಜೀಗೆ ಪತ್ರಗಳನ್ನು ಬರೆದರು. ಗಾಂಧೀಜಿಯವರು ಈ ವಿಷಯವನ್ನು ಅಹಿಂಸೆಯ ಸಿದ್ಧಾಂತದ ದೃಷ್ಟಿಯಿಂದ ವಿಮರ್ಶೆ ಮಾಡಿ ತಮ್ಮ 'ನವಜೀವನ'ವೆಂಬ ಗುಜರಾತಿ ವಾರಪತ್ರಿಕೆಯಲ್ಲಿ ಒಂದು ಲೇಖನವನ್ನು ಪ್ರಕಟಿಸಿದರು. ಅದರ ಸಾರಾಂಶವನ್ನು ಇಲ್ಲಿ ಕೊಟ್ಟಿದೆ.

## ಕೊಲ್ಲುವುದು ಯಾವಾಗ ಅಹಿಂಸೆ?

ಗೋಸೇವಾ ಸಂಘದ ಆಶ್ರಯದಲ್ಲಿ ಒಂದು ಸಣ್ಣ ಮಾದರಿ ಗೋಶಾಲೆಯನ್ನೂ ಚರ್ಮ ಹದಮಾಡುವ ಕೇಂದ್ರವನ್ನೂ ನಡೆಸುವ ಪ್ರಯತ್ನ ಮಾಡಲಾಗಿದೆ. ಇದರ ಕೆಲಸಕಾರ್ಯಗಳನ್ನು ನಡೆಸುವ ಸಮಯದಲ್ಲಿ ಕೆಲವು ತಾತ್ತ್ವಿಕ ಸಮಸ್ಯೆಗಳು ಹುಟ್ಟುತ್ತವೆ. ಆಶ್ರಮವಾಸಿಗಳು ಕೇವಲ ಅಹಿಂಸೆಯ ಮೂಲಕ ಸತ್ಯವನ್ನು ಅರಸುವ ಧ್ಯೇಯವನ್ನಿಟ್ಟುಕೊಂಡಿರುವುದರಿಂದ ಇಂತಹ ಸಮಸ್ಯೆಗಳು ಉದ್ಭವಿಸುತ್ತವೆ.

ಉದಾಹರಣೆಗೆ, ಆಶ್ರಮದಲ್ಲಿ ಒಂದು ಕರು ಕಾಲು ಮುರಿದುಕೊಂಡು ಬಹಳ ಯಾತನೆಯನ್ನನುಭವಿಸುತ್ತ ಮಲಗಿತ್ತು. ಅದಕ್ಕೆ ಸಾಧ್ಯವಾದಷ್ಟು ಚಿಕಿತ್ಸೆ ಮತ್ತು ಉಪಚಾರ ಮಾಡಲಾಗುತ್ತಿತ್ತು. ಯಾವ ವೈದ್ಯರ ಸಲಹೆಯಂತೆ ಚಿಕಿತ್ಸೆಯನ್ನು ಕೊಡಲಾಗುತ್ತಿತ್ತೋ—ಅವರು ಕರುವನ್ನು ರಕ್ಷಿಸಲು ಯಾವ ಉಪಾಯವಾಗಲಿ ಆಸೆಯಾಗಲಿ ಇಲ್ಲವೆಂದು ಹೇಳಿದರು. ಆ ಕರು ಒಂದು ಬದಿಯಿಂದ ಮತ್ತೊಂದು ಕಡೆಗೆ ತಿರುಗಲೂ ಸಹ ತ್ರಾಣವಿಲ್ಲದೆ ನರಕ ಯಾತನೆಯನ್ನು ಅನುಭವಿಸುತ್ತಿತ್ತು.

ಈ ಸಂದರ್ಭದಲ್ಲಿ ಭೂತದಯೆಯ ದೃಷ್ಟಿಯಿಂದ ಇದರ ಜೀವವನ್ನು ಕೊನೆಗಾಣಿಸುವುದೇ ಇದನ್ನು ಯಾತನೆಯಿಂದ ಪಾರುಮಾಡುವ ಮಾರ್ಗ ಎಂದು ನಾನು ತೀರ್ಮಾನಿಸಿದೆ. ಕಾರ್ಯನಿರ್ವಾಹಕಮಂಡಲಿಯವರೊಂದಿಗೆ ಈ ವಿಷಯವನ್ನು ಚರ್ಚಿಸಿದೆ. ಬಹುಮಟ್ಟಿಗೆ ನನ್ನ ತೀರ್ಮಾನವನ್ನು ಅವರು ಒಪ್ಪಿದರು. ಅನಂತರ ಎಲ್ಲ ಆಶ್ರಮವಾಸಿಗಳನ್ನೂ ಕರೆದು ಅವರ ಮುಂದೆಯೂ ಈ ಪ್ರಸ್ತಾಪವನ್ನಿಡಲಾಯಿತು. ಅಲ್ಲಿ ನಡೆದ ಚರ್ಚೆಯಲ್ಲಿ ಮಾನ್ಯ ಮಿತ್ರರೊಬ್ಬರು ಹೀಗೆ ಕೊಲ್ಲುವುದನ್ನು ತೀವ್ರವಾಗಿ ವಿರೋಧಿಸಿ ಆ ಕರುವಿನ ಶುಶ್ರೂಷೆಯನ್ನು ತಾವು ಮಾಡಲು ಸಿದ್ಧರಿರುವರೆಂದು ಹೇಳಿದರು. ಶುಶ್ರೂಷೆ ಎಂದರೆ ಆಶ್ರಮದ ಕೆಲವು ಹೆಣ್ಣುಮಕ್ಕಳ ಸಹಾಯದಿಂದ ಮುತ್ತುವ ನೊಣಗಳನ್ನು ಓಡಿಸುವುದು, ಆ ಕರುವಿಗೆ ಆಹಾರವನ್ನು ಉಣಿಸುವ ಪ್ರಯತ್ನವನ್ನು ಮಾಡುವುದು. ನಾವು ಸೃಷ್ಟಿಮಾಡಲಾಗದ ಪ್ರಾಣವನ್ನು ಕೊನೆಗಾಣಿಸುವ ಅಧಿಕಾರ ನಮಗಿಲ್ಲವೆಂಬುದೇ ಆ ಮಿತ್ರರ ವಾದ. ಈ ಸಂದರ್ಭದಲ್ಲಿ ಆ ಮಿತ್ರರ ವಾದದಲ್ಲಿ ತಿರುಳಿಲ್ಲವೆಂದು ನನಗನಿಸಿತು. ಸ್ವಾರ್ಥಕ್ಕಾಗಿ ನಾವು ಪ್ರಾಣಿಯನ್ನು ಕೊಲ್ಲುತ್ತಿದ್ದರೆ ಈ ವಾದದಲ್ಲಿ ಅರ್ಥವಿದ್ದೀತೆಂದು ನನಗೆ ತೋರಿತು. ಕೊನೆಯಲ್ಲಿ ಬಹಳ ನಮ್ರಭಾವದಿಂದಲೂ, ದೃಢನಂಬಿಕೆಯಿಂದಲೂ ಒಬ್ಬ ವೈದ್ಯರನ್ನು ಆ ಕರುವಿಗೆ ಒಂದು ವಿಷದ ಇಂಜೆಕ್ಷನ್ ಕೊಟ್ಟು ಅದರ ಪ್ರಾಣಶಾಂತಿ ಮಾಡಿಸಿದೆ. ಎಲ್ಲವೂ ಎರಡು ನಿಮಿಷಗಳಲ್ಲಿ ಮುಗಿಯಿತು.

ಅಹಮದಾಬಾದಿನಲ್ಲಿ ಜನರ ಅಭಿಪ್ರಾಯ ಇದಕ್ಕೆ ಒಪ್ಪಿಗೆ ಕೊಡಲಾರದೆಂದೂ ಇದು ಹಿಂಸಾಕೃತ್ಯವೆಂದು ಭಾವಿಸುವುದೆಂದೂ ನಾನು ತಿಳಿದಿದ್ದೆ.

ಆದರೆ ಜನಾಭಿಪ್ರಾಯವೇನೇ ಇರಲಿ, ನಾವು ನಮ್ಮ ಕರ್ತವ್ಯವನ್ನು ಮಾಡಬೇಕಾಗುವುದೆಂದು ನಾನು ಬಲ್ಲೆ. ಇತರರಿಗೆ ತಪ್ಪೆಂದು ತೋರಿದರೂ ನಮಗೆ ಸರಿಯೆಂದು ತೋರುವ ಮಾರ್ಗದಲ್ಲಿಯೇ ನಾವು ನಡೆಯಬೇಕೆಂದು ಮೊದಲಿನಿಂದಲೂ ನನ್ನ ಮತವಾಗಿದೆ. ಅನುಭವದಿಂದ ಇದೊಂದೇ ಸೂಕ್ತವಾದ ಮಾರ್ಗವೆಂದು ಸ್ಪಷ್ಟವಾಗಿದೆ. ತಪ್ಪನ್ನು ಸರಿಯೆಂದೂ ಸರಿಯನ್ನು ತಪ್ಪೆಂದೂ ಭಾವಿಸುವ ಸಂಭವವುಂಟೆಂದು ನಾನು ಒಪ್ಪುತ್ತೇನೆ. ಆದರೆ ತನಗೇ ತಿಳಿಯದೆ ತಪ್ಪನ್ನು ಮಾಡಿದುದರಿಂದಲೇ ಅದನ್ನು ತಪ್ಪೆಂದು ತಿಳಿಯಲು ಅನೇಕ ವೇಳೆ ಕಾರಣವಾಗುತ್ತದೆ. ಹೀಗಲ್ಲದೆ ಇತರರ ಒಪ್ಪಿಗೆಗಾಗಿ

ಅವರ ವಿರೋಧವನ್ನು ಸಂಪಾದಿಸುವ ಭಯದಿಂದ ತನಗೆ ಸರಿಯೆಂದು ತೋರುವ ಮಾರ್ಗವನ್ನು ಬಿಟ್ಟುಕೊಟ್ಟರೆ—ಕ್ರಮೇಣ ತಪ್ಪು-ಒಪ್ಪುಗಳ ಭೇದವೇ ಅವನಿಗೆ ತಿಳಿಯದೆ ಹೋಗುವುದು. ಅಂತಹವನು ವಿವೇಕಶೂನ್ಯನಾಗುವನು. ಅದಕ್ಕೇ ಕವಿಯು ಹಾಡಿರುವನು: 'ಪ್ರೇಮಮಾರ್ಗ ಅಗ್ನಿಪರೀಕ್ಷೆ. ಅಂಜಿದವರು ಅದನ್ನು ಬಿಟ್ಟು ಸರಿಯುವರು' ಎಂದು. ಅಹಿಂಸಾಮಾರ್ಗದಲ್ಲಿ—ಅಂದರೆ ಪ್ರೇಮಮಾರ್ಗದಲ್ಲಿ—ಅನೇಕ ವೇಳೆ ಒಬ್ಬಂಟಿಗನಾಗಿ ಮುಂದೆ ಸಾಗಬೇಕು.

ಆದರೆ ಒಂದು ಪ್ರಶ್ನೆಯನ್ನು ನ್ಯಾಯವಾಗಿ ನನ್ನನ್ನು ಕೇಳಬಹುದು: ಕರುವಿನ ವಿಷಯದಲ್ಲಿ ಹೇಳುವ ವಿಧಾನವನ್ನೇ ಮನುಷ್ಯರ ವಿಷಯಕ್ಕೂ ಅನ್ವಯಿಸುವಿರಾ? ಎಂದು. ನನ್ನ ವಿಷಯದಲ್ಲಿಯೇ ಈ ವಿಧಾನವನ್ನು ಅನ್ವಯಿಸಿಕೊಳ್ಳುವೆನೇ? ನನ್ನ ಉತ್ತರ ಇಷ್ಟೆ: ಹೌದು; ಅನ್ವಯಿಸುವೆನು, ಅನ್ವಯಿಸಿಕೊಳ್ಳುವೆನು. 'ಯಥಾ ಪಿಂಡೇ ತಥಾ ಬ್ರಹ್ಮಾಂಡೇ' ಎಂಬ ನ್ಯಾಯ (ಒಬ್ಬರಿಗಾದಂತೆ ಸರ್ವರಿಗೂ) ಯಾವ ಅಪವಾದವಿಲ್ಲದೆ ಅನ್ವಯಿಸುತ್ತದೆ. ಹೀಗಿಲ್ಲವಾದರೆ ಕರುವನ್ನು ಕೊಂದುದು ತಪ್ಪು ಮತ್ತು ಹಿಂಸಾಕಾರ್ಯವಾದೀತು. ಆದರೆ ನಿತ್ಯ ಆಚರಣೆಯಲ್ಲಿ ಯಾತನೆಯನ್ನನುಭವಿಸುವ ನಮಗೆ ಪ್ರಿಯರಾದವರನ್ನು ನಾವು ಕೊಲ್ಲುವುದಿಲ್ಲ. ಕಾರಣವೇನೆಂದರೆ ಅವರನ್ನು ಗುಣಪಡಿಸಲು ನಮ್ಮ ಬಳಿ ಸಾಧನಗಳಿವೆ ಮತ್ತು ಅವರು ಬುದ್ಧಿ ಇರುವವರು, ತಮಗೇನಾಗಬೇಕೆಂದು ಯೋಚಿಸಿ ನಿರ್ಧರಮಾಡಬಲ್ಲವರು. ಆದರೆ ಒಂದು ವೇಳೆ ಒಬ್ಬ ಮಿತ್ರರು ಬಹಳ ಸಂಕಟದಲ್ಲಿ ನರಳುತ್ತಿದ್ದರೆಂದು ಭಾವಿಸೋಣ. ಅವರಿಗೆ ಯಾವ ಶಮನವನ್ನೂ ಮಾಡಲು ಸಾಧ್ಯವಿಲ್ಲ, ಅವರು ಗುಣಹೊಂದುವ ಆಸೆಯೇ ಇಲ್ಲ, ಪ್ರಜ್ಞೆ ತಪ್ಪಿದೆ, ಬಹಳ ಸಂಕಟವನ್ನನುಭವಿಸುತ್ತಿದಾರೆಂದು ಅಂದುಕೊಳ್ಳೋಣ. ಅಂತಹ ಸಂದರ್ಭದಲ್ಲಿ ಅವರ ಪ್ರಾಣವನ್ನು ತೆಗೆಯುವುದರಲ್ಲಿ ಯಾವ ಹಿಂಸೆಯನ್ನೂ ನಾನು ಕಾಣುವುದಿಲ್ಲ.

ಶಸ್ತ್ರಚಿಕಿತ್ಸೆ ಮಾಡುವ ವೈದ್ಯನು, ರೋಗಿಯ ಮೈಮೇಲೆ ರೋಗಿಯ ಹಿತಕ್ಕಾಗಿ ಕತ್ತಿಯ ಪ್ರಯೋಗವನ್ನು ಮಾಡಿದಾಗ ಯಾವ ಹಿಂಸೆಯನ್ನೂ ಆಚರಿಸುತ್ತಿಲ್ಲ. ಅಷ್ಟೇ ಅಲ್ಲ, ಶುದ್ಧವಾದ ಅಹಿಂಸಾಕಾರ್ಯವನ್ನೇ ಆತನು ಮಾಡುತ್ತಾನೆ. ಹಾಗೆಯೇ ಇನ್ನೊಂದು ಹೆಜ್ಜೆ ಮುಂದೆ ಹೋಗಿ ಸಂಕಟಕ್ಕೆ

ಗುರಿಯಾದ ಜೀವದ ಹಿತಕ್ಕಾಗಿಯೇ ದೇಹವನ್ನೂ ಜೀವವನ್ನೂ ಪ್ರತ್ಯೇಕಿಸಿ ಆ ಜೀವಕ್ಕೆ ಹಿತವನ್ನುಂಟುಮಾಡುವ ಬಹಳ ಅಗತ್ಯವಿರುವ ಸಂದರ್ಭಗಳು ಒದಗಬಹುದು. ಆದರೆ ಈ ಉದಾಹರಣೆಗಳಿಗೆ ಒಂದು ಆಕ್ಷೇಪಣೆ ಎತ್ತ ಬಹುದು: ವೈದ್ಯರು ರೋಗಿಯನ್ನು ಉಳಿಸುವುದಕ್ಕಾಗಿ ಶಸ್ತ್ರಚಿಕಿತ್ಸೆ ಮಾಡು ತ್ತಾರೆ; ಇತರ ಉದಾಹರಣೆಗಳಲ್ಲಿ ರೋಗಿಯನ್ನು ಸಾಯಿಸುತ್ತಾರೆ. ಆದರೆ ಸ್ವಲ್ಪ ಆಳವಾಗಿ ವಿಚಾರಮಾಡಿದರೆ ಇವೆಲ್ಲದರಲ್ಲಿಯೂ ಉದ್ದೇಶ್ಯ ಒಂದೆ: ಜೀವದ ಯಾತನೆಯನ್ನು ಪರಿಹರಿಸುವುದು. ಒಂದು ದೃಷ್ಟಾಂತದಲ್ಲಿ ಈ ಪರಿಹಾರವು ಒಂದು ದೇಹದ ಒಂದು ಭಾಗವನ್ನು ಬೇರ್ಪಡಿಸುವುದರಿಂದ ಆಗುತ್ತದೆ. ಇತರ ದೃಷ್ಟಾಂತಗಳಲ್ಲಿ ಯಾತನೆಗೆ ಕಾರಣವಾದ ದೇಹವನ್ನೇ ಬೇರ್ಪಡಿಸುವುದರಿಂದ ಆಗುತ್ತದೆ. ಒಳಗಿರುವ ಜೀವದ ಹಿತವೇ ಈ ಎಲ್ಲ ದೃಷ್ಟಾಂತಗಳಲ್ಲಿ ಮಾಡುವ ಕಾರ್ಯದ ಉದ್ದೇಶ್ಯ. ಜೀವವಿಲ್ಲದ ದೇಹಕ್ಕೆ ಯಾತನೆಯ ಅನುಭವವಿಲ್ಲ. ಹೀಗೆಯೇ ಕೊಲ್ಲದೆ ಇರುವುದು ಹಿಂಸೆಯೂ, ಕೊಲ್ಲುವುದು ಅಹಿಂಸೆಯೂ ಆಗುವ ದೃಷ್ಟಾಂತಗಳನ್ನು ಊಹಿಸಿಕೊಳ್ಳ ಬಹುದು. ಒಂದು ಉದಾಹರಣೆ ತೆಗೆದುಕೊಳ್ಳೋಣ. ನನ್ನ ಮಗಳ ಮೇಲೆ ಅತ್ಯಾಚಾರ ನಡೆಸುವ ಪ್ರಸಂಗವಿದ್ದರೆ, ಅವಳ ಇಷ್ಟವೇನೆಂಬುದು ತಿಳಿಯಲು ಅವಕಾಶವಿಲ್ಲದಿದ್ದಾಗ, ಅವಳನ್ನು ಕೊಂದು ಆ ದುರಾತ್ಮರ ಕೋಪಾವೇಶಕ್ಕೆ ನಾನು ಗುರಿಮಾಡಿಕೊಳ್ಳುವುದು ಅಹಿಂಸೆಯಾಗುವುದು.

ಆದರೆ ನಮ್ಮ ಅಹಿಂಸೆಯ ಉಪಾಸಕರು ಅಹಿಂಸೆಯನ್ನು ಒಂದು ಗೊಡ್ಡು ಆಚರಣೆಯನ್ನಾಗಿ ಮಾಡಿಕೊಂಡು, ನಮ್ಮಲ್ಲಿ ನಿಜವಾದ ಅಹಿಂಸೆ ಪ್ರಸಾರವಾಗದಂತೆ ಅಡಚಣೆ ಮಾಡಿದಾರೆ. ಅಹಿಂಸೆಯ ವಿಷಯದಲ್ಲಿ ರೂಢಿಯಾಗಿರುವ ಅಭಿಪ್ರಾಯ ತಪ್ಪೆಂದು ನನ್ನ ಭಾವನೆ. ಈಗಿನ ದೃಷ್ಟಿ ನಮ್ಮ ಮನಸ್ಸಾಕ್ಷಿಯನ್ನು ಮೊಟಕುಮಾಡಿ, ಅನೇಕ ತರಹದ ಹಿಂಸೆಗಳಿಗೆ, ಉದಾಹರಣೆಗೆ, ಕಠಿಣವಾದ ಮಾತುಗಳು, ದ್ವೇಷ, ಕೋಪ, ಜಿದ್ದು, ಕ್ರೌರ್ಯ ಮುಂತಾದವುಗಳಿಗೆ ಎಡೆಗೊಟ್ಟಿದೆ. ಅವುಗಳನ್ನು ಖಂಡಿಸದಂತೆ ಮಾಡಿದೆ. ಜನರನ್ನೂ ಮೂಕಪ್ರಾಣಿಗಳನ್ನೂ ನಿಧಾನವಾದ ಚಿತ್ರಹಿಂಸೆಗೆ ಗುರಿಮಾಡು ತ್ತೇವೆ. ಅವುಗಳಿಗೆ ಆಹಾರ ಕೊಡದೆ ದುಡಿಸಿಕೊಳ್ಳುತ್ತೇವೆ. ಸ್ವಾರ್ಥದಿಂದ, ದುರಾಶೆಯಿಂದ ಬಲಹೀನರನ್ನು ತುಳಿದುಹಾಕಿ ಅವರನ್ನು ಸ್ವೇಚ್ಛೆಯಾಗಿ

ಅಪಮಾನಿಸುತ್ತೇವೆ. ಅವರ ಆತ್ಮಗೌರವವನ್ನು ನಾಶಮಾಡುತ್ತೇವೆ. ಇವು ಎಲ್ಲವೂ ಸದ್ಭಾವನೆಯಿಂದ ಪ್ರಾಣವನ್ನು ತೆಗೆಯುವುದಕ್ಕಿಂತಲೂ ಹೆಚ್ಚಿನ ಹಿಂಸೆಯೆಂದು ನಾವು ಮರೆಯುತ್ತೇವೆ. ಅಮೃತಸರದಲ್ಲಿ ನಡೆದ ಹತ್ಯಾಕಾಂಡದ ಪ್ರಕರಣದಲ್ಲಿ ಬಡಪಾಯಿಗಳನ್ನು ಚಿತ್ರಹಿಂಸೆಗೆ ಗುರಿಮಾಡಿ ಆ ನಗರದ ಓಣಿಗಳಲ್ಲಿ ಹುಳುಗಳಂತೆ ತೆವಳುತ್ತ ಹೋಗಬೇಕೆಂದು ಆಜ್ಞೆಮಾಡಿದರು. ಇದಕ್ಕಿಂತಲೂ ಅವರ ಪ್ರಾಣವನ್ನು ತೆಗೆದುಹಾಕಿದ್ದರೆ ಎಷ್ಟೋ ಉತ್ತಮವಾಗುತ್ತಿತ್ತೆಂಬ ವಿಷಯದಲ್ಲಿ ಯಾರಿಗಾದರೂ ಸಂಶಯವಿದ್ದೀತೆ? ಹೀಗೆ ಯಾತನೆಗೆ ಗುರಿಯಾದ ಜನರೇ ಇಂದು ಬೇರೆ ಅಭಿಪ್ರಾಯವುಳ್ಳವರಾಗಿದಾರೆಂದು ಯಾರಾದರೂ ಹೇಳಬಹುದು. ಹೀಗೆ ಹೇಳುವವರಿಗೆ ಅಹಿಂಸೆಯ 'ಓನಾಮ' ಗೊತ್ತಿಲ್ಲವೆಂದು ನಾನು ಹೇಳಲು ಹಿಂಜರಿಯಲಾರೆ. ಕೆಲವು ಸಂದರ್ಭಗಳಲ್ಲಿ ನಮ್ಮ ಪ್ರಾಣವನ್ನರ್ಪಿಸುವುದೇ ಅನಿವಾರ್ಯವಾದ ಕರ್ತವ್ಯವಾಗುತ್ತದೆ. ಇಂತಹ ಸಂದರ್ಭ ಒದಗುವುದೆಂದು ಮನಗಾಣದಿದ್ದರೆ ಅಹಿಂಸೆಯ ಮೂಲಭೂತವಾದ ವಿಚಾರವನ್ನೇ ನಾವು ತಿಳಿಯಲಿಲ್ಲವೆಂದು ಹೇಳಬೇಕು. ಉದಾಹರಣೆಗೆ, ಸುಳ್ಳುಗಾರಿಕೆಯ ಜೀವನಕ್ಕಿಂತಲೂ ಸತ್ಯದ ಉಪಾಸಕನು ತನಗೆ ಸಾವು ಬರಲೆಂದು ಭಗವಂತನಲ್ಲಿ ಪ್ರಾರ್ಥನೆಯನ್ನು ಸಲ್ಲಿಸಬಹುದು. ಇದೇ ಬಗೆಯಲ್ಲಿ ಅಹಿಂಸೆಯ ಉಪಾಸಕನು ತನ್ನನ್ನು ಅಪಮಾನಕ್ಕೆ ಗುರಿ ಮಾಡುವುದಕ್ಕಿಂತಲೂ, ಮಾನವರ ಗೌರವಕ್ಕೆ ಯೋಗ್ಯವಲ್ಲದ ಕಾರ್ಯಗಳನ್ನು ತನ್ನಿಂದ ಮಾಡಿಸುವುದಕ್ಕಿಂತಲೂ ತನ್ನ ಪ್ರಾಣಾಪಹಾರಮಾಡಬೇಕೆಂದು ತನ್ನ ಶತ್ರುವನ್ನು ಬೇಡಿಕೊಳ್ಳಬಹುದು. ಕವಿ ಹೇಳಿದಂತೆ 'ಹರಿಯ ಮಾರ್ಗ ಹುರಿಯಾಳುಗಳಿಗೆ, ಹೇಡಿಗಳಿಗಲ್ಲ.'

ಅಹಿಂಸೆಯ ಲಕ್ಷಣ, ಅದರ ವ್ಯಾಪ್ತಿ ಇವುಗಳ ವಿಷಯದಲ್ಲಿ ಮೂಲಭೂತವಾಗಿ ತಪ್ಪು ಅಭಿಪ್ರಾಯವಿದೆ. ಯಾವುದು ಮುಖ್ಯ, ಯಾವುದು ಗೌಣ— ಇದನ್ನು ತಿಳಿಯದೆ ಮನಸ್ಸಿನ ಗೊಂದಲಕ್ಕೆ ಕಾರಣವಾಗುತ್ತದೆ. ಅಹಿಂಸೆ ಎಂದರೆ ಕೊಲ್ಲದಿರುವುದು ಮಾತ್ರವೆಂದು ಅರ್ಥಮಾಡಿಕೊಂಡಿದೇವೆ. ಅಹಿಂಸೆ ಎಂದು ಹೇಳುತ್ತ ದೇಶದಲ್ಲಿ ಅಸಂಖ್ಯಾತ ಹಿಂಸಾಕೃತ್ಯಗಳು ನಡೆಯುತ್ತಿವೆ. ಇದಕ್ಕೆಲ್ಲ ಮನಸ್ಸಿನ ಗೊಂದಲವೇ ಕಾರಣ. ರೋಗದಿಂದ ನರಳುತ್ತಿದ್ದ ಕರುವನ್ನು ಕೊಂದುದಕ್ಕೆ ಅಹಿಂಸಾಪರಾಯಣರೆಂದು ಹೇಳಿಕೊಳ್ಳುತ್ತ ರಂಪವನ್ನು

ಮಾಡಿ ಒಂದು ಘೋರಕೃತ್ಯವಾದಂತೆ ಗದ್ದಲವನ್ನೇ ಎಬ್ಬಿಸಿದರು. ಇವರೇ ನಮ್ಮ ದೇಶದಲ್ಲಿ ಮೂಕಪ್ರಾಣಿಗಳು ಅನುಭವಿಸುತ್ತಿರುವ ಘೋರಯಾತನೆಗಳ ಕಡೆ ಗಮನ ಕೊಡುವುದಿಲ್ಲ. ಇದನ್ನು ನೋಡಿದರೆ ನಾವು ಅಹಿಂಸೆಯನ್ನು ಆಚರಿಸುವ ದೇಶದಲ್ಲಿದೇವೆಯೇ ಅಥವಾ ತಿಳಿದೋ ತಿಳಿಯದೆಯೋ ಮಿಥ್ಯಾ ಚಾರಿಗಳ ಮಧ್ಯೆ ಇದೇವೆಯೇ— ಇದು ವಿಸ್ಮಯವನ್ನುಂಟುಮಾಡುತ್ತದೆ.

ಇದು ನಮ್ಮ ಆಧ್ಯಾತ್ಮಿಕ ತಾಮಸ. ವಿಷಯಗಳನ್ನು ನೇರವಾಗಿ ದಿಟ್ಟಿಸಿ ನೋಡಲು ನಮ್ಮಲ್ಲಿ ಧೈರ್ಯವಿಲ್ಲದಿರುವುದೇ ಈ ವಿಷಾದಯುತವಾದ ಪರಿಸ್ಥಿತಿಗೆ ಕಾರಣ. ನಮ್ಮ ಪಿಂಜ್ರಾಪೋಲುಗಳು, ಗೋಶಾಲೆಗಳು—ಅವು ಗಳ ಕಡೆ ನೋಡಿ. ಇವುಗಳಿಗೆ ಬಡಪಾಯಿಗಳಾದ ದನಗಳನ್ನು ದೂಡು ತ್ತೇವೆ—ಆತ್ಮಕ್ಕೆ ಸಮಾಧಾನವನ್ನು ತಂದುಕೊಳ್ಳುತ್ತೇವೆ. ಅನೇಕ ವೇಳೆ ಅವು ಚಿತ್ರಹಿಂಸೆಯ ಕೂಪಗಳು. ದನಗಳಿಗೆ ಮಾತು ಬಂದರೆ ಅವು ಹೇಳ ಬಹುದು: 'ಹೀಗೆ ನಮ್ಮನ್ನು ಹಿಂಸಿಸುವುದಕ್ಕಿಂತಲೂ ನಮ್ಮನ್ನು ಕೊಂದು ಹಾಕಿಬಿಡಿ.' ಅವುಗಳ ಕಣ್ಣುಗಳಲ್ಲಿ ಅನೇಕ ವೇಳೆ ಈ ಮೂಕಪ್ರಾರ್ಥನೆ ಯನ್ನು ನಾನು ಕಂಡಿದೇನೆ.

ಸಾರಾಂಶವೇನೆಂದರೆ ನೋವನ್ನುಂಟುಮಾಡುವುದು, ಕೆಡಕೆಣಿಸುವುದು, ಕೋಪದಿಂದಾಗಲಿ ಸ್ವಾರ್ಥಸಾಧನೆಗಾಗಲಿ ಪ್ರಾಣಾಪಹಾರ ಮಾಡುವುದು— ಇದೇ ಹಿಂಸೆ. ಅದಕ್ಕೆ ಪ್ರತಿಯಾಗಿ ಶಾಂತವಾಗಿ ಸ್ಫುಟವಾಗಿ ವಿಚಾರಮಾಡಿದ ಅನಂತರ ಶುದ್ಧಮನಸ್ಸಿನಿಂದ, ನಿಸ್ಸ್ವಾರ್ಥಬುದ್ಧಿಯಿಂದ ಪ್ರಾಣಿಯ ಆತ್ಮಕ್ಕೋ ದೇಹಕ್ಕೋ ಹಿತ ಉಂಟಾಗಲು ಅದನ್ನು ಕೊಲ್ಲುವುದು, ನೋವನ್ನುಂಟು ಮಾಡುವುದು ಅಹಿಂಸೆಯ ಶುದ್ಧಸ್ವರೂಪವಾಗಬಹುದು. ಪ್ರತಿಯೊಂದು ಸಂದರ್ಭದಲ್ಲಿಯೂ ಅದಕ್ಕೆ ತಕ್ಕಂತೆ ನಾವು ವಿಮರ್ಶೆಮಾಡಬೇಕು. ಹಿಂಸೆಯೇ ಅಹಿಂಸೆಯೇ ಎಂದು ನಿರ್ಧಾರಮಾಡಲು ಮಾಡಿದ ಕಾರ್ಯದ ಉದ್ದೇಶ್ಯವೇ ಅಂತಿಮ ಸಾಕ್ಷಿ.

# ಕೊಲ್ಲುವುದು ಯಾವಾಗ ಹಿಂಸೆ ?

ನಮ್ಮ ಆಶ್ರಮವು ಎದುರಿಸಬೇಕಾಗಿರುವ ಮತ್ತೊಂದು ಪ್ರಬಲವಾದ ಸಮಸ್ಯೆಯನ್ನು ಈಗ ನಾನು ಪ್ರಸ್ತಾಪಿಸುತ್ತೇನೆ. ಕೋತಿಗಳ ಹಾವಳಿ ಬಹಳ ವಾಗಿಬಿಟ್ಟಿದೆ. ತತ್‌ಕ್ಷಣ ಇದರ ನಿವಾರಣೆಗೆ ಏನಾದರೊಂದು ಮಾರ್ಗವನ್ನು ಹುಡುಕುವುದು ಅತ್ಯಗತ್ಯವಾಗಿದೆ. ಬೆಳೆಯುತ್ತಿರುವ ಕಾಯಿಪಲ್ಯದ ಗಿಡಗಳೂ ಹಣ್ಣಿನ ಗಿಡಗಳೂ ಈ ಕೋತಿಗಳ ವಿಶೇಷ ಗಮನಕ್ಕೆ ಬಂದು ನಾಶವಾಗುತ್ತಿವೆ. ಈ ಕೋತಿಗಳಾದರೋ ಬಹಳ ಆದರಕ್ಕೆ ಪಾತ್ರವಾಗಿಬಿಟ್ಟವೆ. ನಾವು ಎಲ್ಲ ಪ್ರಯತ್ನವನ್ನೂ ಮಾಡಿಯಾಯಿತು. ಆದರೆ ಈ ಹಾವಳಿಯನ್ನು ತಪ್ಪಿಸಲು ಯಾವ ಅಹಿಂಸಾಮಾರ್ಗವೂ ಉಪಯೋಗವಾಗುತ್ತಿಲ್ಲ.

ಈ ವಿಷಯ ಒಂದು ದೊಡ್ಡ ತೀವ್ರವಾದ ವಿವಾದಕ್ಕೇ ಇಟ್ಟುಕೊಂಡಿದೆ. ನನಗೆ ಬಹಳ ಕೋಪದಿಂದ ಅನೇಕರು ಪತ್ರಗಳನ್ನು ಬರೆಯುತ್ತಿದಾರೆ. ಒಬ್ಬ ಪತ್ರ ಲೇಖಕರು, ಬಿಲ್ಲು-ಬಾಣಗಳಿಂದ ಕೋತಿಗಳನ್ನು ಕೊಲ್ಲುವುದನ್ನೂ ಗಾಯಗೊಳಿಸುವುದನ್ನೂ ಖಂಡಿಸಿ ಬರೆದಿದಾರೆ. ಈವರೆಗೂ ಆಶ್ರಮದಲ್ಲಿ ಈ ಲೇಖಕರು ಅನುಮಾನಿಸುವಂತೆ ಬಿಲ್ಲುಬಾಣಗಳಿಂದಾಗಲಿ ಬೇರೆ ವಿಧದಲ್ಲಿ ಯಾಗಲಿ ಒಂದು ಕೋತಿಯನ್ನೂ ಕೊಲ್ಲಲಿಲ್ಲ— ಸಾಯಗೊಳಿಸಲೂ ಇಲ್ಲವೆಂದು ನಾನು ಆಶ್ವಾಸನ ಕೊಡುತ್ತೇನೆ. ಅವುಗಳನ್ನು ಓಡಿಸಲು ಪ್ರಯತ್ನಗಳು ನಡೆಯುತ್ತಲಿವೆ. ಇದಕ್ಕಾಗಿ ಯಾವ ಹಾನಿಯನ್ನೂ ಮಾಡದ ಬಾಣಗಳನ್ನು ಪ್ರಯೋಗಿಸಲಾಗುತ್ತಿದೆ.

ಕೋತಿಗಳನ್ನು ಹೆದರಿಸಿ ಓಡಿಸುವುದಕ್ಕಾಗಿ ಅವುಗಳಿಗೆ ಗಾಯ ಮಾಡು ವುದನ್ನು ನಾನು ಸಹಿಸಲಾರೆ. ಆದರೆ ಬೇರೆ ಉಪಾಯವಿಲ್ಲದಿದ್ದರೆ ಅವುಗಳನ್ನು ಕೊಲ್ಲುವ ವಿಷಯವನ್ನು ನಾನು ತೀವ್ರವಾಗಿ ಚಿಂತಿಸುತ್ತಿದೇನೆ. ಆದರೆ ಈ ಪ್ರಶ್ನೆ ಹಿಂದಿನ ಪ್ರಶ್ನೆಯಷ್ಟು ಸುಲಭವಲ್ಲ.

ಕೋತಿಗಳನ್ನು ಓಡಿಸುವುದರಲ್ಲಿಯೂ ಸಹ ಅಹಿಂಸೆಗೆ ಭಂಗವಾಗುವು ದೆಂದು ನನಗೆ ಸ್ಪಷ್ಟವಾಗಿದೆ. ಇನ್ನು ಅವುಗಳನ್ನು ಕೊಲ್ಲುವುದಾದರೆ ಅಹಿಂಸೆಗೆ ಮತ್ತಷ್ಟು ಭಂಗವಾಗುವುದು. ಏಕೆಂದರೆ ಸ್ವಹಿತಕ್ಕಾಗಿ ಕೊಲ್ಲುವುದಾಗಲಿ

ಅದಕ್ಕೆ ಸಮನಾದ ರೀತಿಯಲ್ಲಿ ನೋವನ್ನುಂಟುಮಾಡುವುದಾಗಲಿ ನಿಸ್ಸಂಶಯ ವಾಗಿ ಹಿಂಸೆಯೇ ಆಗುವುದು.

ಸ್ವಲ್ಪವಾದರೂ ಹಿಂಸೆಯನ್ನು ಮಾಡಿಯೇ ಈ ದೇಹ ಉಳಿಯಬೇಕಾಗಿದೆ. ಆದುದರಿಂದಲೇ ಅಹಿಂಸಾ ಪರಮೋಧರ್ಮವೆಂದು ನಿಷೇಧಾತ್ಮಕ 'ಅ'ಕಾರ ವನ್ನು ಜೋಡಿಸಿ ಹೇಳಿದಾರೆ. ಪ್ರಪಂಚವು ನಾಶದ ಸರಪಳಿಯಲ್ಲಿ ಬಂಧಿತ ವಾಗಿದೆ. ಅಂದರೆ ದೇಹದಲ್ಲಿ ಪ್ರಾಣ ಉಳಿಯಲು ಹಿಂಸೆ ನಿಸರ್ಗನಿಯಮ ವಾಗಿದೆ. ಆದುದರಿಂದಲೇ ಅಹಿಂಸಾ ಉಪಾಸಕನು ದೇಹಧಾರಣೆಯಿಂದ ವಿಮುಕ್ತನಾಗಲು ಸದಾ ಪ್ರಾರ್ಥಿಸುತ್ತಾನೆ.

ಆದುದರಿಂದ ದೇಹದೊಂದಿಗೆ ಇರುವವರೆಗೂ ಯಾರೂ ಹಿಂಸೆಯಿಂದ ಪಾರಾಗಲು ಸಾಧ್ಯವಿಲ್ಲ. ಏಕೆಂದರೆ ಯಾರೂ ಜೀವದಾಸೆಯನ್ನು ಪೂರ್ಣ ವಾಗಿ ತ್ಯಜಿಸಿರುವುದಿಲ್ಲ. ಜೀವದ ಸಹಕಾರವಿಲ್ಲದೆ ದೇಹವನ್ನು ಒತ್ತಾಯಕ್ಕೆ ಗುರಿಮಾಡುವುದರಿಂದ ಉಪಯೋಗವಿಲ್ಲ. ನೀವು ಪ್ರಾಯೋಪವೇಶ ಮಾಡ ಬಹುದು. ಆದರೆ ಮನಸ್ಸು ವಿಷಯವಾಸನೆಯಿಂದ ಕೂಡಿದ್ದರೆ ಉಪವಾಸ ಕ್ರಿಯೆ ಕೇವಲ ಮಿಥ್ಯಾಚರಣೆ ಮತ್ತು ಭ್ರಾಂತಿಯುತವಾಗಿರುವುದು. ಯಾವ ಬಗೆಯ, ಎಷ್ಟು ಪ್ರಮಾಣದಲ್ಲಿ—ಹಿಂಸೆಯನ್ನು ಮಾಡಬೇಕು ಎಂಬುದನ್ನು ಅವನು ಹೇಗೆ ನಿಷ್ಕರ್ಷೆ ಮಾಡಲು ಸಾಧ್ಯ ? ಸಮಾಜವೇನೊ ಒಂದು ಮಿತಿ ಯನ್ನು ಹಾಕಿಕೊಟ್ಟಿದೆ, ಪ್ರಮಾಣವನ್ನು ಸೂಚಿಸಿದೆ; ಅಷ್ಟರಮಟ್ಟಿಗೂ ವ್ಯಕ್ತಿ ಚಿಂತಿಸಬೇಕಾಗಿಲ್ಲ. ಆದರೆ ಸತ್ಯವನ್ನು ಅರಸುವವನು ತನಗೆ ವೈಯಕ್ತಿಕವಾಗಿ ಅವಶ್ಯವಾದ ರೀತಿಯಲ್ಲಿ ಈ ಪ್ರಮಾಣದಲ್ಲಿ ಹೆಚ್ಚುಕಡಿಮೆ ಮಾಡಿಕೊಳ್ಳಬೇಕು. ಆ ಮಿತಿಯನ್ನು ಮತ್ತಷ್ಟು ಮಿತಗೊಳಿಸಿ, ಹಿಂಸೆಯ ಕ್ಷೇತ್ರವನ್ನೂ ಆದಷ್ಟು ಸಂಕುಚಿತ ಮಾಡುವ ಸತತ ಪ್ರಯತ್ನದಲ್ಲಿ ನಿರತನಾಗಬೇಕು. ಆದರೆ ಬೇಸಾಯಗಾರನು ತನ್ನ ಜೀವನವನ್ನು ಹೇಗೂ ಹಾಗೂ ನಡೆಸುವುದರಲ್ಲಿ ಮಗ್ನನಾಗಿ ದುಡಿತದಿಂದ ಬೇಸತ್ತು ಬೆಂಡಾಗಿರುವುದರಿಂದ ಈ ಸಮಸ್ಯೆಗಳನ್ನು ಕುರಿತು ಚಿಂತಿಸಲು ಅವನಿಗೆ ವೇಳೆಯೂ ಇಲ್ಲ, ಶಕ್ತಿಯೂ ಇಲ್ಲ. ವಿದ್ಯಾವಂತ ರಾದರೊ ಇವನಿಗೆ ಸಹಾಯ ಮಾಡುವುದಕ್ಕೆ ಬದಲಾಗಿ ಅವನ ಬಗೆಗೆ ಔದಾ ಸೀನ್ಯವನ್ನು ತಾಳುವರು. ನಾನು ಹಳ್ಳಿಯ ರೈತನೇ ಆಗಿರುವುದರಿಂದ, ನಾನು

ಮುಂದೆ ಸಾಗಲು ಯಾವ ಸ್ಪಷ್ಟವಾದ ದಾರಿಯೂ ತೋರುತ್ತಿಲ್ಲ. ಆದುದರಿಂದಲೇ ನಾನೇ ನನ್ನ ದಾರಿಯನ್ನು ಮಾಡಿಕೊಳ್ಳುತ್ತ ಸಾಗಬೇಕು. ಪ್ರಾಯಶಃ ಇದೇ ದಾರಿಯೇ ನನ್ನಂತಹ ಇತರ ರೈತರಿಗೂ ಉಪಯೋಗವಾದೀತು. ಹಳ್ಳಿಯ ರೈತರಿಗೆ ಈ ಕೋತಿಗಳ ಹಾವಳಿ ಅವರು ಎದುರಿಸಬೇಕಾದ ನೂರಾರು ಸಮಸ್ಯೆಗಳಲ್ಲಿ ಒಂದು. ಈ ಸಮಸ್ಯೆಯ ಪರಿಹಾರವನ್ನು ನಾನು ಕಂಡುಹಿಡಿಯಬೇಕು. ಇದರಿಂದ, ಆದಷ್ಟು ಕಡಿಮೆ ಹಿಂಸೆಯನ್ನು ಮಾಡಿ ರೈತನ ಕಾಳುಕಡಿ ಉಳಿಯಬೇಕು.

ಗುಜರಾತಿನ ರೈತರು ಈ ಕೆಲಸಕ್ಕಾಗಿಯೇ ಕೆಲವು ಕಾವಲುಗಾರರನ್ನು ನೇಮಿಸುತ್ತಾರೆಂದು ನಾನು ಕೇಳಿದೇನೆ. ಈ ಕಾವಲುಗಾರನನ್ನು ನೋಡಿದ ಕ್ಷಣವೇ ಕೋತಿಗಳು ಓಡಿಹೋಗುತ್ತವೆಯಂತೆ, ಅವುಗಳನ್ನು ಕೊಲ್ಲುವ ಆವಶ್ಯಕತೆಯೇ ಇರುವುದಿಲ್ಲವಂತೆ. ಇದು ನಿಜವಿರಬಹುದು. ಆದರೆ ಉಪಾಯವು ಸರಿಯಾಗಿರುವ ಪಕ್ಷದಲ್ಲಿ ಒಂದು ವಿಷಯವನ್ನು ನಾವು ಮರೆಯಲಾಗದು. ಒಂದಲ್ಲ ಒಂದು ವೇಳೆ ಸ್ವಲ್ಪವಾದರೂ ನಾಶಮಾಡಬೇಕಾದೀತು. ಏಕೆಂದರೆ ನಮ್ಮ ಬಂಧುವರ್ಗಕ್ಕೆ ಸೇರಿದವರು, ಈ ವಾನರರು ಯುಕ್ತಿವಂತರು, ಜಾಣರು, ಅವಕ್ಕೆ ಯಾವ ಅಪಾಯವೂ ಇಲ್ಲವೆಂದು ಕಂಡುಕೊಂಡ ಕೂಡಲೆ ಗುಂಡನ್ನು ಹಾರಿಸಿದರೂ ಅವು ಹೆದರುವಂತಿಲ್ಲ. ಆದುದರಿಂದ ಆಶ್ರಮದಲ್ಲಿ ಚೆನ್ನಾಗಿ ಪರ್ಯಾಲೋಚಿಸಿ ಮಾಡಬಹುದಾದ ಪ್ರಯತ್ನವೆಲ್ಲವನ್ನೂ ಮಾಡಿದೇವೆ. ಯಾವುದನ್ನೂ ಬಿಟ್ಟಿಲ್ಲ. ಇದನ್ನು ಯಾರೂ ಮರೆಯಬಾರದು. ಆದರೆ ಈವರೆಗೂ ಮಾಡಿದ ಉಪಾಯಗಳೆಲ್ಲವೂ ಹಿಂಸೆಯಿಂದ ಕೂಡಿವೆ. ಆದುದರಿಂದ 'ನವಜೀವನ'ದ ವಾಚಕರಿಂದ ಸಲಹೆಗಳನ್ನು ನಾನು ಸ್ವಾಗತಿಸುತ್ತೇನೆ. ಆದರೆ ಅವರು ಮೇಲೆ ಹೇಳಿರುವ ವಿಷಯಗಳನ್ನು ನೆನಪಿನಲ್ಲಿಟ್ಟುಕೊಂಡು ತಮ್ಮ ಸಲಹೆಗಳನ್ನು ಬರೆದು ಕಳುಹಿಸಬೇಕು. ತಾವೇ ಯಶಸ್ವಿಯಾಗಿ ಆಚರಿಸಿದ ಉಪಾಯಗಳನ್ನು ಸೂಚಿಸಬೇಕು. ಅವುಗಳಲ್ಲಿ ಹಿಂಸೆ ಆದಷ್ಟು ಕಡಿಮೆ ಪ್ರಮಾಣದಲ್ಲಿರಬೇಕು. (ಯಂಗ್ ಇಂಡಿಯಾ, ೪-೧೦-೧೯೨೮)

# ಅಹಿಂಸೆಯ ತೊಡಕು

'ಅಗ್ನಿಪರೀಕ್ಷೆ'ಯೆಂದು ನಾನು ಬರೆದ ಲೇಖನದಿಂದ ನನ್ನ ಮೇಲೆ ಅನೇಕರು ಬಹಳ ಕೋಪಗೊಂಡು ಆಕ್ಷೇಪಣೆ ಮಾಡಿದಾರೆ. ಅವರಿಗೆ ಅಹಿಂಸೆಯ ಮೇಲೆ ತಮಗೆಷ್ಟು ಅಭಿಮಾನವಿರುವುದೆಂದು ತೋರಿಸುವುದಕ್ಕಾಗಿ ಅಷ್ಟೇ ಪ್ರಮಾಣದಲ್ಲಿ ನನ್ನನ್ನು ಬೈದಂತೆ ಕಾಣುತ್ತದೆ. ಇನ್ನು ಕೆಲವರು ನನ್ನ ಅಹಿಂಸೆಯನ್ನು ಪರೀಕ್ಷೆ ಮಾಡುವುದಕ್ಕೋ ಏನೊ ಎಲ್ಲ ಮರ್ಯಾದೆಯನ್ನೂ ಸಭ್ಯತೆಯನ್ನೂ ಒತ್ತಟ್ಟಿಗೆ ಎಸೆದು ಕಟುವಾಕ್ಯಗಳಲ್ಲಿಯೂ ಯಾವ ಮಿತಿಮೇರೆ ಇಲ್ಲದೆಯೂ ನನ್ನನ್ನು ದೂಷಿಸಿದಾರೆ. ಮತ್ತೆ ಕೆಲವರು ಅವರು ಭಾವಿಸುವಂತೆ ನನ್ನ ವಕ್ರಮನೋವೃತ್ತಿಯನ್ನು ಕಂಡು ನಿಜವಾಗಿ ಖೇದಗೊಂಡು, ತಮ್ಮ ದುಃಖವನ್ನು ತೋಡಿಕೊಂಡಿದಾರೆ. ಈ ಎಲ್ಲ ಪತ್ರಗಳಿಗೂ ಉತ್ತರ ಕೊಡುವುದಕ್ಕೆ ನನಗೆ ವೇಳೆ ಇಲ್ಲ; ಕೊಡುವ ಆವಶ್ಯಕತೆಯೂ ಇಲ್ಲ. ಈ ಕಟುವಾಗಿ ಬರೆದವರು ಮಾಡಿರುವ ಉಪಕಾರವೇನೆಂದರೆ, ನನ್ನ ಸಹನೆಗೂ ಅಹಿಂಸೆಗೂ ಉತ್ತಮ ಅಭ್ಯಾಸವನ್ನು ಒದಗಿಸಿದಾರೆ. ಇಂತಹ ಪತ್ರಗಳನ್ನು ಬದಿಗಿಟ್ಟು, ಮಿತಿಯಿಂದಲೂ ಸಭ್ಯತೆಯಿಂದಲೂ ಬರೆದ ಉಳಿದ ಪತ್ರಗಳಿಂದ ನಾನು ಆರಿಸಬಹುದಾದ ಕೆಲವು ವಾದಗಳನ್ನು ತೆಗೆದುಕೊಂಡು ಅವುಗಳ ಬಗೆಗೆ ವಿಚಾರ ಮಾಡುತ್ತೇನೆ.

ಯಾವಾಗಲೂ ಸಂಕ್ಷೇಪವಾಗಿಯೂ ಖಚಿತವಾಗಿಯೂ ವಿಷಯವನ್ನು ಹೇಳುವ ಸ್ಫುಟವಾದ ರೀತಿಯಲ್ಲಿ ಮಸಿಯಲ್ಲಿ ಬರೆದ ಪತ್ರಗಳಿಗೆ ನಾನು ಪೂರ್ಣ ಗಮನವನ್ನು ಕೊಟ್ಟು ಪರ್ಯಾಲೋಚಿಸುತ್ತೇನೆ. ಏಕೆಂದರೆ ನಾನು ನಮ್ರನಾದ ಸತ್ಯದ ಉಪಾಸಕನಾಗಿದೇನೆ ಮತ್ತು 'ನವಜೀವನ'ವನ್ನು ನಡೆಸುವುದು— ಬೋಧಿಸುವುದಕ್ಕೆ ಮಾತ್ರವಲ್ಲದೆ ಕಲಿಯುವುದಕ್ಕೆಂದೂ ಭಾವಿಸಿಕೊಂಡಿದೇನೆ.

ಈಗ ಪತ್ರಲೇಖಕರ ಆಕ್ಷೇಪಣೆಗಳನ್ನೂ ಉಪದೇಶಗಳನ್ನೂ ತೆಗೆದುಕೊಳ್ಳೋಣ. ಅವುಗಳನ್ನು ಈ ಕೆಳಗೆ ಕಂಡಂತೆ ಸಂಕ್ಷೇಪವಾಗಿ ವಿಂಗಡಿಸಬಹುದು :

(೧) ನೀವು ಈಗ ಅಹಿಂಸಾಕ್ಷೇತ್ರದಿಂದ ನಿವೃತ್ತರಾಗಬೇಕು.

(೨) ನೀವು ಅಹಿಂಸೆಯ ಬಗೆಗೆ ಹೇಳುವ ಅಭಿಪ್ರಾಯಗಳು ಪಾಶ್ಚಾತ್ಯ ದೇಶಗಳಿಂದ ತೆಗೆದುಕೊಂಡಿದೀರೆಂದು ಒಪ್ಪಿಕೊಳ್ಳಬೇಕು.

(೩) ನೀವು ಹೇಳುವ ಅಭಿಪ್ರಾಯಗಳನ್ನು ದುರುಪಯೋಗಪಡಿಸಿಕೊಳ್ಳಬಹುದೆಂಬ ಶಂಕೆ ಇದ್ದಪಕ್ಷಕ್ಕೆ ಅವುಗಳನ್ನು ನೀವು ಬಹಿರಂಗವಾಗಿ ಹೇಳಬಾರದು.

(೪) ನೀವು ಕರ್ಮಸಿದ್ಧಾಂತದಲ್ಲಿ ನಂಬಿಕೆಯುಳ್ಳವರಾದರೆ ಕರುವನ್ನು ವೃಥಾ ಕೊಂದಿರುವಿರಿ, ಈ ಸಿದ್ಧಾಂತಕ್ಕೆ ಅಡ್ಡಲಾಗಿ ಬಂದು ವರ್ತಿಸಿರುವಿರಿ.

(೫) ಆ ಕರು ಉಳಿಯಲೇ ಆರದೆಂದು ತಿಳಿಯಲು ನಿಮಗೇನು ಅಧಿಕಾರ? ವೈದ್ಯರು ಎಲ್ಲ ಆಸೆಯನ್ನು ಬಿಟ್ಟಮೇಲೆ, ಗುಣಹೊಂದುವ ನಿದರ್ಶನಗಳಿಲ್ಲವೆ?

ನಾನು ಅಹಿಂಸಾಕ್ಷೇತ್ರದಿಂದ ನಿವೃತ್ತನಾಗಬೇಕೆ, ಬೇರೆ ಯಾವ ಕ್ಷೇತ್ರದಿಂದಲಾದರೂ ನಿವೃತ್ತನಾಗಬೇಕೆ?—ಈ ವಿಷಯದ ನಿರ್ಧಾರ ಮೂಲತಃ ಕೇವಲ ನನಗೆ ಸೇರಿದ ವಿಷಯು. ಒಬ್ಬ ಮನುಷ್ಯನು ತನ್ನ ಹಕ್ಕನ್ನೂ ಅಧಿಕಾರವನ್ನೂ ಬಿಟ್ಟುಕೊಡಬಹುದು. ಆದರೆ ಅವನು ಕರ್ತವ್ಯವನ್ನು ಬಿಟ್ಟುಕೊಟ್ಟರೆ ಕರ್ತವ್ಯಭ್ರಷ್ಟನಾಗುವನು. ಸತ್ಯವನ್ನು ನುಡಿದು ಅದರಂತೆ ಆಚರಿಸುವವನ ಪಾಲಿಗೆ ಅನೇಕ ವೇಳೆ ಜನನಿಂದೆ, ದೂಷಣೆಯೇ ಲಭಿಸುವುದು. ಹೀಗೆ ಜನನಿಂದೆಗೆ ಗುರಿಯಾದರೂ, ಸರಿಯೆಂದೂ ಜನಹಿತಕ್ಕೆಂದೂ ತನ್ನ ಅಭಿಪ್ರಾಯವನ್ನು ಸತ್ಯಾಗ್ರಹಿಯಾದವನು ಯಾವ ಸಂಕೋಚವೂ ಇಲ್ಲದೆ ಹೇಳಬೇಕಾದುದು ಅವನ ಕರ್ತವ್ಯವೆಂದು ನಾನು ಭಾವಿಸುತ್ತೇನೆ. ಅಹಿಂಸೆಯ ವಿಚಾರದಲ್ಲಿ ನನ್ನ ಅಭಿಪ್ರಾಯಗಳು ಸರಿಯೆಂದು ನನಗೆ ವಿಶ್ವಾಸ ಇರುವವರೆಗೂ ಅವನ್ನು ನಾನು ವ್ಯಕ್ತಮಾಡದಿದ್ದರೆ ಕರ್ತವ್ಯಲೋಪ ಮಾಡಿದಂತೆ ಆಗುತ್ತದೆ.

ನನ್ನ ಪಾಶ್ಚಾತ್ಯ ಶಿಕ್ಷಣದ ಫಲವಾಗಿ ಅಹಿಂಸೆಯ ಬಗೆಗೆ ನನಗಿರುವ ಅಭಿಪ್ರಾಯಗಳು ರೂಪುಗೊಂಡಿದ್ದರೆ ಅದಕ್ಕಾಗಿ ನಾನು ನಾಚಿಕೆಪಡುವ ಕಾರಣವಿಲ್ಲ. ನಾನು ಪಾಶ್ಚಾತ್ಯರ ಅಭಿಪ್ರಾಯಗಳೆಲ್ಲವನ್ನೂ ತ್ಯಜಿಸಿದವನಲ್ಲ. ಅವರು ಹೇಳುವುದೆಲ್ಲವೂ ದೋಷಯುಕ್ತವೆಂದು ಹೇಳಲು ನಾನು ಸಿದ್ಧನಾಗಿಲ್ಲ.

ನಾನು ಪಾಶ್ಚಾತ್ಯರಿಂದ ಬಹಳ ಕಲಿತಿದ್ದೇನೆ, ಅವರಿಂದ ಅಹಿಂಸೆಯ ಬಗೆಗೂ ಕೆಲವು ವಿಷಯಗಳನ್ನು ಕಲಿತಿದ್ದರೆ ಆಶ್ಚರ್ಯವೇನು ? ನನ್ನ ಅಭಿಪ್ರಾಯಗಳಲ್ಲಿ ಯಾವುದು ಪಾಶ್ಚಾತ್ಯ ದೇಶದ್ದು ಎಂದು ನಾನು ವಿಂಗಡಿಸುತ್ತ ಕೂಡುವುದಿಲ್ಲ. ಅಹಿಂಸೆಯ ವಿಚಾರದಲ್ಲಿ ನಾನು ಹೇಳುವುದನ್ನು ಮೈಗೂಡಿಸಿಕೊಂಡಿದ್ದರೆ ಅಷ್ಟೇ ನನಗೆ ಸಾಕು.

ಕರುವನ್ನು ಕೊಂದ ವಿಚಾರದಲ್ಲಿ ನನ್ನ ಅಭಿಪ್ರಾಯಗಳನ್ನು ಬಹಿರಂಗ ವಾಗಿ ಚರ್ಚಿಸಿದೇನೆ. ನನ್ನ ಅಭಿಪ್ರಾಯಗಳು ಸರಿಯೆಂದು ತೋರಿಸುವುದು ಮಾತ್ರಕ್ಕಲ್ಲ, ನನಗೆ ತಿಳಿದಮಟ್ಟಿಗೂ ಅವು ಶುದ್ಧ ಅಹಿಂಸೆಯ ಆಧಾರವುಳ್ಳ ದ್ದಾಗಿವೆಯೆಂದೂ, ಈ ಕಾರಣದಿಂದ ಅಹಿಂಸೆಗೆ ಸಂಬಂಧಪಟ್ಟ ಕೆಲವು ತೊಡಕಿನ ಸಮಸ್ಯೆಗಳ ಪರಿಹಾರಕ್ಕೆ ಈ ಚರ್ಚೆ ಬೆಳಕನ್ನು ಬೀರಬಹುದೆಂದೂ ನಾನು ಹೀಗೆ ಮಾಡಿದೇನೆ.

ಕೋತಿಗಳ ಸಮಸ್ಯೆ ಇಂತಹುದಲ್ಲ. ಈ ಸಂದರ್ಭದಲ್ಲಿ ನನ್ನ ಕರ್ತವ್ಯ ಏನೆಂಬುದು ನನಗೆ ತಿಳಿಯದಾಗಿದೆ. ಅದಕ್ಕಾಗಿ ಇದನ್ನು ಬಹಿರಂಗವಾಗಿ ಚರ್ಚಿಸಿದೇನೆ. ಈ ವಿಷಯದಲ್ಲಿ ನನಗೆ ದಾರಿ ಬೆಳಗಬೇಕಾಗಿದೆ. ಈಗಾಗಲೇ ಕೆಲವರು ಉಪಯುಕ್ತವಾದ ಸಲಹೆಗಳನ್ನು ಕಳುಹಿಸಿದಾರೆ. ಬೇರೆ ಮಾರ್ಗವೇ ತೋರದೆ ತೀರ ಅನಿವಾರ್ಯವಾದ ಹೊರತು ಕೋತಿಗಳನ್ನು ಕೊಲ್ಲುವಷ್ಟು ದೂರ ನಾನು ಹೋಗಲಾರೆನೆಂದು ಭರವಸೆಯನ್ನು ನೀಡುತ್ತೇನೆ. ಕೊಲ್ಲುವ ಆವಶ್ಯಕತೆ ಬಂದರೆ ಅದು ನನಗೆ ಬಹಳ ನೋವನ್ನುಂಟುಮಾಡುವುದು. ಅಂತಹ ಸಂದರ್ಭ ಒದಗದಂತೆ ಈ ನನಗೆ ಬೇಡವಾದ ಮೊಂಡು ಅತಿಥಿಗಳನ್ನು ಓಡಿಸಲು. ಉಪಾಯ ಏನಾದರೂ ಇದೆಯೇ ಎಂದು ತಿಳಿದುಕೊಳ್ಳಲು ಸಲಹೆಗಳನ್ನು ಕೋರಿದೇನೆ.

ಕರ್ಮಸಿದ್ಧಾಂತದಲ್ಲಿ ನನಗೆ ಪೂರ್ತಿ ನಂಬಿಕೆ ಇದೆ. ಆದರೆ ಪುರುಷ ಪ್ರಯತ್ನವೂ ಮುಖ್ಯವೆಂದು ನಾನು ನಂಬುತ್ತೇನೆ. ಅನಾಸಕ್ತಿಯಿಂದ ಕರ್ಮ ಫಲಗಳನ್ನು ನಿರಸನಗೊಳಿಸಿ ತನ್ಮೂಲಕ ಮೋಕ್ಷವನ್ನು ಹೊಂದುವುದೇ ಮನುಷ್ಯನ ಪರಮಪುರುಷಾರ್ಥವೆಂದು ನಾನು ಭಾವಿಸಿದೇನೆ. ಒಂದು ನರಳು ತ್ತಿರುವ ಮೂಕಪ್ರಾಣಿಯ ಯಾತನೆಯನ್ನು ಕೊನೆಗಾಣಿಸುವುದಕ್ಕಾಗಿ ಅದರ ಪ್ರಾಣವನ್ನು ತೆಗೆಯುವುದು ಕರ್ಮಸಿದ್ಧಾಂತಕ್ಕೆ ವಿರುದ್ಧ ಕಾರ್ಯವಾದರೆ, ರೋಗಿ

ಗಳನ್ನು ಉಪಚರಿಸಿ, ಅವರನ್ನು ಆರೋಗ್ಯದಿಂದ ಮತ್ತೆ ಜೀವಿಸುವಂತೆ ಮಾಡುವ ಕಾರ್ಯವೂ ಕೂಡ ಈ ಕರ್ಮಸಿದ್ಧಾಂತಕ್ಕೆ ವಿರುದ್ಧವೇ ಆಗುವುದು. ಆದರೆ ತನ್ನ ಕರ್ಮದ ಫಲವನ್ನು ಅನುಭವಿಸುತ್ತಿರುವನೆಂದು ಹೇಳಿ ಒಬ್ಬ ರೋಗಿಗೆ ಔಷಧಿಯನ್ನು ಕೊಡುವುದಿಲ್ಲವೆಂದು ಹೇಳಿದರೆ ಅಥವಾ ಅವನಿಗೆ ಉಪಚಾರವನ್ನು ಮಾಡದಿದ್ದರೆ, ಅದು ಹಿಂಸಾಕಾರ್ಯವಾಗುವುದು. ನಿಷ್ಕರುಣೆ ಆಗುವುದು. ವಿಧಿ ಅಥವಾ ಕರ್ಮಫಲ ಪ್ರಬಲವಾದುದೇ, ಪುರುಷಪ್ರಯತ್ನ ಪ್ರಬಲವಾದುದೇ ?—ಈ ಪ್ರಶ್ನೆ ಪುರಾತನ ಕಾಲದಿಂದಲೂ ವಿವಾದಗ್ರಸ್ತ ವಾದುದು. ಈ ವಿವಾದಕ್ಕೆ ಕೈಹಾಕದೆ ಇಷ್ಟನ್ನೇ ನಾನು ಹೇಳಬಯಸುತ್ತೇನೆ: ತನಗೆ ಸಾಧ್ಯವಾದಷ್ಟು ಅಲ್ಪಸೇವೆಯನ್ನು ಸಲ್ಲಿಸುವುದೇ ಪ್ರತಿಯೊಬ್ಬನ ಪರಮ ಕರ್ತವ್ಯ.

ಆ ಕರು ಮತ್ತೆ ಬದುಕಲಾರದೆಂದು ಖಚಿತವಾಗಿ ಪ್ರಮಾಣಮಾಡಲು ಆಧಾರವಿಲ್ಲವೆಂದು ನಾನು ಒಪ್ಪುತ್ತೇನೆ. ವೈದ್ಯರು ಆಸೆಬಿಟ್ಟಮೇಲೆ ಬದುಕಿರುವ ನಿದರ್ಶನಗಳು ನನ್ನ ಅನುಭವದಲ್ಲಿಯೂ ಇವೆ. ಮಾನವನ ಬುದ್ಧಿಶಕ್ತಿ ಅಲ್ಪ, ಪರಿಮಿತಿಯುಳ್ಳದ್ದು. ಹೀಗಿದ್ದರೂ ತನ್ನ ಬುದ್ಧಿಶಕ್ತಿಗೆ ನಿಲುಕುವಷ್ಟು ದೂರ ವಿಚಾರ ಮಾಡಬೇಕು. ಅಜ್ಞಾನದ ಮುಬ್ಬನ್ನು ಭೇದಿಸಬೇಕು. ಅದರ ಬೆಳಕಿನಲ್ಲಿ ನಡೆದುಹೋಗಬೇಕು. ನಮ್ಮ ನಿತ್ಯಜೀವನದ ನೂರಾರು ಸಂದರ್ಭ ಗಳಲ್ಲಿ ನಾವು ಮಾಡುವುದಾದರೂ ಇದನ್ನೇ. ಹಿಂದೂಗಳಾದ ನಾವು ದೇಹ ಅಶಾಶ್ವತ, ಆತ್ಮವೇ ನಿತ್ಯ ಎನ್ನುವ ಸಿದ್ಧಾಂತವನ್ನು ಶಿಶುಗಳಾಗಿದ್ದ ಕಾಲದಾರಭ್ಯ ಕೇಳುತ್ತಿದ್ದರೂ, ಸಾವು ಎಂದ ಕೂಡಲೆ ಅದು ಏಕೋ ನಮಗೆ ದಿಗ್ಭ್ರಮೆಯನ್ನುಂಟುಮಾಡಿ ನಮ್ಮ ವಿಚಾರಶಕ್ತಿ ಎಲ್ಲವನ್ನೂ ಪಲ್ಲಟಮಾಡಿಸು ತ್ತದೆ. ಇದೊಂದು ವಿರೋಧಾಭಾಸದಂತೆ ಕಾಣುತ್ತದೆ. ಕರುವನ್ನು ಕೊಲ್ಲ ಬೇಕೆಂಬ ನನ್ನ ತೀರ್ಮಾನ ತಪ್ಪೆಂದು ಸಿದ್ಧವಾದರೂ, ಅದರಿಂದ ಅದರ ಆತ್ಮಕ್ಕೆ ಯಾವ ಹಾನಿಯೂ ಉಂಟಾಗಿರಲಾರದು, ನಾನು ತಪ್ಪಿತಸ್ಥನಾದರೆ ಅದರ ಫಲವನ್ನು ಅನುಭವಿಸಲು ನಾನು ಸಿದ್ಧನಾಗಿದೇನೆ. ಆದರೆ ಪ್ರಾಯಶಃ ಎರಡು ಗಂಟೆಯನಂತರ ಸಾಯುತ್ತಿದ್ದುದನ್ನು ಮೊದಲೇ ನಾನು ಕೊಂದು ಅದರ ಯಾತನೆಯನ್ನು ತಪ್ಪಿಸಿದ್ದಕ್ಕಾಗಿ ಉನ್ಮತ್ತನಂತೆ ಹಾರಾಡಲು ನಾನು ಸಿದ್ಧನಾಗಿಲ್ಲ. ಕರುವಿನ ವಿಷಯದಲ್ಲಿ ಯಾವ ನಿಯಮವನ್ನು ಅನುಸರಿಸಿದೆನೋ

ಅದನ್ನೇ ನನಗೆ ಪ್ರಿಯರಾದವರ ವಿಷಯದಲ್ಲಿ ಅನುಸರಿಸಲು ಸಿದ್ಧನಾಗಿದೇನೆ. ನಾವು ಪ್ರೀತಿಸುವವರ ವಿಚಾರದಲ್ಲಿ ವಿಪರೀತವಾದ ಪ್ರೇಮವನ್ನು ತೋರಿಸಿಯೋ, ವ್ಯಾಮೋಹದಿಂದಲೋ, ರೋಗನಿದಾನವನ್ನು ತಿಳಿಯುವುದರಲ್ಲಿ ಚಿಕಿತ್ಸಾ ಕ್ರಮದಲ್ಲಿ ಪ್ರಮಾದಗಳಾಗುವುದರಿಂದಲೇ ಎಷ್ಟು ಜನರು ಅಕಾಲಮರಣಕ್ಕೆ ತುತ್ತಾಗುತ್ತಿಲ್ಲ? ನಮ್ಮ ಭಾವೋದ್ರೇಕದಲ್ಲಿ ಸಾಮಾನ್ಯ ಕಾರುಣ್ಯಧರ್ಮವನ್ನು ಅನೇಕ ವೇಳೆ ನಾವು ಮರೆಯುತ್ತೇವೆ. ಈ ನಂಬಿಕೆ ನನಗೆ ಬರುವ ಪತ್ರಗಳಿಂದ ನನ್ನಲ್ಲಿ ದೃಢವಾಗುತ್ತಿದೆ. ನಿಜವಾದ ಪ್ರೇಮದ ದಾರಿಯಿಂದ ಸರಿಯುತ್ತೇವೆ. ನಮ್ಮ ಅಹಿಂಸಾ ಸಿದ್ಧಾಂತಕ್ಕೆ ಅಪಖ್ಯಾತಿ ತರುತ್ತಿದೇವೆ ಎಂದೂ ದೃಢವಾಗುತ್ತಿದೆ. ಅಹಿಂಸೆಯ ನಿಜವಾದ ಸ್ವರೂಪವನ್ನು ನಾವು ಗ್ರಹಿಸಲು ಸಾವಿನ ಭಯವೇ ದೊಡ್ಡ ಅಡ್ಡಿಯಾಗಿದೆ. (ಯಂಗ್ ಇಂಡಿಯಾ, ೧೧-೧೦-೧೯೨೮)

## ಒಂದು ಒಗಟು

ಅಹಿಂಸಾತತ್ತ್ವದ ಕೆಲವು ಉಗ್ರವಾದಿಗಳು ಅಂಚೆ ಇಲಾಖೆಯ ಆದಾಯವನ್ನು ಹೆಚ್ಚಿಸಬೇಕೆಂದೊ ಏನೋ ಬೈಗಳಿಂದ ತುಂಬಿದ ಕಾಗದಗಳ ಪ್ರವಾಹವನ್ನು ನನ್ನ ಮೇಲೆ ಹರಿಸುತ್ತಿದಾರೆ. ಅಹಿಂಸೆಯ ಹೆಸರಿನಲ್ಲಿ ಹಿಂಸೆಯನ್ನು ಆಚರಿಸುತ್ತಿದಾರೆ. ಈ ಕರುವಿನ ಬಗ್ಗೆ ವಿವಾದವನ್ನು ಸಾಧ್ಯವಿದ್ದರೆ ಕೊನೆ ಇಲ್ಲದೆ ಮುಂದುವರಿಸಬೇಕೆಂದು ಅವರ ಇಚ್ಛೆ. ಕೆಲವರು ನನಗೆ ಅರವತ್ತು ವರ್ಷಗಳಾಗಿರುವುದರಿಂದ ಅರಳುಮರುಳಾಗಿರುವುದೆಂದು ಒಳ್ಳೆಯ ಮಾತಿನಲ್ಲಿ ಸೂಚಿಸುತ್ತಾರೆ. ನನ್ನನ್ನು ಸಸೂನ್ ಆಸ್ಪತ್ರೆಗೆ ಕಳುಹಿಸಿದಾಗ ಅಲ್ಲಿನ ವೈದ್ಯರು ನನ್ನ ರೋಗವನ್ನು ಗುಣಪಡಿಸಲು ಆಸೆ ಇಲ್ಲವೆಂದು ಹೇಳಿ ನನಗೆ ಒಂದು ವಿಷದ ಇಂಜೆಕ್ಷನ್ ಕೊಟ್ಟು ನನ್ನ ಪ್ರಾಣವನ್ನು ಕೊನೆಗಾಣಿಸದೆ ಹೋದರಲ್ಲಾ ಎಂದು ವಿಷಾದವನ್ನು ವ್ಯಕ್ತಮಾಡಿದಾರೆ. ಹಾಗೆ ಮಾಡಿ ನನ್ನ ಪ್ರಾಣ ಹೋಗಿದ್ದರೆ ಈಗ ವಿಷದ ಇಂಜೆಕ್ಷನ್ ಕೊಟ್ಟು ಸಾಯಿಸಿರುವ ಕರು ಉಳಿಯುತ್ತಿತ್ತು. ನಾಶವನ್ನು ಇದಿರುನೋಡುತ್ತಿರುವ ಕೋತಿಗಳ ಕುಲ ಸುರಕ್ಷಿತವಾಗಿರುತ್ತಿತ್ತು. ನನಗೆ ನಿತ್ಯವೂ ಬರುತ್ತಿರುವ ಕಾಗದಗಳ ರಾಶಿಯಲ್ಲಿ ಮೇಲೆ ಉದಹರಿಸಿರುವ 'ಪ್ರಣಯ ಪತ್ರಗಳು' ಒಂದು ನಮೂನೆ. ಈ

ಕಾಗದಗಳು ಬಂದಹಾಗೆಲ್ಲ ನಾನು ಈ 'ನವಜೀವನ' ಪತ್ರಿಕೆಯಲ್ಲಿ ಬರೆದ ನನ್ನ ತೀರ್ಮಾನ ಸರಿಯೆಂದು ನನ್ನ ನಂಬಿಕೆ ದೃಢಗೊಳ್ಳುತ್ತಿದೆ. ಈ ಪತ್ರಗಳನ್ನು ಬರೆಯುವವರು ತಮ್ಮ ಆಕ್ರೋಶವನ್ನು ಈ ರೀತಿಯಲ್ಲಿ ತೀರಿಸಿಕೊಳ್ಳುವುದರಿಂದ ತಾವು ಅಹಿಂಸೆಯ ಉಪಾಸಕರೆಂದು ಹೇಳಿಕೊಳ್ಳಲು ಅನರ್ಹರಾಗುತ್ತಾರೆ. ಅಹಿಂಸೆಯ ಸಿದ್ಧಾಂತವನ್ನು ಬುಡಮುಟ್ಟ ಕಿತ್ತೊಗೆಯುತ್ತಿದಾರೆ. ಈ ವಿಷಯ ಅವರ ಮನಸ್ಸಿಗೆ ಬಂದಂತೆ ತೋರುವುದಿಲ್ಲ. ಈ ತೆಗಳಿಕೆಗಳಿಂದ ತುಂಬಿದ ಪತ್ರಗಳನ್ನು ಒಂದು ಬದಿಗಿಟ್ಟು, ಬೇರೆ ರೀತಿಯ ಪತ್ರಗಳಲ್ಲೊಂದನ್ನು ಆರಿಸಿಕೊಂಡು ಅದನ್ನು ಇಲ್ಲಿ ಎತ್ತಿ ಬರೆಯುತ್ತೇನೆ.

'ಕರುವಿನ ವಿಚಾರದಲ್ಲಿ ಅನುಸರಿಸಿದ ನೀತಿಯ ಬಗೆಗೆ ಮಾಡಿರುವ ನಿಮ್ಮ ವಿವರಣೆ ನನ್ನಲ್ಲಿದ್ದ ಅನೇಕ ಶಂಕೆಗಳನ್ನು ಪರಿಹಾರ ಮಾಡಿತು. 'ಅಹಿಂಸೆಯ' ಅರ್ಥವನ್ನು ಗ್ರಹಿಸಲು ಹೊಸ ಬೆಳಕನ್ನು ಬೀರಿದೀರಿ. ಆದರೆ ದುರದೃಷ್ಟವಶಾತ್ ಹೊಸ ತೊಡಕೊಂದು ಹುಟ್ಟುತ್ತದೆ. ಒಂದು ಉದಾಹರಣೆಯನ್ನು ತೆಗೆದುಕೊಳ್ಳೋಣ: ಒಬ್ಬ ಮನುಷ್ಯ ಒಂದು ಜನಾಂಗವನ್ನೇ ತುಳಿದು ದಬ್ಬಾಳಿಕೆಯನ್ನು ನಡೆಸುತ್ತಿದಾನೆಂದು ಭಾವಿಸೋಣ. ಇದನ್ನು ನಿಲ್ಲಿಸಲು ಬೇರೆ ಯಾವ ಮಾರ್ಗವೂ ಇಲ್ಲ. ಹಾಗಾದರೆ ನೀವು ಕರುವಿನ ವಿಷಯದಲ್ಲಿ ಅನುಸರಿಸಿರುವ ನೀತಿಯ ಪ್ರಕಾರ ಸಮಾಜವನ್ನು ರಕ್ಷಿಸಲು ಆ ಮನುಷ್ಯನನ್ನು ಕೊಂದುಹಾಕಬಹುದೆ? ಬೇರೆ ಯಾವ ಉಪಾಯವೂ ಇಲ್ಲದೆ ಹೀಗೆ ಮಾಡುವುದು ಅನಿವಾರ್ಯವಾಗಿರುವುದರಿಂದ ಇದನ್ನು ನೀವು ಅಹಿಂಸೆಯೆಂದು ಹೇಳುತ್ತೀರಲ್ಲವೆ? ಕರುವನ್ನು ಕೊಂದ ವಿಷಯವನ್ನು ಚರ್ಚಿಸಿ, ಒಂದು ಕಾರ್ಯವನ್ನು ಅಹಿಂಸೆಯೆಂದು ನಿಷ್ಕರ್ಷೆಮಾಡಲು ನಮ್ಮ ಮನೋದೃಷ್ಟಿಯೇ ಮುಖ್ಯ ಸಾಕ್ಷಿ ಎಂದು ಹೇಳಿದೀರಿ. ಈ ವಾದದ ಪ್ರಕಾರ ಕ್ರೂರಿಗಳಾಗಿ ದಬ್ಬಾಳಿಕೆಯನ್ನು ನಡೆಸುವವರನ್ನು ನಾಶಮಾಡುವುದೂ ಕೂಡ ಅಹಿಂಸೆಯೆಂದೇ ಅನಿಸಿಕೊಳ್ಳಲಾರದೇ? ಏಕೆಂದರೆ ಇಲ್ಲಿ ಉದ್ದೇಶ್ಯ ಉದಾತ್ತವಾದುದು. ರೈತನ ಬೆಳೆಯನ್ನು ನಾಶಮಾಡುವ ಕ್ರಿಮಿಕೀಟಾದಿಗಳನ್ನು ಧ್ವಂಸಮಾಡುವುದರಲ್ಲಿ ಯಾವ ಹಿಂಸೆಯೂ ಇಲ್ಲವೆಂದು ಹೇಳಿದೀರಿ. ಹಾಗಾದರೆ ಸಮಾಜಕ್ಕೇ ಕೆಡಕನ್ನೂ ನಾಶವನ್ನೂ ಉಂಟುಮಾಡುವ ದುಷ್ಟರನ್ನೂ ಸಹ ನಾಶಮಾಡುವುದು **ಅಹಿಂಸೆಯೇ ಅಲ್ಲವೆ?**'

ನನ್ನ ವಾದದ ಮುಖ್ಯಾಂಶವನ್ನು ಈ ಪತ್ರಲೇಖಕರು ಮರೆತಿರುವರೆಂದು ವಿವೇಚನಾಶಕ್ತಿಯುಳ್ಳ ವಾಚಕರು ಗ್ರಹಿಸದೆ ಇರಲಾರರು. ಅಹಿಂಸೆಗೆ ನಾನು ಕೊಟ್ಟಿರುವ ವಿವರಣೆಯನ್ನು ಎಷ್ಟೇ ಹಿಗ್ಗಿಸಿದರೂ ಈ ಲೇಖಕರು ಹೇಳುವ ಮಾನವಹತ್ಯಕ್ಕೆ ಅನ್ವಯಿಸುವಂತೆ ಅರ್ಥ ಬರಲಾರದು. ಒಬ್ಬ ಬೇಸಾಯ ಗಾರನು ತನ್ನ ಕೆಲಸ ಮಾಡುವುದರಲ್ಲಿ ಅನಿವಾರ್ಯವಾಗಿ ಮಾಡುವ ಪ್ರಾಣನಾಶ ವನ್ನು ನಾನು ಎಲ್ಲಿಯೂ ಅಹಿಂಸೆಯೆಂದು ನಿರೂಪಿಸಿಲ್ಲ. ಇಂತಹ ಪ್ರಾಣನಾಶ ವನ್ನು ಅನಿವಾರ್ಯವೆನ್ನಬಹುದು. ಅದಕ್ಕೆ ಕ್ಷಮೆ ತೋರಬಹುದು. ಆದರೆ ಅದು ಹಿಂಸೆಯೆಂದು ಹೇಳದೆ ಬೇರೆ ಉಪಾಯವಿಲ್ಲ. ಬೇಸಾಯಗಾರನ ಮುಖ್ಯ ಉದ್ದೇಶ್ಯ—ತನ್ನ ಬದುಕು ಅಥವಾ ಸಮಾಜದ ಹಿತ. ಆದರೆ ಅಹಿಂಸಾನಿಯಮ ಇಂತಹ ಕಾಮ್ಯಸಾಧನೆಯನ್ನು ಮಾನ್ಯಮಾಡುವುದಿಲ್ಲ. ಆದರೆ ಕರುವಿನ ಪ್ರಾಣನಾಶಮಾಡಿದಾಗ ಆ ಮೂಕಪ್ರಾಣಿಗಾಗಿಯೇ ಹಾಗೆ ಮಾಡಲಾಯಿತು. ಏನೇ ಇರಲಿ, ಅದರ ಹಿತವೇ ಮುಖ್ಯ ಉದ್ದೇಶ್ಯವಾಗಿತ್ತು.

ಪತ್ರಲೇಖಕರು ಎತ್ತಿರುವ ಸಮಸ್ಯೆಯನ್ನು ಕೋತಿಗಳ ಹಾವಳಿಗೆ ಹೋಲಿಸುವುದಕ್ಕೆ ಬರುತ್ತದೆ. ಆದರೆ ಕೋತಿಗಳ ಹಾವಳಿಗೂ, ಮಾನವನ ಹಾವಳಿಗೂ ಒಂದು ಮೂಲಭೂತವಾದ ವ್ಯತ್ಯಾಸವಿದೆ. ಕೋತಿಗಳ ಹೃದಯ ಪರಿವರ್ತನೆಯನ್ನು ಮಾಡಲು ಸಮಾಜವು ಇನ್ನೂ ಯಾವ ದಾರಿಯನ್ನೂ ಕಂಡುಹಿಡಿದಿಲ್ಲ. ಆದುದರಿಂದ ಅವುಗಳನ್ನು ನಾಶಮಾಡುವುದು ಕ್ಷಮ್ಯವೆಂದು ಭಾವಿಸಲು ಅವಕಾಶವಿದೆ. ಆದರೆ ಎಂತಹ ಕ್ರೂರಿಯೇ ಆಗಲಿ ಯಾವ ಪರಿವರ್ತನೆಗೂ ಒಳಗಾಗಲಾರ ಎಂದು ಭಾವಿಸುವಂತಿಲ್ಲ. ಆದುದರಿಂದ ಸ್ವಾರ್ಥಸಾಧನೆಗಾಗಿ ಮಾನವನಾಶವನ್ನು ಮಾಡುವುದನ್ನು ಅಹಿಂಸಾಪದ್ಧತಿ ಯಲ್ಲಿ ಸೇರಿಸಲು ಅವಕಾಶವೇ ಇಲ್ಲ.

ಈಗ ಉದ್ದೇಶ್ಯವನ್ನು ಕುರಿತು ವಿಚಾರಮಾಡೋಣ. ಅಹಿಂಸೆಯೇ ಇಲ್ಲವೇ ಎಂದು ನಿಷ್ಕರ್ಷಿಸಲು ಉದ್ದೇಶ್ಯ ಮುಖ್ಯ ಪ್ರಮಾಣವೇನೋ ಹೌದು. ಆದರೆ ಅದೊಂದೇ ಪ್ರಮಾಣವಲ್ಲ. ಪ್ರಾಣಿಯನ್ನು ಕೊಲ್ಲುವುದರಲ್ಲಿ, ಅದರ ಹಿತದ ದೃಷ್ಟಿಯಿಂದ ಅದು ಆಗದಿದ್ದರೆ, ಉದ್ದೇಶ್ಯ ಎಷ್ಟೇ ಉದಾತ್ತವಾಗಿದ್ದರೂ ಅದು ಹಿಂಸೆಯೇ. ಯಾವ ಮನುಷ್ಯನು ಹೆರರ ಮೇಲೆ ದ್ವೇಷಭಾವವನ್ನುಳ್ಳವ ನಾಗುತ್ತಾನೊ ಸಮಾಜದ ಭಯದಿಂದಲೊ, ಅವಕಾಶವಿಲ್ಲದೆಯೋ ಆ ದ್ವೇಷ

ವನ್ನು ಕಾರ್ಯರೂಪಕ್ಕೆ ತರದಿದ್ದರೂ ಅವನು ಹಿಂಸೆಯನ್ನೇ ಆಚರಿಸುತ್ತಾನೆ.

ಆದುದರಿಂದ ನಾವು ಉದ್ದೇಶ್ಯವನ್ನೂ ಕಾರ್ಯವನ್ನೂ ಎರಡನ್ನೂ ನೋಡಿಯೇ ಒಂದು ಕಾರ್ಯ—ಅಥವಾ ಆ ಕಾರ್ಯವನ್ನು ಮಾಡದಿರುವುದು—ಅಹಿಂಸೆಯೇ ಎಂದು ನಿರ್ಧರಿಸಬೇಕು. ಉದ್ದೇಶ್ಯವನ್ನು ನಾವು ತಿಳಿಯಬೇಕಾದರೆ ಇತರ ಅನೇಕ ತತ್ಸಂಬಂಧದ ಕಾರ್ಯಗಳಿಂದಲೇ ಗೊತ್ತಾಗಬೇಕಾಗುತ್ತದೆ. (ಯಂಗ್ ಇಂಡಿಯಾ, ೧೮-೧೦-೧೯೨೮)

## ಅಹಿಂಸೆ—ಮತ್ತಷ್ಟು ವಿಚಾರ

ಒಬ್ಬರು ಬರೆಯುತ್ತಾರೆ :

''ಅಗ್ನಿಪರೀಕ್ಷೆ'ಯೆಂಬ ನಿಮ್ಮ ಲೇಖನವನ್ನು ಮತ್ತೆ ಮತ್ತೆ ಓದಿದೆ, ಆದರೆ ನನಗೆ ತೃಪ್ತಿಯುಂಟಾಗಲಿಲ್ಲ. ಕೋತಿಗಳನ್ನು ಕೊಲ್ಲುವ ನಿಮ್ಮ ಸಲಹೆ ನನ್ನನ್ನು ಚಕಿತಗೊಳಿಸಿದೆ. ಅಹಿಂಸೆಯಲ್ಲಿ ಮಗ್ನರಾಗಿ ಮುಳುಗಿದ ನಿಮ್ಮಂತಹವರು, ಸರಿಯಾದ ದಾರಿಯಿಂದ ಆಕಾಶ ಕಳಚಿ ಬಿದ್ದರೂ ಸ್ವಲ್ಪವೂ ಸರಿಯಲಾರಿರಿ ಎಂದು ನಾನು ನಂಬಿದ್ದೆ. ಈಗ ಅವುಗಳ ಹಾವಳಿಯಿಂದ ನಿಮ್ಮ ಆಶ್ರಮವನ್ನು ರಕ್ಷಿಸಲು ಕೋತಿಗಳನ್ನು ಕೊಂದುಹಾಕಿಬಿಡಬಹುದೆಂದು ನೀವು ಹೇಳುತ್ತೀರಿ. ನಿಮ್ಮ ವಿಷಯದಲ್ಲಿ ನನಗಿದ್ದ ಮೊದಲನೆಯ ಭಾವನೆ ತಪ್ಪಾಗಿರಬಹುದು. ಆದರೆ ಕೋತಿಗಳನ್ನು ಕೊಲ್ಲಬಹುದೆಂಬ ನಿಮ್ಮ ಸೂಚನೆಯನ್ನು ಓದಿದಮೇಲೆ ನನಗೆಷ್ಟು ದೊಡ್ಡ ಏಟು ಬಿದ್ದಂತಾಯಿತೆಂದು ನಾನು ವರ್ಣಿಸಲಾರೆ. ನಿಮ್ಮ ಮೇಲೆ ಎಷ್ಟು ಕೋಪ ಬಂದಿದೆಯೆಂದೂ ನಾನು ಮನಬಿಚ್ಚಿ ಒಪ್ಪಿಕೊಳ್ಳುತ್ತೇನೆ. ನನಗೆ ಉಂಟಾಗಿರುವ ದಿಗ್ಭ್ರಾಂತಿಯಿಂದ ಪಾರು ಮಾಡುವಿರಾ ?'

ಇದೇ ಧಾಟಿಯಲ್ಲಿ ಇನ್ನೂ ಅನೇಕ ಪತ್ರಗಳು ನನಗೆ ಬಂದಿವೆ. ನನ್ನ ವಿಚಾರದಲ್ಲಿ ಜನ ಎಂಥ ಉತ್ಪ್ರೇಕ್ಷೆಯಿಂದ ಕೂಡಿದ ಭಾವನೆಯನ್ನು ತಾಳಿದೆ ಎಂದು ನನಗೆ ತೋರುತ್ತದೆ. ನಾನು ಅಹಿಂಸೆಯನ್ನು ವಿವರಿಸಿ ವಿಶ್ಲೇಷಣೆ ಮಾಡುವ ಪ್ರಯತ್ನದಲ್ಲಿ ತೊಡಗಿರುವುದರಿಂದ ನಾನು ಆ ಧ್ಯೇಯವನ್ನು

ಪೂರ್ಣವಾಗಿ ಸಾಧಿಸಿದವನೆಂದು ಈ ಸಜ್ಜನರು ಭಾವಿಸಿದಂತೆ ಕಾಣುತ್ತದೆ. ಕರುವಿನ ವಿಷಯದಲ್ಲಿಯೂ ಕೋತಿಗಳ ವಿಷಯದಲ್ಲಿಯೂ ನಾನು ವ್ಯಕ್ತಪಡಿಸಿದ ಅಭಿಪ್ರಾಯಗಳಿಂದ ಇವರ ಭ್ರಮೆ ನಿರಸನವಾದಂತೆ ಕಾಣುತ್ತದೆ. ನನಗೆ 'ಮಹಾತ್ಮಾ' ಎಂಬ ಬಿರುದು ಹೊರಲಾರದ ಭಾರವಾಗಿದೆ. ಇದನ್ನು ವಹಿಸುವುದಕ್ಕಿಂತಲೂ ಸತ್ಯವು ನನಗೆ ಕೋಟಿಪಾಲು ಪ್ರಿಯವಾದುದು. ನನ್ನ ಲೋಪದೋಷಗಳ ಹಾಗೂ ನಾನು ಶುದ್ಧ ಸೊನ್ನೆಯೆಂದು ನನಗಿರುವ ಅರಿವೇ ಈ 'ಮಹಾತ್ಮಾ' ಎಂಬ ಬಿರುದಿನ ಭಾರದಿಂದ ನನ್ನನ್ನು ತಪ್ಪಿಸಿದೆ. ಈ ದೇಹದಲ್ಲಿ ಜೀವಿಸಿರಬೇಕೆಂಬ ಆಸೆಯಿಂದ ಸದಾ ಹಿಂಸೆಯನ್ನು ಮಾಡುತ್ತಿರುವೆನೆಂಬ ವಿಷಯ ಸದಾ ನನ್ನನ್ನು ಬಾಧಿಸುತ್ತಿದೆ. ಆದಕಾರಣ ಕ್ರಮೇಣ ಈ ಭೌತಿಕ ದೇಹದ ವಿಚಾರದಲ್ಲಿ ಉದಾಸೀನನಾಗುತ್ತಿದೇನೆ. ಉದಾಹರಣೆಗೆ, ಶ್ವಾಸ-ನಿಶ್ವ್ಯಾಸ ಮಾಡುತ್ತ ಕಣ್ಣಿಗೆ ಕಾಣದ ಅಸಂಖ್ಯಾತ ಸೂಕ್ಷ್ಮ ಜೀವರಾಶಿಗಳನ್ನು ನಾಶಮಾಡುತ್ತಿದೇನೆಂದು ನಾನು ಬಲ್ಲೆ. ಆದರೆ ನಾನು ಉಸಿರು ಬಿಡುವುದನ್ನು ನಿಲ್ಲಿಸಿಲ್ಲ. ತರಕಾರಿಗಳ ಸೇವನೆಯಲ್ಲಿ ಹಿಂಸೆ ಇದೆ; ಆದರೆ ಅವುಗಳನ್ನು ಬಿಡಲಾರದವನಾಗಿದೇನೆ. ಕ್ರಿಮಿನಾಶಕ ದ್ರಾವಕಗಳ ಪ್ರಯೋಗದಲ್ಲಿ ಹಿಂಸೆ ಇದೆ; ಆದರೆ ಸೊಳ್ಳೆಕಾಟ ಮುಂತಾದವುಗಳಿಂದ ತಪ್ಪಿಸಿಕೊಳ್ಳಲು ಸೀಮೆಎಣ್ಣೆ ಮುಂತಾದ ಪದಾರ್ಥಗಳನ್ನು ಉಪಯೋಗಿಸದೆ ಬಿಡಲು ನಾನು ಸಿದ್ಧವಾಗಿಲ್ಲ. ಆಶ್ರಮದಲ್ಲಿ ಹಾವುಗಳು ಬಂದರೆ ಅವುಗಳನ್ನು ಹಿಡಿದು ಆಚೆಗೆ ಬಿಡಲಾಗದಿದ್ದರೆ ಅವುಗಳನ್ನು ಕೊಲ್ಲಲು ಸಮ್ಮತಿಯನ್ನು ಕೊಟ್ಟಿದೇನೆ. ಆಶ್ರಮದಲ್ಲಿ ಎತ್ತುಗಳನ್ನು ಓಡಿಸಲು ಕೋಲಿನ ಉಪಯೋಗಕ್ಕೂ ನಾನು ಒಪ್ಪಿದೇನೆ. ಹೀಗೆ ಪ್ರತ್ಯಕ್ಷವಾಗಿ-ಪರೋಕ್ಷವಾಗಿ ನಾನು ಮಾಡುವ ಹಿಂಸೆಗೆ ಕೊನೆಮೊದಲಿಲ್ಲ. ಈಗ ಈ ಕೋತಿಗಳ ಸಮಸ್ಯೆಯನ್ನು ಎದುರಿಸಬೇಕಾಗಿದೆ. ಅವುಗಳನ್ನು ಕೊಲ್ಲುವ ಅಂತಿಮ ಘಟ್ಟಕ್ಕೆ ಬರಲು ನಾನು ಆತುರಪಡುತ್ತಿಲ್ಲವೆಂಬ ಭರವಸೆಯನ್ನು ವಾಚಕರಿಗೆ ಕೊಡುತ್ತೇನೆ. ನಿಜವಾಗಿಯೂ ಕೊನೆಗೆ ಅವುಗಳನ್ನು ಕೊಲ್ಲಬೇಕೆಂಬ ತೀರ್ಮಾನಕ್ಕೆ ಬರುವೆನೋ ಎಂಬುದೇ ಸಂದೇಹ. ಸದ್ಯಕ್ಕೆ ಮಿತ್ರರು ಅನೇಕ ಉಪಯುಕ್ತ ಸಲಹೆಗಳನ್ನು ಕೊಟ್ಟು ಸಹಾಯಮಾಡುತ್ತಿದಾರೆ. ಆ ಸಲಹೆಗಳ ಪ್ರಕಾರ ನಡೆದರೆ ತಾತ್ಕಾಲಿಕ ಪರಿಹಾರ ಆಗಬಹುದು. ಅವುಗಳನ್ನು ಕೊಲ್ಲುವ ಆವಶ್ಯಕತೆ ಇಲ್ಲದೆ ಹೋಗಬಹುದು. ಆದರೆ ಅವು

ಆಶ್ರಮದಲ್ಲಿರುವ ಬೆಳೆಯನ್ನೆಲ್ಲ ನಾಶಮಾಡಿದರೆ ಅವುಗಳನ್ನು ಎಂದೂ ಕೊಲ್ಲ ಲಾರೆನೆಂಬ ವಚನವನ್ನು ನಾನು ಕೊಡಲಾರೆ. ನಾನು ಇಲ್ಲಿ ಮನಬಿಚ್ಚಿ ಬರೆದಿರುವ ಈ ನಮ್ರವಾದ ನಿವೇದನದ ಫಲವಾಗಿ ಮಿತ್ರರು ನಾನು ಭ್ರಷ್ಟ ಎಂದು ನನ್ನ ಕೈಬಿಟ್ಟರೂ, ನನ್ನ ಅಹಿಂಸೆಯ ಆಚರಣೆಯಲ್ಲಿ ನನ್ನ ನ್ಯೂನತೆ ಗಳನ್ನು ಬಚ್ಚಿಡುವ ಪ್ರಯತ್ನವನ್ನು ಮಾತ್ರ ಮಾಡಲಾರೆ. ಇಷ್ಟು ಮಾತ್ರ ನನ್ನ ಮಟ್ಟಿಗೆ ನಾನು ಹೇಳಬಲ್ಲೆ. ಅಹಿಂಸೆಯಂತಹ ದೊಡ್ಡ ತತ್ತ್ವಗಳನ್ನು ಚೆನ್ನಾಗಿ ಅರ್ಥಮಾಡಿಕೊಳ್ಳಲು ಸತತವಾಗಿ ಪ್ರಯತ್ನಿಸುತ್ತಿದೇನೆ. ಕಾಯೇನ, ವಾಚಾ, ಮನಸಾ ಅವುಗಳ ಅನುಷ್ಠಾನ ಮಾಡಲು ಯತ್ನಿಸುತ್ತಿದೇನೆ. ತಕ್ಕ ಮಟ್ಟಿಗೆ ಯಶಸ್ವಿಯಾಗಿದೇನೆಂದೇ ನನ್ನ ಅಭಿಪ್ರಾಯ. ಆದರೆ ಈ ಮಾರ್ಗ ದಲ್ಲಿ ಇನ್ನೂ ಬಹಳ ದೂರ ಮುಂದುವರಿಯಬೇಕೆಂದು ನಾನು ಬಲ್ಲೆ. ಆದುದ ರಿಂದ ಈ ಪತ್ರಲೇಖಕರು ನನ್ನ ಲೋಪದೋಷಗಳ ವಿಷಯದಲ್ಲಿ ಸಹನೆಯನ್ನು ತೋರದಿದ್ದರೆ, ಅವರಿಗೆ ಯಾವ ಸಾಂತ್ವನವನ್ನೂ ಕೊಡುವ ಸ್ಥಿತಿಯಲ್ಲಿಲ್ಲವೆಂದು ವಿಷಾದಿಸುತ್ತೇನೆ.

* * * *

ಮತ್ತೊಬ್ಬ ಮಿತ್ರರು ಹೀಗೆ ಬರೆಯುತ್ತಾರೆ :

'ನನ್ನ ಅಣ್ಣನಿಗೆ ಒಂದು ಘೋರವಾದ ಹಾಗೂ ಅತಿ ಯಾತನೆಯನ್ನು ಕೊಡುವ ರೋಗವಿದೆಯೆಂದು ಭಾವಿಸೋಣ. ವೈದ್ಯರು ಆಸೆ ಇಲ್ಲವೆಂದು ಕೈಬಿಟ್ಟರು. ಹಾಗೆಯೇ ನನಗೂ ಅನಿಸಿತು. ಇಂತಹ ಸಂದರ್ಭದಲ್ಲಿ ಅಣ್ಣನ ಪ್ರಾಣವನ್ನು ನಾನು ತೆಗೆಯಬಹುದೆ ?'

ಕೂಡದೆಂದು ನನ್ನ ಉತ್ತರ. ನನ್ನ ಲೇಖನದ ಅರ್ಥವನ್ನು ಸರಿಯಾಗಿ ಅರ್ಥಮಾಡಿಕೊಳ್ಳುವಷ್ಟು ತೊಂದರೆಯನ್ನೂ ಸಹ ಕೆಲವು ಪತ್ರಲೇಖಕರು ತೆಗೆದುಕೊಳ್ಳಲಾರರಲ್ಲಾ ಎಂದು ನನ್ನ ವಿಷಾದ. ಸಂಕಟದಲ್ಲಿ ಸಾಯುತ್ತಿರುವ ಕರುವನ್ನೂ ಅದೇ ಪರಿಸ್ಥಿತಿಯಲ್ಲಿರುವ ಮಾನವಜೀವವನ್ನೂ ನಾನು ಹೋಲಿ ಸಿದೇನೆ—ನಿಜ. ಅಂತಹುದೇ ಸಂದರ್ಭದಲ್ಲಿ ಮಾನವಜೀವವನ್ನು ಕೊನೆ ಗಾಣಿಸಬಹುದೆಂದು ನಾನು ಹೇಳಿದ್ದರೂ, ನಮ್ಮ ಜೀವನದಲ್ಲಿ ಅಂತಹುದೇ ಆದ ಸಂದರ್ಭ ಒದಗುವುದು ಬಹಳ ಅಪೂರ್ವ. ಈ ಒಗಟುಗಳನ್ನು ನನ್ನ ಮುಂದೆ

ಮುಂಡಿಸುವವರು ಇದನ್ನು ಮರೆಯುತ್ತಾರೆ. ಮೊದಲನೆಯದಾಗಿ, ಮಾನವ ಶರೀರವನ್ನು ಉಪಚರಿಸಿ, ಅದಕ್ಕೆ ಸ್ವಲ್ಪ ನೆಮ್ಮದಿಯನ್ನು ಕೊಡುವುದು ಸಾಧ್ಯ —ಅದು ಕೈಮೀರಿದ ಕೆಲಸವಾಗುವುದಿಲ್ಲ. ಎರಡನೆಯದಾಗಿ, ಮಾನವನಿಗೆ ಮಾತು ಬರುವುದರಿಂದ ತನ್ನ ಇಷ್ಟಾರ್ಥಗಳನ್ನು ಅನೇಕ ವೇಳೆ ಹೇಳಬಲ್ಲ— ಆದುದರಿಂದ ಅವನ ಇಷ್ಟವಿಲ್ಲದೆ ಅವನ ಪ್ರಾಣ ತೆಗೆಯುವುದಕ್ಕೆ ಪ್ರಶ್ನೆ ಉದ್ಭವಿಸುವುದಿಲ್ಲ. ಏಕೆಂದರೆ ಒಬ್ಬನ ಸಮ್ಮತಿಯಿಲ್ಲದೆ ಅವನ ಪ್ರಾಣವನ್ನು ತೆಗೆಯಬಹುದೆಂದು ನಾನು ಎಲ್ಲಿಯೂ ಹೇಳಲಿಲ್ಲ. ಇದು ಅಹಿಂಸೆಗೆ ತೀರ ವಿರೋಧ. ಅಲ್ಲದೆ ಪ್ರಜ್ಞೆ ತಪ್ಪಿದಾಗಲೂ ಮಾನವನ ಪ್ರಾಣ ಉಳಿಯುವ ಆಸೆ ಇಲ್ಲವೆಂದು ನಾವು ಹೇಳುವುದಿಲ್ಲ. ಹಾಗೆ ಆಸೆ ಇಲ್ಲದಿದ್ದರೂ ಅವನನ್ನು ಉಪಚರಿಸುವುದು ಬೇಡವೆಂಬ ಮಾತು ಯಾರೂ ಆಡುವುದಿಲ್ಲ. ಅನೇಕ ವೇಳೆ ಕೊನೆಯ ಕ್ಷಣದವರೆಗೂ ಮಾನವ ರೋಗಿಗೆ ಉಪಚಾರವನ್ನು ಮಾಡಲು ಸಾಧ್ಯವಾಗುತ್ತದೆ ; ಹಾಗೆಯೇ ಮಾಡುತ್ತಾರೆ. ಆದುದರಿಂದ ಕರುವಿನ ವಿಷಯದಲ್ಲಿ ನಾನು ಹೇಳಿದ ನಿಯಮ 'ಮಾನವ, ಪಕ್ಷಿ, ಪಶು' ಎಲ್ಲಕ್ಕೂ ಅನ್ವಯವಾದರೂ, ಮನುಷ್ಯರಿಗೂ ಮೂಕಪ್ರಾಣಿಗಳಿಗೂ ಇರುವ ಸ್ಪಷ್ಟವಾಗಿ ಕಾಣುವ ಅಂತರವನ್ನು ಬುದ್ಧಿವಂತರು ತಿಳಿದುಕೊಳ್ಳುತ್ತಾರೆಂದೇ ನನ್ನ ನಿರೀಕ್ಷೆ. ಈಗ ಪುನರಾವೃತ್ತಿಮಾಡಿ ಅಹಿಂಸೆಯ ದೃಷ್ಟಿಯಿಂದ ಯಾವ ಯಾವ ಸಂದರ್ಭ ಗಳಲ್ಲಿ ಮಾತ್ರವೇ ಪ್ರಾಣವನ್ನು ತೆಗೆಯಬಹುದೆಂಬುದನ್ನು ಸಂಕ್ಷೇಪವಾಗಿ ಹೀಗೆ ಹೇಳಬಹುದು :

(೧) ರೋಗವು ಗುಣಮುಖವಾಗದಂತಹುದಾಗಿರಬೇಕು.

(೨) ರೋಗಿಯನ್ನು ಉಳಿಸುವ ಆಸೆಯೇ ಇಲ್ಲವೆಂಬ ತೀರ್ಮಾನಕ್ಕೆ ಎಲ್ಲರೂ ಬಂದಿರಬೇಕು.

(೩) ಯಾವ ಸಹಾಯವಾಗಲಿ ಉಪಚಾರವಾಗಲಿ ಮಾಡಲು ಸಾಧ್ಯವಿಲ್ಲದೆ ಇರಬೇಕು.

(೪) ರೋಗಿಯು ತನ್ನ ಇಷ್ಟವನ್ನು ತಿಳಿಸಲು ಸಾಧ್ಯವಿಲ್ಲದಂತೆ ಇರಬೇಕು.

ಈ ನಾಲ್ಕರಲ್ಲಿ ಒಂದು ಅನ್ವಯಿಸದೇ ಹೋದರೂ ಅಹಿಂಸೆಯ ದೃಷ್ಟಿ ಯಿಂದ ಪ್ರಾಣವನ್ನು ತೆಗೆಯುವುದು ಸರಿಯೆಂದು ಹೇಳಲು ಸಾಧ್ಯವಿಲ್ಲ.

ಮೂರನೆಯವರೊಬ್ಬರು ಹೀಗೆ ಬರೆಯುತ್ತಾರೆ :

' ಕರುವನ್ನು ಕೊಂದುದು—ಆ ಸಂದರ್ಭದಲ್ಲಿ ಸರಿಯಾದ ಕಾರ್ಯವೇ ಆದರೆ ನೀವು ಹೇಳುವುದು ಪ್ರಾಣಿಗಳನ್ನು ಬಲಿಕೊಡುವವರಿಗೆ ಉತ್ತೇಜನ ಕೊಡುತ್ತದೆ. ಆ ಪದ್ಧತಿ ಮತ್ತಷ್ಟು ಬೆಳೆಯುವಂತೆ ಮಾಡುತ್ತದೆ. ಈ ಅಂಶ ವನ್ನು ನೀವು ವಿಚಾರ ಮಾಡಿರುವಿರಾ ? ಹೀಗೆ ಬಲಿಯನ್ನು ಕೊಡುವವರು ಆ ಬಲಿಯಾದ ಪ್ರಾಣಿಗಳು ಮುಂದಿನ ಜನ್ಮದಲ್ಲಿ ಪುಣ್ಯಗಳಿಸುತ್ತವೆ ಎಂದು ವಾದಿಸುವರು. ಇದು ನಿಮಗೆ ಗೊತ್ತೇ ? '

ಈ ಪ್ರಪಂಚದಲ್ಲಿ ಮಿಥ್ಯಾಚಾರ ಮತ್ತು ಅಜ್ಞಾನವಿರುವವರೆಗೂ ನನ್ನ ಕಾರ್ಯಗಳನ್ನು ಅಪಾರ್ಥಮಾಡಿ ಅವುಗಳ ದುರುಪಯೋಗಮಾಡುವ ಸಂಭವವಿದೆ —ಹೀಗಾಗುವುದನ್ನು ತಪ್ಪಿಸಲೂ ಸಾಧ್ಯವಿಲ್ಲ. ಧರ್ಮದ ಹೆಸರಿನಲ್ಲಿ ಎಂತಹ ದುಷ್ಕೃತ್ಯಗಳು ನಡೆದುಹೋಗಿವೆ ಈ ಪ್ರಪಂಚದಲ್ಲಿ! ಆದುದರಿಂದ ನಮಗೆ ಸರಿಯೆಂದು ತೋರುವುದನ್ನು ಇತರರು ಅದಕ್ಕೆ ಅಪಾರ್ಥ ಕಲ್ಪಿಸುವರೆಂಬ ಕಾರಣಮಾತ್ರಕ್ಕೇ ನಾವು ಬಿಡುವುದು ಉಚಿತವಲ್ಲ. ಪ್ರಾಣಿಗಳನ್ನು ಬಲಿ ಕೊಡುವವರಿಗೆ ತಮ್ಮ ಆಚರಣೆಯನ್ನು ಸಮರ್ಥನೆ ಮಾಡಲು ನನ್ನ ಉದಾ ಹರಣೆಯ ಆವಶ್ಯಕತೆ ಇಲ್ಲ. ಏಕೆಂದರೆ ಅವರು ತಮ್ಮ ಕಾರ್ಯ ಮಾಡಲು ಶಾಸ್ತ್ರಪ್ರಮಾಣದ ಮೇಲೆ ಅವಲಂಬಿಸುವರು. ನನಗಿರುವ ಭಯವಿಷ್ಟೆ : ನನ್ನ ನಿದರ್ಶನಗಳನ್ನು ತೆಗೆದುಕೊಂಡು ಕೆಲವರು ತಮಗೆ ಶತ್ರುಗಳೆಂದು ತಾವು ಭಾವಿಸುವವರ ಪ್ರಾಣಘಾತ ಮಾಡಬಹುದೋ ಏನೊ ಎಂತಲೆ! ಏಕೆಂದರೆ ಇವರನ್ನು ಕೊಂದರೆ ಸಮಾಜದ ಹಿತವೂ ಈ ' ಶತ್ರು 'ಗಳೆಂದು ಅನಿಸಿಕೊಳ್ಳು ವವರ ಹಿತವೂ ಕೈಗೂಡುವುವು. ಕೆಲವರು ನಿಜವಾಗಿಯೇ ಈ ರೀತಿ ವಾದ ಮಾಡಿದಾರೆ. ಆದರೆ ಅಹಿಂಸೆಯ ಬಗ್ಗೆ ನಾನು ಕೊಟ್ಟಿರುವ ಅರ್ಥವಿವರಣೆ ಈ ಬಗೆಯ ವಾದಕ್ಕೆ ಎಡೆಗೊಡದಿದ್ದರೆ ನನ್ನಮಟ್ಟಿಗೆ ಅಷ್ಟೇ ಸಾಕು. ಏಕೆಂದರೆ ಹೀಗೆ ' ಶತ್ರು 'ಗಳನ್ನು ಕೊಲ್ಲುವುದರಲ್ಲಿ ಅವರ ಇಷ್ಟವನ್ನಂತೂ ಕೇಳಿಯೇ ಇರುವುದಿಲ್ಲವಷ್ಟೆ. ಕೊನೆಯದಾಗಿ, ಪ್ರಾಣಿಯ ಅಥವಾ ಶತ್ರುವಿನ ಹಿತಕ್ಕಾಗಿ ಪ್ರಾಣವನ್ನು ತೆಗೆಯಬೇಕಾಗಿತ್ತೆಂಬುದನ್ನು ಒಪ್ಪಿದರೂ ಆಗಲೂ ನಿಸ್ಪೃಹವೂ ನಿಸ್ಸ್ವಾರ್ಥವೂ ಆದ ಕಾರ್ಯ ಆಗದೆ ಹೋದುದರಿಂದ ಅದಕ್ಕೆ ಹಿಂಸೆಯೆಂಬ

ಹೆಸರನ್ನೇ ಇಡಬೇಕಾಗುತ್ತದೆ. ಆದರೂ ಕಣ್ಣಿದ್ದೂ ನೋಡದವರಿಗೆ ಹೇಳಿ ಏನು ಪ್ರಯೋಜನ? ಅವರು ತಮ್ಮನ್ನು ತಾವೇ ಮೋಸಮಾಡಿಕೊಳ್ಳಲು ಉದ್ಯುಕ್ತರಾಗಿರುವರು.

---

## ಅಧ್ಯಾಯ – ೬

# ಪ್ರಶ್ನಾವಳಿ



ಒಬ್ಬರು ಹೀಗೆ ಬರೆಯುತ್ತಾರೆ :

'ನನ್ನ ಮಗುವಿಗೆ ನಾಲ್ಕು ತಿಂಗಳು. ಹುಟ್ಟಿದ ಹದಿನಾಲ್ಕು ದಿನಗಳಾದಮೇಲೆ ಅಸ್ವಸ್ಥವಾಯಿತು. ಗುಣಮುಖವಾಗುವ ಚಿಹ್ನೆಯೇ ಕಾಣದಂತಿದೆ. ಅನೇಕ ವೈದ್ಯರೂ ಆಯುರ್ವೇದ ಪಂಡಿತರೂ ತಮ್ಮ ಜಾಣತನವನ್ನೆಲ್ಲ ಪ್ರಯೋಗಿಸಿದ್ದಾಯಿತು. ಆದರೆ ಎಲ್ಲವೂ ವ್ಯರ್ಥವಾಯಿತು. ಈಗ ಆ ಮಗುವಿಗೆ ಔಷಧವನ್ನು ಕೊಡಲೂ ನಿರಾಕರಿಸುತ್ತಾರೆ. ಆ ಮಗುವಿನ ಕಥೆ ಮುಗಿಯಿತೆಂದು ಭಾವಿಸುತ್ತಾರೆ. ನನಗೂ ಹಾಗೆಯೇ ತೋರುತ್ತದೆ. ನನ್ನ ಸಂಸಾರ ದೊಡ್ಡದು ; ನಾನು ಸಾಲದ ಹೊರೆಯಲ್ಲಿ ಬಹಳ ಕಷ್ಟಕ್ಕೆ ಗುರಿಯಾಗಿದೇನೆ. ಆ ಮಗುವಿನ ಸಂಕಟವನ್ನು ನೋಡಿ ಸಹಿಸುವುದು ಬಹಳ ಕಷ್ಟವಾಗಿದೆ. ಈ ಸಂದರ್ಭದಲ್ಲಿ ನಾನು ಏನು ಮಾಡಬೇಕೆಂದು ಹೇಳುವಿರಾ ?'

ಈ ಮಿತ್ರರು 'ನವಜೀವನ' ಪತ್ರಿಕೆಯನ್ನು ಗಮನವಿಟ್ಟು ಓದುತ್ತಿಲ್ಲ ಎಂಬುದು ಸ್ಪಷ್ಟವಾಗುತ್ತದೆ. ಓದಿದ್ದರೆ ಈ ಪ್ರಶ್ನೆಯನ್ನು ಕೇಳುತ್ತಿರಲಿಲ್ಲ. ಪ್ರಪಂಚದ ಎಲ್ಲ ವೈದ್ಯರೂ ಈ ಮಗುವನ್ನು ಉಳಿಸಲು ಆಸೆಯಿಲ್ಲವೆಂದು ಕೈಬಿಟ್ಟರೂ, ಅದರ ಪ್ರಾಣವನ್ನು ಕೊನೆಗಾಣಿಸುವುದಕ್ಕೆ ಯಾವ ಕಾರಣವೂ ಇಲ್ಲ. ಏಕೆಂದರೆ ಅದರ ತಂದೆಗೆ ಅದಕ್ಕೆ ಉಪಚಾರ ಮಾಡಲು ಯಾವಾಗಲೂ ಸಾಧ್ಯವೇ ಆಗಿರುವುದು. ಆ ಮಗುವಿಗೆ ಅನೇಕ ವಿಧದಲ್ಲಿ ನೆಮ್ಮದಿಯನ್ನು ಉಂಟುಮಾಡಬಹುದು. ಏಕೆಂದರೆ ಕರುವಿನಷ್ಟು ಅದು ದೊಡ್ಡ ಆಕಾರದ್ದಲ್ಲ. ಎಷ್ಟೇ ಅಲ್ಪವಾದರೂ ಅದಕ್ಕೆ ಆ ಅಲ್ಪಸೇವೆಯನ್ನು ಮಾಡುವ ಅವಕಾಶ ಇರುವವರೆಗೂ, ಇನ್ನೇನು ಉಳಿಯಲಾರದೆಂದು ಖಚಿತವಾಗಿ ಕೊನೆಯ ಆಶಾಕಿರಣವು ಮಾಯವಾಗುವವರೆಗೂ, ಅದರ ಯಾತನೆಯಿಂದ ಅದನ್ನು ವಿಮುಕ್ತ ಮಾಡಲು ಯಾವ ನ್ಯಾಯವೂ ಇಲ್ಲ. ಆಗಲೂ ಇದರಲ್ಲಿ ಸ್ವಾರ್ಥದ ಸೋಂಕು ಸ್ವಲ್ಪವೂ ಇರಬಾರದು. ಪ್ರಸ್ತುತ ದೃಷ್ಟಾಂತದಲ್ಲಿ ಕಾಯಿಲೆ ಇರುವ ಮಗುವಿನ

ಸೇವೆ ಸಾಧ್ಯ ಮಾತ್ರವಲ್ಲ, ತಂದೆಯೇ ಒಪ್ಪಿಕೊಳ್ಳುವಂತೆ, ಆತನನ್ನು ಬಾಧಿಸುತ್ತಿರುವುದು ಆ ಮಗುವಿನಿಂದ ತನಗಾಗುತ್ತಿರುವ ತೊಂದರೆ. ಸಂಸಾರ ದೊಡ್ಡದೆಂದಾಗಲಿ, ಬಡತನವಾಗಲಿ, ಪ್ರಾಣವನ್ನು ತೆಗೆಯಲು ಎಂದಿಗೂ ನ್ಯಾಯವಾದ ಕಾರಣಗಳಾಗಲಾರವು. ಆದರೆ ತಂದೆ ಒಂದು ಕಾರ್ಯವನ್ನು ಮಾಡಬಹುದು. ಆತನು ಇದನ್ನು ಪರಿಶೀಲಿಸುವ ವಿವೇಕವಿದ್ದರೆ ಕೂಡಲೆ ಪೂರ್ತಿಯಾಗಿ ಇಂದ್ರಿಯನಿಗ್ರಹಮಾಡಿ, ಈ ಮಗು ಬದುಕಲಿ ಹೋಗಲಿ, ಮುಂದೆ ಮಕ್ಕಳಾಗದಂತೆ ವರ್ತಿಸಬೇಕು.

* * * *

ಮತ್ತೊಬ್ಬ ಮಿತ್ರರು ಹಿಂದೀ ಭಾಷೆಯಲ್ಲಿ ಒಂದು ಪತ್ರವನ್ನು ಈ ರೀತಿ ಬರೆಯುತ್ತಾರೆ :

'ನಾನು ಗೋಶಾಲೆಯ ಮೇಲ್ವಿಚಾರಕ. ನನ್ನ ಮೇಲ್ವಿಚಾರಣೆಯಲ್ಲಿ ಸುಮಾರು ೫೦೦ ದನಗಳಿವೆ. ಅವೆಲ್ಲವೂ ಕೆಲಸಕ್ಕೆ ಬಾರದವು. ಸುಮ್ಮನೆ ಮೇಯುತ್ತವೆ. ದುಂದು ಖರ್ಚಿಗೆ ಕಾರಣವಾಗಿವೆ. ಇವುಗಳಲ್ಲಿ ೩೫೦ರಿಂದ ೪೦೦ ದನಗಳು ಈಗಲೋ ಆಗಲೋ ಸಾಯುವಂತಿವೆ. ಒಂದು ವರ್ಷದೊಳಗಾಗಿ ಎಲ್ಲವೂ ಸಾಯುವುವು. ನಾನು ಈ ಸಂದರ್ಭದಲ್ಲಿ ಏನು ಮಾಡಬೇಕೆಂದು ಹೇಳಿ.'

ಹಣದ ಮುಗ್ಗಟ್ಟಿನಿಂದ ಪ್ರಾಣವನ್ನು ತೆಗೆದುಬಿಡುವುದು ಎಂದಿಗೂ ಅಹಿಂಸೆಯಾಗಲಾರದೆಂದು ನಾನೀಗಾಗಲೇ ವಿವರಿಸಿದೇನೆ. ಆಶ್ರಮದ ಕರುವಿನಂತೆ, ಬಹಳ ಯಾತನೆಯನ್ನು ಅನುಭವಿಸಿ ಪ್ರತಿದಿನವೂ ಒಂದಲ್ಲ ಒಂದು ದನ ಈ ಗೋಶಾಲೆಯಲ್ಲಿ ಸಾಯುತ್ತಿರುವುದು ನಿಜವಾದರೆ, ತೀರ ಭಯಂಕರವಾದ ಅವ್ಯವಸ್ಥೆ ಇದೆ. ಈ ಗೋಶಾಲೆಯನ್ನು ತತ್‌ಕ್ಷಣ ಮುಚ್ಚಬೇಕು. ಆಶ್ರಮದಲ್ಲಿದ್ದ ಕರು ಯಾವುದೋ ಆಕಸ್ಮಿಕ ಘಟನೆಯಿಂದ ಆ ದುಃಸ್ಥಿತಿಗೆ ಬಂದಿತು. ಆದರೆ ಇಂತಹ ಘಟನೆಗಳು ಪ್ರತಿದಿನವೂ ನಡೆಯುವುದಾದರೆ, ಸರಿಯಾದ ವ್ಯವಸ್ಥೆಯಲ್ಲಿರುವ ಸಂಸ್ಥೆಯಲ್ಲಿಯೂ ಇದು ಸಾಧ್ಯವಿಲ್ಲ. ಈ ಗೋಶಾಲೆಯ ವ್ಯವಸ್ಥಾಪಕರ ಕರ್ತವ್ಯವೇನೆಂಬುದು ಸ್ಪಷ್ಟವೇ ಆಗಿದೆ. ಕಾಯಿಲೆ ಇರುವ ದನಗಳ ಆರೈಕೆಗೆ ಏರ್ಪಾಡು ಮಾಡುವುದು ಈ ಗೋಶಾಲೆಯ ಮತ್ತು

ಇದರಂತಿರುವ ಇತರ ಗೋಶಾಲೆಗಳ ವ್ಯವಸ್ಥಾಪಕರ ಕರ್ತವ್ಯ. ಒಂದು ಮಾದರಿ ಪಿಂಜ್ರಾಪೋಲನ್ನು ಹೇಗೆ ನಡೆಸಬೇಕೆಂಬ ವಿಷಯವಾಗಿ ನಾನು ಈ ಪತ್ರಿಕೆಯಲ್ಲಿ ಆಗಾಗ ಬರೆದಿದೇನೆ. ಅದನ್ನು ಇವರು ಓದಬೇಕೆಂದು ಸೂಚಿಸುವೆನು.

* * * *

ಒಬ್ಬ ಕಣಬಿ ಮಿತ್ರರು ಈ ರೀತಿ ಬರೆಯುತ್ತಾರೆ:

'ನಮ್ಮ ಹಳ್ಳಿಯ ಬಳಿ ಒಂದು ಹುಲ್ಲುಗಾವಲಿದೆ. ಅಲ್ಲಿ ಒಂದು ದೊಡ್ಡ ಜಿಂಕೆಯ ಹಿಂಡು—ಸುಮಾರು ೫೦೦ರಿಂದ ೭೦೦ರ ವರೆಗಿನ ಸಂಖ್ಯೆಯಲ್ಲಿ ಬಂದು ಮೇಯುತ್ತವೆ. ನಮ್ಮ ಹತ್ತಿ ಗಿಡದ ಸಸಿಗಳನ್ನು ನಾಶಮಾಡುತ್ತವೆ. ನಮಗೆ ಏನು ಮಾಡಬೇಕೆಂದು ತೋರದೆ ಇದೆ. ಕೂಲಿಯ ಕಾವಲುಗಾರರನ್ನಿಟ್ಟು ಈ ಜಿಂಕೆ ಹಿಂಡನ್ನು ಓಡಿಸಬಹುದು. ಅವರು ಅದರ ಮಾಂಸಕ್ಕೆಂದು ಅವುಗಳನ್ನು ಕೊಂದೂ ಹಾಕುವರು. ಈ ಪರಿಸ್ಥಿತಿಯಲ್ಲಿ ನಿಮ್ಮ ಸಲಹೆ ಏನು? ಮತ್ತು ನಮ್ಮ ಬೆಳೆಗಳನ್ನು ಕ್ರಿಮಿಕೀಟಗಳು ನಾಶಮಾಡಲು ಬಂದಾಗ, ಹುಲ್ಲಿಗೆ ಬೆಂಕಿ ಹಚ್ಚುವುದರಿಂದ ಅವೆಲ್ಲವೂ ಭಸ್ಮವಾಗುವುವು. ಈ ಸಂದರ್ಭದಲ್ಲಿ ನೀವೇನು ಸೂಚನೆ ಕೊಡುವಿರಿ?'

ಕೋತಿ ಹಾವಳಿಯ ಪ್ರಶ್ನೆಗೆ ಇದು ಸಂಬಂಧಿಸಿದೆ, ಕರುವಿನ ಪ್ರಶ್ನೆಗಲ್ಲ. ಹಿಂಸೆಯ ಮಾರ್ಗದಲ್ಲಿ ಯಾರಿಗೂ ದಾರಿ ತೋರಲು ನಾನು ಶಕ್ತನಾಗಿಲ್ಲ. ನಿಜವಾಗಿಯೂ ಹಿಂಸಾಮಾರ್ಗದಲ್ಲಿ ಒಬ್ಬರು ಮತ್ತೊಬ್ಬರಿಗೆ ಯಾವ ಮಿತಿಯನ್ನನುಸರಿಸಬೇಕೆಂದು ಸಲಹೆ ಮಾಡುವ ಹಾಗಿಲ್ಲ. ಪ್ರತಿಯೊಬ್ಬರೂ ತಮ್ಮ ಅಹಿಂಸೆಯ ಶಕ್ತಿ ಎಷ್ಟು ಪ್ರಮಾಣದಲ್ಲಿ ಇರುವುದೊ ಅದರ ಪ್ರಮಾಣದಲ್ಲಿ ಅವರವರೇ ನಿರ್ಧರಿಸಿಕೊಳ್ಳಬೇಕು. ಆದರೆ ನಾನು ಇಷ್ಟನ್ನು ಹಿಂಜರಿಯದೆ ಹೇಳಬಲ್ಲೆ: ಕೋತಿಗಳ ದೃಷ್ಟಾಂತವನ್ನು ತೆಗೆದುಕೊಂಡು ಜಿಂಕೆಗಳನ್ನೂ ಕೊಂದುಹಾಕಬೇಕೆಂದು ನಿಶ್ಚಯಿಸಿದರೆ, ವಿಚಾರದ ಆಲಸ್ಯವನ್ನೂ ಅವಿವೇಕವನ್ನೂ ತೋರಿಸುತ್ತದೆ. ಈ ಎರಡು ಸಮಸ್ಯೆಗಳಿಗೂ ಅರ್ಥಾರ್ಥ ಸಂಬಂಧವಿಲ್ಲ, ಅಷ್ಟೇ ಅಲ್ಲದೆ, ಕೋತಿಗಳನ್ನು ಕೊಲ್ಲಬೇಕೆಂಬ ತೀರ್ಮಾನಕ್ಕೆ ನಾನು ಇನ್ನೂ ಬಂದಿಲ್ಲ; ಇಷ್ಟರಲ್ಲಿ ಆ ತೀರ್ಮಾನವನ್ನು ಮಾಡುವ ಸಂಭವವೂ ಇಲ್ಲ. ಅಷ್ಟೇ ಅಲ್ಲ, ಇಂತಹ ಅನಿಷ್ಟವಾದ ತೀರ್ಮಾನದಿಂದ ಹೇಗಾದರೂ ತಪ್ಪಿಸಿ

ಕೊಳ್ಳಬೇಕೆಂತಲೇ ನಾನು ಚಿಂತಿಸುತ್ತಿದೇನೆ. ಅಲ್ಲದೆ ಜಿಂಕೆಗಳನ್ನು ಓಡಿಸಿ ಬಿಡಲು ಅನೇಕ ಮಾರ್ಗಗಳಿವೆ. ಅಂತಹ ಮಾರ್ಗಗಳಿಂದ ಹೇಗಾದರೂ ಮಾಡಿ ತಪ್ಪಿಸಿಕೊಂಡು ನುಣುಚಿಕೊಂಡು ಬರುವ ಕೋತಿಗಳನ್ನು ಓಡಿಸಲು ಸಾಧ್ಯವಿಲ್ಲ. ಬೆಳೆಯನ್ನು ಹಾಳುಮಾಡುವ ಕ್ರಿಮಿಕೀಟಾದಿಗಳನ್ನು ನಾಶ ಮಾಡದೇ ಬೇರೆ ಮಾರ್ಗವಿಲ್ಲ. ಎಲ್ಲ ಬೇಸಾಯಗಾರರಿಗೂ ಇದು ತಿಳಿದ ವಿಷಯ. ಇದನ್ನು ಮತ್ತೆ ನಾನು ಒತ್ತಿ ಹೇಳಬೇಕಾಗಿಲ್ಲ. ಆದರೆ ಇದಕ್ಕೂ ಮುಂದೆ ಹೋಗಿ ನಾನು ಏನನ್ನೂ ಸೂಚಿಸಲಾರೆ. ನಮ್ಮಿಂದ ಸಾಧ್ಯವಾದ ಮಟ್ಟಿಗೆ ಹಿಂಸೆಯನ್ನು ಮಾಡದಿರುವುದೇ ನಮ್ಮ ಪರಮಕರ್ತವ್ಯವೆಂದು ಹೇಳಿ ನಾನು ಸುಮ್ಮನಿರುವೆನು.

* * * *

ಮತ್ತೊಬ್ಬ ಮಿತ್ರರು ಹೀಗೆ ಬರೆಯುತ್ತಾರೆ :

‘ ನಾವು ದೇಹಧಾರಣೆಮಾಡಿರುವವರೆಗೂ ಅಹಿಂಸೆಯನ್ನು ಸಂಪೂರ್ಣ ವಾಗಿ ಆಚರಿಸಲು ಸಾಧ್ಯವಿಲ್ಲ. ನಾವು ಈ ಭೌತ ಶರೀರದಲ್ಲಿ ಇರುವುದ ಕ್ಕಾಗಿಯೇ ಎಷ್ಟೋ ಹಿಂಸಾಕೃತ್ಯಗಳನ್ನು ಮಾಡಬೇಕಾಗಿದೆ. ಆದುದರಿಂದ ಮಾನವನಿಂದ ಕೇವಲ ಅಹಿಂಸೆಯ ಜೀವನ ಅಸಾಧ್ಯ—ಹೀಗೆಂದು ನೀವು ಹೇಳುವಿರಿ. ಅಂದಮೇಲೆ ವ್ಯಾವಹಾರಿಕವಾಗಿ ನಮ್ಮ ನಿತ್ಯಜೀವನಕ್ಕೆ ಇಂತಹ ಧ್ಯೇಯದಿಂದ ಏನು ಪ್ರಯೋಜನ ? ’

ನಾವು ಭೌತ ಜೀವನದಲ್ಲಿರುವಾಗ ಅದನ್ನು ಪಡೆಯಲು ಸಾಧ್ಯವಿಲ್ಲ ಎಂಬುದೇ ಈ ಧಾರ್ಮಿಕ ಧ್ಯೇಯಗಳ ಗುಣವೆಂದು ನನ್ನ ನಮ್ರವಾದ ನಿವೇದನ. ಏಕೆಂದರೆ ಒಂದು ಆಧ್ಯಾತ್ಮಿಕ ಧ್ಯೇಯಕ್ಕೆ ಶ್ರದ್ಧೆಯೇ ಸಾಕ್ಷಿ. ಹೀಗಿರಲು ನಮ್ಮ ಆತ್ಮವು ಈ ನಶ್ವರವಾದ ದೇಹದ ಹೊದಿಕೆಯಲ್ಲಿರುವಾಗ ನಾವು ಪರಿಪೂರ್ಣತೆಯನ್ನು ಹೊಂದಲು ಸಾಧ್ಯವಾದರೆ ಶ್ರದ್ಧೆಗೆ ಅವಕಾಶವೇ ಇಲ್ಲ. ಮಿತಿಯಿಲ್ಲದೆ ವ್ಯಾಪಿಸುತ್ತ ಹೋಗುವುದೇ ಅದರ ಮುಖ್ಯ ಲಕ್ಷಣ. ಸತತವಾದ ಪ್ರಯತ್ನ, ಎಲ್ಲ ಆಧ್ಯಾತ್ಮಿಕ ಪ್ರಗತಿಗೂ ಆಧಾರವಾಗಿರುವ ಧ್ಯೇಯ ಸಾಧನೆಗೆ ಎಡೆಬಿಡದ ಅರಸುವಿಕೆ—ಮರ್ತ್ಯರು ದೇಹಧಾರಿಗಳಾಗಿದ್ದಾಗಲೇ ಪರಿಪೂರ್ಣರಾಗಲು ಸಾಧ್ಯವಾಗುವುದಾದರೆ ಇದಕ್ಕೆ ಅವಕಾಶವೆಲ್ಲಿ ? ಹೀಗೆ

ಸುಲಭವಾಗಿ ಧ್ಯೇಯವನ್ನು ಸಾಧಿಸಬಹುದಾದರೆ ಯಾವುದೋ ಒಂದು ನಿರ್ದಿಷ್ಟ ಮಾದರಿಯ ಪ್ರಕಾರ ನಮ್ಮ ಜೀವನವನ್ನು ನಡೆಸಿದರೆ ಸಾಕಾಗಿತ್ತು. ಹಾಗೆಯೇ ಎಲ್ಲರಿಗೂ ಒಂದು ಪರಿಪೂರ್ಣವಾದ ನಡವಳಿಕೆಯ ವಿಧಾನವಿದ್ದ ಪಕ್ಷಕ್ಕೆ— ನಾನಾರೀತಿಯ ಮತಗಳಿಗೂ ಧರ್ಮಗಳಿಗೂ ಅವಕಾಶವೇ ಇರುತ್ತಿರಲಿಲ್ಲ. ಎಲ್ಲರೂ ಒಂದೇ ಪಡಿಯಚ್ಚಿನ ಮತಧರ್ಮವನ್ನು ಅನುಸರಿಸಬೇಕಾಗಿತ್ತು.

ಅಪರಿಮಿತವಾಗಿರುವುದೇ ಒಂದು ಧ್ಯೇಯದ ಗುಣ. ದೋಷಯುಕ್ತರಾದ ಮಾನವರಿಂದ ಹೊಂದಲು ಸಾಧ್ಯವಿಲ್ಲದಿರುವಿಕೆಯೇ ಆಧ್ಯಾತ್ಮಿಕ ಧ್ಯೇಯಗಳ ಲಕ್ಷಣ. ಅವು ಅಪರಿಮಿತವಾಗಿರುವುದರಿಂದ ಅವುಗಳ ಕಡೆ ಸರಿದ ಹಾಗೆಲ್ಲ ಅವು ದೂರವಾಗಿ ಹೋಗುತ್ತವೆ. ಆದರೆ ಅವು ನಮ್ಮ ಅಂಗಾಂಗಗಳಿಗಿಂತಲೂ ನಮಗೆ ನಿಕಟವಾಗಿವೆ. ಏಕೆಂದರೆ ಅವುಗಳ ಸತ್ತ್ವ, ಅವುಗಳ ಸತ್ಯ—ಇದರ ವಿಚಾರದಲ್ಲಿ ನಮಗೆ ಅಚಲವಾದ ಶ್ರದ್ಧೆ ಇದೆ. ನಮ್ಮ ಭೌತಿಕ ಜೀವನದಲ್ಲಿಯೂ ನಮಗಿಷ್ಟು ಶ್ರದ್ಧೆ ಇಲ್ಲ. ನಮ್ಮ ಧ್ಯೇಯಗಳಲ್ಲಿ ನಮಗಿರುವ ಶ್ರದ್ಧೆಯೇ ನಮ್ಮ ಜೀವನದ ಸತ್ಯಸ್ವರೂಪ—ನಿಜವಾಗಿಯೂ ಅದೇ ಮಾನವನ ಸರ್ವಸ್ವ. (ಯಂಗ್ ಇಂಡಿಯಾ, ೨೨–೧೧–೧೯೨೮)

## ಅಹಿಂಸೆ ಮತ್ತು ಶಾಕಾಹಾರ

ಜೀವದಯೆಯಿಂದಲೇ ನಮ್ಮಲ್ಲಿರುವ ಅರಿಷಡ್ವರ್ಗಗಳನ್ನು (ಅಂದರೆ ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ ಇವುಗಳನ್ನು) ಗೆಲ್ಲಲು ಸಾಧ್ಯವಿಲ್ಲವೆಂದು ನೆನಪಿನಲ್ಲಿಡಬೇಕು. ಪೂರ್ತಿಯಾಗಿ ಆತ್ಮನಿಗ್ರಹವನ್ನು ಮಾಡಿ, ಸರ್ವರಲ್ಲಿಯೂ ಸದ್ಭಾವನೆಯಿಂದ ಕೂಡಿ, ತನ್ನ ಆಚರಣೆಯಲ್ಲಿ ಎಲ್ಲರನ್ನೂ ಪ್ರೀತಿಸುವವನನ್ನು ನನಗೆ ತೋರಿಸಿ. ನನ್ನ ಮಟ್ಟಿಗೆ ಹೇಳುವುದಾದರೆ ಒಂದುವೇಳೆ ಮಾಂಸಾಹಾರಿಯಾದರೂ ಅಂತಹವನು ಪೂಜ್ಯ. ಅದಕ್ಕೆ ವಿರುದ್ಧವಾಗಿ ಕಾಮಕ್ರೋಧಗಳಿಂದ ಕೂಡಿದವನು ನಿತ್ಯವೂ ಇರುವೆಗಳಿಗೆ ಆಹಾರವನ್ನು ಕೊಡಬಹುದು. ಯಾರನ್ನೂ ಕೊಲ್ಲದೆ ಇರಬಹುದು. ಆದರೆ ಇಂತಹವನ ಜೀವದಯೆಯಲ್ಲಿ ಮೆಚ್ಚತಕ್ಕದ್ದೇನೂ ಇಲ್ಲ. ಈತನ ಆಚರಣೆ ಯಂತ್ರವತ್ತಾದ ಮೂಢಕಾರ್ಯ. ಆಧ್ಯಾತ್ಮಿಕ ದೃಷ್ಟಿಯಿಂದ ಗೊಡ್ಡು

ಆಚರಣೆಗೆ ಬೆಲೆ ಇಲ್ಲ. ಪ್ರಾಯಶಃ ಅಷ್ಟೇ ಅಲ್ಲ, ಇದು ಕೇವಲ ಕಪಟವರ್ತನೆ ಯಾಗಿರಬಹುದು, ತನ್ನಲ್ಲಿರುವ ಕಶ್ಮಲವನ್ನು ಮುಚ್ಚಿಡುವ ಸೋಗಾಗಬಹುದು.

(ಹರಿಜನ, ೧೫-೪-೧೯೪೦)

## ಶಾಕಾಹಾರದ ಸೇವನೆ

**ಪ್ರಶ್ನೆ:** ಮೀನನ್ನು ತಿನ್ನುವವರಿಗೆ ಅದನ್ನು ಒದಗಿಸಬೇಕೆನ್ನುವಿರಿ. ಇದರಲ್ಲಿ ತಿನ್ನುವವರೂ, ಒದಗಿಸುವವರೂ ಹಿಂಸೆಯನ್ನು ಮಾಡುವರಲ್ಲವೆ ?

**ಉತ್ತರ:** ಇಬ್ಬರೂ ಹಿಂಸೆ ಮಾಡುವರು. ಶಾಕಾಹಾರಿಗಳೂ ಹಿಂಸೆ ಮಾಡುವರು. ದೇಹದಿಂದ ಕೂಡಿದ ಜೀವನದಲ್ಲಿ ಈ ಬಗೆಯ ಹಿಂಸೆ ಸೇರಿ ಕೊಂಡಿದೆ. ಆದುದರಿಂದ ಮನುಷ್ಯನಲ್ಲಿಯೂ ಸೇರಿಕೊಂಡಿದೆ. ಈ ಪರಿಸ್ಥಿತಿ ಯಲ್ಲಿ ಇದನ್ನು ಎದುರಿಸಿ, ನಾವು ಅಹಿಂಸೆಯನ್ನು ಕರ್ತವ್ಯದೃಷ್ಟಿಯಿಂದ ಆಚರಿಸ ಬೇಕು. ನಾವು ಇದನ್ನು ಹೇಗೆ ಮಾಡಬಹುದೆಂಬುದನ್ನು ನಾನು ಆಗಾಗ ಸೂಚಿಸಿದೇನೆ. ಮೀನನ್ನು ತಿನ್ನುವವನಿಗಿಂತಲೂ, ಅವನನ್ನು ತಿನ್ನಬಾರದೆಂದು ಬಲಾತ್ಕಾರ ಮಾಡುವವನು ಹೆಚ್ಚು ಹಿಂಸೆಯನ್ನು ಮಾಡುತ್ತಾನೆ. ಮೀನು ಹಿಡಿಯುವವರೂ, ಅದನ್ನು ಮಾರುವವರೂ, ತಿನ್ನುವವರೂ ಪ್ರಾಯಶಃ ತಮ್ಮ ಆಚರಣೆಯಲ್ಲಿ ಯಾವ ಹಿಂಸೆಯನ್ನೂ ಮಾಡಿದಂತೆ ಅವರಿಗೆ ಅರಿವಿಲ್ಲದಿರ ಬಹುದು; ಅರಿವಿದ್ದರೂ, ಇದು ಅನಿವಾರ್ಯವೆಂದು ಅವರು ಭಾವಿಸಬಹುದು. ಆದರೆ ಯಾರು ಬಲಾತ್ಕಾರ ಮಾಡುವರೊ ಅವರು ತಿಳಿದೂ ತಿಳಿದು ಹಿಂಸೆ ಯನ್ನು ಮಾಡುವರು. ಬಲಾತ್ಕಾರ ಮಾಡುವುದು ಕ್ರೂರತನ. ತಮ್ಮೊಳಗೆ ಜಗಳವಾಡುವವರು, ಹಣಸಂಪಾದನೆಯಲ್ಲಿ ಎಂತಹ ನೀಚಕಾರ್ಯವನ್ನಾದರೂ ಮಾಡಲು ಹಿಂಜರಿಯದವರು, ಮಾನವರನ್ನು ದುಡಿಮೆಗೆ ಗುರಿಮಾಡಿ ಶೋಷಣೆ ಯನ್ನು ಮಾಡುವವರು, ಮೂಕಪ್ರಾಣಿಗಳ ಮೇಲೆ ಅವು ಹೊರಲಾರದಷ್ಟು ಭಾರವನ್ನು ಹೇರುವವರು, ಮೀನಿನ ವ್ಯವಸಾಯದವರು ಬೇರೆ ವಿಧದಲ್ಲಿ ಹಿಂಸಿಸಿದರೆ ಇವರೆಲ್ಲರೂ ಪ್ರಯತ್ನಪೂರ್ವಕವಾಗಿ ಹಿಂಸಾಕೃತ್ಯಗಳನ್ನು ಮಾಡುತ್ತಾರೆ. ಇಂತಹವನ್ನು ಸುಲಭವಾಗಿ ನಿಲ್ಲಿಸಲು ಸಾಧ್ಯ. ಮತ್ಸ್ಯಾಹಾರಿ ತಾನು ಮೀನು ತಿನ್ನಲು ನಾವು ಅವಕಾಶ ಕೊಡುವುದನ್ನು ನಾನು ಹಿಂಸೆಯೆನ್ನ

ಲಾರೆ. ಅವನ ವಿಷಯದಲ್ಲಿ ಸಹನೆಯಿಂದಿರುವುದು ನನ್ನ ಕರ್ತವ್ಯ. ಅಹಿಂಸೆಯೇ ಪರಮಧರ್ಮ. ಅದನ್ನು ನಾವು ಪೂರ್ತಿಯಾಗಿ ಆಚರಿಸದಿದ್ದರೂ ಅದರ ಇಂಗಿತವನ್ನು ತಿಳಿಯಲು ಪ್ರಯತ್ನಿಸಬೇಕು. ಸಾಧ್ಯವಾದಮಟ್ಟಿಗೂ ಹಿಂಸೆ ಮಾಡದೆ ಇರಬೇಕು. (ಹರಿಜನ, ೨೮-೩-೧೯೪೬)

## ಮೂಕಪ್ರಾಣಿಗಳನ್ನು ಕೊಲ್ಲದಿರುವುದು

ನನ್ನ ಅಹಿಂಸಾಮಾರ್ಗ ನನ್ನ ಸ್ವಂತದ್ದು. ಪ್ರಾಣಿಗಳನ್ನು ಕೊಲ್ಲಬಾರದೆಂಬ ನಿಯಮವನ್ನು ನಾನು ಸಂಪೂರ್ಣವಾಗಿ ಒಪ್ಪಲು ಸಾಧ್ಯವಿಲ್ಲ. ಯಾವ ಪ್ರಾಣಿಗಳು ಮನುಷ್ಯನನ್ನು ತಿನ್ನುವುವೋ ಅಥವಾ ಗಾಸಿಗೊಳಿಸುವುವೋ ಅಂತಹವನ್ನು ರಕ್ಷಿಸಬೇಕೆಂಬ ಭಾವನೆ ನನ್ನಲ್ಲಿಲ್ಲ. ಅಂತಹವುಗಳ ಸಂತಾನ ಬೆಳೆಯಲು ಬಿಡುವುದು ತಪ್ಪೆಂದು ನನ್ನ ಅಭಿಪ್ರಾಯ. ಆದುದರಿಂದ ಇರುವೆಗಳಿಗೂ, ಕೋತಿಗಳಿಗೂ, ನಾಯಿಗಳಿಗೂ ನಾನು ಆಹಾರವನ್ನಿಕ್ಕಲಾರೆ. ಅವುಗಳನ್ನು ಕಾಪಾಡಲು ನಾನೆಂದಿಗೂ ಮನುಷ್ಯನ ಪ್ರಾಣವನ್ನು ಬಲಿ ಕೊಡಲಾರೆ.

ಈ ರೀತಿಯಲ್ಲಿ ವಿಚಾರಮಾಡುತ್ತ, ಮನುಷ್ಯನ ಹಿತಕ್ಕೆ ಅಪಾಯವನ್ನು ಉಂಟುಮಾಡುವಂತಹ ಸಂದರ್ಭಗಳಲ್ಲಿ ಕೋತಿಗಳನ್ನು ನಾಶಮಾಡುವುದು ಕ್ಷಮ್ಯವೆಂದು ನನಗೆ ತೋರುತ್ತದೆ. ಹೀಗೆ ಮಾಡುವುದೇ ಕರ್ತವ್ಯವೆಂದೂ ತೋರುತ್ತದೆ. ಇದೇ ನಿಯಮವನ್ನು ಮನುಷ್ಯರಿಗೂ ಅನ್ವಯಿಸಬಾರದೇಕೆ? ಎಂಬ ಪ್ರಶ್ನೆ ಹುಟ್ಟಬಹುದು. ಆದರೆ ಎಷ್ಟೇ ಕೆಟ್ಟವರಾದರೂ ಅವರೂ ನಮ್ಮಂತೆಯೇ ಮನುಷ್ಯರು. ದೇವರು ಮನುಷ್ಯರಿಗೆ ವಿವೇಕವನ್ನು ಕೊಟ್ಟಿದಾನೆ. ಆದುದರಿಂದ ಈ ನಿಯಮವನ್ನು ಮನುಷ್ಯರಿಗೆ ಅನ್ವಯಿಸಲಾಗದು.

(ಹರಿಜನ, ೫-೫-೧೯೪೬)

ಭಾರತದಲ್ಲಿರುವ ಮುಸಲ್ಮಾನ ಮಿತ್ರರೊಬ್ಬರು, ಅವರಿರುವ ಪ್ರದೇಶದಲ್ಲಿ ಶಾಕಾಹಾರಿಗಳಾದ ಹಿಂದೂಗಳು ತಮ್ಮ ಮಧ್ಯೆ ವಾಸಿಸುವ ಮುಸಲ್ಮಾನರು ಮೀನು-ಮಾಂಸಗಳನ್ನು ಬಿಟ್ಟುಬಿಡಬೇಕೆಂದು ಒತ್ತಾಯಪಡಿಸಿದುದಾಗಿ

**ದೂರು ಹೇಳಿದರು. ಈ ಬಗೆಯ ಅಸಹನೆ-ಸಂಕುಚಿತ ಭಾವನೆಗಳು ಗಾಂಧೀಜಿ**

ಯವರಿಗೆ ಸ್ವಲ್ಪವೂ ಸರಿಬೀಳಲಿಲ್ಲ. ಕೇವಲ ಮತನಿಯಮವಾಗಿ ಶಾಕಾಹಾರ ಮಾಡುವವರು ಹಿಂದೂಗಳಲ್ಲಿ ಅಲ್ಪಸಂಖ್ಯಾತರು, ಬಹುಭಾಗದ ಜನ ಮೀನು, ಕೋಳಿ, ಮಾಂಸ ಇವನ್ನು ಅವಕಾಶವಿದ್ದಾಗ ತಿನ್ನುವುದಕ್ಕೆ ಹಿಂಜರಿಯುವುದಿಲ್ಲ. ಶಾಕಾಹಾರಿಗಳು ತಮ್ಮ ನಿಯಮವನ್ನು ಮುಸಲ್ಮಾನರ ಮೇಲೆ ವಿಧಿಸಲು ಯಾವ ಅಧಿಕಾರವನ್ನೂ ಪಡೆಯಲಿಲ್ಲ. ತಮ್ಮ ಹಿಂದೂ ಮಾಂಸಾಹಾರಿಗಳ ಮೇಲೆಯೇ ಹೀಗೆ ಮಾಡಲು ಅವರಿಗೆ ಧೈರ್ಯವಿಲ್ಲ. ಇದೆಲ್ಲವೂ ಹಾಸ್ಯಾಸ್ಪದ. ಶಾಕಾಹಾರನಿಯಮವನ್ನು ಪ್ರಚಾರಮಾಡಬೇಕೆಂದರೆ ಅದರ ಸೊಗಸನ್ನು ತಮ್ಮ ಜೀವನದ ಮೂಲಕ ಎತ್ತಿ ತೋರಿಸಬೇಕು. ಇತರರನ್ನು ತಮ್ಮ ದಾರಿಗೆ ತಿರುಗಿಸಲು ಬೇರೆ ರಾಜಮಾರ್ಗವಿಲ್ಲ. (ಹರಿಜನ, ೧೬-೧೧-೧೯೪೭)

## ಹಿಂದೂ ಧರ್ಮ ಮತ್ತು ಅಹಿಂಸೆ

ಅಹಿಂಸೆಯ ಉಪದೇಶವು ಎಲ್ಲ ಮತಧರ್ಮಗಳಲ್ಲಿಯೂ ಇದೆ. ಆದರೆ ನಮ್ಮ ದೇಶದಲ್ಲಿ ಅದರ ಆಚರಣೆಯ ನಿಯಮಗಳನ್ನು ಒಂದು ಶಾಸ್ತ್ರವನ್ನಾಗಿ ಮಾಡಿದಾರೆ. ಅಸಂಖ್ಯಾತ ಸಾಧುಸಂತರು ತಪಸ್ಸು ಮಾಡಿ ತಮ್ಮ ಪ್ರಾಣವನ್ನು ಅರ್ಪಿಸಿದಾರೆ. ಭಾವುಕರಾದ ಕವಿಗಳು ಹಿಮಾಲಯ ಪರ್ವತದ ಶುಭ್ರ ಧವಳ ತೇಜಸ್ಸು ಈ ತಪಶ್ಶಕ್ತಿಯ ಪ್ರಭಾವವೆಂದು ಕಲ್ಪಿಸಿ ಹಾಡಿದಾರೆ. ಆದರೆ ಅಹಿಂಸೆಯ ಆ ಬಗೆಯ ಆಚರಣೆಯು ಇಂದು ಮಾಯವಾಗಿದೆ. ಕೋಪವನ್ನು ಪ್ರೇಮದಿಂದಲೂ, ಹಿಂಸೆಯನ್ನು ಅಹಿಂಸೆಯಿಂದಲೂ ಗೆಲ್ಲುವ ಈ ಸನಾತನ ತತ್ತ್ವ ಈಗ ಪುನರುಜ್ಜೀವನಗೊಳ್ಳಬೇಕಾಗಿದೆ. ಆ ಪುನರುಜ್ಜೀವನಕ್ಕೆ ಜನಕಮಹಾರಾಜನೂ, ಶ್ರೀರಾಮಚಂದ್ರನೂ ಆಳಿದ ಈ ಪ್ರದೇಶಕ್ಕಿಂತಲೂ ಉತ್ತಮ ಕ್ಷೇತ್ರವಾವುದು ?

ನಮ್ಮ ಮಾನವತ್ವವನ್ನು ನಾವು ಮರೆತು ಮುಯ್ಯಿಗೆ ಮುಯ್ಯಿ ತೀರಿಸಿಕೊಳ್ಳಬೇಕೆ ? ಯಾವನೋ ತಲೆಕೆಟ್ಟ ಮನುಷ್ಯ ದೇವಸ್ಥಾನವನ್ನು ಕೆಡಿಸಿ ವಿಗ್ರಹವನ್ನು ಮುರಿದುದಕ್ಕಾಗಿ ಒಬ್ಬ ಹಿಂದೂವಾದವನು ಮಸೀದಿಯನ್ನು ಕೆಡಿಸಲು ಹೋಗಬೇಕೇ ? ಹೀಗೆ ಮಾಡುವುದರಿಂದ ದೇವಸ್ಥಾನವನ್ನು ರಕ್ಷಿಸಿದಂತಾಯಿತೆ ? ಅಥವಾ ಹಿಂದೂಧರ್ಮದ ಉದ್ಧಾರವಾಗುವುದೆ ? ನನ್ನಮಟ್ಟಿಗೆ

ನಾನು ಎಷ್ಟು ವಿಗ್ರಹಾರಾಧಕನೊ ಅಷ್ಟೇ ವಿಗ್ರಹಭೇದಕನೂ ಹೌದು. ನೀವೆಲ್ಲರೂ ಸಹ—ಹಿಂದೂಗಳಾಗಲಿ ಮುಸಲ್ಮಾನರಾಗಲಿ, ನೀವು ಇದಕ್ಕೆ ಒಪ್ಪದೇ ಹೋದರೂ ನನ್ನಂತಹವರೇ ಎಂದು ನನ್ನ ಭಾವನೆ. ಮಾನವನಿಗೆ ಒಂದು ಸಂಕೇತ ಬೇಕು. ಮಸೀದಿಗಳೂ, ಕ್ರೈಸ್ತಮಂದಿರಗಳೂ ದೇವಸ್ಥಾನ ಗಳೇ. ದೇವರು ಸರ್ವವ್ಯಾಪಿ; ಅವನು ಮರದಲ್ಲಿ, ಕಲ್ಲಿನಲ್ಲಿ, ಕೊನೆಗೆ ರೋಮರೋಮದಲ್ಲಿರುವನು. ಆದರೆ ಮಾನವರು ಕೆಲವು ಸ್ಥಳಗಳನ್ನು ಪವಿತ್ರ ವೆಂದು ಭಾವಿಸಿರುವರು. ಇಂತಹ ಭಾವನೆಗೆ ನಾವು ಮರ್ಯಾದೆಯನ್ನು ಕೊಡ ಬೇಕು. ಇತರರ ಪೂಜಾಸ್ವಾತಂತ್ರ್ಯಕ್ಕೆ ಯಾವ ಅಡ್ಡಿಯನ್ನೂ ಒಡ್ಡಬಾರದು. ಹಿಂದೂಗಳಿಗಾಗಲಿ, ಮುಸಲ್ಮಾನರಿಗಾಗಲಿ, ನನ್ನ ಸಲಹೆ ಇಷ್ಟೆ—ನಿಮ್ಮನ್ನು ಯಾರಾದರೂ ಒತ್ತಾಯಮಾಡಲು ಬಂದರೆ ಅದನ್ನು ನೀವು ದಿಟ್ಟತನದಿಂದಲೂ ಸೌಜನ್ಯದಿಂದಲೂ ಎದುರಿಸಬೇಕು. ನನ್ನಮಟ್ಟಿಗೆ ಹೇಳುವುದಾದರೆ ನನ್ನ ಪೂಜಾಸ್ವಾತಂತ್ರ್ಯಕ್ಕೆ ಯಾರಾದರೂ ಅಡ್ಡಿಮಾಡಲು ಬಂದರೆ ನನ್ನ ಪೂಜಾ ವಿಗ್ರಹವನ್ನು ಅಪ್ಪಿಕೊಂಡು ಅದನ್ನು ರಕ್ಷಿಸಲು ನನ್ನ ಪ್ರಾಣವನ್ನು ಅರ್ಪಿಸಲು ಸಿದ್ಧನಾಗಿರುವೆನು.

ಹಿಂಸೆಯಿಂದ ಕೂಡಿದ ಪ್ರತಿಭಟನೆಗಿಂತಲೂ ಈ ಬಗೆಯ ಅಹಿಂಸಾತ್ಮಕ ಪ್ರತಿಭಟನೆಗೆ ಹೆಚ್ಚು ಶೌರ್ಯ ಬೇಕು. (ಹರಿಜನ, ೩೦-೩-೧೯೪೭)

## ಹಿಂದೂಗಳು ಪ್ರಾಯಶ್ಚಿತ್ತ ಮಾಡಬೇಕು

ಗಾಂಧೀಜೀ ತಮ್ಮ ಪ್ರಾರ್ಥನಾನಂತರದ ವ್ಯಾಖ್ಯಾನವನ್ನು ಆರಂಭಿ ಸುತ್ತಾ ಗದ್ವಾನ್ ಗ್ರಾಮದಲ್ಲಿ ಮುಸಲ್ಮಾನ ಗಂಡಸರು, ಹೆಂಗಸರು, ಮಕ್ಕಳು ಕ್ರೂರವಾದ ರೀತಿಯ ಕೊಲೆಗೆ ಗುರಿಯಾದುದನ್ನು ಪ್ರಸ್ತಾಪಿಸಿ, ಸಭೆಯು ಮೌನವಾಗಿ ಕುಳಿತು ತಮ್ಮ ದುಃಖವನ್ನು ಸೂಚಿಸಬೇಕೆಂದು ಸಲಹೆ ಮಾಡಿ ದರು. ನಿರಪರಾಧಿಗಳನ್ನು ಈ ಬಗೆಯಲ್ಲಿ ಕೊಲ್ಲುವುದನ್ನು ನಾವು ವಿಚಾರ ಮಾಡಬೇಕು. ಯಾವುದಾದರೂ ಧರ್ಮರಕ್ಷಣೆ ಇದರಿಂದ ಆಯಿತೆ? ಯಾವ ಧರ್ಮದಲ್ಲಿಯೂ ನಮ್ಮ ನೆರೆಹೊರೆಯವರನ್ನು ಕೊಲ್ಲಬೇಕೆಂದು ಹೇಳಿರುವುದಿಲ್ಲ.

ಇದು ಕೇವಲ ಸ್ವೇಚ್ಛಾವರ್ತನೆ, ಕ್ರೂರವಾದ ಕೊಲೆ—ಇದರಲ್ಲಿ ಯಾವ ಉದ್ದೇಶ್ಯವಿತ್ತೊ? ಸ್ವಾರ್ಥವಿತ್ತೋ?—ತಿಳಿಯದ ವಿಷಯ.

ಜೀವನದಿಂದ ಕಳಕಳಿಸುತ್ತಿದ್ದ ಮನೆಗಳು ಈಗ ಬರಿದಾದುವು. ಇದು ಎಲ್ಲರಿಗೂ ತಿಳಿದ ವಿಷಯ. ಮುಂದೆ ಮಾಡಬೇಕಾದುದೇನು? ಜನರು ತಮ್ಮ ಪಾಪಗಳು ತೊಳೆದುಹೋಗುವುದೆಂಬ ನಂಬಿಕೆಯಿಂದ ಗಂಗೆಯಲ್ಲಿ ಸ್ನಾನ ಮಾಡುವರು. ನಮ್ಮ ಮುಂದೆ ನಡೆದಿರುವ ನಾಶವನ್ನು ನೋಡಿ ಅಸಹಾಯರಾದ ಹೆಂಗಸರು-ಮಕ್ಕಳ ಮೇಲೆ ನಡೆದ ಅತ್ಯಾಚಾರವನ್ನು ನಾವು ನೆನೆದು ಅದಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಅವರು ಹೋಗಿ ಪಾಳುಬಿದ್ದ ಮನೆಗಳನ್ನು ಸರಿಮಾಡಿ ಶುದ್ಧಗೊಳಿಸಿ, ವಾಸಕ್ಕೆ ಯೋಗ್ಯವಾಗಿ ಮಾಡಬೇಕು. ಹೊರದೂಡಲ್ಪಟ್ಟ ಮುಸಲ್ಮಾನರ ಬಳಿ ಹೋಗಿ ಅವರು ಮತ್ತೆ ಬಂದು ವಾಸಿಸಬೇಕೆಂದು ಪ್ರಾರ್ಥನೆ ಮಾಡಬೇಕು. ಆಗಲೆ ತಮಗೆ ಮನಶ್ಶಾಂತಿ ಆದೀತೆಂದು ಅವರಲ್ಲಿ ವಿನಂತಿ ಮಾಡಿಕೊಳ್ಳಬೇಕು. ತಮ್ಮ ಪ್ರಿಯ ಜನರು ಎಲ್ಲಿ ಕೊಲೆಗೀಡಾದರೊ ಆ ಮನೆಗಳಲ್ಲಿ ಅವರು ಹೇಗೆ ಬಂದು ವಾಸ ಮಾಡಲಾದೀತೆಂದು ಅವರು ಕೇಳಬಹುದು. ಓಡಿಹೋದ ಮುಸಲ್ಮಾನರು ಆ ಬಗೆಯಲ್ಲಿ ಪ್ರಶ್ನಿಸಿದರೆ ಅದು ನ್ಯಾಯವೆ. ಆದರೆ ತಪ್ಪುಮಾಡಿದವರು ನಿಜವಾದ ಪಶ್ಚಾತ್ತಾಪವನ್ನು ತಾಳಿ ಅವರಲ್ಲಿಗೆ ಹೋಗಿ ಅವರನ್ನು ಸಂತೈಸಿ, ನಡೆದುಹೋದುದು ಆಯಿತು, ಮುಂದೆ ಇಂತಹ ಪ್ರಸಂಗಗಳು ಆಗಲಾರವೆಂದು ಭರವಸೆ ಇತ್ತರೆ—ಎಂತಹ ಕಲ್ಲುಹೃದಯವೂ ಕರಗಿಹೋಗುವುದು.

ಹಿಂದೂಗಳು ತಾವು ಹಿಂದೆ ಮಾಡಿದ ಅತ್ಯಾಚಾರಗಳಿಗಾಗಿ ಪಶ್ಚಾತ್ತಾಪ ಪಡುವುದಾದರೆ, ನಾಶವಾದ ಮನೆಗಳನ್ನು ಮತ್ತೆ ಕಟ್ಟಲು ಶ್ರಮದಾನವನ್ನು ಮಾಡಬೇಕೆಂದು ಗಾಂಧೀಜೀ ಸಲಹೆಯನ್ನಿತ್ತರು. ತಮ್ಮ ಸ್ವೇಚ್ಛೆಯಿಂದ, ಉಚಿತವಾಗಿ ನಿಜವಾದ ವಿಶ್ವಾಸದಿಂದ ಈ ಕಾರ್ಯವನ್ನು ಮಾಡಿದ್ದೇ ಆದರೆ ಮುಸಲ್ಮಾನರು ಕಳೆದುಕೊಂಡಿರುವ ನಂಬಿಕೆಯನ್ನು ಪುನಃ ಸ್ಥಾಪಿಸಲು ಸಾಧ್ಯವಾದೀತು. ಬೇರೆ ಯಾವ ಮಾರ್ಗದಿಂದಲೂ ಇಂತಹ ಭರವಸೆಯನ್ನು ನೀಡಲು ಸಾಧ್ಯವಿಲ್ಲ.

ಇಲ್ಲಿಗೆ ಗಾಂಧೀಜೀ ಬಂದಮೇಲೆ ಪೋಲೀಸಿನವರು ಹುಡುಕುತ್ತಿದ್ದ ದೊಂಬಿಗಾರರ ಪೈಕಿ ಐವತ್ತು ಜನರು ತಾವಾಗಿ ಪೋಲೀಸಿನವರ ವಶಕ್ಕೆ

ಶರಣಾದರು. ಈ ವೇಳೆಗೆ ಈ ಸಂಖ್ಯೆ ಹೆಚ್ಚಿರಬಹುದೆಂದು ಗಾಂಧೀಜಿಯ ನಂಬಿಕೆ. ಇವರೆಲ್ಲರೂ ತಮ್ಮ ತಪ್ಪನ್ನು ತಾವೇ ಒಪ್ಪಿಕೊಂಡರು. ಇಂತಹವರ ಶೌರ್ಯಕ್ಕೆ ತಮ್ಮ ಮರ್ಯಾದೆಯನ್ನು ಸೂಚಿಸಿದರು. ಇದರಿಂದ ಪ್ರಾಂತದ ಗೌರವವೇ ಹೆಚ್ಚಿತೆಂದು ಗಾಂಧೀಜೀ ನುಡಿದರು. (ಹರಿಜನ, ೬-೪-೧೯೪೭)

## ಜೈನ ಅಹಿಂಸೆ ?

ಜೈನರ ತತ್ತ್ವಶಾಸ್ತ್ರವನ್ನೂ ಇತರ ತತ್ತ್ವಶಾಸ್ತ್ರಗಳನ್ನೂ ಚೆನ್ನಾಗಿ ಅಧ್ಯಯನಮಾಡಿರುವ ಜೈನಮಿತ್ರರು ಅಹಿಂಸೆಯ ವಿಚಾರದಲ್ಲಿ ಒಂದು ದೀರ್ಘವಾದ ಪತ್ರವನ್ನು ಬರೆದಿದಾರೆ. ಪರ್ಯಾಲೋಚಿಸಿ ಉತ್ತರ ಕೊಡುವಂತಹ ಪತ್ರವಿದು. ಆ ಪತ್ರದ ಸಾರಾಂಶ ಈ ರೀತಿ ಇದೆ :

' ಅಹಿಂಸೆಗೆ ನೀವು ಮಾಡಿರುವ ವಾಖ್ಯೆ ಮನಸ್ಸಿನಲ್ಲಿ ಗೊಂದಲವನ್ನು ಎಬ್ಬಿಸಿದೆ. ಹಿಂಸೆಯೆಂದರೆ ದೇಹದಿಂದ ಪ್ರಾಣವನ್ನು ಬೇರ್ಪಡಿಸುವುದು— ಹೀಗೆ ಮಾಡದಿರುವುದು ಅಹಿಂಸೆ—ಇದು ಸಾಮಾನ್ಯ ಅರ್ಥ. ಪ್ರಾಣಿಗಳಿಗೆ ಯಾವ ನೋವನ್ನೂ ಉಂಟುಮಾಡದಿರುವುದು ಮೂಲ ಅರ್ಥದ ವ್ಯಾಪಕವಾದ ಪ್ರಯೋಗ, ಅಷ್ಟೆ. ಆದರೆ ಈ ಮೂಲ ಅರ್ಥವನ್ನು ಎಷ್ಟೇ ಹಿಗ್ಗಿಸಿದರೂ ಪ್ರಾಣವನ್ನು ತೆಗೆಯುವ ಕಾರ್ಯ ಇದರಲ್ಲಿ ಅಡಕವಾಗಲಾರದು. ಯಾವ ಸಂದರ್ಭದಲ್ಲಿಯೂ ಪ್ರಾಣವನ್ನು ತೆಗೆಯಲೇಬಾರದೆಂದು ನನ್ನ ಅಭಿಪ್ರಾಯ ವಲ್ಲ, ಹಾಗೆ ಭಾವಿಸಬೇಡಿ. ಏಕೆಂದರೆ ಈ ಪ್ರಪಂಚದಲ್ಲಿ ಯಾವ ಬಗೆಯ ನೈತಿಕ ನಿಯಮವೂ ನಿರಪೇಕ್ಷವಾದ ರೀತಿಯಲ್ಲಿ ಇಲ್ಲ ; ಯಾವ ನಿಯಮಕ್ಕೂ ಅಪವಾದವೇ ಇಲ್ಲದೆ ಇರುವುದಿಲ್ಲ. ' ಅಹಿಂಸಾ ಪರಮೋ ಧರ್ಮಃ ' ಎನ್ನುವ ವಾಕ್ಯ ಒಂದು ಉತ್ತಮವೂ ಮೂಲಭೂತವೂ ಆದ ಸತ್ಯವನ್ನು ಸಾರುತ್ತದೆ ; ಆದರೆ ಮಾನವಕರ್ತವ್ಯಗಳೆಲ್ಲವೂ ಇದರಲ್ಲಿ ಅಡಕವಾಗಿರುವುದಿಲ್ಲ. ಆದುದರಿಂದ ನೀವು ' ಅಹಿಂಸಾ ರೀತಿ ಕೊಲ್ಲುವಿಕೆ ' ಎಂದು ಹೇಳುವುದು ಸರಿಯಾದ ಕಾರ್ಯವಿರಬಹುದು. ಆದರೆ ಅದನ್ನು ಅಹಿಂಸೆಯೆಂದು ವರ್ಣಿಸಲು ಸಾಧ್ಯವಿಲ್ಲ.

ಜೀವನ ಸದಾ ಬದಲಾವಣೆಯನ್ನೂ ವಿಕಾಸವನ್ನೂ ಹೊಂದುವಂತೆ, ಪದಗಳ ಅರ್ಥವೂ ವಿಕಾಸವಾಗುತ್ತಿರುತ್ತದೆ. ಮತಧರ್ಮಗಳ ಚರಿತ್ರೆಯಿಂದ

ಇದನ್ನು ನಿರೂಪಿಸಬಹುದು. ಹಿಂದೂ ಧರ್ಮದಲ್ಲಿ 'ಯಜ್ಞ'ದ ಅರ್ಥ ಇದಕ್ಕೊಂದು ನಿದರ್ಶನ. ಪ್ರಾಣಿಶಾಸ್ತ್ರಗಳಲ್ಲಿ ಉಪಯೋಗಿಸುವ ಶಬ್ದಗಳ ಅರ್ಥ ಸರ್ ಜೆ. ಸಿ. ಬೋಸರ ಆವಿಷ್ಕರಣಗಳ ಫಲವಾಗಿ ಬಹಳ ಬದಲಾವಣೆಯನ್ನು ಹೊಂದಿವೆ. ಇದೇ ರೀತಿಯಲ್ಲಿ 'ಅಹಿಂಸೆ'ಯಲ್ಲಿ ನಾವು ಸಿದ್ಧಿಯನ್ನು ಪಡೆದರೆ ಈ ತತ್ತ್ವದಲ್ಲಿ ಹೊಸ ಹೊಸ ಅರ್ಥಗಳನ್ನು ಕಂಡುಹಿಡಿಯಲು ನಮಗೆ ಸಂಕೋಚವಿರಲಾರದು. 'ಅಹಿಂಸಾ ಪರಮೋ ಧರ್ಮಃ' ಎನ್ನುವ ವಾಕ್ಯವನ್ನು ಉತ್ತಮಪಡಿಸಲು ಸಾಧ್ಯವಿಲ್ಲ. ಆದರೆ ಪರಂಪರಾಗತವಾಗಿ ನಮಗೆ ಪ್ರಾಪ್ತವಾಗಿರುವ ಆಧ್ಯಾತ್ಮಿಕ ಐಶ್ವರ್ಯವನ್ನು ನಾವು ಉಳಿಸಿಕೊಳ್ಳಬೇಕಾದರೆ ಈ ಉತ್ಕೃಷ್ಟವೂ ಸರ್ವವ್ಯಾಪಿಯೂ ಆದ ತತ್ತ್ವದ ಪೂರ್ಣ ಅರ್ಥವನ್ನು ನಾವು ಕ್ರಮೇಣ ಆವಿಷ್ಕರಣಮಾಡುತ್ತ ಹೋಗುವುದು ನಮ್ಮ ಕರ್ತವ್ಯ. ಹೆಸರುಗಳು ನನಗಷ್ಟು ಮುಖ್ಯವಲ್ಲ. ನಾನು ಉದಹರಿಸಿರುವ ಸಂದರ್ಭಗಳಲ್ಲಿ ಪ್ರಾಣವನ್ನು ತೆಗೆಯುವುದನ್ನು 'ಅಹಿಂಸೆ' ಎಂದು ಕರೆಯಬಹುದೇ ಬಾರದೇ? —ಇದು ನನಗೆ ಮುಖ್ಯವಲ್ಲ. ಈ ಕಾರ್ಯ ಸರಿಯೇ ತಪ್ಪೇ ಎನ್ನುವುದೇ ಪ್ರಶ್ನೆ.

* * * *

ಈ ಮಿತ್ರರ ಮತ್ತೊಂದು ಸಮಸ್ಯೆ ಈ ರೀತಿ ಇದೆ:

'ನೀವು ಕಲ್ಪನೆ ಮಾಡಿ ಬರೆದಿರುವ ಸಂದರ್ಭದಲ್ಲಿ, ನಿಮ್ಮ ಮಗಳ ಪ್ರಾಣವನ್ನು ತೆಗೆಯುವ ವರ್ಣನೆ ಮಾಡಿದೀರಿ. ಇದು ನನಗೆ ಅರ್ಥವಾಗಲಿಲ್ಲ. ಅಂತಹ ಸಂದರ್ಭದಲ್ಲಿ ಅವಳನ್ನು ಬಲಾತ್ಕಾರಪಡಿಸಲು ಬಂದ ದುರಾತ್ಮನನ್ನು ಕೊಲ್ಲಬಹುದು. ಆದರೆ, ಪಾಪ! ಮಗಳೇನು ತಪ್ಪುಮಾಡಿದಳು? ಅತ್ಯಾಚಾರಕ್ಕೆ ಗುರಿಯಾಗಿ ಕಲುಷಿತೆಯಾದವಳ ಅಪಮಾನವನ್ನು ಸಾವಿನಿಂದಲೇ ತಪ್ಪಿಸಬೇಕೆಂದು ಹೇಳುತ್ತೀರಾ? ಇಂತಹ ಸಂದರ್ಭದಲ್ಲಿ ಒಂದು ವೇಳೆ ದುರ್ಭಾಗ್ಯಳಾದ ಆ ಹುಡುಗಿ ಪ್ರಪಂಚದವರ ಅಪಮಾನಕ್ಕೆ ಹೆದರಿ ತನ್ನ ಪ್ರಾಣವನ್ನು ತೆಗೆಯಬೇಕೆಂದು ಬೇಡಿಕೊಂಡರೂ, ಅವಳು ಹಾಗೆ ಇಚ್ಛಿಸುವುದು ಸರಿಯಲ್ಲವೆಂದು ಅವಳ ಮನಸ್ಸನ್ನು ತಿರುಗಿಸುವುದು ನಮ್ಮ ಕರ್ತವ್ಯವಲ್ಲವೆ? ನನ್ನ ಮಟ್ಟಿಗೆ ಹೇಳುವುದಾದರೆ ಅಪಮಾನ, ಅತ್ಯಾಚಾರಗಳಿಗೆ ಗುರಿಯಾಗುವುದಕ್ಕೂ ಬಲಾತ್ಕಾರವಾಗಿ ಒಬ್ಬರ ಕೈಕಾಲು ಕತ್ತರಿಸಿ ಹಾಕುವುದಕ್ಕೂ ಯಾವ ವ್ಯತ್ಯಾಸವನ್ನೂ ನಾನು ಕಾಣುವುದಿಲ್ಲ.'

ನಾನು ಹೇಳಿದ ದೃಷ್ಟಾಂತದಲ್ಲಿ ನನ್ನ ಮಗಳ ಪ್ರಾಣವನ್ನು ತೆಗೆಯುವುದಕ್ಕೆ ಕಾರಣ ಅವಳು ಅತ್ಯಾಚಾರಕ್ಕೆ ಗುರಿಯಾಗಿ ಕೆಡುವಳೆಂದಲ್ಲ; ಅವಳ ಇಚ್ಛೆಯನ್ನು ತಿಳಿಸಲು ಸಾಧ್ಯವಿದ್ದರೆ ಅವಳೇ ಸಾಯಲು ಸಿದ್ಧಳಾಗಿರುವಳೆಂದು. ಲೋಕಾಪವಾದಕ್ಕೂ ನಿಂದೆಗೂ ಹೆದರಿ ಹೀಗೆ ಅವಳು ಇಚ್ಛಿಸುವುದಾದರೆ ಖಂಡಿತವಾಗಿಯೂ ಅವಳ ಇಚ್ಛೆ ತಪ್ಪೆಂದು ಹೇಳಿ ಅವಳ ಮನಸ್ಸನ್ನು ತಿರುಗಿಸಲು ನಾನು ಪ್ರಯತ್ನಿಸುವೆನು. ಅವಳು ಸಾಯಲು ಇಚ್ಛಿಸುವಳೆಂದು ನನ್ನ ಮನಸ್ಸಿಗೆ ಪೂರ್ತಿಯಾಗಿ ನಿಶ್ಚಯವಾದರೇನೇ ನಾನು ಅವಳ ಪ್ರಾಣವನ್ನು ತೆಗೆಯುವೆನು. ಸೀತೆಯು ರಾವಣನಿಂದ ಅಪಮಾನಿತಳಾಗುವುದಕ್ಕಿಂತಲೂ ಮರಣವೇ ಉತ್ತಮವೆಂದು ಭಾವಿಸಿದಳೆಂದು ನಾನು ಬಲ್ಲೆ. ಅದೇ ನಮ್ಮ ಶಾಸ್ತ್ರಗಳೂ ವಿಧಿಸಿವೆಯೆಂದು ನನ್ನ ನಂಬಿಕೆ. ಅಪಮಾನವನ್ನು ಅನುಭವಿಸುವುದಕ್ಕಿಂತಲೂ ಸಾವನ್ನೇ ಬಯಸಿ ಸಾವಿರಾರು ಪುರುಷರೂ ಸ್ತ್ರೀಯರೂ ನಿತ್ಯವೂ ಪ್ರಾರ್ಥನೆಮಾಡುವರು. ಈ ಬಗೆಯ ಭಾವನೆಗೆ ಉತ್ತೇಜನ ಕೊಡಬೇಕಾದುದು ಬಹಳ ಆವಶ್ಯಕವೆಂದು ನನ್ನ ಅಭಿಪ್ರಾಯ. ಪಾತಿವ್ರತ್ಯ ಕಳೆದುಕೊಳ್ಳುವುದು, ಕೈಕಾಲು ಕಳೆದುಕೊಳ್ಳುವುದು ಒಂದೇ ಬಗೆಯ ನಷ್ಟವೆಂದು ಹೇಳಲು ನಾನು ಸಿದ್ಧನಾಗಿಲ್ಲ. ಆದರೆ ಅಂಗಹೀನವಾಗುವುದಕ್ಕಿಂತಲೂ ಸಾಯುವುದೇ ಸಾವಿರ ಪಾಲು ಮೇಲಾಗಿರುವ ಸಂದರ್ಭಗಳನ್ನು ನಾನು ಊಹಿಸಬಲ್ಲೆ.

* * * *

ಮೂರನೆಯ ಸಮಸ್ಯೆ ಈ ರೀತಿ ಇದೆ :

'ಕೋತಿಗಳನ್ನು ಒಂದೇ ಸಮನೆ ಕೊಲ್ಲುವುದಕ್ಕೆ ಬದಲಾಗಿ ಅವುಗಳನ್ನು ಹೆದರಿಸಿ ಓಡಿಸಲು ಕೆಲವನ್ನು ಗಾಯಗೊಳಿಸುವುದು ನೀವೇಕೆ ಸಹಿಸಲಾರಿರೊ ನನಗೆ ತಿಳಿಯುವುದಿಲ್ಲ. ಕುರುಡರಲ್ಲಿಯೂ, ಮೂಕಪ್ರಾಣಿಗಳಲ್ಲಿಯೂ ಪ್ರಾಣದ ಮೇಲೆ ಆಸೆ ಅತಿಯಾಗಿದೆಯಲ್ಲವೆ? ಅವುಗಳ ನೋವನ್ನು ನೋಡಿ ಸಹಿಸುವುದು ಕಷ್ಟವೆಂಬ ಕಾರಣದಿಂದ ಅವುಗಳನ್ನು ಕೊಲ್ಲುವುದು—ಇದೂ ಒಂದು ರೀತಿಯ ಸ್ವಾರ್ಥಚಿಂತನೆಯಾಗುವುದಿಲ್ಲವೆ?'

ಕೋತಿಗಳನ್ನು ಗಾಯಗೊಳಿಸಿಬಿಡುವುದನ್ನು ನಾನು ಸಹಿಸಲಾರೆ. ಏಕೆಂದರೆ ಹಾಗೆಯೇ ಬಿಡುವುದರಿಂದ ಅವು ದೀರ್ಘಕಾಲ ಯಾತನೆಗೊಂಡು

ಸಾವಿಗೆ ತುತ್ತಾಗುವುವು. ಕೋತಿಗಳು ಸಾಯಲೇಬೇಕಾಗಿದ್ದ ಪಕ್ಷಕ್ಕೆ ಹೀಗೆ ನಿಧಾನವಾಗಿ ಸಾಯುವುದಕ್ಕಿಂತ, ಒಂದೇ ಸಮನೆ ಅವುಗಳನ್ನು ಕೊಂದು ಹಾಕುವುದೇ ಉತ್ತಮವೆಂದು ನನಗನಿಸುತ್ತದೆ. ಹೀಗೆ ಥಟ್ಟನೆ ಕೊಲ್ಲುವುದಕ್ಕೆ ಬದಲಾಗಿ ಅವುಗಳು ನಿಧಾನವಾಗಿ ಸಾಯಲು ಗಾಯಗೊಳಿಸಿ ಬಿಡುವುದರಿಂದ ನಾನು ಎಂತಹ ಅಹಿಂಸೆಯನ್ನು ಆಚರಿಸುವೆನೋ ನನ್ನ ಬುದ್ಧಿಗೆ ನಿಲುಕದಾಗಿದೆ. ಗಾಯಗೊಂಡ ಕೋತಿಗಳಿಗಾಗಿ ಒಂದು ಚಿಕಿತ್ಸಾಲಯವನ್ನು ಏರ್ಪಾಡು ಮಾಡುವುದಾದರೆ, ಅದು ಬೇರೆ ಮಾತು. ಅಲ್ಪಸ್ವಲ್ಪ ಸಹಾಯ, ಆರೈಕೆ ಸಿಕ್ಕುವ ಆಸೆ ಇರುವವರೆಗೂ ಅಂಗಹೀನರೂ ಕುರುಡರೂ ಜೀವದ ಮೇಲಿರುವ ಆಸೆಯನ್ನು ಬಿಡಲಾರರೆಂದು ಒಪ್ಪಿಕೊಳ್ಳುತ್ತೇನೆ. ಆದರೆ ಒಬ್ಬ ಕುರುಡ, ಅಜ್ಞಾನಿ, ದೇವರಲ್ಲಿ ನಂಬಿಕೆ ಇಲ್ಲದವನು, ಒಂದು ದೂರವಾದ ಮನುಷ್ಯರಿಲ್ಲದ ಮರುಭೂಮಿಯಲ್ಲಿ ಒಂಟಿಯಾಗಿ ಬಿದ್ದ ಪಕ್ಷಕ್ಕೆ, ಅಲ್ಲಿ ಯಾವ ಸಹಾಯವೂ ತಲಪಲು ಸಾಧ್ಯವಾಗದಿದ್ದರೆ ಇದು ಆ ಬಡಪ್ರಾಣಿಗೂ ತಿಳಿದಿದ್ದ ಪಕ್ಷಕ್ಕೆ, ಆ ಸಂದರ್ಭದಲ್ಲಿ ಅಂತಹ ಪ್ರಾಣಿ ಉಳಿಯಲು ಇಷ್ಟಪಡಲಾರನು. ಎಲ್ಲ ಸಂದರ್ಭಗಳಲ್ಲಿಯೂ ಜೀವದಾಸೆಯನ್ನು ಪೋಷಿಸಬೇಕಾದುದು ನಮ್ಮ ಕರ್ತವ್ಯವೆಂದು ನಾನು ಒಪ್ಪಲಾರೆ.

* * * *

ನಾಲ್ಕನೆಯ ಪ್ರಶ್ನೆ ಈ ರೀತಿ ಇದೆ :

ಜೈನಧರ್ಮದ ದೃಷ್ಟಿಯಲ್ಲಿ ಅಹಿಂಸಾತತ್ತ್ವವು ಈ ಮೂರು ನಿಯಮಗಳ ಆಧಾರದ ಮೇಲೆ ನಿಂತಿದೆ.

ಸಂದರ್ಭಗಳು ಏನೇ ಇರಲಿ, ಯಾತನೆಯು ಎಷ್ಟೇ ತೀವ್ರವಾಗಿರಲಿ, ಬದುಕಬೇಕೆಂಬ ಆಸೆಯನ್ನು ಯಾರೂ ತಾವಾಗಿ ಬಿಡಲು ಸಾಧ್ಯವಿಲ್ಲ; ಅಥವಾ ಇತರರು ತಮ್ಮನ್ನು ಕೊಲ್ಲುವಂತೆ ಹೇಳುವುದೂ ಸಾಧ್ಯವಿಲ್ಲ. ಆದುದರಿಂದ ನೈತಿಕದೃಷ್ಟಿಯಿಂದ ಪ್ರಾಣವನ್ನು ತೆಗೆಯುವುದನ್ನು ಸಮರ್ಥನೆ ಮಾಡುವುದಕ್ಕಾಗಲಾರದು.

ಚಟುವಟಿಕೆಗಳಿಂದ ತುಂಬಿದ ಪ್ರಪಂಚದಲ್ಲಿ ಹಿಂಸೆಯು ಅನಿವಾರ್ಯ. ಆದುದರಿಂದ ಮುಮುಕ್ಷುವಾದವನು ಅಹಿಂಸಾಮಾರ್ಗವನ್ನು ಹಿಡಿಯಬೇಕಾದರೆ ಪ್ರಪಂಚದ ಚಟುವಟಿಕೆಗಳಲ್ಲಿ ಆದಷ್ಟು ಕಡಮೆ ಪಾಲುಗೊಳ್ಳಬೇಕು.

ಹಿಂಸೆಯಲ್ಲಿ ಎರಡು ವಿಧ: ಬೇಸಾಯದಲ್ಲಿ ಪ್ರತ್ಯಕ್ಷವಾಗಿ ಹಿಂಸೆ ಉಂಟು; ಬೇಸಾಯದ ಉತ್ಪತ್ತಿಯನ್ನು ನಾವು ಆಹಾರವಾಗಿ ತೆಗೆದುಕೊಳ್ಳು ವುದರಲ್ಲಿ ಪರೋಕ್ಷವಾದ ಹಿಂಸೆಯುಂಟು. ಈ ಎರಡರಿಂದಲೂ ತಪ್ಪಿಸಿಕೊಳ್ಳಲು ಉಪಾಸಕನಿಗೆ ಸಾಧ್ಯವಿಲ್ಲದಿದ್ದರೆ ಅವನು ಪ್ರತ್ಯಕ್ಷ ಹಿಂಸೆಯಿಂದಲಾದರೂ ದೂರವಿರಬೇಕು.

ನಿಮ್ಮ ' ನವಜೀವನ ' ಪತ್ರಿಕೆಯಲ್ಲಿ ಈ ಮೂರು ಆಧಾರನಿಯಮಗಳ ಮೇಲೆ ನಿಮ್ಮ ವಿಮರ್ಶಾತ್ಮಕ ಟೀಕೆಯನ್ನು ಮಾಡಬೇಕೆಂದು ಕೋರುತ್ತೇನೆ. ನಿಮ್ಮ ದೃಷ್ಟಿಗೂ ಜೈನರ ದೃಷ್ಟಿಗೂ ಮೂಲಭೂತವಾದ ಭೇದವಿದೆಯೆಂದು ನನಗನಿಸುತ್ತದೆ. ಅಹಿಂಸೆಯ ವಿಷಯದಲ್ಲಿ ನಿಮಗಿರುವ ಅಭಿಪ್ರಾಯವನ್ನು ಪ್ರಪಂಚದಲ್ಲಿದ್ದುಕೊಂಡು ಕರ್ಮಮಾಡುವುದರ ಮೇಲೆ ರೂಪಿಸಿಕೊಂಡಿದೀರಿ. ಜೈನರ ದೃಷ್ಟಿ ಪ್ರಪಂಚವನ್ನು ತೊರೆಯುವುದರ ಆಧಾರದ ಮೇಲೆ ರೂಪು ಗೊಂಡಿದೆ. ಆಧುನಿಕ ಕಾಲದಲ್ಲಿ ಕರ್ಮಕ್ಕೆ ಪ್ರಾಶಸ್ತ್ಯ ಹೆಚ್ಚು. ಅಹಿಂಸಾತತ್ತ್ವ ಶಾಶ್ವತವಾದುದು, ಕಾಲದೇಶಗಳಿಗೆ ಅಬಾಧಿತವಾದುದು. ಹೀಗಿರುವಲ್ಲಿ ಕೇವಲ ತ್ಯಾಗದ ಜೀವನಕ್ಕೆ ಮಾತ್ರ ಇದರ ಅನ್ವಯವನ್ನು ಪರ್ಯಾಪ್ತಮಾಡದೆ ಈಗಿನ ಪ್ರಪಂಚದ ನಡವಳಿಕೆಗಳಲ್ಲಿ ಸೇರಿಕೊಂಡು ಯಾವ ರೀತಿಯಲ್ಲಿ ಈ ತತ್ತ್ವದ ಅನ್ವಯವಾಗಬೇಕಾಗಿದೆ ಎನ್ನುವುದನ್ನು ಸ್ವತಂತ್ರವಾಗಿ ಜನರು ವಿಚಾರಮಾಡು ವಂತೆ ಅವರನ್ನು ಪ್ರೇರೇಪಿಸುವುದು ಅತ್ಯಾವಶ್ಯಕ. ಈಗಿನ ಪರಿಸ್ಥಿತಿಯಲ್ಲಿ ಈ ತತ್ತ್ವ ಹೇಗೆ ರೂಪುಗೊಳ್ಳಬೇಕೆಂದು ಜನರು ನಿರ್ಧರಿಸಬೇಕಾಗಿದೆ.

ಈ ತತ್ತ್ವಗಳ ಜಿಜ್ಞಾಸೆಗೆ ಬಹಳ ಸಂಕೋಚದಿಂದ ನಾನು ಕೈಹಾಕು ತ್ತಿದೇನೆ. ಇಂತಹ ಚರ್ಚೆಗಳಲ್ಲಿ ಇರುವ ಅಪಾಯ ನನಗೆ ತಿಳಿದಿದೆ. ಆದರೆ ಅದನ್ನು ತಪ್ಪಿಸಿಕೊಳ್ಳುವುದರಲ್ಲಿ ಪ್ರಯೋಜನವಿಲ್ಲ. ಈ ಮಿತ್ರರು ಪ್ರತಿಪಾದಿಸಿ ರುವ ಮೊದಲನೆಯ ತತ್ತ್ವದ ವಿಚಾರದಲ್ಲಿ ನನ್ನ ಅಭಿಪ್ರಾಯವನ್ನು ಈಗಾ ಗಲೇ ಸೂಚಿಸಿದೇನೆ. ಎಲ್ಲ ಸಂದರ್ಭಗಳಲ್ಲಿಯೂ ಜೀವದಾಸೆಯನ್ನು ಬಿಡದೆ ಅದಕ್ಕೆ ಕಚ್ಚಿಕೊಂಡಿರುವುದು ಒಂದು ಬಗೆಯ ಹೇಡಿತನ—ಇದೇ ನಮ್ಮ ಸುತ್ತುಮುತ್ತಲು ನಡೆಯುತ್ತಿರುವ ಅನೇಕ ಹಿಂಸೆಗಳಿಗೆ ಮೂಲಕಾರಣವೆಂದು ನನ್ನ ದೃಢವಾದ ನಂಬಿಕೆ. ಈ ತತ್ತ್ವವನ್ನು ವಿಚಾರಮಾಡದೆ ಅಂಧಶ್ರದ್ಧೆ ಯಿಂದ ಇದರ ಆಚರಣೆಯನ್ನು ಮುಂದುವರಿಸುವುದು ಹಿಂಸೆಯನ್ನು ಹೆಚ್ಚಿಸು

ವುದೇ ಹೊರತು ಕಡಮೆ ಮಾಡಲಾರದು. ಈ ಮಿತ್ರರು ಹೇಳುವ ಹಾಗೆ ಈ ಮೊದಲನೇ ತತ್ತ್ವ ಜೈನಧರ್ಮದಲ್ಲಿರುವ ಪಕ್ಷಕ್ಕೆ ಮೋಕ್ಷಪ್ರಾಪ್ತಿಗೆ ಇದರಿಂದ ಅಡ್ಡಿಯಾಗುವುದೆಂದು ನನಗೆ ತೋರುತ್ತದೆ. ಏಕೆಂದರೆ ಮೋಕ್ಷಕ್ಕಾಗಿ ಸದಾ ಹಂಬಲಿಸುತ್ತಿರುವವನು ಇನ್ನೊಂದು ಪ್ರಾಣವನ್ನಾದರೂ ನಷ್ಟಮಾಡಿ ತನ್ನ ಪ್ರಾಣವನ್ನುಳಿಸಿಕೊಳ್ಳಲು ಇಚ್ಛಿಸಲಾರನು. ಅಜ್ಞಾನದಲ್ಲಿ ಮುಳುಗಿರು ವವನಿಗೆ ಈ ಇಚ್ಛೆ ಇರುವುದು. ಅವನಿಗೆ ಮೋಕ್ಷದ ಅರ್ಥವೇ ಗೊತ್ತಿಲ್ಲ. ಅಂತಹವನೇ ಹೇಗಾದರೂ ಮಾಡಿ ತನ್ನ ಪ್ರಾಣವನ್ನುಳಿಸಿಕೊಂಡಿರಬೇಕೆಂದು ಬಯಸುವನು. ಮೋಕ್ಷವೆಂದರೆ ಎಲ್ಲ ಆಸೆ-ಆಸಕ್ತಿಗಳ ತ್ಯಾಗ. ಹೀಗಿರಲು ಈ ನಶ್ವರ ದೇಹದ ಮೇಲೆ ಅಭಿಮಾನವನ್ನು ತಾಳಿ ಈ ತುಚ್ಛವಾದ ಆಸೆಗೆ ಮುಮುಕ್ಷು ಎಡೆಗೊಡಲು ಸಾಧ್ಯವೆ? ಮೋಕ್ಷದ ಮಾತು ಹಾಗಿರಲಿ; ನಮ್ಮ ಕುಟುಂಬ, ನಮ್ಮ ದೇಶ, ಈ ಮಾನವಪ್ರಪಂಚ—ಇವುಗಳ ಸೇವೆಯೇ ತಮ್ಮ ಪುರುಷಾರ್ಥಸಾಧನೆಯೆಂದು ಭಾವಿಸಿ ಅಸಂಖ್ಯಾತ ಜನರು ತಮ್ಮ ಜೀವವನ್ನು ಮುಡುಪಾಗಿಟ್ಟಿರುವವರಿದಾರೆ; ತಮ್ಮ ಪ್ರಾಣವನ್ನು ಕಳೆದುಕೊಳ್ಳಲು ಸದಾ ಸಿದ್ಧರಾಗಿರುವವರಿದಾರೆ. ಈ ರೀತಿಯು ಸ್ವಾರ್ಥತ್ಯಾಗ, ಆತ್ಮಾರ್ಪಣೆ ಪ್ರಪಂಚದ ನಾನಾ ಕ್ಷೇತ್ರಗಳಲ್ಲಿ ಇವುಗಳ ಬೋಧನೆಯಾಗುತ್ತಿರುವುದನ್ನು ನಾವು ಕಾಣು ತ್ತೇವೆ. ಹೇಗಾದರೂ ಮಾಡಿ ನಮ್ಮ ಜೀವ ಮುಂದುವರಿಯಬೇಕೆಂದು ಬಯಸುವುದು ತೀರ ಸಂಕುಚಿತ ಸ್ವಾರ್ಥಬುದ್ಧಿಯೆಂದು ನನಗನಿಸುತ್ತದೆ. ಆದರೆ ಇಂತಹ ಸ್ವಾರ್ಥವಿದ್ದವರನ್ನು ಬಲಾತ್ಕಾರವಾಗಿ ನಿಸ್ಸ್ವಾರ್ಥತೆಗೆ ತಿರುಗಿಸಲು ಪ್ರಯತ್ನಿಸಬೇಕೆಂದು ನಾನು ಹೇಳುತ್ತಿಲ್ಲ. ನನ್ನ ಉದ್ದೇಶ್ಯವಿಷ್ಟೆ: ಏನಕೇನ ಪ್ರಕಾರೇಣ ಪ್ರಾಣವನ್ನುಳಿಸಿಕೊಳ್ಳಬೇಕೆಂಬ ಭಾವನೆ ಸರಿಯಾದು ದಲ್ಲವೆಂದು ತೋರಿಸುವುದು.

ಇನ್ನು ಮಿತ್ರರು ಹೇಳುವ ಎರಡನೆ ತತ್ತ್ವ. ಇದನ್ನು ತತ್ತ್ವವೆಂದು ಕರೆಯಬೇಕೋ ಇಲ್ಲವೊ, ನಾನು ಕಾಣೆ. ಅದು ಹೇಗೇ ಇರಲಿ, ಇದು ಸಾಮಾನ್ಯ ಸತ್ಯ—ಅದಕ್ಕೆ ನನ್ನ ಪೂರ್ಣ ಒಪ್ಪಿಗೆ ಇದೆ.

ಇನ್ನು ಮೂರನೆಯ ತತ್ತ್ವ. ಈ ಮಿತ್ರರು ಪ್ರತಿಪಾದಿಸಿದ ರೀತಿಯಲ್ಲಿ ದೋಷವಿದೆ. ಇದನ್ನು ಒಪ್ಪುವುದಾದರೆ ಅಹಿಂಸೆಯ ಉಪಾಸಕನು ಬೇಸಾಯ ಮಾಡಬಾರದು. ಆದರೆ ಬೇಸಾಯದ ಫಲವನ್ನು ಅವನು ಬಿಡುವಂತಿಲ್ಲ.

ಮಾನವರ ಜೀವನಕ್ಕೆ ಅದು ಅವಶ್ಯವಾಗಿ ಬೇಕಾಗಿರುವ ಕರ್ಮ. ಈ ತತ್ತ್ವ ದಿಂದ ಬಹಳ ಅವಾಂತರ ಪ್ರಾಪ್ತಿಯಾಗುತ್ತದೆ. ಈ ನಿಯಮದ ಪ್ರಕಾರ ಲಕ್ಷಾಂತರ ಜನರು ಹಿಂಸೆಯಲ್ಲಿ ಮುಳುಗಿರಬೇಕು, ಅದರ ಪರಿಣಾಮವಾಗಿ ಹಲಕೆಲವರು ಅಹಿಂಸಾ ಉಪಾಸಕರಾಗಬೇಕು. ಇದು ಯೋಗ್ಯವಲ್ಲ. ಅಹಿಂಸಾತತ್ತ್ವಕ್ಕೆ ವಿರುದ್ಧವಾದ ನಿಯಮವಿದು. ಅಹಿಂಸೆಯ ನಿಜವಾದ ಅರ್ಥವನ್ನು ತಿಳಿಯದವರು ಈ ವಾದವನ್ನು ಮಾಡುವರು. ಈ ವಾದವನ್ನು ಕೊನೆ ಮುಟ್ಟುವವರೆಗೂ ಮುಂದುವರಿಸಿದರೆ ಏನಾಗುತ್ತದೆ ನೋಡೋಣ. ನೀವು ಹಾವನ್ನು ಕೊಲ್ಲಬಾರದು, ಆದರೆ ಅವಶ್ಯವಿದ್ದರೆ ಅದನ್ನು ಇತರರಿಂದ ಕೊಲ್ಲಿಸಬಹುದು. ನೀವೇ ಒಬ್ಬ ಕಳ್ಳನನ್ನು ಓಡಿಸಬಾರದು, ಆದರೆ ಬೇರೊಬ್ಬ ರಿಂದ ಓಡಿಸಬಹುದು. ಒಬ್ಬ ಕ್ರೂರಿಯಿಂದ ಒಂದು ಮಗುವನ್ನು ಕಾಪಾಡ ಬೇಕಾದರೆ ಬೇರೊಬ್ಬರು ಆ ಕ್ರೂರಿಯ ಆಗ್ರಹಕ್ಕೆ ಗುರಿಯಾಗಬೇಕು. ಹೀಗೆ ಅಹಿಂಸೆಯ ಪವಿತ್ರ ಹೆಸರನ್ನು ಹೇಳಿಕೊಂಡು ಪ್ರತ್ಯಕ್ಷ ಕಾರ್ಯದಲ್ಲಿ ಪ್ರವೇಶಿಸಿ ದಂತೆ ಇರುವುದೇ ಇದರ ಅರ್ಥವಾಗುವುದು. ನನ್ನ ಅಭಿಪ್ರಾಯದಲ್ಲಿ ಇದು ಧರ್ಮವೂ ಅಲ್ಲ, ಅಹಿಂಸೆಯೂ ಅಲ್ಲ. ಒಬ್ಬ ಮನುಷ್ಯನು ಅಪಾಯವನ್ನು ಎದುರಿಸಲು ಅದರಿಂದುಂಟಾಗುವ ಕಷ್ಟಗಳಿಗೆ ಸಿದ್ಧನಾಗಿಲ್ಲದಿದ್ದರೆ ಅವನು ಭಯವನ್ನು ತೊರೆದಿಲ್ಲ. ಭಯವನ್ನು ತೊರೆಯದವನು ಅಹಿಂಸೆಯ ಉಪಾಸಕ ನಾಗಲಾರ. ಅಹಿಂಸೆ ಎಲ್ಲವನ್ನೂ ಜಯಿಸುವುದೆಂದು ನಮ್ಮ ಶಾಸ್ತ್ರಗಳು ಹೇಳುತ್ತವೆ. ಕ್ರೂರಮೃಗಗಳು ತಮ್ಮ ಕ್ರೌರ್ಯವನ್ನು, ದುಷ್ಟರು ತಮ್ಮ ದೌಷ್ಟ್ಯ ವನ್ನು ಇದರ ಮುಂದೆ ಬಿಟ್ಟುಬಿಡುತ್ತಾರೆಂದು ಶಾಸ್ತ್ರಗಳು ಸಾರುತ್ತವೆ. ನನ್ನ ಆಚರಣೆ ಅಸಮಗ್ರವೂ ಅಸಂಪೂರ್ಣವೂ ಆಗಿದ್ದರೂ ಈ ಸತ್ಯವನ್ನು ನಾನು ಮನಗಂಡಿದೇನೆ. ಈ ಮಿತ್ರರು ಹೇಳಿರುವ ಮೂರನೆಯ ತತ್ತ್ವ ಜೈನಧರ್ಮ ಹೇಳುತ್ತದೆಯೇ ಎನ್ನುವ ವಿಷಯದಲ್ಲಿ ನನಗೆ ಸಂಶಯವಿದೆ. ಒಂದು ವೇಳೆ ಹಾಗೆ ಹೇಳುವುದಾದರೆ, ನನ್ನ ಪೂರ್ತಿಗೆ ನಾನು ಅದಕ್ಕೆ ಮನ್ನಣೆಯನ್ನು ಕೊಡಲಾರೆ.

ಈಗ ಸನ್ಯಾಸಮಾರ್ಗ ಮತ್ತು ಕರ್ಮಮಾರ್ಗಗಳ ಪ್ರಶ್ನೆ. ನಾನೂ ಸನ್ಯಾಸಮಾರ್ಗದಲ್ಲಿ ಶ್ರದ್ಧೆಯುಳ್ಳವನಾಗಿದೇನೆ. ಆದರೆ ಅದನ್ನು ಕರ್ಮ ದಲ್ಲಿಯೂ, ಕರ್ಮದ ಮೂಲಕವೂ ಸಾಧಿಸಬೇಕೆಂದು ನಂಬುತ್ತೇನೆ. ದೇಹ

ಧಾರಿಗಳಾಗಿರುವವರೆಗೂ ಕರ್ಮ ಅನಿವಾರ್ಯ. ಜೀವನಚಕ್ರವೂ ಕರ್ಮವಿಲ್ಲದೆ ಒಂದು ಕ್ಷಣ ಪರ್ಯಂತವೂ ನಡೆಯಲಾರದು. ಆದುದರಿಂದ ಈ ಸಂದರ್ಭದಲ್ಲಿ ಸನ್ಯಾಸಕ್ಕೆ ಒಂದೇ ಅರ್ಥವನ್ನು ಕೊಡಲು ಸಾಧ್ಯ: ದೇಹದಿಂದ ಕರ್ಮ ಮಾಡುವಾಗಲೂ ಕರ್ಮದಿಂದ ನಾವು ಅಲಿಪ್ತರಾಗಿರಬೇಕು. ಸನ್ಯಾಸಮಾರ್ಗ ದಲ್ಲಿ ನಡೆಯುವವನು, ಕರ್ಮವನ್ನು ಬಿಟ್ಟುಬಿಡದೆ, ತಾನು ಕೇವಲ ನಿಮಿತ್ತ ಮಾತ್ರನೆಂದು ಅನಾಸಕ್ತನಾಗಿ ಸರ್ವಭೂತಹಿತಕ್ಕಾಗಿ ಕರ್ಮಮಾಡಬೇಕು. ಈ ರೀತಿ ಮಾಡಿದರೆ, ಬೇಸಾಯವಾಗಲಿ, ನೂಲುವುದಾಗಲಿ—ಯಾವ ಕೆಲಸ ವನ್ನೇ ಆಗಲಿ—ಸನ್ಯಾಸಮಾರ್ಗದಿಂದ ಸರಿಯದೆ, ನಿಸ್ವಾರ್ಥ ಸೇವಾಬುದ್ಧಿ ಯಿಂದ—ಅಹಂಕಾರ-ಆಸಕ್ತಿಗಳನ್ನು ತೊರೆದು ಈ ಕರ್ಮಗಳನ್ನು ಮಾಡುತ್ತ ಹೋಗಬಹುದು. ಈ ಬಗೆಯ ಸನ್ಯಾಸಮಾರ್ಗದಲ್ಲಿ ನಂಬಿಕೆಯನ್ನುಳ್ಳ ನನ್ನಂತಹವರು ಅಹಿಂಸಾತತ್ತ್ವವು ನಾವು ಈ ದೇಹದಲ್ಲಿರುವಾಗಲೇ ಹೇಗೆ ಅನ್ವಯವಾಗುವುದೆಂಬುದನ್ನೂ, ನಿತ್ಯಜೀವನದಲ್ಲಿ ಈ ತತ್ತ್ವದ ಪ್ರಯೋಗ ವನ್ನು ಹೇಗೆ ಮಾಡಬಹುದೆಂದೂ ನಮ್ಮ ಮಟ್ಟಿಗೆ ನಾವೇ ಕಂಡುಹಿಡಿಯ ಬೇಕಾಗುವುದು. ಒಂದು ಧರ್ಮದ ಗುಣವೇನೆಂದರೆ ಸರ್ವರಿಗೂ ಸರ್ವ ಕಾಲಕ್ಕೂ ಅದು ಅನ್ವಯವಾಗುವುದೆಂಬುದೇ. ಅದು ಕೆಲವರ ಸೊತ್ತಲ್ಲ, ಎಲ್ಲರೂ ಅದರ ಆಚರಣೆಯಿಂದ ಕೃತಾರ್ಥರಾಗಬಹುದು. ಸತ್ಯ ಮತ್ತು ಅಹಿಂಸೆಗಳು ಪ್ರಪಂಚಕ್ಕೆಲ್ಲ ಅನ್ವಯವಾಗುವ ಇಂತಹ ಸಾಮಾನ್ಯ ಧರ್ಮ ಎಂದು ನನ್ನ ದೃಢವಾದ ನಂಬಿಕೆ. ಹೀಗಿರುವುದರಿಂದಲೇ ಇದರ ಸಂಶೋಧನೆ ಗಾಗಿ ನನ್ನ ಜೀವನವನ್ನು ಮುಡುಪಾಗಿಡುವುದರಲ್ಲಿ ನನಗೆ ಅಮಿತಾನಂದ. ಇತರರಿಗೂ ಈ ಪ್ರವೃತ್ತಿ ಉಂಟಾಗಿ ಈ ಆನಂದದಲ್ಲಿ ಅವರೂ ಭಾಗಿಗಳಾಗ ಬೇಕೆಂದು ನನ್ನ ಹಾರೈಕೆ. (ಯಂಗ್ ಇಂಡಿಯಾ, ೨೫-೧೦-೧೯೨೮)

## ಚುನಾವಣೆಗಳಲ್ಲಿ ಪುಂಡಾಟ

**ಪ್ರಶ್ನೆ:** ಬೊಂಬಾಯಿ ನಗರದಲ್ಲಿ ಇತ್ತೀಚೆಗೆ ನಡೆದ ಒಂದು ಚುನಾವಣೆಯ ಸಂದರ್ಭದಲ್ಲಿ ಪುಂಡಾಟವು ನಡೆದು ಅದರಿಂದ ಬಹಳ ನಷ್ಟವೂ ಭೇದಗಳೂ ಆದುವೆಂದು ನಿಮಗೆ ತಿಳಿದಿರುವುದಷ್ಟೆ. ಇಂತಹ ಸಂದರ್ಭದಲ್ಲಿ ಅಹಿಂಸೆಯ ಬೋಧಕರಾದ ನೀವು ಸುಮ್ಮನಿರುವುದು ಉಚಿತವೆ?

**ಉತ್ತರ :** ನಾನು ಸುಮ್ಮನಿದ್ದುದು ಸೂಕ್ತವೆ ಅಲ್ಲವೆ ಎನ್ನುವ ಪ್ರಶ್ನೆಗೆ ನಾನು ಕೈಹಾಕುವುದಿಲ್ಲ. ಭವಿಷ್ಯದಲ್ಲಿ ಆಗಬಹುದಾದುದಕ್ಕೆ ಇದು ಮುನ್ಸೂಚನೆಯಾಗಿಲ್ಲದಿರುವ ಪಕ್ಷಕ್ಕೆ ಅದರ ಕಡೆ ಹೆಚ್ಚು ಗಮನ ಕೊಡುವುದು ತಪ್ಪಾಗುವುದು. ಇಂತಹ ಒಮ್ಮೊಮ್ಮೆ ಆಗುವ ದೊಂಬಿಗಳೂ ಘರ್ಷಣೆಗಳೂ ನಮ್ಮ ತಲೆಯನ್ನು ಕೆಡಿಸಕೂಡದು. ಜನಸಾಮಾನ್ಯರನ್ನು ಅಹಿಂಸಾಮಾರ್ಗದಲ್ಲಿ ನಿಧಾನವಾಗಿ ಕೊಂಡೊಯ್ಯುವುದು ಸಾಧ್ಯ. ಇಂತಹ ಘಟನೆಗಳಿಂದ ಕಲಿಯುವ ಪಾಠವೇ ಇದಕ್ಕೆ ಸಹಾಯವಾಗಬಹುದು. ಆದರೆ ಈಗ ನಡೆದ ಪುಂಡಾಟ ಒಂದು ಜಾಡ್ಯದಂತೆ ಜನತೆಯ ತಿಳಿಗೇಡಿತನವನ್ನು ಸೂಚಿಸುವುದಾಗಿಯೂ ಇರಬಹುದು. ಅನೇಕರು ತಮ್ಮ ಅಭಿಪ್ರಾಯವೇ ಸರಿಯೆಂದೂ, ಇತರರು ಹೇಳುವುದು ತಪ್ಪೆಂದೂ ಎಣಿಸುವುದುಂಟು. ತಮ್ಮ ಅಭಿಪ್ರಾಯವನ್ನು ಬಲಾತ್ಕಾರವಾಗಿ ಇತರರ ಮೇಲೆ ಹೇರುವುದರಲ್ಲಿ ಯಾವ ತಪ್ಪೂ ಇಲ್ಲವೆಂದು ಭಾವಿಸುವರು. ಈ ಪ್ರಮಾದವನ್ನು ಸರಿಪಡಿಸಬೇಕು. ನಾವು ಸರಿಯಾಗಿದ್ದರೆ, ನಮಗೆ ಅಮಿತವಾದ ತಾಳ್ಮೆಯೂ ಇರಬೇಕು.

ಸದ್ಯದ ಪರಿಸ್ಥಿತಿಯಲ್ಲಿ ನಮ್ಮ ದೋಷಗಳನ್ನು ನಾವು ಕಾಣಲಾರದವರಾಗಿದೇವೆ. ವಿವೇಚನಾಶಕ್ತಿಯಿಲ್ಲದವರೂ, ಭೋಗಲಾಲಸೆಯಲ್ಲಿ ನಿರತರಾಗಿರುವವರೂ ತಮ್ಮ ದೋಷವನ್ನು ತಾವು ಕಾಣಲಾರರು. ಇಂತಹವರು ಅನೇಕರಿದ್ದರೆ, ಇದರಿಂದ ನಾವು ಮಾಡಬೇಕಾದ ತೀರ್ಮಾನವಿಷ್ಟೆ : ನಮ್ಮ ಅಹಿಂಸೆಯು ಶಕ್ತಿಹೀನರ ಅಹಿಂಸೆಯಾಗಿದ್ದಿತು, ಅಹಿಂಸೆಯ ಮುಖವಾಡವನ್ನು ಧರಿಸಿ ಒಳಗೆ ಹಿಂಸೆಯೇ ಇದ್ದಿತೆಂದು ಇದರ ಅರ್ಥ. ಈ ರೀತಿಯ ದೌರ್ಬಲ್ಯ ನಮ್ಮಲ್ಲಿರುವ ಪಕ್ಷಕ್ಕೆ ಬ್ರಿಟಿಷರ ಆಡಳಿತ ಕೊನೆಗಂಡ ಕೂಡಲೆ ರಕ್ತದ ಕಾಲುವೆಗಳು ಹರಿಯುವ ಸಂಭವವಿದೆ. ಬೇರೆ ಪರಕೀಯರ ಆಳ್ವಿಕೆಗೆ ಅಧೀನರಾಗುವ ಸಂಭವವೂ ಇದೆ. ಅಥವಾ ನಮ್ಮಲ್ಲಿ ಯಾದವೀ ಕಲಹವಾಗಿ ದುರ್ಬಲರು ಹೆಚ್ಚು ಶಸ್ತ್ರಬಲವುಳ್ಳವರ ಅಧೀನಕ್ಕೆ ಒಳಗಾಗಲೂಬಹುದು. ಇಂತಹ ಕಲಹಗಳು ಏರ್ಪಡುವ ದುರದೃಷ್ಟಕ್ಕೆ ನಾವು ಗುರಿಯಾದರೆ ಅಹಿಂಸೆಯಲ್ಲಿ ನಂಬಿಕೆ ಇರುವವರು ಇದನ್ನು ನಿಲ್ಲಿಸುವ ಪ್ರಯತ್ನದಲ್ಲಿ ಮಡಿದು ಅಮರರಾಗುವರು.

ಆದರೆ ನಮ್ಮ ಜನಸಾಮಾನ್ಯರು ಅಹಿಂಸೆಯನ್ನು ಗ್ರಹಿಸಿಕೊಂಡಿದಾರೆ

ಎಂದೂ, ಬ್ರಿಟಿಷರು ಹೋದನಂತರ ಅಲ್ಲಿ ಇಲ್ಲಿ ಸ್ವಲ್ಪ ಘರ್ಷಣೆಯಾದರೂ, ಶೀಘ್ರವೇ ಈ ಕಲಹ ಕೊನೆಗಂಡು, ನಾವೆಲ್ಲರೂ ಅಣ್ಣತಮ್ಮಂದಿರಂತೆ ಶಾಂತ ರೀತಿಯಲ್ಲಿ ಒಗ್ಗಟ್ಟಿನಿಂದ ಬಾಳಿ, ಪ್ರಪಂಚಕ್ಕೇ ಶಾಂತಜೀವನದ ಪಾಠವನ್ನು ಕಲಿಸುವೆವೆಂದೂ ನನ್ನ ವಿಶ್ವಾಸವಾಗಿದೆ.

ಬೊಂಬಾಯಿ ನಗರದಲ್ಲಿ ಆದ ದೊಂಬಿಗಳಿಂದೇನು ಲಾಭವಾಯಿತೆಂಬುದು ಅದರಲ್ಲಿ ಪಾಲುಗೊಂಡವರಿಗೆ ಮಾತ್ರ ತಿಳಿದ ವಿಷಯ. ಯಾರು ಇದರಲ್ಲಿ ಭಾಗಿಗಳಾದರು, ಏತಕ್ಕಾಗಿ ಹೊಡೆದಾಡಿದರು, ಏನಾದರೂ ಇದರಿಂದ ಪ್ರಯೋಜನವಾಯಿತೆ ?—ಈ ವಿಷಯಗಳಾವುವೂ ನನಗೆ ಗೊತ್ತಿಲ್ಲ.

(ನವದೆಹಲಿ, ೨೨–೪–೧೯೪೬) (ಹರಿಜನಬಂಧು)
(ಹರಿಜನ, ೨೮–೪–೧೯೪೬)

## ಕೆಲವು ಪ್ರಶ್ನೆಗಳು

ಲಂಡನಿನ ಮಿತ್ರರೊಬ್ಬರು ಅಹಿಂಸೆಯ ಆಚರಣೆಯನ್ನು ಕುರಿತು ಏಳು ಪ್ರಶ್ನೆಗಳನ್ನು ಕಳುಹಿಸಿದಾರೆ. ಇಂತಹವೇ ಆದ ಪ್ರಶ್ನೆಗಳನ್ನು 'ಯಂಗ್ ಇಂಡಿಯಾ' ಮತ್ತು 'ಹರಿಜನ' ಪತ್ರಿಕೆಗಳಲ್ಲಿ ಆಗಾಗ್ಗೆ ಪ್ರಸ್ತಾಪಮಾಡಿದ್ದರೂ ಒಂದು ಲೇಖನದಲ್ಲಿ ಇವಕ್ಕೆ ಉತ್ತರವನ್ನು ಕೊಡುವುದು—ಈ ಉತ್ತರಗಳಿಂದ ಸಹಾಯವು ಒದಗುವ ಪಕ್ಷಕ್ಕೆ—ಪ್ರಯೋಜನವಾದೀತು.

**ಪ್ರಶ್ನೆ :** ಆಧುನಿಕ ರಾಷ್ಟ್ರ (ಇದರ ಮೂಲಭೂತಶಕ್ತಿ ಬಲಪ್ರಯೋಗವೇ ಆಗಿರುವುದರಿಂದ) ಆಂತರಿಕ ಕಲಹಗಳೂ, ಹೊರಗಿನ ದಾಳಿಗಳೂ ಒದಗುವ ಸಂದರ್ಭಗಳಲ್ಲಿ ಅಹಿಂಸಾಮಾರ್ಗದಿಂದ ಇವುಗಳನ್ನು ಎದುರಿಸಲು ಸಾಧ್ಯವೆ ? ಅಥವಾ ಈ ರೀತಿಯ ಅಹಿಂಸಾತ್ಮಕ ಶಕ್ತಿಯನ್ನು ಪ್ರಯೋಗ ಮಾಡಬೇಕೆನ್ನುವವರು ಸರಕಾರದ ಶಕ್ತಿಯ ಆಶ್ರಯವನ್ನು ಮೊದಲು ತೊರೆದು, ಎದುರಾಳಿಯನ್ನು ಪ್ರತಿಭಟಿಸಲು ಕೇವಲ ಖಾಸಗಿ ವ್ಯಕ್ತಿಗಳಾಗಿ ನಿಲ್ಲುವುದು ಆವಶ್ಯಕವಲ್ಲವೆ ?

**ಉತ್ತರ :** ಆಧುನಿಕ ರಾಷ್ಟ್ರ ಬಲಪ್ರಯೋಗದ ಆಧಾರದ ಮೇಲೆ ಪ್ರತಿಷ್ಠಿತವಾಗಿರುವುದರಿಂದ ಆಂತರಿಕ ಮತ್ತು ಬಾಹ್ಯದ ಕಲಹಗಳನ್ನು

ಅಹಿಂಸಾತ್ಮಕವಾಗಿ ಪ್ರತಿಭಟಿಸಲು ಸಾಧ್ಯವಿಲ್ಲ. ದೈವಕ್ಕೂ ಅಸುರನಿಗೂ ಏಕಕಾಲದಲ್ಲಿ ಒಬ್ಬ ಮನುಷ್ಯನು ಮಣಿಯಲು ಸಾಧ್ಯವಿಲ್ಲ; ಶಾಂತವೂ ಕ್ರೌರ್ಯವೂ ಒಂದೆಡೆಗೆ ಇರಲು ಸಾಧ್ಯವಿಲ್ಲ. ಒಂದು ರಾಷ್ಟ್ರ ಅಹಿಂಸಾತತ್ತ್ವದ ಮೇಲೆ ಪ್ರತಿಷ್ಠಿತವಾಗಬಹುದೆಂದು ಹೇಳಬಲ್ಲೆ. ಅಂದರೆ ಪ್ರಪಂಚದ ಇತರ ರಾಷ್ಟ್ರಗಳು ಹಿಂಸಾತ್ಮಕ ದಾಳಿಯನ್ನು ಅದರ ಮೇಲೆ ನಡೆಸಿದಾಗ ಅಹಿಂಸಾತ್ಮಕ ವಾಗಿ ಒಂದು ರಾಷ್ಟ್ರವು ಅದನ್ನು ಎದುರಿಸಬಹುದು. ಅಶೋಕನದು ಇಂತಹ ರಾಷ್ಟ್ರವಾಗಿತ್ತು. ಮತ್ತೊಮ್ಮೆ ಅಂತಹ ರಾಷ್ಟ್ರವು ಇರಬಾರದೇಕೆ? ಅಶೋಕನ ರಾಷ್ಟ್ರವು ಇಂತಹ ಅಹಿಂಸಾತತ್ತ್ವದ ಮೇಲೆ ಪ್ರತಿಷ್ಠಿತವಾಗಿರಲಿಲ್ಲವೆಂದು ಯಾರಾದರೂ ರುಜು ಪಡಿಸಿದರೂ ನನ್ನ ವಾದ ದುರ್ಬಲವಾಗಲಾರದು. ಈ ಪ್ರಶ್ನೆಯನ್ನು ಕೇವಲ ಸಾತ್ತ್ವಿಕವಾಗಿ ಪರಿಶೀಲಿಸಬೇಕು.

**ಪ್ರಶ್ನೆ:** ಪರರಾಷ್ಟ್ರಗಳ ದಾಳಿಯನ್ನೂ, ಒಳದೇಶದ ದೊಂಬಿಗಳನ್ನೂ ಪೂರ್ತಿಯಾಗಿ ಅಹಿಂಸಾತ್ಮಕ ರೀತಿಯಲ್ಲಿಯೇ ಎದುರಿಸಲು ಕಾಂಗ್ರೆಸ್ ಸರಕಾರಕ್ಕೆ ಸಾಧ್ಯವಿಲ್ಲವೆಂದು ನೀವು ಅಭಿಪ್ರಾಯಪಡುವಿರಾ?

**ಉತ್ತರ:** ಪರರಾಷ್ಟ್ರಗಳ ದಾಳಿಯನ್ನೂ ಒಳದೇಶದ ದೊಂಬಿಗಳನ್ನೂ ಅಹಿಂಸಾತ್ಮಕ ರೀತಿಯಲ್ಲಿ ಕಾಂಗ್ರೆಸ್ ಸರಕಾರವು ಎದುರಿಸಲು ಖಂಡಿತ ವಾಗಿಯೂ ಸಾಧ್ಯ. ನನ್ನ ದೃಢನಂಬಿಕೆ ಕಾಂಗ್ರೆಸ್ ಸರಕಾರಕ್ಕೆ ಇಲ್ಲದೆ ಇರಬಹುದು. ಕಾಂಗ್ರೆಸ್ ಸರಕಾರವು ಬೇರೆ ರೀತಿ ವರ್ತಿಸಿದರೆ ಅದರ ಅರ್ಥ ಇಷ್ಟೆ: ಈವರೆಗೂ ಇದ್ದ ಅಹಿಂಸೆಯ ಆಚರಣೆ ದುರ್ಬಲರ ಆಚರಣೆಯಾಗಿತ್ತು ಮತ್ತು ಕಾಂಗ್ರೆಸ್ ಸರಕಾರಕ್ಕೆ ರಾಷ್ಟ್ರ ಅಹಿಂಸಾಮಾರ್ಗದಲ್ಲಿ ವರ್ತಿಸುವುದರಲ್ಲಿ ವಿಶ್ವಾಸವಿಲ್ಲ.

**ಪ್ರಶ್ನೆ:** ಎದುರಾಳಿ ಅಹಿಂಸಾವಲಂಬಿಯೆಂದು ತಿಳಿದರೆ ಅದರಿಂದ ಪುಂಡರಿಗೆ ತಮ್ಮ ಪುಂಡಾಟಕ್ಕೆ ಉತ್ತೇಜನ ದೊರೆಯುವುದಿಲ್ಲವೆ?

**ಉತ್ತರ:** ಅಹಿಂಸೆ ದುರ್ಬಲರದಾದರೆ ಪುಂಡನಿಗೆ ಇಂತಹ ಅವಕಾಶ ಸಿಗುತ್ತದೆ. ಆದರೆ ಶಕ್ತಿವಂತರ ಅಹಿಂಸೆ—ಎಂತಹ ಶೂರರಾದ ಯೋಧರ ಬಲಕ್ಕೂ, ಒಂದು ಸೈನ್ಯದ ಬಲಕ್ಕೂ—ಹೆಚ್ಚು ಬಲಯುತವಾದುದು.

**ಪ್ರಶ್ನೆ :** ಭಾರತದೇಶದ ಒಂದು ಗುಂಪಿನವರು ಶಸ್ತ್ರಬಲದಿಂದ ತಮ್ಮ ಸ್ವಾರ್ಥಸಾಧನೆಗಾಗಿ, ಇತರರಿಗೆ ಅನಿಷ್ಟವೂ ಅನ್ಯಾಯವೂ ಆದ ಒಂದು ವಿಷಯವನ್ನು ಸಾಧಿಸಲು ಪ್ರಯತ್ನಮಾಡಿದರೆ ಅಂತಹ ಸಂದರ್ಭದಲ್ಲಿ ನಿಮ್ಮ ಸಲಹೆ ಏನು ? ಖಾಸಗಿ ಸಂಸ್ಥೆಗೆ ಇಂತಹ ಸಂದರ್ಭದಲ್ಲಿ ಅಹಿಂಸಾತ್ಮಕವಾದ ಪ್ರತಿಭಟನೆಯನ್ನು ಮಾಡಲು ಸಾಧ್ಯ. ಸರಕಾರಕ್ಕೂ ಇದು ಸಾಧ್ಯವೆ ?

**ಉತ್ತರ :** ಈ ಪ್ರಶ್ನೆಯಲ್ಲಿ ಊಹಿಸಿರುವ ಸಂದರ್ಭ ಒದಗುವುದು ತೀರ ಅಸಂಭವ. ಜನರು ತಿಳುವಳಿಕೆಯುಳ್ಳವರಾಗಿದ್ದು ಅವರ ಇಚ್ಛೆಯ ಆಧಾರದ ಮೇಲೆ ಒಂದು ಅಹಿಂಸಾತ್ಮಕ ರಾಷ್ಟ್ರವು ರೂಪುಗೊಂಡಿರುತ್ತದೆ. ತಮ್ಮ ಹಿತವೇ ನೆಂದು ಜನ ತಿಳಿದಿರುತ್ತಾರೆ. ಅದನ್ನು ಸಾಧಿಸುವ ಶಕ್ತಿಯನ್ನು ಪಡೆದವರಾಗಿರು ತ್ತಾರೆ. ಇಂತಹ ರಾಷ್ಟ್ರದಲ್ಲಿ ಪ್ರಶ್ನೆಯಲ್ಲಿ ಹೇಳಿರುವ ಗುಂಪು ಲೆಕ್ಕಕ್ಕೆ ಬರು ವಂತಹುದಲ್ಲ. ರಾಷ್ಟ್ರವು ಪ್ರತಿನಿಧಿಸುವ ಬಹುಸಂಖ್ಯಾತರ ಇಷ್ಟಕ್ಕೆ ವಿರೋಧ ವಾಗಿ ಅದು ನಿಲ್ಲಲಾರದು. ಸರಕಾರ ಬೇರೆಯಲ್ಲ, ಜನರು ಬೇರೆಯಲ್ಲ. ಬಹು ಸಂಖ್ಯಾತ ಜನರ ಅಭಿಮತವೇ ಸರಕಾರವಾಗಿ ರೂಪ ತಾಳಿದೆ. ಇದು ಅಹಿಂಸಾತ್ಮಕ ರೀತಿಯಲ್ಲಿ ರಚನೆಯಾಗಿದ್ದರೆ ಕೇವಲ ೫೧–೪೯ರಂತೆ ಬಹು ಸಂಖ್ಯಾತವಾಗಿ ಇರದು, ೯೯–೧ ಈ ರೀತಿಯ ಬಹುಸಂಖ್ಯಾತವಾಗಿರುವುದು.

**ಪ್ರಶ್ನೆ :** ಯುದ್ಧಸಾಮರ್ಥ್ಯದಲ್ಲಿ ಬಲವುಳ್ಳವರು ಅಹಿಂಸಾತ್ಮಕ ಪ್ರತಿಭಟನೆ ಮಾಡಿದರೆ ಅಂತಹ ಬಲವಿಲ್ಲದವರ ಪ್ರತಿಭಟನೆಗಿಂತಲೂ ಅದು ಹೆಚ್ಚು ಪರಿಣಾಮಕಾರಿಯಲ್ಲವೆ ?

**ಉತ್ತರ :** ಇದರಲ್ಲಿ ಪರಸ್ಪರ ವಿರೋಧಾಭಾಸವಿದೆ. ಯುದ್ಧಸಾಮರ್ಥ್ಯ ದಲ್ಲಿ ಬಲಯುತರಾದವರು ಅಹಿಂಸಾತ್ಮಕ ಪ್ರತಿಭಟನೆಯನ್ನು ಮಾಡಲಾರರು. ಉದಾಹರಣೆಗೆ, ರಷ್ಯಾ ದೇಶವು ಅಹಿಂಸಾತ್ಮಕವಾದ ಪ್ರತಿಭಟನೆಯನ್ನು ವ್ಯಕ್ತ ಪಡಿಸಬೇಕಾದರೆ ತಾನು ಹಿಂಸೆಮಾಡುವ ಶಸ್ತ್ರಗಳನ್ನು ತ್ಯಾಗಮಾಡಬೇಕು. ಒಮ್ಮೆ ಯುದ್ಧಶಸ್ತ್ರಪ್ರಯೋಗಗಳಲ್ಲಿ ಬಲಿಷ್ಠರಾಗಿದ್ದವರು ಈ ಶಸ್ತ್ರಗಳನ್ನು ವಿಸರ್ಜನೆ ಮಾಡಿ ಅಹಿಂಸಾಮಾರ್ಗಕ್ಕೆ ತಿರುಗುವ ಪಕ್ಷಕ್ಕೆ ಇಂತಹ ಪ್ರಪಂಚದ ಮುಂದೆ ತಮ್ಮ ಅಹಿಂಸಾತ್ಮಕ ಶಕ್ತಿಯ ಪ್ರದರ್ಶನವನ್ನು ಉತ್ತಮ ರೀತಿಯಲ್ಲಿ ಮಾಡಬಲ್ಲರು. ಆದುದರಿಂದ ಎದುರಾಳಿಗಳು ಮೆಚ್ಚುವಂತೆಯೂ ಮಾಡ

ಬಲ್ಲರು. ಈ ಮಾತು ನಿಜ. ಯಾರು ಅಹಿಂಸಾಮಾರ್ಗದಲ್ಲಿ ಶಕ್ತಿಯನ್ನು ಬೆಳೆಸಿಕೊಂಡಿರುವರೊ ಅಂತಹವರು ಯುದ್ಧಶಸ್ತ್ರಗಳಲ್ಲಿ ಬಲಿಷ್ಠರಾದವರು ಎದುರಾಳಿಗಳಾದರೂ ಸರಿಯೇ, ಇಂತಹ ಶಸ್ತ್ರಗಳಲ್ಲಿ ಬಲಹೀನರಾದವರು ಎದುರಾಳಿಗಳಾದರೂ ಸರಿಯೇ—ಇದನ್ನು ಲೆಕ್ಕಿಸಲಾರರು.

**ಪ್ರಶ್ನೆ :** ಒಂದು ಅಹಿಂಸಾತ್ಮಕ ಸೈನ್ಯದ ತರಬೇತು ಎಂತಹುದಿರಬೇಕು? ರೂಢಿಯಲ್ಲಿರುವ ಚಮೂ ಶಿಕ್ಷಣದ ಕೆಲವು ಅಂಶಗಳೂ ಈ ತರಬೇತಿನ ಕ್ರಮದಲ್ಲಿ ಸೇರಬೇಡವೆ?

**ಉತ್ತರ :** ರೂಢಿಯಲ್ಲಿರುವ ಚಮೂ ಶಿಕ್ಷಣದ ಆರಂಭದ ಒಂದು ಸ್ವಲ್ಪ ಭಾಗಮಾತ್ರ ಅಹಿಂಸಾತ್ಮಕ ಪಡೆಗೆ ಕೊಡಬೇಕಾದೀತು. ಶಿಸ್ತು, ಕವಾಯತು, ಸಾಮೂಹಿಕ ಗಾನ, ಧ್ವಜಾರೋಹಣ, ಸಿಗ್ನಲ್ ಮಾಡುವುದು ಮುಂತಾದ ಅಂಶಗಳಿವೆ. ಇವೆಲ್ಲವೂ ಸಹ ಅಗತ್ಯವಿಲ್ಲ. ಮೂಲಭೂತ ಉದ್ದೇಶ್ಯವೇ ಬೇರೆಯಾದುದು. ಅಹಿಂಸಾತ್ಮಕ ಪಡೆಯ ತರಬೇತಿನ ಅತ್ಯಗತ್ಯದ ಭಾಗವೆಂದರೆ ದೇವರಲ್ಲಿ ನಿಶ್ಚಲಭಕ್ತಿ, ಈ ಪಡೆಯ ನಾಯಕನಲ್ಲಿ ಸಂಪೂರ್ಣವಾದ ಹಾಗೂ ಮನಸಾರೆ ವಿಧೇಯತೆ ಮತ್ತು ಇಂತಹ ಪಡೆಯ ಪ್ರತಿಯೊಂದು ಅಂಗದೊಡನೆಯೂ ಆಂತರಿಕ ಮತ್ತು ಬಾಹ್ಯ ಸಹಕಾರ.

**ಪ್ರಶ್ನೆ :** ಭಾರತ ಮತ್ತು ಇಂಗ್ಲಂಡದಂತಹ ದೇಶಗಳು ಯುದ್ಧ ಮಾಡುವುದಕ್ಕೆ ಪೂರ್ವದಲ್ಲಿ ಅಹಿಂಸಾತ್ಮಕ ಪ್ರತಿಭಟನೆಗೆ ಎಲ್ಲ ಅವಕಾಶಗಳನ್ನು ಒದಗಿಸಿದರೂ ಯುದ್ಧಕ್ಕೆ ಸಂಬಂಧಿಸಿದ ತಮ್ಮ ಪೂರ್ಣ ಸಿದ್ಧತೆಗಳನ್ನು ದಕ್ಷತೆಯಿಂದ ಮಾಡುವುದು ಈಗಿನ ಪರಿಸ್ಥಿತಿಯಲ್ಲಿ ಉತ್ತಮ ಮಾರ್ಗವಲ್ಲವೆ?

**ಉತ್ತರ :** ಭಾರತ ಮತ್ತು ಇಂಗ್ಲಂಡ್ ದೇಶಗಳು ಯುದ್ಧದ ಸಿದ್ಧತೆಗಳನ್ನು ಮಾಡುತ್ತ ಹೋದರೆ ಅಹಿಂಸಾತ್ಮಕ ಪ್ರತಿಭಟನೆಗೆ ನ್ಯಾಯ ದೊರೆಯಬೇಕಾದ ಯಾವ ಅವಕಾಶವನ್ನೂ ಕೊಡಲು ಸಾಧ್ಯವಿಲ್ಲ. ಈ ಹಿಂದೆ ಕೊಟ್ಟಿರುವ ಉತ್ತರಗಳಿಂದ ಈ ವಿಷಯ ಸ್ಪಷ್ಟವಾಗಿರಬೇಕು. ಆದರೆ ಹೀಗಿದ್ದರೂ ಯುದ್ಧಕ್ಕೆ ಸಿದ್ಧವಿರುವ ರಾಷ್ಟ್ರಗಳು ತಮ್ಮ ವ್ಯಾಜ್ಯಗಳ ಪರಿಹಾರಕ್ಕಾಗಿ ಶಾಂತಿಯುತವಾದ ಹಾಗೂ ಸಮಾಧಾನದ ರೀತಿಯಲ್ಲಿ ಪರಸ್ಪರ ಮಾತುಕಥೆಗಳನ್ನು ನಡೆಸುವುದುಂಟು. ಯುದ್ಧಕ್ಕಿಳಿಯುವ ಮುನ್ನ ಸಮಾಧಾನದ ಮಾತುಗಳ ವಿಚಾರ

ವನ್ನು ಇಲ್ಲಿ ಹೇಳುತ್ತಿಲ್ಲ. ಯುದ್ಧಕ್ಕೆ—ಒರಟಾಗಿ ಹೇಳುವುದಾದರೆ ಸಾಮೂಹಿಕ ಕೊಲೆಗೆ—ಇದಕ್ಕೆ ಬದಲಾಗಿ ಬೇರೆ ಮಾರ್ಗ ಉಂಟೇ ಎಂಬುದನ್ನು ನಾವಿಲ್ಲಿ ವಿಚಾರಮಾಡುತ್ತಿದೇವೆ. (ಸಿಮ್ಲಾ, ೨-೫-೧೯೪೬)
(ಹರಿಜನ, ೧೨-೫-೧೯೪೬)

## ನಮ್ಮ ಶ್ರದ್ಧೆಗೆ ಒಂದು ಸವಾಲು

ಅಮೇರಿಕಾ ದೇಶದ ಅಸೋಸಿಯೇಟೆಡ್ ಪ್ರೆಸ್ಸಿನ ಸುದ್ದಿಗಾರರು ಈ ಕೆಳಗೆ ಕೊಟ್ಟಿರುವ ಪ್ರಶ್ನೆಗಳನ್ನು ಗಾಂಧೀಜೀಗೆ ಹಾಕಿದರು. ಗಾಂಧೀಜಿಯ ಉತ್ತರಗಳನ್ನೂ ಕೊಟ್ಟಿದೆ. (೬-೧೧-೧೯೪೬)

**ಪ್ರಶ್ನೆ :** ಇತ್ತೀಚಿನ ಭಾರತ ದೇಶದ ಇತಿಹಾಸದಿಂದ, ಅಂದರೆ ೧೯೪೨ ರಲ್ಲಿ ನಡೆದ ಶಾಂತಿಭಂಗ, ಐ.ಎನ್.ಎ. ಚಳುವಳಿ, ನೌಕಾಪಡೆಯ ಬಂಡಾಯ, ಕಲ್ಕತ್ತೆ-ಬೊಂಬಾಯಿ ನಗರಗಳಲ್ಲಿ ನಡೆದ ದೊಂಬಿ, ಕಾಶ್ಮೀರ ಮುಂತಾದ ದೇಶೀಯ ಸಂಸ್ಥಾನಗಳಲ್ಲಿ ನಡೆದ ಚಳುವಳಿ, ಕೋಮುವಾರು ಘರ್ಷಣೆಗಳು —ಇವುಗಳನ್ನು ನೋಡಿದರೆ ನಿಮ್ಮ ಅಹಿಂಸಾ ಸಿದ್ಧಾಂತಕ್ಕೆ ಸೋಲಾಗಿದೆ ಯಲ್ಲವೆ ?—ಅದು ಜನಜೀವನದಲ್ಲಿ ಬೇರು ಬಿಡಲಿಲ್ಲವೆಂದು ತೋರುವುದಿಲ್ಲವೆ ?

**ಉತ್ತರ :** ಈ ರೀತಿಯ ಸ್ಥೂಲವಾದ ತೀರ್ಮಾನಗಳು ಅಪಾಯಕರ. ನೀವು ಕೊಟ್ಟಿರುವ ನಿದರ್ಶನಗಳೆಲ್ಲವೂ ನಿಸ್ಸಂಶಯವಾಗಿ ಹಿಂಸೆಯವೇ ಹೌದು. ಆದರೆ ಇವುಗಳಿಂದ ಅಹಿಂಸಾ ಸಿದ್ಧಾಂತಕ್ಕೆ ಸೋಲಾಯಿತೆಂದು ಅರ್ಥವಲ್ಲ. ಜನಸ್ತೋಮದ ಮನಸ್ಸನ್ನು ಅಹಿಂಸೆಯ ಕಡೆ ತಿರುಗಿಸುವ ಪರಿಣಾಮಕಾರಿ ಯಾವ ಉಪಾಯವನ್ನು ನಾನು ಕಂಡುಹಿಡಿಯಲಿಲ್ಲವೆಂದು ಹೇಳುವುದ ಕ್ಕಿಂತಲೂ ಹೆಚ್ಚಿಗೆ ಹೇಳಲು ಸಾಧ್ಯವಿಲ್ಲ. ಆದರೆ ನೀವು ಹೇಳುವ ಹಿಂಸಾ ಕೃತ್ಯಗಳಲ್ಲಿ ನಮ್ಮ ಏಳು ಲಕ್ಷದ ಹಳ್ಳಿಗಳಲ್ಲಿ ವಾಸಿಸುವ ಜನರು ಭಾಗಿಗಳಾಗ ಲಿಲ್ಲವೆಂದು ಹೇಳಬಲ್ಲೆ. ಅಹಿಂಸಾ ಸಿದ್ಧಾಂತ ನಮ್ಮ ಜನಜೀವನದಲ್ಲಿ ಬೇರು ಬಿಟ್ಟಿದೆಯೇ ಎನ್ನುವ ಪ್ರಶ್ನೆಯನ್ನು ನಾವು ಈಗಲೆ ತೀರ್ಮಾನಿಸುವ ಹಾಗಿಲ್ಲ. **ನನ್ನ ಮರಣಾನಂತರವೇ ಇದರ ತೀರ್ಮಾನವಾಗಬೇಕು.**

**ಪ್ರಶ್ನೆ :** ಶೂರರು ಅನುಷ್ಠಾನ ಮಾಡುವಂತಹ ಅಹಿಂಸೆಯನ್ನು ನಾವು ಪಡೆಯಲು ನಮ್ಮ ನಿತ್ಯಜೀವನದಲ್ಲಿ ಯಾವ ಆಚರಣೆಯನ್ನು ಕೈಗೊಳ್ಳಬೇಕು ? ಅಂದರೆ ಅದರ ಕನಿಷ್ಠ ಕಾರ್ಯಕ್ರಮವೇನು ?

**ಉತ್ತರ :** ವೀರರು ಅಹಿಂಸೆಯನ್ನು ಆಚರಿಸಲು ಬಯಸುವ ವ್ಯಕ್ತಿಯು ಕನಿಷ್ಠಪಕ್ಷ ತನ್ನ ಮನಸ್ಸಿನಿಂದ ಹೇಡಿತನವನ್ನು ದೂರಮಾಡಿ ಈ ದೂರೀ ಕರಣದ ಬೆಳಕಿನಲ್ಲಿ ಎಲ್ಲ ಸಣ್ಣ-ದೊಡ್ಡ ಕಾರ್ಯಗಳನ್ನೂ ಮಾಡಬೇಕು. ಮೇಲಿನವರು ದಬ್ಬಾಳಿಕೆಯನ್ನು ನಡೆಯಿಸಿದರೆ, ಕೋಪಕ್ಕೆ ಎಡೆಗೊಡದೆ ಅದಕ್ಕೆ ತಲೆಬಾಗದಿರಬೇಕು. ತನ್ನ ಹುದ್ದೆಗೆ—ಅದು ಎಷ್ಟೇ ಲಾಭದಾಯಕ ವಾಗಿದ್ದರೂ—ರಾಜೀನಾಮೆ ಕೊಡಲು ಸಿದ್ಧವಾಗಿರಬೇಕು. ಎಲ್ಲವನ್ನೂ ತ್ಯಾಗ ಮಾಡಿ, ತನ್ನ ಮೇಲೆ ಅಧಿಕಾರ ನಡೆಸುವವರ ಮೇಲೆ ಸ್ವಲ್ಪವೂ ಕೋಪವನ್ನು ತಾಳದಿದ್ದ ಪಕ್ಷಕ್ಕೆ ಅದೇ ಶೂರರ ಅಹಿಂಸಾವೃತ್ತಿ. ಉದಾಹರಣೆಗೆ, ಪ್ರಯಾಣ ಮಾಡುವಾಗ ನನ್ನ ಮಗನನ್ನು ಹೊಡೆಯುವಂತೆ ಒಬ್ಬ ಪ್ರಯಾಣಿಕನು ಹೆದರಿ ಸಿದನೆಂದು ಭಾವಿಸೋಣ. ಆ ಸಂದರ್ಭದಲ್ಲಿ ನಾನು ಆ ಪ್ರಯಾಣಿಕನೊಂದಿಗೆ ಸಮಾಧಾನದಿಂದ ವಾದಿಸಿ ಅವನ ಆಗ್ರಹಕ್ಕೆ ಪಾತ್ರನಾಗಿ ಅವನು ಕೊಡುವ ಏಟನ್ನು ನಯ-ಗಾಂಭೀರ್ಯಗಳಿಂದ ನಾನು ಸಹಿಸಿ, ಅವನ ಮೇಲೆ ಯಾವ ಕ್ರೋಧವನ್ನೂ ತಾಳದಿದ್ದರೆ ಆಗ ನಾನು ಶೂರರ ಅಹಿಂಸಾವೃತ್ತಿಯನ್ನು ವ್ಯಕ್ತಪಡಿಸಿದಂತಾಗುವುದು. ಇಂತಹ ಘಟನೆಗಳು ನಿತ್ಯವೂ ನಡೆಯುತ್ತವೆ. ಇನ್ನೂ ಅನೇಕ ಉದಾಹರಣೆಗಳನ್ನು ಕೊಡಬಹುದು. ಪ್ರತಿಯೊಂದು ಸಂದರ್ಭ ದಲ್ಲಿಯೂ ಕೋಪವನ್ನು ಅಡಗಿಸಿಕೊಂಡು, ನಾನು ಏಟಿಗೆ ಏಟು ಕೊಡುವ ಶಕ್ತಿಯನ್ನುಳ್ಳವನಾದರೂ ಹಾಗೆ ಮಾಡದೆ ಶಾಂತಿರೀತಿಯಲ್ಲಿ ವರ್ತಿಸಿದ್ದೇ ಆದರೆ ಈ ಶೂರರ ಅಹಿಂಸಾವೃತ್ತಿ ನನ್ನಲ್ಲಿ ಬೆಳೆದು, ಅದು ನನ್ನನ್ನು ಸದಾ ಕಾಪಾಡು ವುದು. ನನ್ನ ಶತ್ರುಗಳೆಂದು ದೃಢವಾಗಿ ನಂಬಿರುವವರನ್ನೂ ನಾನು ಒಲಿಸಿ ಕೊಳ್ಳಲು ಸಾಧ್ಯವಾಗುವುದು. (ಹರಿಜನ, ೧೭-೧೧-೧೯೪೬)

# ಶ್ರದ್ಧೆಯಲ್ಲೊಂದು ಸಾಹಸ

ಹೋದ ಬುಧವಾರ ಬೆಳಗ್ಗೆ ಗಾಂಧೀಜಿಯವರು ತಮ್ಮ ಜೊತೆಗಾರರಿಗೆ ತಮ್ಮ ಒಂದು ಗುರುತರವಾದ ಸಂಕಲ್ಪವನ್ನು ತಿಳಿಸಿದರು. ತಮ್ಮ ಜೊತೆಗಾರರನ್ನು ಚದುರಿಸಿ, ಎಲ್ಲರೂ—ಮಹಿಳೆಯರೂ ಸಹ, ಒಂಟಿಯಾಗಿ, ನೊಂದಿದ್ದ ಗ್ರಾಮದಲ್ಲಿ ನೆಲೆಸಬೇಕು, ಆ ಹಳ್ಳಿಯಲ್ಲಿರುವ ಅಲ್ಪಸಂಖ್ಯಾತರ ರಕ್ಷಣೆ ಮತ್ತು ಭದ್ರತೆಗಳಿಗೆ ಹೊಣೆಯಾಗಿರಬೇಕು. ಆ ಹಿಂದೂ ಜನರನ್ನು ರಕ್ಷಿಸಲು, ಅವಶ್ಯವಿದ್ದರೆ ತಮ್ಮ ಪ್ರಾಣವನ್ನು ಅರ್ಪಿಸಲು ಅವರು ಸಿದ್ಧರಾಗಿರಬೇಕು. ತಾವು ಮಾಡಿದ ನಿರ್ಧಾರದಿಂದ ಇತರರನ್ನು ಒತ್ತಾಯಪಡಿಸಬೇಕೆಂಬ ಉದ್ದೇಶ್ಯ ಇಲ್ಲವೆಂದು ಗಾಂಧೀಜೀ ಹೇಳಿದರು. ಹಾಗೆ ಇಚ್ಛಿಸುವವರು ತಮ್ಮನ್ನು ಬಿಟ್ಟು ಹೋಗಬಹುದು—ಯಾವುದಾದರೂ ರಚನಾತ್ಮಕ ಕಾರ್ಯಕ್ರಮಗಳಲ್ಲಿ ಕೆಲಸಮಾಡಬಹುದು. ' ಹಿಂದೆ ನಡೆದುಹೋದುದಕ್ಕಾಗಿ ಯಾರಿಗಾದರೂ ಮುಸಲ್ಮಾನರ ವಿರುದ್ಧ ಕೋಪವಾಗಲಿ ಆಗ್ರಹವಾಗಲಿ ಇರುವ ಪಕ್ಷಕ್ಕೆ ಅಂತಹವರು ಈ ಯೋಜನೆಯಲ್ಲಿ ಭಾಗವಹಿಸಬಾರದು. ಇದಕ್ಕೆ ಅವರು ಸೇರುವುದರಿಂದ ಗಾಂಧೀಜಿಯ ಉದ್ದೇಶ್ಯವನ್ನು ಸಮರ್ಪಕವಾಗಿ ಸಾಧಿಸಲಾರರು ; ಅವರು ಸರಿಯಾದ ಪ್ರತಿನಿಧಿಯಾಗಿರಲಾರರು ' ಎಂದರು.

ತಮ್ಮ ಮಟ್ಟಿಗೆ ಇದು ಅಂತಿಮ ನಿರ್ಧಾರ. ಇದನ್ನು ಅವರು ಹಿಂತೆಗೆದುಕೊಳ್ಳುವಂತಿಲ್ಲ. ಇದರ ವಿಚಾರ ಚರ್ಚಿಸಲೂ ಅವರು ಸಿದ್ಧರಾಗಿಲ್ಲ. ತಾವು ಪೂರ್ವ ಬಂಗಾಳದಲ್ಲಿ ಮರೆಯಾಗಿ ಹೂತುಹೋಗಿ, ಹಿಂದೂ-ಮುಸಲ್ಮಾನರು ಪರಸ್ಪರ ಸೌಹಾರ್ದದಿಂದ ಸಮರಸಜೀವನವನ್ನು ನಡೆಸಲು ಕಲಿಯುವವರೆಗೂ ಇರಬೇಕೆಂದು ಸಂಕಲ್ಪ ಮಾಡಿದುದಾಗಿ ಹೇಳಿದರು. ತಮ್ಮ ಜೊತೆಗಾರರ ಉಪಚಾರವನ್ನು ತೊರೆದು ತಾವು ಹೋದೆಡೆಯಲ್ಲಿ ಸಹಾಯ-ಉಪಚಾರಗಳಿಂದ ಜೀವನನಿರ್ವಹಣವನ್ನು ಮಾಡಿಕೊಳ್ಳಬೇಕೆಂದಿರುವರೆಂದರು.

ಅದೇ ಸಾಯಂಕಾಲ ತಮ್ಮ ಸಂಕಲ್ಪವನ್ನು ಕುರಿತು ಮತ್ತೆ ತಮ್ಮ ಜೊತೆಗಾರರಿಗೆ ಪ್ರಸ್ತಾಪಿಸಿದರು. ಆಮೇಲೆ ಸ್ವಲ್ಪ ಚರ್ಚೆ ನಡೆಯಿತು. ಅದರಲ್ಲಿ ಶ್ರೀ ಠಕ್ಕರ್‌ಬಾಪಾ ಮತ್ತು ಶ್ರೀಮತಿ ಸುಚೇತಾ ಕೃಪಲಾನಿ ಭಾಗವಹಿಸಿದರು. ತಾವು ಈ ದಾರಿಯನ್ನು ಹಿಡಿಯದಿದ್ದರೆ ತಮ್ಮ ಅಹಿಂಸೆ ಅಪೂರ್ಣವಾಗುವು

ದೆಂದು ಗಾಂಧೀಜೀ ವಾದಿಸಿದರು. ಅಹಿಂಸೆಯೇ ಜೀವನದ ನಿಯಮ. ಇದು ನಿಜವಾಗಿರಬೇಕು ಅಥವಾ ಸುಳ್ಳಾಗಿರಬೇಕು. ಪತಂಜಲಿ ಹೇಳಿದ ಅಹಿಂಸಾ ಸೂತ್ರವಾದ 'ಅಹಿಂಸಾ ಪ್ರತಿಷ್ಠಾಯಾಂ ತತ್ಸನ್ನಿಧೌ ವೈರಾತ್ಯಾಗಃ' ಎನ್ನುವುದು ತಪ್ಪೆಂದು ಒಬ್ಬ ಮಿತ್ರರು ವಾದಿಸಿದ್ದರು. ಇದನ್ನು ಬದಲಾಯಿಸಬೇಕೆಂದು ಆ ಮಿತ್ರರು ಹೇಳುತ್ತಿದ್ದರು. 'ಅಹಿಂಸಾ ಪರಮೋ ಧರ್ಮಃ'ಕ್ಕೆ ಬದಲಾಗಿ 'ಹಿಂಸಾ ಪರಮೋ ಧರ್ಮಃ' ಎಂದು ಅವರು ಹೇಳುತ್ತಿದ್ದರು. ಈ ವಿಷಮ ಸಂದರ್ಭದಲ್ಲಿ ಗಾಂಧೀಜೀ ತಮಗೆ ಅಹಿಂಸೆಯಲ್ಲಿದ್ದ ಶ್ರದ್ಧೆಯನ್ನು ಕಳೆದುಕೊಂಡರೆ ಆ ಗತಿಸಿದ್ದ ಮಿತ್ರರ ಅಪಸಿದ್ಧಾಂತವನ್ನೇ ತಾವು ಒಪ್ಪಿಕೊಳ್ಳಬೇಕಾದೀತು.

'ಬಂಗಾಳ ಪ್ರಾಂತದ ಮಹಿಳೆಯರನ್ನು ಪ್ರಾಯಶಃ ಬಂಗಾಳಿಗಳಿಗಿಂತಲೂ ನಾನು ಚೆನ್ನಾಗಿ ಬಲ್ಲೆ. ನನ್ನ ಮತ್ತು ನನ್ನ ಮಿತ್ರರ ಬಲಿದಾನ ಅವರಿಗೆ ಆತ್ಮಗೌರವದಿಂದ ಕನಿಷ್ಠಪಕ್ಷ ಸಾಯುವುದನ್ನಾದರೂ ಕಲಿಸೀತು. ಈ ಬಲಿದಾನ ದಬ್ಬಾಳಿಕೆಯನ್ನು ಮಾಡುವವರ ಕಣ್ಣನ್ನು ತೆರೆಯಿಸಿ ಅವರ ಹೃದಯವನ್ನು ಕರಗಿಸುವ ಸಂಭವವೂ ಇದೆ. ನನ್ನ ಕಣ್ಣು ಮುಚ್ಚಿದ ಕೂಡಲೆ ಅವರ ಕಣ್ಣು ತೆರೆಯುವುದೆಂದು ನಾನು ಹೇಳುವುದಿಲ್ಲ. ಆದರೆ ಅದೇ ಉತ್ತರೋತ್ತರ ಸಂಭವಿಸುವುದೆಂಬ ವಿಷಯದಲ್ಲಿ ನನಗೆ ಲೇಶಮಾತ್ರವೂ ಸಂಶಯವಿಲ್ಲ. ಅಹಿಂಸೆ ಮಾಯವಾದರೆ, ಹಿಂದೂ ಧರ್ಮವೇ ಮಾಯವಾಗುವುದು.

'ಈ ಪ್ರಶ್ನೆ ಧರ್ಮದ ಪ್ರಶ್ನೆಯಲ್ಲ, ರಾಜಕೀಯದ್ದು. ಇದು ಹಿಂದೂಗಳ ವಿರುದ್ಧದ ಆಂದೋಲನವಲ್ಲ, ಕಾಂಗ್ರೆಸ್ಸಿಗೇ ವಿರುದ್ಧವಾದುದು' ಎಂದು ನಮ್ಮ ಪರಿವಾರದವರೊಬ್ಬರು ಹೇಳಿದರು.

'ಕಾಂಗ್ರೆಸ್ ಸಂಸ್ಥೆ ಶುದ್ಧವಾಗಿ ಹಿಂದೂಗಳಿಗೆ ಸೇರಿದ್ದೆಂದು ಅವರು ಎಣಿಸುವುದನ್ನು ನೀವು ಕಾಣುವುದಿಲ್ಲವೆ? ಮತ್ತೊಂದು ವಿಷಯವನ್ನು ಮರೆಯಬೇಡಿ: ಜೀವನವನ್ನು ಧಾರ್ಮಿಕ, ರಾಜಕೀಯವೆಂಬ ಬೇರೆ ಬೇರೆ ಭಾಗಗಳಾಗಿ ನಾನು ವಿಂಗಡಿಸುವವನಲ್ಲ, ಬರೀ ಮಾತುಗಳ ಅರಣ್ಯದಲ್ಲಿ ನಮ್ಮ ದಾರಿಯನ್ನು ನಾವು ತಪ್ಪಬಾರದು. ಈ ಸಿಕ್ಕನ್ನು ಬಿಡಿಸುವುದು ಅಹಿಂಸೆಯ ಮೂಲಕವೆ? ಹಿಂಸೆಯ ಮೂಲಕವೆ? ಇದೇ ಪ್ರಶ್ನೆ. ಅಂದರೆ ನನ್ನ ಮಾರ್ಗ ಈ ಹೊತ್ತು ಪರಿಣಾಮಕಾರಿಯಾದೀತೇ?'

'ನಮ್ಮ ರಕ್ತವನ್ನು ಹೀರಲು ಕಾದಿರುವವರೊಂದಿಗೆ ತರ್ಕ ಮಾಡಿ ಏನು ಪ್ರಯೋಜನ? ಇತ್ತೀಚೆಗೆ ನಮ್ಮ ಕಾರ್ಯಕರ್ತರೊಬ್ಬರು ಕೊಲೆಗೀಡಾದರು' ಎಂದು ಮತ್ತೊಬ್ಬರು ಹೇಳಿದರು.

'ನನಗದು ಗೊತ್ತು' ಎಂದರು ಗಾಂಧೀಜೀ. 'ಈ ಕೋಪಾಗ್ನಿಯನ್ನು ಶಮನಮಾಡುವುದೇ ನಮ್ಮ ಕೆಲಸ.'

'ಈಗಿನ ಪರಿಸ್ಥಿತಿಯಲ್ಲಿ ಇಷ್ಟು ಅಪಾಯವಿರುವಾಗ ಜನರನ್ನು ತಮ್ಮ ಹಳ್ಳಿಗಳಿಗೆ ಹಿಂತಿರುಗಬೇಕೆಂದು ಆಹ್ವಾನಿಸುವುದು ಸೂಕ್ತವೇ?' ಎನ್ನುವ ಪ್ರಶ್ನೆಯನ್ನು ಮತ್ತೊಬ್ಬರು ಕೇಳಿದರು.

'ಹೀಗೆ ಆಹ್ವಾನಿಸುವುದರಲ್ಲಿ ತಪ್ಪೇನೂ ಇಲ್ಲ'ವೆಂದು ಗಾಂಧೀಜೀ ಹೇಳಿದರು. 'ಆದರೆ ಹಿಂತಿರುಗುವುದಕ್ಕೆ ಮುನ್ನ ಕೆಲವು ಷರತ್ತುಗಳನ್ನು ಹಾಕಬೇಕು. ಆ ಹಳ್ಳಿಯ ಮುಸಲ್ಮಾನರು ಸಾಮೂಹಿಕವಾಗಿ ಹಿಂದೂಗಳನ್ನು ರಕ್ಷಿಸುವಂತೆ ವಚನ ನೀಡಬೇಕು. ಈ ವಚನಕ್ಕೆ ಸಾಕ್ಷಿಯಾಗಿ ಒಬ್ಬ ಒಳ್ಳೆಯ ಹಿಂದೂ ಮತ್ತು ಒಬ್ಬ ಮುಸಲ್ಮಾನ ಅವರೊಂದಿಗೆ ವಾಸವಾಗಿದ್ದು ಅವಶ್ಯವಿದ್ದರೆ ಅವರಿಗಾಗಿ ತಮ್ಮ ಪ್ರಾಣವನ್ನು ಸಹ ಅರ್ಪಿಸಲು ಸಿದ್ಧರಾಗಿರಬೇಕು. ಈ ಷರತ್ತುಗಳಾಗುವ ಪಕ್ಷಕ್ಕೆ ಶರಣಾರ್ಥಿಗಳು ತಮ್ಮ ಮನೆಗಳಿಗೆ ಹಿಂತಿರುಗಬಹುದು. ಯಾವ ಅಪಾಯವಿದ್ದರೂ ಅದನ್ನು ಎದುರಿಸಬಹುದು. ಈ ಷರತ್ತುಗಳ ಮೇಲೆ ಅವರು ಜೀವಿಸಲು ಧೈರ್ಯವಿಲ್ಲದವರಾದರೆ ಪೂರ್ವ ಬಂಗಾಳದಲ್ಲಿ ಹಿಂದೂಧರ್ಮಕ್ಕೆ ಉಳಿಗಾಲವಿಲ್ಲ. ಪೂರ್ವ ಬಂಗಾಳದ ಪ್ರಶ್ನೆ ಪೂರ್ವ ಬಂಗಾಳಕ್ಕೆ ಮಾತ್ರ ಸೇರಿದ್ದಲ್ಲ. ಭಾರತದ ಸಮಸ್ಯೆ ಇಂದು ಪೂರ್ವ ಬಂಗಾಳದಲ್ಲಿ ಇತ್ಯರ್ಥವಾಗುತ್ತಲಿದೆ. ಹಿಂದೂಧರ್ಮ 'ಅನಿಷ್ಟ' ಎಂದೂ, ಆದುದರಿಂದ ಹಿಂದೂಗಳನ್ನು ಬಲಾತ್ಕಾರವಾಗಿ ಮುಸಲ್ಮಾನ್ ಧರ್ಮಕ್ಕೆ ಸೇರಿಸಿಕೊಳ್ಳುವುದು ಒಂದು ಪುಣ್ಯಕಾರ್ಯವೆಂದೂ ಕೆಲವರು ಮುಸಲ್ಮಾನರಿಗೆ ಬೋಧಿಸುತ್ತಿದಾರೆ. ಹೀಗೆ ಮಾಡಿದರೂ ಬಲಾತ್ಕಾರವಾಗಿ ಹೇಗೆ ಮುಸಲ್ಮಾನರಾಗುವ ಸಂತತಿಯವರಾದರೂ ಕನಿಷ್ಠಪಕ್ಷ ಇಸ್ಲಾಮ್ ಧರ್ಮಕ್ಕೆ ಉಳಿದಂತಾಗುವರು? ಮುಯ್ಯಿಗೆ ಮುಯ್ಯಿ ತೀರಿಸಿಕೊಳ್ಳುವ ಪದ್ಧತಿ ಇಂದು ಪ್ರಬಲಗೊಂಡರೆ ಮುಸಲ್ಮಾನರು ಮಾಡುತ್ತಿರುವರೆಂದು ವರದಿಯಾಗಿರುವ ಅತ್ಯಾಚಾರಗಳಿಗೆ

ಪ್ರತಿಯಾಗಿ ಹಿಂದೂಗಳೂ ಅತ್ಯಾಚಾರಗಳನ್ನು ನಡೆಯಿಸಿ ಜಯ ಗಳಿಸಬೇಕು. ಸಂಯುಕ್ತ ರಾಷ್ಟ್ರಗಳು ಹಿಟ್ಲರನನ್ನು ಗೆಲ್ಲಲು ಅವನ ಆಯುಧಗಳನ್ನೇ ಉಪಯೋಗಿಸಿದವು; ಹಿಟ್ಲರನಿಗಿಂತಲೂ ಕ್ರೂರಿಗಳಾದವು.'

'ದುರಾತ್ಮರು ಇನ್ನೂ ಅಲ್ಲಲ್ಲಿ ಸುಳಿಯುತ್ತಿರುವಾಗ ಹಳ್ಳಿಯವರಿಗೆ ನಾವೇನು ಭರವಸೆಯನ್ನು ನೀಡಬಲ್ಲೆವು ?' ಎಂದು ಒಂದು ಕೊನೆಯ ಪ್ರಶ್ನೆಯನ್ನು ಗಾಂಧೀಜಿಯವರಿಗೆ ಹಾಕಲಾಯಿತು.

'ಅದಕ್ಕಾಗಿಯೇ ಒಬ್ಬ ಒಳ್ಳೆಯ ಹಿಂದೂ ಮತ್ತು ಒಬ್ಬ ಒಳ್ಳೆಯ ಮುಸಲ್ಮಾನ ಜಾಮೀನಾಗಿ ನಿಂತು, ಹಿಂತಿರುಗುವ ಜನರ ರಕ್ಷಣೆಗೆ ಭರವಸೆಯನ್ನು ಕೊಡಬೇಕೆಂದು ನಾನು ಸೂಚಿಸಿದ್ದು. ಬಂಗಾಳದ ಸರಕಾರಕ್ಕೆ ಸೇರಿದ ಮುಸ್ಲಿಮ್ ಲೀಗ್ ಸಂಸ್ಥೆಯು ಆ ಒಳ್ಳೆಯ ಮುಸಲ್ಮಾನನನ್ನು ಒದಗಿಸಬೇಕು.'

ದತ್ತಾಪಾರಾದಿಂದ ಒಬ್ಬ ಮಿತ್ರರಿಗೆ ಗಾಂಧೀಜೀ ಹೀಗೆಂದು ಬರೆದರು :

'ನಾನು ಇಲ್ಲಿ ಮಾಡುತ್ತಿರುವ ಕಾರ್ಯ ನನ್ನ ಅಂತಿಮ ಪ್ರಯತ್ನವಾಗಬಹುದು. ನಾನು ಇಲ್ಲಿಂದ ಜೀವಂತವಾಗಿ ಯಾವ ಭೇದವೂ ಇಲ್ಲದೆ ಹಿಂತಿರುಗಿದೆನಾದರೆ ಇದು ನನಗೆ ಪುನರ್ಜನ್ಮವಾದಂತೆ. ಹಿಂದೆ ಎಂದೂ ಆಗದ ರೀತಿಯಲ್ಲಿ ಇಲ್ಲಿ ನನ್ನ ಅಹಿಂಸೆಗೆ ಸಂಪೂರ್ಣವಾಗಿ ಬುಡಮುಟ್ಟ ಪರೀಕ್ಷೆಯಾಗುತ್ತಿದೆ.'

(ಖಾಜೀರ್‌ಖಿಲ್, ೧೬-೧೧-೧೯೪೬)
(ಹರಿಜನ, ೨೪-೧೧-೧೯೪೬)

## ಗಾಂಧೀಜಿಯಿಂದ ಒಂದು ಪತ್ರ

ರಾಜಕೋಟೆಯ ಶ್ರೀ ನಾರಾಯಣದಾಸ್ ಗಾಂಧಿಯವರಿಗೆ, ಗಾಂಧೀಜಿಯವರು ಒಂದು ಪತ್ರದಲ್ಲಿ ಹೀಗೆ ಬರೆದರು :

'ನನ್ನ ಹಿಂದಿನ ಆಹಾರಪದ್ಧತಿಯನ್ನೇ ಮತ್ತೆ ಅನುಸರಿಸುತ್ತಿದೇನೆ. ಚಿಂತೆಗೇನೂ ಕಾರಣವಿಲ್ಲ. ನಿಜವಾಗಿಯೂ ಒಬ್ಬ ಮನುಷ್ಯನು ವಿವೇಕದಿಂದ ಜೀವಿಸುವುದಾದರೆ ಯಾವ ಚಿಂತೆಗೂ ಕಾರಣವಿಲ್ಲ. ನನ್ನ ಜೀವಮಾನದಲ್ಲಿ ಈಗ ನಾನು ಕೈಗೊಂಡಿರುವ ಪವಿತ್ರ ಕಾರ್ಯಕ್ಕಿಂತಲೂ ತೊಡಕುಗಳಿಂದಲೂ

ಕಷ್ಟಕರವಾಗಿಯೂ ಇದ್ದ ಕಾರ್ಯವಾವುದನ್ನೂ ಕೈಗೊಂಡಿರಲಿಲ್ಲ. 'ಇರುಳು ಕತ್ತಲೆಯ ಗವಿ. ಮನೆ ದೂರ. ಕನಿಕರಿಸಿ ಕೈಹಿಡಿದು ನಡಸೆನ್ನನು' ಎಂದು ಪೂರ್ಣವಾಗಿ ಸತ್ಯದಿಂದ ನಾನು ಹಾಡಬಲ್ಲವನಾಗಿದ್ದೇನೆ.

ಇಂಥ ಕಗ್ಗತ್ತಲೆಯನ್ನು ಹಿಂದೆ ಎಂದೂ ನಾನು ಅನುಭವಿಸಿರಲಿಲ್ಲ. ಆದರೆ ಒಂದು ಸಮಾಧಾನ—ನನಗೆ ಸೋಲುವ ಭಾವನೆಯಾಗಲಿ, ನಿರಾಶೆಯಾಗಲಿ ಇಲ್ಲ. ನಾನು ಎಲ್ಲದಕ್ಕೂ ಸಿದ್ಧನಾಗಿದ್ದೇನೆ. 'ಮಾಡು ಅಥವಾ ಮಡಿ' ಎನ್ನುವುದು ಇಲ್ಲಿ ಪರೀಕ್ಷೆಗೆ ಗುರಿಯಾಗಬೇಕಾಗಿದೆ. 'ಮಾಡು' ಎಂದರೆ—ಹಿಂದೂಗಳು ಮತ್ತು ಮುಸಲ್ಮಾನರು ಶಾಂತಿಯಿಂದಲೂ ಸೌಹಾರ್ದದಿಂದಲೂ ಒಟ್ಟಿಗೆ ಬಾಳಲು ಕಲಿಯಬೇಕು. ಇಲ್ಲವಾದರೆ ಈ ಪ್ರಯತ್ನದಲ್ಲಿ ನಾನು ಮಡಿಯಬೇಕು. ನಿಜವಾಗಿಯೂ ಕಠಿಣತಮವಾದ ಕಾರ್ಯ. ದೇವರ ಇಚ್ಛೆಯಂತೆ ಆಗಲಿ.

ಆಶೀರ್ವಾದಗಳು.

೫-೧೨-೧೯೪೬ ಬಾಪೂ

(ಗುಜರಾತಿಯಿಂದ ಭಾಷಾಂತರಿಸಿದುದು)
(ಹರಿಜನ, ೫-೧-೧೯೪೭)

## ಶ್ರೀರಾಮಪುರದಲ್ಲಿ

'ಬಹಳ ಕೆಳಮಟ್ಟದಲ್ಲಿರುವವರನ್ನು ಮೇಲ್ಮಟ್ಟಕ್ಕೆ ತರುವ ಪ್ರಯತ್ನದಲ್ಲಿ ನೀವು ತೊಡಗಿರುವಿರೆಂದು ನಾವು ನಂಬಿದ್ದೇವೆ. ಆದರೆ ಇದರಲ್ಲಿ ನಿಮಗೆ ಯಶಸ್ಸು ದೊರೆತೀತೆ ಎಂಬ ವಿಚಾರದಲ್ಲಿ ನಮಗೆ ಸಂಶಯವಿದೆ'—ಈ ರೀತಿ ಕಲ್ಕತ್ತೆಯಿಂದ ಕೆಲವು ಸಹೋದ್ಯೋಗಿಗಳೊಂದಿಗೆ ಬಂದ ಮಿತ್ರರೊಬ್ಬರು ಗಾಂಧೀಜಿಯನ್ನು ಭೇಟಿಮಾಡಿದ ಸಂದರ್ಭದಲ್ಲಿ ನುಡಿದರು.

'ನನಗೂ ಅದೇ ಸಂಶಯವಿದೆ' ಎಂದು ಗಾಂಧೀಜಿಯವರು ಉತ್ತರವಿತ್ತರು. 'ನಾನು ಯಶಸ್ಸು ಗಳಿಸಬಹುದು, ಮಡಿಯಲೂ ಬಹುದು. ಸೋಲು ಅಥವಾ ಗೆಲುವು ಅಂತಿಮವಾದ ಪ್ರಮಾಣವಲ್ಲ.'

'ನೀವು ಹೇಳುವುದು ನಿಜ' ಎಂದು ಮಿತ್ರರು ಹೇಳಿದರು.

'ಕೊನೆಯವರೆಗೂ ಪ್ರಯತ್ನ ಮಾಡುವುದೇ ನಿಜವಾದ ಪರೀಕ್ಷೆ' ಎಂದರು ಗಾಂಧೀಜೀ.

'ಅಧಿಕಾರಿಗಳ ಮನೋವೃತ್ತಿ ಏನಾದರೂ ಬದಲಾಯಿಸಿದೆಯೇ?' ಎಂದು ಮಿತ್ರರು ಕೇಳಿದರು.

'ಅವರ ಮನೋವೃತ್ತಿ ಸ್ವಲ್ಪ ಸುಧಾರಿಸಿದೆ' ಎಂದರು ಗಾಂಧೀಜೀ. 'ಆದರೆ ಹೃದಯಪರಿವರ್ತನೆಯಾಗಿದೆಯೇ ಎನ್ನುವುದು—ನಾನೂ ನೀವೂ ಮಾಡುವ ಪ್ರಯತ್ನದ ಮೇಲೆ ಅವಲಂಬಿಸಿರುವ ಪ್ರಶ್ನೆ. ಅದನ್ನು ಸಾಧಿಸಲು ನಾವು ಶ್ರಮಿಸಬೇಕಾಗಿದೆ.'

ಹಿಂದೂಗಳ ಯಾವುದರಲ್ಲಿಯೂ ಅಕ್ಕರೆ ಇಲ್ಲದ ರೀತಿಯನ್ನು ಕಂಡು ಆ ಮಿತ್ರರು ವಿಷಾದವನ್ನು ಸೂಚಿಸಿದರು. ಗಾಂಧೀಜೀ ಉತ್ತರವಿತ್ತರು: 'ಇದು ಹಿಂದೂಗಳ ಸ್ವಂತ ಹಕ್ಕಲ್ಲ—ಅಲಕ್ಷ್ಯದಿಂದಿರುವುದು ಎಲ್ಲರಿಗೂ ಸಾಮಾನ್ಯ ವಾದ ಲಕ್ಷಣವಾಗಿಬಿಟ್ಟಿದೆ. ನಾನೊಬ್ಬನೇ ಇದರ ವಿರುದ್ಧವಾಗಿ ನಿಂತು ಹೋರಾಡಬೇಕಾದರೂ ಸರಿಯೆ ಪೂರ್ವ ಬಂಗಾಳದ ಹಿಂದೂಗಳಲ್ಲಿರುವ ಅಸಡ್ಡೆ ಯನ್ನು ಹೋಗಲಾಡಿಸಬೇಕೆಂದಿದ್ದೇನೆ.' ಮುಂದುವರಿದು ಹೇಳಿದರು: 'ನಾನು ಈ ಕೋಮಿನವರಿಗಾಗಲಿ ಆ ಕೋಮಿನವರಿಗಾಗಲಿ ಯಾವ ಉಪಕಾರವನ್ನೂ ಮಾಡಲು ಬಂದಿಲ್ಲ. ನನಗೆ ಇದರಿಂದ ಒಳ್ಳೆಯದಾಗುವುದು. ಅಹಿಂಸೆ— ವ್ಯಕ್ತಿಗಳು ಆಚರಿಸಬೇಕಾದ ನಿಯಮ ಮಾತ್ರವಲ್ಲ, ಸಮಾಜವೇ ಸಾಮೂಹಿಕ ವಾಗಿ ಇದನ್ನು ಅಭ್ಯಾಸಮಾಡಬೇಕು. ನೌಖಾಲಿಯಲ್ಲಿ ನನ್ನ ಮಟ್ಟಿಗೆ ಇದರ ಪರೀಕ್ಷೆಯನ್ನು ಮಾಡಲು ನಾನು ಬಂದಿದ್ದೇನೆ. ನನ್ನ ಅಹಿಂಸೆ ಪೂರ್ತಿಯಾಗಿ ಮುರಿದುಬಿತ್ತೆ? ನಾನಿಲ್ಲಿ ಸೋತರೆ, ಈ ಸಿದ್ಧಾಂತ ತಪ್ಪೆಂದು ರುಜುವಾತು ಆಗುವುದಿಲ್ಲ. ನನ್ನ ಸಾಧನೆ ಅಸಂಪೂರ್ಣವೆಂದು ಮಾತ್ರ ಇದರ ಅರ್ಥ; ನನ್ನ ಅನುಷ್ಠಾನದ ರೀತಿಯಲ್ಲಿ ಏನೋ ದೋಷವಿರಬೇಕೆಂದು ಅರ್ಥ.'

ಮತ್ತೆ ನೌಖಾಲಿಯ ಪರಿಸ್ಥಿತಿಯನ್ನು ಪ್ರಸ್ತಾಪಿಸಿ ಆ ಮಿತ್ರರು ಹೇಳಿದರು: 'ನೀವೂ ಜವಾಹರಲಾಲರೂ ಬಿಹಾರಿನಲ್ಲಿ ನಡೆದುದಕ್ಕಾಗಿ ಎಷ್ಟು ತೀವ್ರವಾದ ಗಮನವನ್ನು ಕೊಟ್ಟಿರೊ, ಅಂತಹ ಗಮನವನ್ನು ಮುಸ್ಲಿಂ ಲೀಗಿನ ಮುಖಂಡರು ನೌಖಾಲಿಯ ವಿಷಯದಲ್ಲಿ ಕೊಟ್ಟಿದ್ದೇ ಆದರೆ ಇಲ್ಲಿನ ಪರಿಸ್ಥಿತಿಯನ್ನೂ ಒಂದು ದಿನದಲ್ಲಿ ಹದಕ್ಕೆ ತರಬಹುದು.'

'ಈ ರೀತಿಯ ಹೋಲಿಕೆಗಳಿಂದ ನಮ್ಮನ್ನು ನಾವೇ ತಗ್ಗಿಸಿಕೊಳ್ಳುತ್ತೇವೆ' ಎಂದರು ಗಾಂಧೀಜೀ. 'ನಮ್ಮ ಮನಸ್ಸನ್ನು ನಾವೇ ಶೋಧಿಸಬೇಕು. ಪುನಃ ಪುನಃ ಈ ಶೋಧನೆಯಾಗಬೇಕು.' ಮುಂದುವರಿದು ಸ್ವಲ್ಪ ಬಿಸಿಯಾಗಿಯೇ ಹೀಗೆಂದರು: 'ನಾವೆಲ್ಲ ಮುಸಲ್ಮಾನರೊಂದಿಗೆ ಮಾತ್ರವಲ್ಲದೆ ಹಿಂದೂಗಳೊಂದಿಗೂ ಮಾತನಾಡಲು ಬಂದಿದೇವೆ. ಅವರು ಏಕೆ ಇಂತಹ ಹೇಡಿಗಳಾಗಿದಾರೆ? ಹರಿಜನರು—ನಾಮಶೂದ್ರರೂ, ಧೈರ್ಯ, ದೇಹಬಲಗಳ ವಿಚಾರದಲ್ಲಿ ತಕ್ಕಮಟ್ಟಿಗೆ ಉತ್ತಮರಾಗಿದಾರೆ. ಅವರಲ್ಲಿ ಶೌರ್ಯವಿದೆ. ಆದರೆ ಇತರ ಹಿಂದೂಗಳು ತಮ್ಮಲ್ಲಿರುವ ಜಾತೀಯ ಭೇದಭಾವವನ್ನು ಬಿಡಬೇಕು. ಈಗ ಆಗಿರುವ ಅನಾಹುತ ಇವರ ಕಣ್ಣನ್ನು ತೆರೆದು ಅಸ್ಪೃಶ್ಯತೆಯನ್ನು ನಿರ್ಮೂಲ ಮಾಡುವ ಪಕ್ಷಕ್ಕೆ ಇದರಿಂದ ಒಂದು ಸತ್ಕಾರ್ಯವೇ ಆದಂತೆ ಆಗುವುದು.'

ಭಾರತಕ್ಕೆ ಬಂದ ಹೊಸದರಲ್ಲಿ ತಮಗಾದ ಅನುಭವಗಳನ್ನು ಪ್ರಸ್ತಾಪಿಸುತ್ತಾ, ಚಂಪಾರಣ್ಯದ ಸತ್ಯಾಗ್ರಹದ ಕಾಲದಲ್ಲಿ ತಾವು ರಾಜೇಂದ್ರಬಾಬು ಮನೆಯಲ್ಲಿಲ್ಲದಿದ್ದಾಗ, ಅವರ ಮನೆಯಾಚೆ ಬೇರೊಂದು ವಠಾರದಲ್ಲಿರಬೇಕಾಗಿದ್ದುದನ್ನು, ರಾಜೇಂದ್ರಬಾಬುವಿನ ಆಳು ತಮ್ಮನ್ನು ಬಾವಿಯ ಬಳಿ ಹೋಗಿ ಸ್ನಾನಮಾಡಲು ಬಿಡದಿದ್ದುದನ್ನು ಗಾಂಧೀಜಿಯವರು ನೆನಪುಮಾಡಿಕೊಂಡರು. ಈಗ ಪರಿಸ್ಥಿತಿ ಸುಧಾರಿಸಿದ್ದರೂ ಮಾಡಬೇಕಾದುದು ಬಹಳ ಉಳಿದಿದೆ. ಹಿಂದೂಧರ್ಮ ಈ ಅಸ್ಪೃಶ್ಯತಾ ನಿರ್ಮೂಲನಕ್ಕಾಗಿ ಇನ್ನೂ ಬಹಳ ಕಾರ್ಯ ಮಾಡಬೇಕಾಗಿದೆ ಎಂದು ಆ ಮಿತ್ರರು ಒಪ್ಪಿಕೊಂಡರು.

ನೌಖಾಲಿಯಲ್ಲಿ ಅನೇಕರಿಗೆ ಬಲಾತ್ಕಾರವಾಗಿ ಮತಾಂತರವಾಗಿದೆ. ಇದನ್ನು ಪ್ರಸ್ತಾಪಿಸಿ ಆ ಮಿತ್ರರು ಹೀಗೆ ಮತಾಂತರ ಹೊಂದಿದವರು ಶೀಘ್ರದಲ್ಲಿಯೇ ತಮ್ಮ ಪೂರ್ವದ ಮತಕ್ಕೆ ಹಿಂತಿರುಗುವುದಕ್ಕೆ ವ್ಯವಸ್ಥೆಯಾಗದೆ ಇದ್ದ ಪಕ್ಷಕ್ಕೆ ಹಿಂದೂ–ಮುಸಲ್ಮಾನರಲ್ಲಿ ಉಂಟಾಗಿರುವ ವೈಷಮ್ಯ ಶಾಶ್ವತವಾಗಿ ನಿಂತುಹೋಗುವುದೆಂದು ಹೇಳಿದರು. ಗಾಂಧೀಜೀ ಈ ಮಾತನ್ನು ಒಪ್ಪಿಕೊಂಡರು. 'ಅನೇಕರು ಹಿಂತಿರುಗಿದಾರೆ. ಆದರೆ ಎಲ್ಲರೂ ಹೀಗೆಯೇ ಹಿಂತಿರುಗಬೇಕು. ಪರಮತಸಹಿಷ್ಣುತೆಯಲ್ಲಿ ನನಗೆ ಯಾವಾಗಲೂ ವಿಶ್ವಾಸವಿದೆ. ಅದಕ್ಕೂ ಒಂದು ಹೆಜ್ಜೆ ನಾನು ಮುಂದೆ ಹೋಗಿದೇನೆ. ಕೇವಲ ಸಹಿಷ್ಣುತೆ ಮಾತ್ರವಲ್ಲ ಪರಮತಗಳ ವಿಷಯದಲ್ಲಿ ಪೂಜ್ಯಭಾವವಿರಬೇಕೆಂದು

ನಾನು ಹೇಳಿದೇನೆ. ಈ ಮತಗಳೆಲ್ಲ ಒಂದು ಮಹಾವೃಕ್ಷದ ಶಾಖೆಗಳಂತೆ. ಆದರೆ ಒಂದು ಶಾಖೆಯಿಂದ ಮತ್ತೊಂದು ಶಾಖೆಗೆ ಯಾವುದೋ ಅನುಕೂಲಕ್ಕಾಗಿ ನಾನು ಬದಲಾಯಿಸಬಾರದು. ಹೀಗೆ ಮಾಡಿದರೆ ನಾನಿರುವ ಶಾಖೆಯನ್ನೇ ನಾನು ಕತ್ತರಿಸಿದಂತಾಗುವುದು. ಆದುದರಿಂದ ಯಾವುದಾದರೂ ಆಂತರಿಕ ಪ್ರೇರಣೆ ಇಲ್ಲದೆ, ಒಳಗಿನಿಂದ ಬಂದ ಸಹಜವಾದ ಪ್ರೇರಣೆಯಾಗದಿದ್ದ ಪಕ್ಷದಲ್ಲಿ ಈ ರೀತಿಯ ಮತಾಂತರ ಹೊಂದುವುದು ನನಗೆ ಬಹಳ ಬೇಸರವನ್ನು ಉಂಟು ಮಾಡಿದೆ. ಈ ರೀತಿಯ ಬದಲಾವಣೆ ಎಂದೂ ಸಾಮೂಹಿಕವಾಗಿ ಆಗಬಾರದು. ತಮ್ಮ ಪ್ರಾಣವನ್ನೂ ಆಸ್ತಿಯನ್ನೂ ರಕ್ಷಿಸಿಕೊಳ್ಳುವುದಕ್ಕಾಗಲಿ ಯಾವ ದುರಾಶೆ ಯಿಂದಲಾಗಲಿ ನಡೆಯಬಾರದು.'

ಗಾಂಧೀಜೀ ದಕ್ಷಿಣಭಾರತದ ಕ್ರೈಸ್ತ ಬಿಷಪ್ಪರೊಬ್ಬರ ವಿಷಯವನ್ನು ಹೇಳಿದರು. ಅವರು ಮೊದಲು ಹರಿಜನರಾಗಿದ್ದು ಆಮೇಲೆ ಕ್ರೈಸ್ತ ಮತಕ್ಕೆ ಸೇರಿಕೊಂಡವರು. ಆದರೂ ತಾವು ಹುಟ್ಟಿದ್ದ ಜಾತಿಯ ದೋಷಗಳನ್ನು ಬಿಟ್ಟಿರ ಲಿಲ್ಲ. ಗಾಂಧೀಜೀ ಇವರ ಬಗ್ಗೆ ಚಾರ್ಲಿ ಆಂಡ್ರೂಸರೊಂದಿಗೆ ಮಾತನಾಡುತ್ತ, ಇಂತಹವರು ಬಿಷಪ್ಪರಾಗಲು ಅನರ್ಹರೆಂದು ಹೇಳಿದ್ದರು.

'ಇಲ್ಲಿ ನಡೆದಿರುವ ಅತ್ಯಾಚಾರಗಳಿಗೆ, ಅನಾಹುತಗಳಿಗೆ ಕೊನೆಮೊದ ಲಿಲ್ಲ. ಅಷ್ಟೇ ಅಲ್ಲ, ಅವು ಮತದ ಹೆಸರಿನಲ್ಲಿ ನಡೆದುವು. ಇವುಗಳನ್ನು ನೋಡಿ ಪೂರ್ತಿ ನಿರಾಶೆ ಉಂಟಾಗುತ್ತದೆ' ಎಂದರು ಆ ಮಿತ್ರರು.

'ನಾನು ನನ್ನ ಎಳೆಯ ವಯಸ್ಸಿನಿಂದಲೂ ಮಾನವಸ್ವರೂಪದ ರಾಕ್ಷಸ ರನ್ನು ಕಂಡಿದೇನೆ' ಎಂದು ಗಾಂಧೀಜೀ ಉತ್ತರವಿತ್ತರು. 'ಆದರೆ ಅವರಲ್ಲಿಯೂ ಸಹ ನಾವು ಅವರ ಹೃದಯಸ್ಪರ್ಶಮಾಡುವ ರೀತಿಯನ್ನು ತಳೆದೆವಾದರೆ, ಪರಿವರ್ತನೆಯಾಗಬಹುದು.' ಆಮೇಲೆ ಈ ಬಗೆಯ ಹೃದಯಪರಿವರ್ತನೆಗೆ ಇತ್ತೀಚೆಗೆ ಅವರ ಗಮನಕ್ಕೆ ಬಂದ ಎರಡು ನಿದರ್ಶನಗಳನ್ನು ಕೊಟ್ಟರು. ಮನುಷ್ಯರು ದಾರುಣಸಂಕಟಕ್ಕೂ ಸರ್ವನಾಶಕ್ಕೂ ಗುರಿಯಾದ ದೃಶ್ಯವನ್ನು ನೋಡಿ ಕಠಿಣಮನಸ್ಕರೂ ದಯಾಶೂನ್ಯರೂ ಆದ ಅಧಿಕಾರಿಗಳೂ ಸಹ ಹೇಗೆ ಕರಗಿ ಕರುಣೆಯ ಮೃದುಭಾವ ಅವರಿಂದ ಹೊರಹೊಮ್ಮಿದುದನ್ನು ವರ್ಣಿಸಿದರು.

'ನಡೆದುದೆಲ್ಲವೂ ಅತಿಘೋರವಾಗಿದೆ. ಇದನ್ನು ಉತ್ಪ್ರೇಕ್ಷೆಮಾಡುವ

ಆವಶ್ಯಕತೆಯೇ ಇಲ್ಲ' ಎಂದು ಗಾಂಧೀಜೀ ಹೇಳಿದರು. 'ನನಗೆ ಅಂಕಿಗಳು ಬೇಡ. ಸ್ತ್ರೀ ಅಪಹರಣ, ಮಾನಭಂಗ, ಬಲಾತ್ಕಾರದ ಮದುವೆ ಅಥವಾ ಮತಾಂತರ—ಇಂತಹವು ಒಂದಾಗಿದ್ದರೂ ಸಾಲದೆ? ಇಷ್ಟೇ ನನ್ನ ಮಟ್ಟಿಗೆ ಸಾಕು. ಇಂತಹವು ಆಗಿವೆಯೆಂದೇ ಒಪ್ಪಿಕೊಳ್ಳಲಾಗಿದೆ.'

'ಅಪಹಾರವಾದ ಹೆಣ್ಣುಮಕ್ಕಳ ವಿಚಾರದಲ್ಲಿ ಏನು ಮಾಡೋಣ?' ಎಂದು ಮುಂದಿನ ಪ್ರಶ್ನೆ ಕೇಳಲಾಯಿತು. 'ಇಂತಹ ಅಪಹರಣದ ಸುದ್ದಿ ಬಂದ ಕೂಡಲೆ, ರಕ್ಷಣೆಮಾಡಲು ಹೊರಟ ಗುಂಪು ಒಂದು ಸೈನ್ಯದ ಸಣ್ಣ ಪಡೆಯೊಡನೆ ಈ ದುರಾತ್ಮರನ್ನು ಹಿಡಿಯಲು ಹೋಗುವುದು. ಇದನ್ನು ತಿಳಿದ ಆ ದುರಾತ್ಮರು ಅಪಹಾರಮಾಡಿದ ಹೆಂಗಸರನ್ನು ಬೇರೆ ಕಡೆಗೆ ಸಾಗಿಸಿಬಿಡುವರು.'

'ಸೈನ್ಯದ ಪಡೆ, ಪೋಲೀಸರ ಸಹಾಯ ಇವುಗಳ ಮೇಲೆ ಅವಲಂಬಿಸ ಬೇಡಿ ಎಂದು ನಾನು ನಮ್ಮ ಜನರಿಗೆ ಹೇಳಿದೇನೆ' ಎಂದರು ಗಾಂಧೀಜೀ. ಪ್ರಜಾಪ್ರಭುತ್ತ್ವದ ತತ್ತ್ವವನ್ನು ಎತ್ತಿ ನಿಲ್ಲಿಸಬೇಕು. ಈ ತತ್ತ್ವವೂ ಸೈನ್ಯ ಅಥವಾ ಪೋಲೀಸ್ ಬಲದ ಮೇಲೆ ಅವಲಂಬಿಸುವುದೂ ಪರಸ್ಪರ ವಿರುದ್ಧ. ಹೀಗೆ ಮಾಡುವುದು ಒಂದು ಕಡೆ ಯುಕ್ತವೆಂದೂ, ಮತ್ತೊಂದು ಕಡೆ ಅಯುಕ್ತ ವೆಂದೂ ಹೇಳಲಾಗದು. ಸೈನ್ಯದ ಸಹಾಯ ಪಡೆದರೆ ನಿಮ್ಮ ಸತ್ತ್ವ ನಾಶ ವಾಗುತ್ತದೆ. ಪ್ರಜಾಪ್ರಭುತ್ವದಲ್ಲಿ ಮತದಾರರು ಒಬ್ಬ ಪುಂಡನನ್ನು ನಿಲ್ಲಿಸಿ ಅವನನ್ನು ಗದ್ದುಗೆಗೆ ಏರಿಸಿದರೆ, ತಾವು ಮಾಡಿದುದನ್ನು ತಾವೇ ಉಣ್ಣಬೇಕು; ಇಲ್ಲವಾದರೆ ಅವಶ್ಯಬಿದ್ದಲ್ಲಿ ಸತ್ಯಾಗ್ರಹದ ಮೂಲಕ ಆ ಮತದಾರರ ಗುಂಪನ್ನೇ ಪರಿವರ್ತನೆ ಮಾಡಬೇಕು. ಇದೇ ಪ್ರಜಾಪ್ರಭುತ್ವದ ರೀತಿ. ಬಂಗಾಳ ವಾಗಲಿ ಬಿಹಾರವಾಗಲಿ, ಜನರು ಧೈರ್ಯವಂತರಾಗಬೇಕು, ತಮ್ಮ ಕಾಲ ಮೇಲೆ ತಾವು ನಿಲ್ಲಬೇಕು. ಪ್ರತಿಯೊಬ್ಬರೂ ತಮ್ಮ ಕರ್ತವ್ಯವನ್ನು ಮಾಡುತ್ತ ಸ್ವಸ್ಥಾನದಲ್ಲಿ ದೃಢವಾಗಿ ನಿಲ್ಲಬೇಕು. ಏನೇ ಆದರೂ ತನ್ನ ಮನೆಯನ್ನೂ ಹಳ್ಳಿಯನ್ನೂ ಬಿಟ್ಟು ಓಡಬಾರದು. ಇದನ್ನೇ ನಾನು ಅಪೇಕ್ಷಿಸುವುದು.'

ಬಂಗಾಳದಲ್ಲಿ ನಡೆಯುವುದನ್ನು ಕೇವಲ ರಾಜಕೀಯಕ್ಕೆ ತಿರುಗಿಸಿ ಕೊಂಡು ದುರುಪಯೋಗ ಮಾಡುತ್ತಿರುವ ವಿಷಯವನ್ನು ಒಬ್ಬ ಮಿತ್ರರು ಪ್ರಸ್ತಾಪಿಸಿದರು.

'ಹಾಗಲ್ಲ' ಎಂದರು ಗಾಂಧೀಜೀ. 'ಬಂಗಾಳ ಇಂದು ಎಲ್ಲರ ಕಣ್ಣು ಮುಂದಿರುವುದು ಅದರ ಹಿರಿಮೆಯ ಕಾರಣದಿಂದ. ಬಂಗಾಳ ರವೀಂದ್ರರ ನಾಡು, ಬಂಕೀಮ್‌ಚಂದ್ರರ ನಾಡು. ಚಿತ್ತಗಾಂಗಿನ ಸೈನ್ಯದ ಕೋಟೆಯ ಮೇಲೆ ದಾಳಿಮಾಡಿದ ವೀರರು ಬಂಗಾಳಿಗಳು. ನನ್ನ ದೃಷ್ಟಿಯಲ್ಲಿ ಇವರ ಕಾರ್ಯ ಸೂಕ್ತವಾದುದಲ್ಲ. ಆದರೇನು, ಅವರು ಶೂರರು. ಇದನ್ನು ನೀವು ಅರ್ಥಮಾಡಿಕೊಂಡಿರುವಿರಿ. ಬಂಗಾಳವು ತನ್ನ ಕರ್ತವ್ಯವನ್ನು ನಿರ್ವಹಿಸಿದರೆ, ಭಾರತದ ಸಮಸ್ಯೆಯನ್ನು ಅದು ಪರಿಹಾರಮಾಡಬಲ್ಲುದು. ಆದುದರಿಂದಲೇ ನಾನು ಸದ್ಯಕ್ಕೆ ಬಂಗಾಳಿಯಾಗಿದೇನೆ. ಇಂತಹ ಬಂಗಾಳದಲ್ಲಿ ಹೇಡಿಗಳಿಗೇತಕ್ಕೆ ಜಾಗವಿರಬೇಕು ?'

'ಹೌದು, ವಿನಾಶಕ್ಕೆ ಗುರಿಯಾದ ಈ ಪೂಜಾಸ್ಥಳಗಳನ್ನು ನೋಡಿದರೆ, ಮನೆಯಲ್ಲಿದ್ದ ಪ್ರತಿಯೊಂದು ಗಂಡು, ಹೆಣ್ಣು, ಮಗು ಇವುಗಳ ರಕ್ಷಣೆಗಾಗಿ ಏತಕ್ಕೆ ತಮ್ಮ ಪ್ರಾಣವನ್ನು ಅರ್ಪಿಸದೆ ಹೋದರೆಂದು ನಾನು ಕೇಳುತ್ತೇನೆ' ಎಂದು ಆ ಮಿತ್ರರು ಹೇಳಿದರು.

'ಹಾಗೆ ಅವರು ಮಾಡಿದ್ದರೆ, ಬೇರೆ ಸಹಾಯ ನಿಮಗೆ ಬೇಕಾಗಿರಲಿಲ್ಲ' ಎಂದರು ಗಾಂಧೀಜೀ. ಇಂದು ನೌಖಾಲಿಯಲ್ಲಿ ನಾಯಕರು ಮಾಯವಾಗಿದಾರೆ. ಅಪಾಯವನ್ನು ಎದುರಿಸಲಾಗದೆ ಮನೆ-ಮಠವನ್ನು ಬಿಟ್ಟು ಎಲ್ಲರೂ ಓಡಿದರು. ಪಾಪ ! ಮನೋರಂಜನಬಾಬುಗೆ ದಿಕ್ಕುತೋರದಾಗಿದೆ. ಶಾಂತಿಸಮಿತಿಗಳಿಗೆ ಯಾರನ್ನು ನೇಮಿಸಬೇಕೆಂದು ಅವರಿಗೆ ತಿಳಿಯದಾಗಿದೆ. ಬರಿದಾಗಿರುವ ಜಾಗಕ್ಕೆ ಸಾಮಾನ್ಯ ಜನರನ್ನೇ ನೇಮಿಸಬಹುದೆಂದು ನನ್ನ ಸಲಹೆ. ಪ್ರಕೃತಿ ಯಲ್ಲಿ ಬರಿದಾದ ಜಾಗವೆಂಬುದಿಲ್ಲ. ಪ್ರಕೃತಿ ಇದನ್ನು ಸಹಿಸಲೇ ಆರದು. ಆ ಮುಖಂಡರಿಗೆ ಬರೆಯಿರೆಂದು ನಾನು ಹೇಳಿದೆ. ಅವರು ಬಂದರೆ ಒಳ್ಳೆಯ ದಾಯಿತು. ಇಲ್ಲವಾದರೆ ಈ ಖಾಲಿ ಜಾಗಗಳನ್ನು ಸಾಮಾನ್ಯ ಜನರೇ ಭರ್ತಿ ಮಾಡಲಿ. ಇದು ಅವರ ಕಾಲ.'

'ಮಹಾತ್ಮಾಜೀ, ಒಂದು ಮಾತಿನಲ್ಲಿ ಹೇಳಿ : ಇದು ಶಾಂತಿಯೆ ಅಥವಾ ಯುದ್ಧವೆ ? ಇವು ಶಾಂತಿಸಮಿತಿಗಳೇ ಅಥವಾ ಯುದ್ಧಸಮಿತಿಗಳೆ ?' ಎಂದು ಮತ್ತೊಬ್ಬ ಮಿತ್ರರು ಕೇಳಿದರು.

' ಶಾಂತಿಸಮಿತಿಗಳು ' ಎಂದು ಗಾಂಧೀಜೀ ಉತ್ತರವಿತ್ತರು. ' ಶಾಂತಿ ಕೈಗೂಡದಿದ್ದಾಗ ಯುದ್ಧ ಸಂಭವಿಸುತ್ತದೆ. ನಮ್ಮ ಪ್ರಯತ್ನಗಳೆಲ್ಲವೂ ಶಾಂತಿಯ ಸ್ಥಾಪನೆಗಾಗಿಯೆ ಆಗಬೇಕು. ಆದರೆ ಗೌರವದೊಡನೆ ಸ್ಥಾಪಿಸಿರುವ ಶಾಂತಿಯಾಗಿರಬೇಕು. ಪ್ರಾಣಕ್ಕೂ ಆಸ್ತಿಗೂ ತಕ್ಕಮಟ್ಟಿಗೆ ನೆಮ್ಮದಿ ಇರಬೇಕು. ಈ ಎರಡು ಷರತ್ತುಗಳ ಮೇಲೆಯೇ ನಿರಾಶ್ರಿತ ಜನ ಹಿಂತಿರುಗುವರು. ಅವರಲ್ಲಿ ಸಾಕಷ್ಟು ಧೈರ್ಯವಿದ್ದರಂತೂ ಯಾವ ಇಂತಹ ಷರತ್ತೂ ಇಲ್ಲದೆ ಅವರು ಹಿಂತಿರುಗುವರು. ಪ್ರತಿಯೊಂದು ಗ್ರಾಮಕ್ಕೂ ಒಬ್ಬ ಹಿಂದೂ ಒಬ್ಬ ಮುಸಲ್ಮಾನ ಜಾಮೀನಾಗಿ ನಿಲ್ಲಬೇಕೆಂದು ನಾನು ಈಗ ಸೂಚಿಸಿದೇನೆ. ಜನಗಳಲ್ಲಿ ಅವಶ್ಯ ವಿರುವಷ್ಟು ಧೈರ್ಯವಿದ್ದರೆ ತಮ್ಮ ರಕ್ಷಣೆಗಾಗಿ ದೇವರ ಮೇಲೆಯೂ ತಮ್ಮ ಆತ್ಮಬಲದ ಮೇಲೆಯೂ ಭರವಸೆಯನ್ನಿಡುವರು. ಇತರರ ಮೇಲೆ ಅವಲಂಬಿಸ ಲಾರರು. ಹೀಗೆ ಅವರು ಮಾಡಿದ್ದೇ ಆದರೆ ನೌಖಾಲಿಯ ಗೂಂಡಾ ಜನರೆಲ್ಲರೂ ಸನ್ನಿವೇಶದಲ್ಲಿ ಆಗಿರುವ ಬದಲಾವಣೆಯನ್ನು ಗಮನಿಸಿ ಸಭ್ಯರೀತಿಯಲ್ಲಿ ವರ್ತಿಸುವರು. ನಾನು ಹೇಳುತ್ತಿರುವ ಈ ಮಾತಿನಲ್ಲಿ ನನಗೆ ವಿಶ್ವಾಸವುಂಟು. ನಾನು ಕಾಥಿಯವಾಡಿನವನು. ಅದು ದರೋಡೆಗಾರರಿಗೆ ಪ್ರಸಿದ್ಧವಾದ ಪ್ರದೇಶ. ಅವರನ್ನೂ ಸಭ್ಯರನ್ನಾಗಿ ಮಾಡಲು ಸಾಧ್ಯ. ಆದರೆ ಇಲ್ಲಿ ನಡೆದಿರುವ ಅನಾಹುತಗಳಿಗೆಲ್ಲ ಗೂಂಡಾಗಳೇ ಕಾರಣರೆಂದು ನಾನು ಹೇಳಲಾರೆ.'

ಈ ಶಾಂತಿಸಮಿತಿಗಳಲ್ಲಿ ಕೇವಲ ಮುಸಲ್ಮಾನರು ಮಾತ್ರ ಇರಬೇಕೆಂದು ಒಂದು ಸಲಹೆ ಬಂತು. ಏಕೆಂದರೆ ಹಿಂದೂಗಳು ಯಾರೂ ಶಾಂತಿಭಂಗಕ್ಕೆ ಕಾರಣರಾಗಿರಲಿಲ್ಲ.

' ಹಾಗಲ್ಲ ' ಎಂದರು ಗಾಂಧೀಜೀ. ' ಹಿಂದೂಗಳು ಅದರಲ್ಲಿ ಭಾಗವಹಿಸ ಬೇಕು. ಇಲ್ಲವಾದರೆ ಈ ಶಾಂತಿಸಮಿತಿಗಳು ಕೇವಲ ಹಾಸ್ಯಾಸ್ಪದವಾಗುವುವು.'

' ಬಿಹಾರದಲ್ಲಿದ್ದ ಪರಿಸ್ಥಿತಿಯನ್ನು ಅಹಿಂಸಾಮಾರ್ಗದಿಂದ ಹದಕ್ಕೆ ತರಲು ಸಾಧ್ಯವಾಗುತ್ತಿರಲಿಲ್ಲವೆ ? ' ಎಂದು ಆ ಮಿತ್ರರು ಪ್ರಶ್ನಿಸಿದರು.

' ಹೌದು ' ಎಂದರು ಗಾಂಧೀಜೀ. ' ಆದರೆ ೧೯೪೨ರಿಂದ ಈಚೆಗೆ ವ್ಯವಸ್ಥೆ ಗೊಳಿಸಿದ ಹಿಂಸಾಮಾರ್ಗದ ಪಾಠವನ್ನು ಬಿಹಾರ ಕಲಿತಿದೆ. ಆ ವರ್ಷದಲ್ಲಿ ಗೂಂಡಾಗಳ ವಿಷಯಗಳಲ್ಲಿ ನಮಗಿದ್ದ ಆದರ ಅತ್ಯುನ್ನತ ಮಟ್ಟದಲ್ಲಿತ್ತು.

೧೯೪೨ರ ಆಂದೋಲನದ ಗುಣವನ್ನು ನಾನು ಬಲ್ಲೆ. ಜನರು ಭೀತಿಯಿಂದ ತಲೆ ಬಾಗಲಿಲ್ಲ. ಆದರೆ ನಾವು ಮಾಡಿದ ತಪ್ಪುಗಳನ್ನು ನಾನು ಮರೆಯಲಾರೆ. ನಾವು ಉತ್ತಮರಾಗಲು ಯತ್ನಿಸಬೇಕು.' (ಭಾಟಿಯಪುರ, ೧೪-೧೨-೧೯೪೫)
(ಹರಿಜನ, ೧೨-೧-೧೯೪೬)

## ಶ್ರೀರಾಮಪುರದ ದಿನಚರಿ

(ಅನೇಕ ವೃತ್ತಪತ್ರಿಕೆಗಳಲ್ಲಿ ಪ್ರಕಟವಾದ ಸುದ್ದಿಗಳಿಂದ ಸಂಗ್ರಹಿಸಿದುದು.)

### ಪ್ರಜೆಗಳ ವಿನಿಮಯ

'ಪ್ರಜೆಗಳನ್ನು ವಿನಿಮಯ ಮಾಡುವ ವಿಚಾರ ಮಾಡತಕ್ಕದ್ದೂ ಅಲ್ಲ ಯೋಚಿಸತಕ್ಕದ್ದೂ ಅಲ್ಲ'—ಹೀಗೆಂದು ಅವರೊಂದಿಗೆ ಶ್ರೀರಾಮಪುರದಲ್ಲಿದ್ದ ಪತ್ರಿಕಾಪ್ರತಿನಿಧಿಗಳ ಪ್ರಶ್ನೆಗಳಿಗೆ ಉತ್ತರ ಕೊಡುತ್ತ ಗಾಂಧೀಜೀ ನುಡಿದರು.

'ನನ್ನ ಮನಸ್ಸಿನಲ್ಲಿ ಈ ವಿಷಯ ಎಂದೂ ಸುಳಿದಿದ್ದಿಲ್ಲ' ಎಂದರು ಗಾಂಧೀಜೀ. ಮುಂದುವರಿಯುತ್ತ ಹೇಳಿದರು: 'ಪ್ರತಿಯೊಂದು ಪ್ರಾಂತ್ಯದಲ್ಲಿಯೂ ಹಿಂದೂಗಳಾಗಲಿ, ಮುಸಲ್ಮಾನರಾಗಲಿ ಬೇರೆ ಧರ್ಮಕ್ಕೆ ಸೇರಿದವರಾಗಲಿ ಎಲ್ಲರೂ ಭಾರತೀಯರು. ಪಾಕಿಸ್ತಾನವು ಪೂರ್ತಿಯಾಗಿ ಕೈಗೂಡಿದರೂ ಈ ಮಾತಿನಲ್ಲಿ ಯಾವ ಬದಲಾವಣೆಯೂ ಆಗಲಾರದು.' ಮುಂದುವರಿದು, 'ಪ್ರಜೆಗಳ ವಿನಿಮಯವಾದರೆ ನಮ್ಮ ವಿವೇಕವೇ ಶೂನ್ಯವಾಯಿತು. ನಮ್ಮ ನಿರ್ವಹಣಶಕ್ತಿಯೇ ಮಾಯವಾಯಿತೆಂದು ನನ್ನ ಮಟ್ಟಿಗೆ ನಾನು ಭಾವಿಸುವೆನು. ಈ ಮಾರ್ಗದಲ್ಲಿ ಒಂದು ಹೆಜ್ಜೆಯನ್ನು ನಾವು ಇಟ್ಟ ಪಕ್ಷಕ್ಕೆ ಇದರ ಪರಿಣಾಮ ಊಹಿಸಲು ಸಹ ಭಯಾನಕವಾದುದು. ಕೃತಕವಾದ ರೀತಿಯಲ್ಲಿ ಬೇರೆ ಬೇರೆ ಧರ್ಮಾವಲಂಬಿಗಳಿಗೆ ವಾಸಕ್ಕೆಂದು ಭಾರತವನ್ನು ತುಂಡು ಮಾಡಬೇಕಾಗುವುದಲ್ಲವೆ?' ಎಂದು ಪ್ರಶ್ನೆ ಹಾಕಿದರು.

'ಅಶಾಂತ ಪರಿಸ್ಥಿತಿಯಲ್ಲಿ ಪ್ರಜೆಗಳನ್ನು ಬೇರೆ ಪ್ರದೇಶಗಳಿಗೆ ಕಳುಹಿಸಿಕೊಡುವುದು ಉತ್ತಮವಲ್ಲವೆ?' ಎನ್ನುವ ಪ್ರಶ್ನೆಗೆ ಗಾಂಧೀಜೀ ಹೇಳಿದರು:

'ಇದನ್ನು ಮಾಡುವ ಕಾರಣ ನನಗೆ ಕಾಣುವುದಿಲ್ಲ. ಇದು ನಿರಾಶೆಯ ಮಾರ್ಗ. ಆದುದರಿಂದ ಕೇವಲ ಒಂದು ಅಪವಾದವೆಂದು ತಿಳಿದು ಬೇರೆ ಮಾರ್ಗ ತೋರದಿದ್ದಾಗ ಮಾಡತಕ್ಕದ್ದು.'

## ನೌಖಾಲಿಯ ಸಂದೇಶ

ಮುಂದಿನ ಪ್ರಶ್ನೆ ಹೀಗಿತ್ತು : 'ಪೂರ್ವ ಬಂಗಾಳದಲ್ಲಿ ನೀವಿರುವುದಕ್ಕೆ ಕಾಲಮಿತಿ ಇಲ್ಲವೆಂದು ಅದೊಂದು ದಿನ ನೀವು ಹೇಳಿದಿರಿ. ನೀವು ಶ್ರೀರಾಮ ಪುರದಲ್ಲಿಯೇ ತಂಗುವುದರಿಂದ ನಿಮ್ಮ ಶಾಂತಿಸಂದೇಶವನ್ನು ನೌಖಾಲಿಯ ಇತರ ಹಳ್ಳಿಗಳಿಗೂ ಕಳುಹಿಸಲು ಸಾಧ್ಯವಾಗುವುದೆ ?'

ಗಾಂಧೀಜೀ ಹೀಗೆಂದು ಉತ್ತರವಿತ್ತರು : 'ನಾನು ಶ್ರೀರಾಮಪುರದಲ್ಲಿಯೆ ಉಳಿದುಬಿಡಬೇಕೆಂದು ಉದ್ದೇಶಿಸಿಲ್ಲ. ನಾನು ಇಲ್ಲಿ ಸುಮ್ಮನೆ ಇಲ್ಲ. ನೆರೆ ಹೊರೆಯ ಹಳ್ಳಿಯವರನ್ನೂ ಇತರರನ್ನೂ ಭೇಟಿ ಮಾಡುತ್ತಿದೇನೆ. ವಿಷಯ ಗಳನ್ನು ಪರಿಶೀಲಿಸುತ್ತಿದೇನೆ. ಕಳೆದುಹೋದ ದೇಹಶಕ್ತಿಯನ್ನು ಸಂಪಾದಿಸಿ ಕೊಳ್ಳುತ್ತಿದೇನೆ. ಆಮೇಲೆ ಪ್ರತಿಯೊಂದು ಹಳ್ಳಿಗೂ ಪಾದಚಾರಿಯಾಗಿ ಸಾಧ್ಯ ವಾದಾಗಲೆಲ್ಲ, ಅವಶ್ಯಬಿದ್ದಂತೆಲ್ಲ ಹೋಗಿ ಮನೆಗಳನ್ನು ಬಿಟ್ಟು ಓಡಿಹೋದ ವರನ್ನು ತಮ್ಮ ಮನೆಗಳಿಗೆ ಹಿಂತಿರುಗುವಂತೆ ಮಾಡಿಸುವುದು ನನ್ನ ಉದ್ದೇಶ್ಯ. ಈ ಕೆಲಸ ಪರಿಣಾಮಕಾರಿಯಾಗಬೇಕಾದರೆ ವಿಷಯಗಳನ್ನು ಕೂಲಂಕಷವಾಗಿ ನಾನು ಮೊದಲು ಅರಿಯಬೇಕು. ನಾನು ಆಡುವ ಬರಿ ಮಾತಿನಿಂದ ಏನೂ ಪ್ರಯೋಜನವಿಲ್ಲವೆಂಬುದು ನನಗೆ ಸ್ಪಷ್ಟವಾಗಿದೆ. ಅಪನಂಬಿಕೆ ಬೇರೂರಿ ಬಿಟ್ಟಿದೆ. ಕೇವಲ ಉಪದೇಶದಿಂದ ಇದನ್ನು ಹೋಗಲಾಡಿಸಲಾಗದು.

## ನನ್ನಲ್ಲಿ ಕಗ್ಗತ್ತಲೆ ಕವಿದಿದೆ

ನಾವು ಕಗ್ಗತ್ತಲೆಯಲ್ಲಿರುವುದಾಗಿ ಗಾಂಧೀಜೀ ಹೇಳಿದರೆಂದು ವರದಿ ಯಾಗಿತ್ತು. ಇದರ ಪ್ರಸ್ತಾಪವನ್ನು ಮಾಡುತ್ತ ಒಬ್ಬ ಪತ್ರಿಕಾ ಪ್ರತಿನಿಧಿಗಳು ಇದು ಹೇಗೆ ಬಂತು, ಯಾವಾಗ ಬಂತೆಂದೂ, ಇದರಿಂದ ವಿಮೋಚನೆಯಾಗಲು ಸಾಧ್ಯವೆಂಬ ವಿಶ್ವಾಸ ಗಾಂಧೀಜೀಗೆ ಇದೆಯೇ ಎಂದು ಪ್ರಶ್ನಿಸಿದರು.

ಗಾಂಧೀಜೀ ಉತ್ತರವಿತ್ತರು: ' ಆ ವರದಿ ನಿಜ. ಹೊರಗಿನ ಸನ್ನಿವೇಶ ಗಳು ಎಂದೂ ನನ್ನನ್ನು ಮುಳುಗಿಸಿದುದಿಲ್ಲ. ಈಗಿನ ಕಗ್ಗತ್ತಲೆಗೆ ಕಾರಣ ನನ್ನಲ್ಲಿಯೇ ಇದೆ. ಹಿಂದೂ–ಮುಸಲ್ಮಾನರ ಪರಸ್ಪರ ಸಂಬಂಧದ ವಿಚಾರದಲ್ಲಿ ನನ್ನ ಅಹಿಂಸೆ ಏನೂ ಕೆಲಸ ಮಾಡಿದಂತೆ ತೋರುವುದಿಲ್ಲ. ನೌಖಾಲಿಯಲ್ಲಿ ಆದ ಘಟನೆಗಳ ಸುದ್ದಿಯನ್ನು ನಾನು ಕೇಳಿದಾಗ ಈ ವಿಷಯ ಬಲವತ್ತರವಾದ ರೀತಿಯಲ್ಲಿ ನನ್ನ ಅವಗಾಹನೆಗೆ ಬಂತು.

' ಬಲಾತ್ಕಾರವಾಗಿ ಜನರನ್ನು ಅನ್ಯಮತಕ್ಕೆ ಸೇರಿಸಿಕೊಳ್ಳುವುದು, ಹೆಣ್ಣು ಮಕ್ಕಳ ಸಂಕಟಗಳು ನನಗೆ ಬಹಳ ನೋವನ್ನುಂಟುಮಾಡಿದುವು. ನಾನು ಭಾಷಣದಿಂದಾಗಲಿ, ಬರೆಹದಿಂದಾಗಲಿ ಏನನ್ನೂ ಮಾಡಲಾಗಲಿಲ್ಲ. ನಾನು ಪ್ರತ್ಯಕ್ಷವಾಗಿ ಆಯಾ ಪ್ರದೇಶಗಳಿಗೆ ಹೋಗಿ, ನನ್ನನ್ನು ಈವರೆಗೂ ಪೋಷಿಸಿ ಜೀವನಸಾರ್ಥಕ್ಯವನ್ನು ತೋರಿಸಿರುವ ಅಹಿಂಸಾಮಾರ್ಗದ ಗುಣವನ್ನು ಪರೀಕ್ಷಿಸಿ ನೋಡಬೇಕೆಂದು ನನ್ನಲ್ಲಿ ತರ್ಕಮಾಡಿಕೊಂಡು ತೀರ್ಮಾನಿಸಿದೆನು.

' ಈ ಮಾರ್ಗವು ಬಲಹೀನರದೆಂದು ಅನೇಕರು ಹೇಳುವುದುಂಟು. ಇದು ಬಲಹೀನರದೆ, ಬಲಯುತರದೇ ಪರೀಕ್ಷಿಸಬೇಕು. ನೌಖಾಲಿಯ ದುಃಸ್ಥಿತಿ ಎದ್ದುಕಾಣುವಂತಹುದು. ಇದಕ್ಕೆ ಪರಿಹಾರವನ್ನು ನಾನು ಬೇರೆ ಯಾವ ಮಾರ್ಗದಲ್ಲಿಯೂ ಕಾಣದವನಾದೆ.

' ಆದುದರಿಂದ ನನ್ನ ಇತರ ಚಟುವಟಿಕೆಗಳನ್ನು ಒತ್ತಟ್ಟಿಗಿಟ್ಟು, ನಾನು ನೌಖಾಲಿಗೆ ಧಾವಿಸಿದೆ. ನನ್ನ ನಿಲುವೇನೆಂಬುದನ್ನು ಪರಿಶೀಲನೆ ಮಾಡಿದೆ. ಅಹಿಂಸಾಪರಿಪೂರ್ಣವಾದ ಸಾಧನೆಯೆಂದು ನನಗೆ ಖಚಿತವಾಗಿ ಗೊತ್ತಿದೆ. ಇದು ಪರಿಣಾಮಕಾರಿಯಾಗದಿದ್ದರೆ ದೋಷ ನನ್ನಲ್ಲಿರಬೇಕು. ನನ್ನ ಪ್ರಯೋ ಗದ ವಿಧಾನದಲ್ಲಿ ಏನೋ ತಪ್ಪು ಇರಬೇಕು. ಈ ತಪ್ಪೇನೆಂಬುದನ್ನು ಕಂಡು ಹಿಡಿಯುವುದು ನಾನು ದೂರವಿದ್ದರೆ ಸಾಧ್ಯವಿಲ್ಲ. ಆದುದರಿಂದ ಇದನ್ನು ಕಂಡುಹಿಡಿಯಲು ನಾನು ಇಲ್ಲಿಗೇ ಬಂದೆ. ಆದುದರಿಂದ ನನಗೆ ಬೆಳಕು ಕಾಣಿಸುವವರೆಗೂ ಅಂಧಕಾರದಲ್ಲಿದೇನೆಂದು ಒಪ್ಪಿಕೊಳ್ಳಬೇಕು. ಎಂದು ಆ ಬೆಳಕು ಬರುವುದೋ ಭಗವಂತನಿಗೇ ಗೊತ್ತು. ಇದಕ್ಕೂ ಹೆಚ್ಚಿಗೆ ನಾನು ಹೇಳಲಾರೆ.'

## ನನ್ನ ಅಹಿಂಸೆಯ ಸತ್ತ್ವಪರೀಕ್ಷೆ

'ಈ ವಾತಾವರಣದಲ್ಲಿ ಅತಿಯಾಗಿ ಅಪನಂಬಿಕೆಯೂ, ಸಂಶಯವೂ ತುಂಬಿದೆ. ನನ್ನ ಅಹಿಂಸೆಗೆ ಒಂದು ಸತ್ತ್ವಪರೀಕ್ಷೆ ಆಗುತ್ತದೆ' ಎಂದು ಗಾಂಧೀಜೀ ಮದರಾಸ್ ಪತ್ರಿಕೆಯ ಪ್ರತಿನಿಧಿಯೊಬ್ಬರಿಗೆ ಉತ್ತರ ಕೊಡುತ್ತ ಹೇಳಿದರು.

ಒಂದು ಪ್ರಶ್ನೆ: 'ಬಂಗಾಳದ ಮಂತ್ರಿಗಳು ನೀವಿಲ್ಲಿರುವುದೇ ತಮ್ಮನ್ನು ಒತ್ತಾಯಪಡಿಸಲೋಸುಗವೆಂದು ಭಾವಿಸಲಾರರೆ? ತಾವಾಗಿಯೇ ನ್ಯಾಯದ ದೃಷ್ಟಿಯಿಂದ ಆಶ್ರಿತ ಜನರಿಗೆ ಮನೆಮಠಗಳನ್ನು ಕಲ್ಪಿಸುವ ಪ್ರಯತ್ನಗಳು ನೀವಿಲ್ಲಿದ್ದುಕೊಂಡು ಮಂತ್ರಿಗಳನ್ನು ಒತ್ತಾಯಕ್ಕೆ ಗುರಿಪಡಿಸಿದುದರ ಪರಿಣಾಮವೆಂದು ಅಂದುಕೊಳ್ಳಲಾರರೆ?'

ಗಾಂಧೀಜೀ ಹೇಳಿದರು: 'ನಿಮ್ಮ ಊಹೆಯು ನಿರಾಧಾರವಾದುದು, ನೀವಾಗಿ ಕಲ್ಪಿಸಿಕೊಂಡುದು. ಹಾಗಿಲ್ಲದೆ ನೀವು ಹೇಳಿದುದಕ್ಕೆ ಪ್ರಸ್ತುತ ಸ್ಥಿತಿಯಲ್ಲಿ ಏನಾದರೂ ಆಧಾರವಿದ್ದರೆ ನಿಮ್ಮ ತರ್ಕವು ನಿಜವಾಗುವುದು. ನಾನಿಲ್ಲಿದ್ದುಕೊಂಡಿರುವುದು ಅಹಿಂಸಾನಿಯಮಕ್ಕೆ ವಿರೋಧವಾಗುವುದು.

'ನಾನು ಅಲ್ಲಿನ ಹಿಂದೂಗಳಿಗೆ ಎಷ್ಟು ಮಾತ್ರ ಮಿತ್ರನೋ ಅಷ್ಟೇ ಮುಸಲ್ಮಾನರಿಗೂ ಮಿತ್ರನಾಗಿ ಬಂದಿದೇನೆಂದು ಹೇಳಬಲ್ಲೆ. ನಾನು ಭಾರತ ದೇಶಕ್ಕೆ ಹಿಂತಿರುಗಿದಮೇಲೆ ಸ್ವಲ್ಪವೇ ದಿನಗಳಲ್ಲಿ ಚಂಪಾರಣ್ಯಕ್ಕೆ ಹೋದುದು ನೆನಪಿನಲ್ಲಿರಬಹುದು. ನಾನು ಆ ಪ್ರದೇಶವನ್ನು ಬಿಟ್ಟು ಹೊರಡಬೇಕೆಂದು ಸಹ ನನ್ನ ಮೇಲೆ ಒಂದು ನೋಟೀಸ್ ಜಾರಿ ಮಾಡಿದ್ದರು. ನನ್ನ ಮೇಲೆ ಹೂಡಿದ ಮೊಕದ್ದಮೆಯ ಫಲವಾಗಿ ಆಗಿನ ವೈಸರಾಯರು ನನಗಾದ ಶಿಕ್ಷೆಯನ್ನು ರದ್ದುಮಾಡಿದರು. ನನ್ನ ಖಾಸಗಿ ವಿಚಾರಣಾ ಪ್ರಯತ್ನಗಳಿಗೆ ಅವಕಾಶ ಕೊಟ್ಟುದಲ್ಲದೆ ಸಹಕಾರವನ್ನೂ ನೀಡಬೇಕೆಂದು ಮ್ಯಾಜಿಸ್ಟ್ರೇಟರಿಗೆ ಆದೇಶ ಬಂತು. ಇದರ ಪರಿಣಾಮವಾಗಿ ಸರಕಾರದವರು ನೇಮಿಸಿದ ಸ್ಲೈ ಕಮಿಷನಿನಲ್ಲಿ ನಾನು ಸದಸ್ಯನಾದೆ. ವಿಚಾರಣೆ ನಡೆಯಿತು. ಒಂದು ಶತಮಾನದಿಂದ ನಡೆದುಬಂದ ಅನ್ಯಾಯವನ್ನು ಸರಿಪಡಿಸಲಾಯಿತು.

## ಮಹಿಳೆಯರಿಗೆ ಉಪದೇಶ

ಗಾಂಧೀಜಿಯವರು ಸಂಜೆ ಹವಾಸೇವನೆಗೆ ಹೊರಟಾಗ ಬತ್ತದ ಗದ್ದೆಯ ಅಂಚಿನಲ್ಲಿ ಕೆಲವು ಮಹಿಳೆಯರು ಅವರನ್ನು ಸಂದರ್ಶಿಸಿದರು. ಅವರ ಕಣ್ಣುಗಳಿಂದ ನೀರು ಧಾರೆಧಾರೆಯಾಗಿ ಹರಿಯುತ್ತಿತ್ತು. ತಮ್ಮ ಸಂಕಟವನ್ನು ಗಾಂಧೀಜಿಯವರ ಮುಂದೆ ಅವರು ತೋಡಿಕೊಂಡರು. ತಮ್ಮ ಸದ್ಯದ ಸ್ಥಿತಿಯನ್ನು ವರ್ಣಿಸಿದರು.

ಮುದುಕಿಯೊಬ್ಬಳು ತನ್ನ ಕಣ್ಣುಗಳಿಂದ ನೀರನ್ನು ಒರೆಸಿಕೊಳ್ಳುತ್ತ ಹೀಗೆಂದಳು: 'ಮಹಾತ್ಮಾಜೀ, ನಾವೇನು ಮಾಡಬೇಕು? ನಮಗೆ ದಯೆಯಿಟ್ಟು ತಿಳಿಸಿ. ನಮ್ಮ ಪ್ರಾಣಕ್ಕೂ ಆಸ್ತಿಗೂ ಅಪಾಯವೆಂದು ನಮಗೆ ತೋರಿದಾಗ ನಾವು ಹೇಗೆ ನಮ್ಮ ಹಳ್ಳಿಯಲ್ಲಿ ವಾಸಮಾಡಲು ಸಾಧ್ಯ?'

ನೌಖಾಲಿಗೆ ತಾನು ಬಂದದ್ದು, ಮೊದಲು ಅವರೆಲ್ಲರೂ ನಿರ್ಭಯತೆಯನ್ನು ಕಲಿಯಬೇಕೆಂದು ಗಾಂಧೀಜೀ ಹೇಳುತ್ತಿದ್ದರು. ಈ ಮಾತನ್ನು ಅವರು ಕೇಳಿ ಅವರೆಲ್ಲರೂ ನಿರ್ಭಯತೆಯಿಂದ ಇರುವುದಾದರೆ ಅವರೆಲ್ಲರೂ ಶಾಂತಿಯಿಂದ ಬಾಳಬಹುದು. ತನ್ನ ಕೈಯನ್ನು ಮೇಲಕ್ಕೆ ತೋರಿಸಿ ಗಾಂಧೀಜೀ ಹೇಳಿದರು: 'ದೇವರಲ್ಲಿ ನಂಬಿಕೆಯನ್ನಿಡಿ. ಪ್ರಾರ್ಥನೆ ಮಾಡಿ. ಅವನಲ್ಲಿ ಮಾತ್ರ ಭಯವನ್ನು ತಾಳಿ. ಪ್ರಪಂಚದಲ್ಲಿ ಬೇರೆ ಯಾವುದಕ್ಕೂ ಹೆದರಬೇಡಿ.'

## ಯೂರೋಪಿಗೆ ಸಂದೇಶ

ರೇಮಾ ಕಾರ್ಟಿಯರ್ ಎನ್ನುವ ಒಬ್ಬ ಫ್ರೆಂಚ್ ಪತ್ರಿಕಾಪ್ರತಿನಿಧಿಗಳು ಗಾಂಧೀಜಿಯವರನ್ನು ಭೇಟಿಮಾಡಲು ಒಂದು ಮಧ್ಯಾಹ್ನ ಶ್ರೀರಾಮಪುರಕ್ಕೆ ಬಂದಿದ್ದರು. ಅವರು ಕೇಳಿದ ಪ್ರಶ್ನೆಗಳಿಗೆ ಉತ್ತರ ಕೊಡುತ್ತ ಗಾಂಧೀಜೀ ಹೇಳಿದರು: 'ಯೂರೋಪಿನ ಜನರು ಹಿಂಸಾಮಾರ್ಗದಲ್ಲಿ ಮುಂದುವರಿಯುವುದಾದರೆ ಅವರು ನಾಶವಾಗುವುದು ಖಂಡಿತ.'

ರೇಮಾ ಕೇಳಿದರು: 'ಹಿಂಸಾಮಾರ್ಗದಲ್ಲಿಯೇ ಹುಟ್ಟಿ ಬೆಳೆದ ನಾವು ಹೇಗೆ ಅಹಿಂಸಾಮಾರ್ಗವನ್ನು ಅವಲಂಬಿಸಬೇಕು?'

ಅದಕ್ಕೆ ಉತ್ತರವಾಗಿ ಗಾಂಧೀಜೀ ಹೇಳಿದರು: 'ಹಿಟ್ಲರನ ತತ್ತ್ವ ಅದಕ್ಕಿಂತಲೂ ಕ್ರೂರವಾದ ತತ್ತ್ವವನ್ನು ಸೋಲಿಸಿದೆ. ಹೀಗೆ ಈ ಸರಪಳಿಗೆ ಕೊನೆಯಿಲ್ಲ. ಹೀಗೆಯೇ ಇದು ಮುಂದುವರಿಯುತ್ತ ಹೋಗುವುದು.'

'ಇದರ ಪರಿಹಾರ ಒಂದು ಹೊಸ ಮಾದರಿಯ ಶಿಕ್ಷಣದಿಂದ ಆದೀತೇ' ಎಂದು ರೇವಾ ಕೇಳಿದರು. ಒಂದು ಹೊಸ ಪ್ರಪಂಚದ ಸೃಷ್ಟಿಗೆ ಹೊಸ ರೀತಿಯ ಶಿಕ್ಷಣ ಆವಶ್ಯಕವೆಂದು ಗಾಂಧೀಜೀ ಹೇಳಿದರು. ಆಲ್ಡಸ್ ಹಕ್ಸ್‌ಲೀ ಅವರ ಪ್ರಸ್ತಾಪವನ್ನು ಮಾಡಿ ಈಗ ಯೂರೋಪಿನಲ್ಲಿ ಕ್ರಿಯಾತ್ಮಕವಾಗಿರುವ ಹೊಸ ವಿಚಾರಧಾರೆಗೆ ಅವರೊಂದು ನಿದರ್ಶನವೆಂದು ಹೇಳಿದರು. ಇಂದು ಇಂತಹವರು ಅಲ್ಪಸಂಖ್ಯಾತರಾಗಿರಬಹುದು; ಆದರೆ ಯೂರೋಪ್ ಖಂಡವು ಆತ್ಮಹತ್ಯದಿಂದ ಪಾರಾಗಬೇಕಾದರೆ ಅಹಿಂಸಾಮಾರ್ಗದಂತಹ ಮಾರ್ಗವನ್ನು ಹಿಡಿಯಬೇಕಾದೀತು.

## ಸಣ್ಣ ರಾಷ್ಟ್ರಗಳ ಉಳಿವು

'ಹಿಟ್ಲರನ ಆಸುರೀ ದಾಳಿಯನ್ನು ಅಹಿಂಸೆಯಿಂದ ನಿರ್ಮೂಲಮಾಡುವುದು ಹೇಗೆ?' ಎಂಬ ಪ್ರಶ್ನೆಗೆ, 'ಅದನ್ನೇ ನಾವು ಕಂಡುಹಿಡಿಯಬೇಕು' ಎಂದು ಗಾಂಧೀಜೀ ಉತ್ತರವಿತ್ತರು. 'ಹಾಗಿಲ್ಲದೆ ಈ ಹಿಂಸೆಯನ್ನು ಗೆಲ್ಲಲು ಅದಕ್ಕೂ ಪ್ರಬಲವಾದ ಹಿಂಸೆಯ ಪ್ರಯೋಗದ ಮೇಲೆ ನಾವು ಅವಲಂಬಿಸುವುದಾದರೆ, ಸಣ್ಣ ರಾಷ್ಟ್ರಗಳಿಗೆ ಉಳಿಗಾಲವಿಲ್ಲ. ಹಿಟ್ಲರನಂತಹವರ ದಾಳಿ ಬಂದಾಗ ಸಣ್ಣ ರಾಷ್ಟ್ರವು ಅದನ್ನೂ ಅದಕ್ಕೂ ಪ್ರಬಲವಾದ ಹಿಂಸೆಯನ್ನು ಎದುರಿಸಿ ತಲೆಬಾಗದೆ, ತನ್ನ ಪ್ರಾಣಹೋದರೂ ತನ್ನ ಗೌರವವನ್ನು ಕಾಪಾಡಿಕೊಳ್ಳುವ ಪಕ್ಷಕ್ಕೆ ಆ ರಾಷ್ಟ್ರ ಉಳಿಯಲು ಅವಕಾಶವುಂಟು. ಆದುದರಿಂದ ಎಷ್ಟೇ ದೊಡ್ಡ ಆಘಾತಗಳಾದರೂ ಅಹಿಂಸಾಮಾರ್ಗದಿಂದ ಮಾತ್ರ ಇಂತಹ ದಾಳಿಗಳಿಂದ ಪಾರಾಗುವ ಭರವಸೆ ಇರುವುದು. ಈ ಬಗೆಯ ಧೈರ್ಯವನ್ನೂ ಈ ಬಗೆಯ ಪ್ರತಿಭಟನೆಯನ್ನೂ ಬೆಳೆಸದಿದ್ದರೆ ಪ್ರಜಾಸತ್ತೆಯು ಉಳಿಯಲಾರದು.'

## ನಿರಾಶ್ರಿತರಿಗೆ ಉಪದೇಶ

ಡಿಸೆಂಬರ್ ೨೧ನೇ ದಿನಾಂಕ ಪ್ರಾರ್ಥನಾನಂತರ ಗಾಂಧೀಜಿಯವರು ಮಾಡಿದ ಭಾಷಣದ ಅಧಿಕೃತ ವರದಿ (ಎ.ಪಿ.ಐ. ಪ್ರಕಾರ) ಹೀಗಿದೆ :

ದಾನದ ವಿಚಾರದಲ್ಲಿ ಗಾಂಧೀಜಿಯವರು ಕೆಲವು ಅಭಿಪ್ರಾಯಗಳನ್ನು ತಾವು ಖಚಿತಪಡಿಸಿಕೊಂಡಿರುವುದಾಗಿ ನುಡಿದರು. ಉಚಿತವಾಗಿ ದಾನವನ್ನು ಕೊಡುವುದಾಗಲಿ ಪಡೆಯುವುದಾಗಲಿ ದೋಷವೆಂದು ಅವರ ಅಭಿಮತ. ನಮ್ಮ ದೇಶದಲ್ಲಿ ಅನೇಕ ವೇಳೆ ಅಧರ್ಮವು ಧರ್ಮದ ವೇಷವನ್ನು ಹಾಕಿ ಕೊಂಡು ಕಾಣಿಸಿಕೊಳ್ಳುತ್ತದೆ. ನಮ್ಮಲ್ಲಿ ೫೬ ಲಕ್ಷ ಭಿಕ್ಷುಕರಿರುವರೆಂದು ಹೇಳಿದಾರೆ. ಇವರಲ್ಲಿ ಅನೇಕರು ಯೋಗ್ಯರಲ್ಲ. ಈ ಸಂಕಟಮಯವಾದ ದೇಶದಲ್ಲಿ ಅಸ್ಪೃಶ್ಯತೆಯಂತಹ ಒಂದು ಅನಿಷ್ಟ ಸಂಪ್ರದಾಯಕ್ಕೆ ಧರ್ಮದ ಮುದ್ರೆಯನ್ನು ಒತ್ತಿದಾರೆ.

ನಿರಾಶ್ರಿತರಿಗೆ ಪರಿಹಾರವನ್ನು ಒದಗಿಸುವುದು, ಅವರಿಗೆ ವಸತಿಗಳನ್ನು ಏರ್ಪಾಡುಮಾಡುವುದು ಮಹಾ ದೊಡ್ಡ ಸಮಸ್ಯೆಯಾಗಿಬಿಟ್ಟಿದೆ. ದೇಶಾದ್ಯಂತ ಜನರು ನೌಖಾಲಿ ಜನರ ನೆರವಿಗೆ ಬರಲು ಕಾತರರಾಗಿದಾರೆ. ಧನಸಹಾಯ, ಬೇರೆ ರೀತಿಯ ಸಹಾಯಗಳನ್ನು ಒದಗಿಸಲು ಸಿದ್ಧರಾಗಿದಾರೆ. ಆದರೆ ಇದರ ಪರಿಣಾಮವಾಗಿ ಇಂತಹ ದಾನಗಳನ್ನು ಸ್ವೀಕರಿಸಿ ಅವುಗಳ ಮೇಲೆಯೇ ಅವಲಂಬಿಸುವ ಮನೋಧರ್ಮವನ್ನು ನೌಖಾಲಿಯ ಜನರು ಬೆಳೆಸಿಕೊಳ್ಳುವ ಸಂಭವವಿದೆ. ಇಂತಹ ಮನೋಧರ್ಮವು ಬೆಳೆಯುವಂತೆ ಬಿಡಬಾರದು. ಹಾಗೂ ದಾನಿಗಳು ಈ ರೀತಿಯಲ್ಲಿ ಪುಣ್ಯಸಂಪಾದನೆ ಮಾಡುತ್ತೇವೆಯೆನ್ನುವ ಅಲ್ಪತೃಪ್ತಿಗೂ ಅವಕಾಶ ಕೊಡಬಾರದು.

ಈ ನಿರಾಶ್ರಿತರ ವಿಚಾರದಲ್ಲಿ ಸರಕಾರ ಯಾವ ದೃಷ್ಟಿಯಿಂದ ಪರಿಹಾರ ವನ್ನು ಕೈಗೊಳ್ಳಬೇಕು ? ಖಾಸಗಿ ಸಂಸ್ಥೆಗಳು ಏನು ಮಾಡಬೇಕೆಂಬ ಪ್ರಶ್ನೆ ಯನ್ನು ಗಾಂಧೀಜೀ ಪ್ರಸ್ತಾಪಿಸಿದರು. ಅನೇಕ ವೇಳೆ ಈ ಆಶ್ರಿತರ ಬಿಡಾರ ಗಳಿಗೆ ಬಂದಿರುವವರು ಹಾಗೆ ಅಲ್ಲಿ ಬಂದುದಕ್ಕೆ ಅವರು ಹೊಣೆಗಾರರಲ್ಲ. ಅವರ ಮನೆಗಳು ಸುಟ್ಟು ಬೂದಿಯಾದುವು. ಅವರಿಗೆ ನೆರಳಿಲ್ಲದೆ ಅಲ್ಲಿಗೆ ಬಂದಿರುವರು ; ಮತ್ತೆ ಕೆಲವರು ಅವರಿಗೆ ಮನೆಗಳಿದ್ದರೂ ಆಸ್ತಿಪಾಸ್ತಿಗಳಿಲ್ಲವೂ

ಅಪಹಾರವಾಯಿತು ; ಮತ್ತೆ ಕೆಲವರು ಇಲ್ಲಿ ಬಂದುದಕ್ಕೆ ಕಾರಣ ತಮ್ಮ ಸ್ಥಳ ಕ್ಷೇಮವಾಗಿಲ್ಲದುದರಿಂದ. ಸರಕಾರದವರು ಈ ಕಾರಣಗಳನ್ನು ಪರಿಶೀಲಿಸಿ ಪರಿಹಾರ ಮಾಡಬೇಕು. ಅವರ ಯೋಗಕ್ಷೇಮಕ್ಕೆ ಏರ್ಪಾಡುಮಾಡಬೇಕು.

ಪರಿಸ್ಥಿತಿ ಸುಧಾರಿಸುವವರೆಗೂ ರೇಷನ್ ಪದ್ಧತಿಯನ್ನು ನಿಲ್ಲಿಸಬಾರದು. ಆಶ್ರಿತರು ತಮ್ಮ ಮನೆಗಳಿಗೆ ಹಿಂತಿರುಗಿ ಹೋದರೆ ಹೀಗೆ ಕೊಡಬೇಕಾಗಿಲ್ಲ. ತಮ್ಮ ಮನೆಗಳಿಗೆ ಕ್ಷೇಮವಾಗಿ ಹೋಗಿ ಸೇರಿಕೊಳ್ಳುವ ಮುನ್ನ ಅವರು ಬಹಳ ತೊಂದರೆಗಳಿಗೂ, ಸಾವಿಗೂ ಸಹ ಗುರಿಯಾಗುವ ಪಕ್ಷಕ್ಕೆ ಸರಕಾರವಿದ್ದೂ ಏನು ಪ್ರಯೋಜನ ? ತಮ್ಮ ತಮ್ಮ ರಕ್ಷಣೆಯನ್ನು ತಾವೇ ನೋಡಿಕೊಳ್ಳುವುದು, ಎಂತಹ ಅಪಾಯಗಳು ಬಂದರೂ ಅವನ್ನು ತಮ್ಮ ಸ್ವಶಕ್ತಿಯಿಂದ ಎದುರಿಸುವುದು—ಇದು ಒಳ್ಳೆಯ ಉತ್ತಮ ಅರಾಜಕಸ್ಥಿತಿಯೇ ಆಗುವುದು. ಆದರೆ ಈಗಿನ ಪರಿಸ್ಥಿತಿಯಲ್ಲಿ ಆವಶ್ಯಕವಾದ ಈ ಸಾಮಾಜಿಕ ಸೇವೆಯನ್ನು ಸರಕಾರವೇ ವ್ಯವಸ್ಥೆಮಾಡಿ ನಿರ್ವಹಿಸಬೇಕು.

## ಸಾಕಷ್ಟು ರಕ್ಷಣೆ ಬೇಕು

ಸಾಕಷ್ಟು ರಕ್ಷಣೆ ಒದಗಿಸಬೇಕು. ಮತ್ತೆ ಜನರು ತಮ್ಮ ನಿತ್ಯಜೀವನದ ಕೆಲಸಕಾರ್ಯಗಳನ್ನು ಯಾವ ಕಳವಳವೂ ಇಲ್ಲದೆ ನಡೆಯಿಸಿಕೊಂಡು ಹೋಗುವಂತೆ ಶಾಂತಮಯವಾದ ವಾತಾವರಣವನ್ನು ಕಲ್ಪಿಸಬೇಕು. ಈ ಪರಿಸ್ಥಿತಿ ಏರ್ಪಡದೆ ಇರುವವರೆಗೂ ಜನರ ಕಷ್ಟಗಳಿಗಾಗಿ ಮಾಡುತ್ತಿರುವ ಪರಿಹಾರ ಕಾರ್ಯಗಳು ಮುಂದುವರಿಯಬೇಕು.

ಆದರೆ ಜನರಿಗೆ ಸಹಾಯವನ್ನು ನೀಡುವ ಖಾಸಗಿ ಸಾರ್ವಜನಿಕ ಸಂಸ್ಥೆಗಳ ಮಾತು ಬೇರೆ. ಯಾರೇ ಆಗಲಿ ಸಾರ್ವಜನಿಕರು ನೀಡುವ ಭಿಕ್ಷೆಯ ಮೇಲೆ ಅವಲಂಬಿಸಿರುವುದು ತಪ್ಪೆಂದು ಗಾಂಧೀಜಿಯ ಅಭಿಪ್ರಾಯ. ದಕ್ಷಿಣ ಆಫ್ರಿಕದಲ್ಲಿ ಸತ್ಯಾಗ್ರಹ ಆಂದೋಲನವು ನಡೆಯುತ್ತಿದ್ದಾಗ ಸತ್ಯಾಗ್ರಹಿಗಳ ಖರ್ಚಿಗಾಗಿ ಬೇಕಾದಷ್ಟು ದ್ರವ್ಯಸಹಾಯ ದೊರೆಯಿತು. ಟ್ರಾನ್ಸ್‌ವಾಲಿನಲ್ಲಿ ಲಾಲಿ ಎನ್ನುವ ಸ್ಥಳದ ಬಳಿ 'ಟಾಲ್‌ಸ್ಟಾಯ್ ಫಾರ್ಮ್' ಎಂಬ ಆಶ್ರಮವೊಂದನ್ನು ಸ್ಥಾಪಿಸಲಾಯಿತು. ಇಲ್ಲಿ ಸತ್ಯಾಗ್ರಹಿಗಳ ಕುಟುಂಬಗಳೂ

ಪರಿವಾರವೂ ಬಿಡಾರ ಮಾಡಿದರು. ಮತ್ತು ತಮ್ಮ ಜೀವನನಿರ್ವಹಣಕ್ಕಾಗಿ ತಮ್ಮ ಶಕ್ತಿಯನ್ನು ಪೂರ್ತಿಯಾಗಿ ವಿನಿಯೋಗಿಸಿ ಕೆಲಸಮಾಡಿದರು. ಇದರ ಪರಿಣಾಮವಾಗಿ ಆಂದೋಲನವು ಮುಗಿದನಂತರ ಹೇರಳವಾದ ದ್ರವ್ಯವನ್ನು ಸತ್ಯಾಗ್ರಹ ಸಂಸ್ಥೆ ಹಿಂದಕ್ಕೆ ಕೊಡಲು ಸಾಧ್ಯವಾಯಿತು.

ಈ ತತ್ತ್ವಗಳನ್ನು ಅನುಸರಿಸಿ ಇಲ್ಲಿ ಕೆಲಸ ಮಾಡುತ್ತಿರುವ ಸಾರ್ವಜನಿಕ ಸಂಸ್ಥೆಗಳು ತಾವು ಕೆಲಸಮಾಡದೆ ಒಂದು ಹೊತ್ತು ಊಟವನ್ನು ಮಾಡುವುದು ಅಗೌರವವೆಂಬ ವಿಷಯವನ್ನು ಇಲ್ಲಿನ ನಿರಾಶ್ರಿತರಿಗೆ ಸ್ಪಷ್ಟವಾಗಿ ತಿಳಿಸಬೇಕು. ದುಡಿಮೆ ಅನಿಷ್ಟವೆಂಬ ಭಾವನೆ ಹೋಗಬೇಕು. ನಮಗೆ ಆಕಸ್ಮಿಕವಾಗಿ ಒದಗುವ ಪರಿಸ್ಥಿತಿಗಳ ಬದಲಾವಣೆಗಳಿಗೆ ಅನುಗುಣವಾಗಿ ನಮ್ಮ ಜೀವನ ವನ್ನು ಮಾರ್ಪಡಿಸಿಕೊಳ್ಳಲು ನಾವೆಲ್ಲರೂ ಸಿದ್ಧರಾಗಬೇಕು. ಹೀಗೆ ಮಾಡಿದ್ದೇ ಆದರೆ ನಾವು ಕ್ರಮೇಣ ನಿರ್ಭಯಪ್ರವೃತ್ತಿವುಳ್ಳವರಾಗುವೆವು. ನಮ್ಮ ರಾಷ್ಟ್ರದ ಶೀಲ ಬೆಳೆಯುವುದು.

ಆಶ್ರಿತರಿಗೆ ಒಂದು ಮಾತು: ಅವರು ಶ್ರೀಮಂತರೇ ಆಗಲಿ ಬಡವರೇ ಆಗಲಿ, ಸರಕಾರದವರು ಒದಗಿಸುತ್ತಿರುವ ಪಡಿತರ ಭಿಕ್ಷೆಯಿಂದ ತಾವು ಜೀವನ ನಿರ್ವಹಣ ಮಾಡುವುದು ತಮ್ಮ ಆತ್ಮಗೌರವಕ್ಕೆ ಯೋಗ್ಯವಲ್ಲವೆಂದು ಅವರು ಸರಕಾರದ ಅಧಿಕಾರಿಗಳಿಗೆ ತಿಳಿಸಬೇಕು. ಶ್ರೀಮಂತರೇ ಆಗಲಿ ಬಡವರೇ ಆಗಲಿ, ಅವರ ಬಳಿ ಈಗ ಏನೂ ಉಳಿದಿರುವುದಿಲ್ಲ. ಅವರಿಗೆ ಆಹಾರ, ವಸ್ತ್ರ, ವಸತಿ, ವೈದ್ಯಸಹಾಯ ಇವೆಲ್ಲವೂ ಬೇಕು. ಈ ಆವಶ್ಯಕತೆಗಳನ್ನು ಪೂರೈಸಲು ಸರಕಾರದವರು ಬದ್ಧರಾಗಿದಾರೆ—ಹೀಗೆ ನಿರಾಶ್ರಿತರು ನಿರೀಕ್ಷಿಸುವುದು ನ್ಯಾಯವೆ. ಆದರೆ ಈ ಸಹಾಯವನ್ನು ಪಡೆದು ಅವರಲ್ಲಿ ಆರೋಗ್ಯವಂತ ರಾಗಿರುವ ಗಂಡು, ಹೆಣ್ಣು, ಬಾಲಕ, ಬಾಲಕಿ ತಮ್ಮ ಶಕ್ತ್ಯನುಸಾರ ಶ್ರಮಿಸದೆ ಇದ್ದರೆ, ಅವರು ಸಮಾಜದ ಸೊತ್ತನ್ನು ಅಪಹರಿಸಿದಂತೆ ಆಗುವುದು. ಆದುದ ರಿಂದ ಇವರೆಲ್ಲರಿಗೂ ಈ ಜನರು ಮಾಡಬಹುದಾದ ಸೂಕ್ತವಾದ ಕೆಲಸಗಳನ್ನು ಸರಕಾರದವರು ಒದಗಿಸಬೇಕೆಂದು ಗಾಂಧೀಜೀ ಸಲಹೆಯನ್ನಿತ್ತರು.

(ಹರಿಜನ, ೧೯-೧-೧೯೪೭)

## ಯಾವ ಇತಿಮಿತಿಯೂ ಇಲ್ಲದ ಅಹಿಂಸೆ

ತಮ್ಮ ಪ್ರಾರ್ಥನಾನಂತರದ ಪ್ರವಚನದಲ್ಲಿ ಗಾಂಧೀಜೀ ಒಂದು ಪ್ರಶ್ನೆಯನ್ನು ಕುರಿತು ಹೀಗೆ ಹೇಳಿದರು :

ಯಾವ ಪ್ರಾಂತ್ಯಗಳಿಗೆ ಧೈರ್ಯವಿದೆಯೊ ಆ ಪ್ರಾಂತ್ಯಗಳು ತಮ್ಮ ರಾಜ್ಯಾಂಗ ರಚನೆಯನ್ನು ಮಾಡಿಕೊಂಡು, ಸ್ವಾತಂತ್ರ್ಯ ಬಂದಿರುವುದಕ್ಕೆ ಗುರುತಾಗಿ ಬ್ರಿಟಿಷ್ ಸೈನ್ಯ ತಮ್ಮ ಪ್ರದೇಶವನ್ನು ಬಿಟ್ಟು ಹೊರಡಬೇಕೆಂದು ಆ ಪ್ರಾಂತ್ಯಗಳನ್ನು ನೀವು ಕೇಳಿದೀರಿ. ಈ ಸ್ವತಂತ್ರ ಪ್ರಾಂತ್ಯಗಳಲ್ಲಿ ಮತದಾನ ಯಾವ ರೀತಿಯಲ್ಲಿ ನಡೆಯಬೇಕೆನ್ನುವಿರಿ ? ಶಾಸನಸಭೆಗಳಲ್ಲಿ ಕೋಮುವಾರು ಪ್ರಾತಿನಿಧ್ಯಕ್ಕೆ ಬದಲಾಗಿ ಜನರ ವೃತ್ತಿಗಳಿಗನುಸಾರವಾದ ಪ್ರಾತಿನಿಧ್ಯವಿರಬೇಕೆನ್ನುವಿರಾ ? ಅಲ್ಪಸಂಖ್ಯಾತ ಕೋಮುಗಳಿಗೆ ಅಥವಾ ಬೇರೆ ಬೇರೆ ವೃತ್ತಿಗಳಿಗನುಸರಿಸುವ ಗುಂಪುಗಳಿಗೆ ಕೆಲವು ಸ್ಥಾನಗಳನ್ನು ಮೀಸಲಾಗಿಟ್ಟು ಅವಿಭಕ್ತ ಮತದಾನಕ್ಷೇತ್ರಗಳಿರಬೇಕೆನ್ನುವಿರಾ ? ತಾತ್ಕಾಲಿಕವಾಗಿ ಯಾವ ಗುಂಪಿಗಾದರೂ ರಕ್ಷಣೆಯನ್ನು ಒದಗಿಸಲು ಹೆಚ್ಚು ಪ್ರಮಾಣದ ಪ್ರಾತಿನಿಧ್ಯವಿರಬೇಕೆ ? ಹಾಗಾದರೆ ಯಾವ ಗುಂಪಿಗೆ ? ಅವಿಭಕ್ತ ಮತದಾನಕ್ಷೇತ್ರವಿರಬೇಕೆ ? ಎಲ್ಲ ಪ್ರಾಪ್ತವಯಸ್ಕರಿಗೂ ಮತದಾನ ಮಾಡುವ ಅಧಿಕಾರವಿರಬೇಕೆ ?

ಗಾಂಧೀಜಿಯ ಉತ್ತರ ನಿಸ್ಸಂಶಯವಾಗಿತ್ತು. ಯಾವ ಪ್ರಾಂತ್ಯವೇ ಆಗಲಿ ತನ್ನ ಸ್ವಂತ ರಾಜ್ಯವಿಧಾನವನ್ನು ಮಾಡಿಕೊಂಡು ಅದನ್ನು ಜಾರಿಗೆ ತರಬಹುದು. ಆದರೆ ಆ ಪ್ರಾಂತ್ಯದಲ್ಲಿ ಈ ತೀರ್ಮಾನಕ್ಕೆ ಕೇವಲ ಬಹುಮತವಿದ್ದರೆ ಸಾಲದು, ಪ್ರಚಂಡವಾದ ಬಹುಮತವಿರಬೇಕು. ತಮ್ಮ ಎದುರಾಳಿಗಳನ್ನು ಕೊಲ್ಲುವುದಕ್ಕೆ ಬದಲಾಗಿ ತಾವೇ ಪ್ರಾಣವನ್ನರ್ಪಿಸಲು ಸಿದ್ಧರಾಗಿರುವ ಸ್ವಾತಂತ್ರ್ಯದ ಪ್ರೇಮಿಗಳನ್ನು ಎದುರಿಸುವ ಶಕ್ತಿ ಈ ಭೂಮಂಡಲದಲ್ಲಿಲ್ಲ. ಹಿಂದೆ ಒಂದು ಕಾಲದಲ್ಲಿ ಈ ಸಿದ್ಧಾಂತವನ್ನು ಅವರು ಪ್ರತಿಪಾದಿಸಿದರು. ಆದರೆ ಇಂದು ಅದಕ್ಕೂ ಮುಂದೆ ಸಾಗಿದ್ದರು. ಕ್ಯಾಬಿನೆಟ್ ನಿಯೋಗದ ಅಧಿಕೃತ ಪ್ರಕಟನೆಯ ವಿಚಾರದಲ್ಲಿ ಒಂದು ಅನುಕೂಲವಾದ ವ್ಯಾಖ್ಯೆಯನ್ನು ಅವರು ಮಾಡಲು ಬಯಸಿದರು. ಒಂದೇ ಒಂದು ಪ್ರಾಂತ್ಯವಾದರೂ ಅದರ ಇಚ್ಛೆಗೆ ವಿರುದ್ಧವಾಗಿ ನಡೆದುಕೊಳ್ಳಲು ಸಾಧ್ಯವಿಲ್ಲವೆಂದು ಅವರಿಗೆ ತೋರಿತು. ಇದು

ಒಂದು ಪ್ರಾಂತ್ಯದ—ಉದಾಹರಣೆಗೆ—ಬಂಗಾಳದ ಮಾತಾದರೆ—ಸಂವಿಧಾನ ಸಭೆಯಲ್ಲಿ ಅನೇಕ ಪ್ರಾಂತ್ಯಗಳು ಪ್ರತಿನಿಧಿಗಳಾಗಿ ಭಾಗವಹಿಸುತ್ತಿವೆ. ಇಂತಹ ಸಭೆಯ ಇಚ್ಛೆಗೆ ವಿರುದ್ಧವಾಗಿ ನಡೆಯುವುದು ಹೇಗೆ ಸಾಧ್ಯವಾದೀತು? ಭಾರತದ ಸ್ವಾತಂತ್ರ್ಯದ ವಿಷಯದಲ್ಲಿ ಬ್ರಿಟಿಷ್ ಸರಕಾರವು ಏನು ಹೇಳುತ್ತದೆ ಎನ್ನುವ ವಿಚಾರದಲ್ಲಿ ಅವರು ಉದಾಸೀನರಾಗಿದ್ದರು. ಈ ವಿಷಯ ಜನತೆಯ ಪ್ರಶ್ನೆ. ಪರಕೀಯರ ಶಕ್ತಿಯ ಮೇಲೆ ಅವಲಂಬಿಸಿದುದಲ್ಲ. ಸರಕಾರದ ಅಧಿಕೃತ ಪ್ರಕಟನೆ ವಾಪಸ್ಸು ಹೋದರೂ ಭಾರತವು ಏನು ಮಾಡಬೇಕೆನ್ನುವುದೂ ಈಗ ಪ್ರಶ್ನೆಯಾಗಿಲ್ಲ. ಎಂತಹ ಕಷ್ಟಕಾರ್ಪಣ್ಯಗಳನ್ನೂ ಭಾರತವು ಅನುಭವಿಸಬಲ್ಲದು. ಪಂಡಿತ ನೆಹರೂ ಮತ್ತು ಅವರ ಸ್ನೇಹಿತರು ಅಧಿಕಾರವನ್ನು ವಹಿಸಿಕೊಂಡಾಗ ಯಾವ ಸುಖವೂ ಇರದೆ ಕೇವಲ ಕ್ಲೇಶಕ್ಕೆ ಅವರು ಗುರಿಯಾಗುವರೆಂದು ಗಾಂಧೀಜೀ ಹೇಳಿದ್ದರು. ತಮ್ಮ ಗುರಿ ಪೂರ್ಣ ಸ್ವಾತಂತ್ರ್ಯ—ಏನೇ ಸಂಭವಿಸಲಿ ಇದನ್ನು ಸಾಧಿಸಿಯೇ ತೀರಬೇಕು. ಜನರು ಯಾವ ಬುದ್ಧಿಭೇದವೂ ಇಲ್ಲದೆ ಸರಳವಾದ ರೀತಿಯಲ್ಲಿ ಅಹಿಂಸಾಮಾರ್ಗವನ್ನು ದೃಢವಾಗಿ ನಂಬಿದರೇನೇ ಗಾಂಧೀಜೀ ಭರವಸೆಯಿಂದ ಮಾತನಾಡಬಲ್ಲರು. ಇದು ಸ್ವಾಭಾವಿಕ. ಆದರೆ ಇಂಗ್ಲೀಷ್ ಜನರನ್ನು ಹಿಂಸೆಯ ಮೂಲಕ ಓಡಿಸಿಬಿಡಬಹುದೆಂದು ಜನರು ಭಾವಿಸಿದರೆ, ಈ ಭಾವನೆ ದೊಡ್ಡ ತಪ್ಪಾದೀತು. ಇಂಗ್ಲೀಷ್ ಜನರ ಧೈರ್ಯವನ್ನೂ ಪಟ್ಟನ್ನೂ ಅವರು ಅರಿಯರು. ಅವರು ಶಸ್ತ್ರಬಲಕ್ಕೆ ಹೆದರುವವರಲ್ಲ. ಆದರೆ ಏಟಿಗೆ ಏಟನ್ನು ಕೊಡಲು ನಿರಾಕರಿಸುವ ಅಹಿಂಸೆಯ ಶೌರ್ಯವನ್ನು ಅವರು ಎದುರಿಸಲಾರರು. ಅಹಿಂಸೆಗಿಂತಲೂ ಪ್ರಬಲವಾದ ಶಕ್ತಿ ಗಾಂಧೀಜೀಗೆ ತಿಳಿಯದು. ಇನ್ನೂ ಭಾರತಕ್ಕೆ ಸ್ವಾತಂತ್ರ್ಯ ಲಭಿಸದಿದ್ದರೆ—ಇದಕ್ಕೆ ಕಾರಣವಿಷ್ಟೆ—ಸಾಕಷ್ಟು ಪ್ರಮಾಣದಲ್ಲಿ ಜನರು ಅಹಿಂಸೆಯನ್ನು ಬೆಳೆಯಿಸಿಕೊಳ್ಳಲಿಲ್ಲವೆಂದೇ ಗಾಂಧೀಜಿಯ ಖಚಿತವಾದ ಅಭಿಪ್ರಾಯ. ಏನೇ ಇರಲಿ, ಬ್ರಿಟಿಷ್ ಸರಕಾರದ ಪ್ರಕಟನೆ ಈವರೆಗೂ ಭಾರತವು ಬೆಳೆಯಿಸಿರುವ ಅಹಿಂಸಾಶಕ್ತಿಗೆ ಉತ್ತರವೆಂದು ಗಾಂಧೀಜಿಯ ಅಭಿಪ್ರಾಯ.

ಹೋದ ಮಹಾಯುದ್ಧವನ್ನು ಕುರಿತು ಅವರು ವಿಚಾರಮಾಡಿದರೆ ಶತ್ರುರಾಷ್ಟ್ರಗಳು ನಾಶಹೊಂದಿದ್ದರೂ ಮಿತ್ರರಾಷ್ಟ್ರಗಳ ಜಯವೂ ಕೇವಲ ಪೊಳ್ಳಾದು

ದೆಂದು ಅವರಿಗೆ ಚೆನ್ನಾಗಿ ವೇದ್ಯವಾಗುವುದು. ಮನಸ್ವಿಯಾಗಿ ಮಾನವಪ್ರಾಣ ನಾಶವಾಯಿತು; ಮಿತ್ರ ರಾಷ್ಟ್ರಗಳೂ, ಶತ್ರುರಾಷ್ಟ್ರಗಳೂ ಎರಡರಲ್ಲಿಯೂ ಪ್ರಪಂಚದ ಆಹಾರ ಮತ್ತು ವಸ್ತ್ರದ ಸಂಗ್ರಹವನ್ನು ಬರಿದು ಮಾಡಲಾಯಿತು. ಮಿತ್ರರಾಷ್ಟ್ರಗಳು ಹಟಹಿಡಿದು ಸೋತ ರಾಷ್ಟ್ರಗಳನ್ನು ಗುಲಾಮರನ್ನಾಗಿ ಮಾಡಬೇಕೆಂದು ಬಯಸಿದವು. ಈ ಬಯಕೆಯೂ ವ್ಯರ್ಥವಾಯಿತು. ಯಾರನ್ನು ಹೆಚ್ಚಾಗಿ ಕನಿಕರಿಸಬೇಕೊ—ಮಿತ್ರರನ್ನೊ ಶತ್ರುಗಳನ್ನೊ ಎಂಬುದೇ ತಿಳಿಯದಾಯಿತು. ಆದುದರಿಂದಲೇ ಜನರು ಏನೇ ಸಂಭವಿಸಲಿ ಅದನ್ನು ಶೌರ್ಯದಿಂದ ಎದುರಿಸಿ, ಅಹಿಂಸಾಮಾರ್ಗವನ್ನು ಅವಲಂಬಿಸಿ, ಅದರ ಪರಿಣಾಮವಾಗಿ ಒದಗುವ ಮನೋಧೈರ್ಯವನ್ನು ತಾಳಬೇಕೆಂದು ಗಾಂಧೀಜೀ ಬಿನ್ನವಿಸಿಕೊಂಡರು. ಈ ಅಹಿಂಸೆಯ ತಾತ್ತ್ವಿಕ ಅನುಷ್ಠಾನವಾಗದಿದ್ದರೂ ಕೇವಲ ಆಚರಣೆಯು ನಿಜವಾದ ನೀತಿಯಾದರೂ ಸಾಕು.

ಮತದಾನದ ವಿಚಾರದಲ್ಲಿ, ಎಲ್ಲ ಪ್ರಾಪ್ತವಯಸ್ಕರು—ಅಂದರೆ ಇಪ್ಪತ್ತೊಂದು ಅಥವಾ ಹದಿನೆಂಟು ವಯಸ್ಸಿಗೆ ಮೇಲ್ಪಟ್ಟವರು—ಮತದಾರರಾಗಬೇಕೆಂದು ಗಾಂಧೀಜಿಯವರ ತೀವ್ರವಾದ ಅಭಿಮತ. ತನ್ನಂತಹ ಮುದುಕರನ್ನು ಈ ಪಟ್ಟಿಯಿಂದ ತೆಗೆದುಹಾಕುವುದು ಅವರಿಗೆ ಸಮ್ಮತವೆ. ಈ ಮುದುಕರು ಮತ ಕೊಡುವುದರಿಂದ ಏನು ಪ್ರಯೋಜನ? ಭಾರತವಾಗಲಿ ಪ್ರಪಂಚವಾಗಲಿ ಸ್ಮಶಾನಯಾತ್ರೆಗೆ ಸಿದ್ಧರಾಗಿರುವ ಮುದುಕರಿಗೆ ಸೇರಿದುದಲ್ಲ. ಅವರು ಮೃತ್ಯುವಿಗೆ ಮೀಸಲು; ಜೀವನ ಯುವಕರಿಗೆ ಮೀಸಲು. ಆದುದರಿಂದ ಐವತ್ತು ವರ್ಷವನ್ನು ದಾಟಿದವರು—ಹದಿನೆಂಟು ವರ್ಷ ಆಗದವರು—ಈ ಎರಡು ಗುಂಪುಗಳನ್ನೂ ಅವರು ಮತದಾರರ ಪಟ್ಟಿಯಿಂದ ತೆಗೆದುಹಾಕಬಹುದೆಂದು ಸಲಹೆ ಮಾಡುವರು. ಹುಚ್ಚರನ್ನೂ ಪುಂಡರನ್ನೂ ಅಂತೂ ತೆಗೆದುಹಾಕಲೇಬೇಕು ಮತ್ತು ಕೋಮುವಾರು ಮತದಾನ ಭಾರತದಲ್ಲಿರಬಾರದೆಂದು ಅವರ ಇಚ್ಛೆ. ಮತದಾರರ ಕ್ಷೇತ್ರ ಅವಿಭಕ್ತವಾಗಿರಬೇಕು; ಮೀಸಲಾದ ಸ್ಥಾನಗಳಿರಬಹುದು. ಮತ್ತು ಮುಸ್ಲಿಮರಿಗಾಗಲಿ, ಸಿಕ್ಖರಿಗಾಗಲಿ, ಪಾರಸೀಯವರಿಗಾಗಲಿ ಅವರಿಗೆ ವಿಶೇಷ ರಿಯಾಯಿತಿಗಳಿರಬಾರದೆಂದು ಗಾಂಧೀಜಿಯ ಅಭಿಪ್ರಾಯ. ಹಾಗೆ ರಿಯಾಯಿತಿ ಇರಬೇಕಾದರೆ ಕುಷ್ಠರೋಗಿಗಳಿಗಿರಲಿ. ಇವರು ಸಮಾಜವು ನಡೆಸುವ ಅಪರಾಧ, ಅತ್ಯಾಚಾರಗಳ ಫಲ. ಸಮಾಜ

ದಲ್ಲಿರುವ ನೀತಿಭ್ರಷ್ಟರು ತಾವಾಗಿ ತೊಲಗಿದರೆ, ದೇಹಭ್ರಷ್ಟರಾದ ಈ ಕುಷ್ಠ ರೋಗಿಗಳು ಇರಲೇ ಆರರು. ಪಾಪ, ಆಧುನಿಕ ನಾಗರಿಕ ಪ್ರಪಂಚವನ್ನು ಕಂಡು ಹೆದರಿ ತಮ್ಮ ಸ್ವಂತಕ್ಕೆ ಯಾವ ಹಕ್ಕನ್ನು ಕೇಳಲೂ ಸಹ ಅವರಿಗೆ ಧೈರ್ಯವಿಲ್ಲ. ಅವರಿಗೆ ಸರಿಯಾದ ಶಿಕ್ಷಣ ದೊರೆತರೆ ಅವರು ಆದರ್ಶ ಪ್ರಜೆಗಳಾಗುವರು. ಏನೇ ಇರಲಿ, ಪ್ರಾಪ್ತವಯಸ್ಕರ ಮತದಾನಪದ್ಧತಿಯ ಜೊತೆಗೆ ಸಾರ್ವತ್ರಿಕ ಶಿಕ್ಷಣ ಪ್ರಸಾರವಾಗಬೇಕೆಂದು ಗಾಂಧೀಜಿಯ ಬಿನ್ನಹ. ಶಿಕ್ಷಣವೆಂದರೆ ಓದುಬರಹ ಮಾತ್ರವಲ್ಲ—ಇದು ಕೇವಲ ಸಲಕರಣೆ ಮಾತ್ರ. ಇಂಗ್ಲೀಷ್ ಶಿಕ್ಷಣದಿಂದ ನಮ್ಮ ಮನಸ್ಸಿನ ಕ್ಷೋಭೆಯುಂಟಾಗಿದೆಯೆಂದು ಗಾಂಧೀಜಿಯ ದೃಢವಾದ ನಂಬಿಕೆ. ಅದು ನಮ್ಮನ್ನು ನಿರ್ವೀರ್ಯರನ್ನಾಗಿ ಮಾಡಿ, ವೀರಪ್ರಜೆಗಳಾಗದಂತೆ ಮಾಡಿದೆ. ತಮ್ಮ ಸ್ವಂತ ಭಾಷೆಗಳಲ್ಲಿಯೇ ಎಲ್ಲರಿಗೂ ಸಾಕಷ್ಟು ಜ್ಞಾನ ಒದಗಬೇಕು. ಈ ಭಾಷೆಗಳೆಲ್ಲವೂ ಪುಷ್ಟವಾದುವು. ಯಾವ ಜನಾಂಗವೇ ಆಗಲಿ ಇವುಗಳ ಬಗೆಗೆ ಹೆಮ್ಮೆಯನ್ನು ತಾಳಬಹುದು. ಅವರಲ್ಲಿ ಸತ್ಯದ ನಿಷ್ಠೆಯೂ ಶ್ರದ್ಧೆಯೂ ಇದ್ದ ಪಕ್ಷಕ್ಕೆ ಪ್ರಜಾಧರ್ಮವನ್ನು ಜನಸಾಮಾನ್ಯರಿಗೆ ಕಲಿಸಲು ಬಹಳ ಕಾಲ ಬೇಕಾಗಲಾರದು.

(ಹರಿಜನ, ೨-೩-೧೯೪೭)

## ಕೆಲವು ಮುಖ್ಯ ಪ್ರಶ್ನೆಗಳು

**ಪ್ರಶ್ನೆ :** ಹಿಂದೂ-ಮುಸಲ್ಮಾನರಲ್ಲಿ ಪರಸ್ಪರ ಸೌಹಾರ್ದವೂ ಶಾಂತಿಯೂ ಇಲ್ಲದೆ ಇರುವವರೆಗೆ ನೀವು ಇಲ್ಲಿಯೇ ನೆಲೆಸಿರುವುದಾಗಿ ಹೇಳಿರುವಿರಿ! ಅಗತ್ಯವಿದ್ದರೆ ಇಲ್ಲಿ ಸಾಯುವಿರೆಂದೂ ಹೇಳಿರುವಿರಿ. ಇಷ್ಟು ದೀರ್ಘಕಾಲ ನೀವಿಲ್ಲಿರುವುದರಿಂದ ಭಾರತದೇಶೀಯರ ಮತ್ತು ಪ್ರಪಂಚದ ಜನರ ಗಮನ ನೌಖಾಲಿಯ ಮೇಲೆ ಕೇಂದ್ರೀಕರಿಸುವಂತೆ ನೀವು ಮಾಡುವಿರಲ್ಲವೆ? ಇಲ್ಲಿ ಅತ್ಯಾಚಾರಗಳು ನಡೆಯುತ್ತಲೇ ಇವೆಯೆಂದು ಜನರು ಭಾವಿಸಲಾರರೆ? ನಿಜವಾಗಿಯೂ ನೋಡುವುದಾದರೆ ಈಗ ಕೆಲವು ಕಾಲದಿಂದ ಮುಸಲ್ಮಾನರು ಯಾವ ಕೆಟ್ಟ ರೀತಿಯಲ್ಲಿಯೂ ನಡೆದುಕೊಳ್ಳದೆ ಇರುವರಲ್ಲವೆ?

**ಉತ್ತರ:** ನಿಷ್ಪಕ್ಷಪಾತದೃಷ್ಟಿಯಿಂದ ನೋಡುವವರಾರೂ ಈ ರೀತಿಯಾದ ಕುಹಕವಾದ ಅರ್ಥವನ್ನು ಮಾಡಲಾರರು. ನಾನು ಇಲ್ಲಿ ಇರುವುದರ ವಿಷಯದಲ್ಲಿ ಹೀಗೆ ಎಣಿಸಲಾಗದು. ನಾನು ಮಿತ್ರನಾಗಿಯೂ, ಸೇವಕನಾಗಿಯೂ ಇಲ್ಲಿಗೆ ಬಂದಿರುವೆನು. ನಾನು ನೌಖಾಲಿಗೆ ಬಂದುದರಿಂದ ಅದರ ಹೆಸರೇನೋ ಪ್ರಸಿದ್ಧಿಗೆ ಬಂದಿರುವುದು ನಿಜ. ಆದರೆ ಅದರ ಪ್ರಸಿದ್ಧಿ ಏನೆಂದರೆ ಹಿಂದೂ-ಮುಸಲ್ಮಾನರು ಅಲ್ಲಿ ಸೌಹಾರ್ದದಿಂದ ಬಾಳುವುದಾದರೆ ಅದೊಂದು ಭೂಸ್ವರ್ಗವೇ ಆಗಿಬಿಡುವುದೆಂದು. ಈ ಅಧ್ಯಾಯ ಮುಗಿಯುವ ವೇಳೆಗೆ ನಾನು ಸೋತೆನೆಂದೂ, ಅಹಿಂಸೆಯ ವಿಷಯದಲ್ಲಿ ಯಾವ ಜ್ಞಾನವೂ ಇಲ್ಲದವನೆಂದು ಪ್ರಸಿದ್ಧಪಟ್ಟರೂ ಪಡಬಹುದು. ಹಿಂದೂಗಳೂ ಮುಸಲ್ಮಾನರೂ ತಮ್ಮಲ್ಲಿ ಪರಸ್ಪರ ಮೈತ್ರಿಯನ್ನು ಸ್ಥಾಪಿಸಿಕೊಂಡಿರುವುದಾಗಿ ನಮ್ಮ ಮನಸ್ಸಿಗೆ ಸ್ಪಷ್ಟವಾದರೆ ಅನಂತರ ನಾನು ನೌಖಾಲಿಯಲ್ಲಿ ಒಂದು ಗಳಿಗೆಯಾದರೂ ಇರಲು ಸಾಧ್ಯವಿಲ್ಲ. ಆದರೆ ಹಿಂದೂ-ಮುಸಲ್ಮಾನರಲ್ಲಿ ಪರಸ್ಪರ ಸೌಹಾರ್ದ ಉಂಟಾಗಲಿಲ್ಲವೆನ್ನುವುದಕ್ಕೆ ನನ್ನಲ್ಲಿ ಸಾಕ್ಷ್ಯವಿದೆ. ಇದು ವಿಷಾದಕರ. ಇನ್ನೂ ಪರಿಸ್ಥಿತಿ ತೃಪ್ತಿಕರವಾಗಿಲ್ಲವೆಂದು ಹೇಳಲು ಆಧಾರವಿದೆಯೆಂದು ಖೇದದಿಂದ ನಾನು ಹೇಳಬೇಕಾಗಿದೆ.

**ಪ್ರಶ್ನೆ:** ಅಹಿಂಸೆಯೂ ಮೈತ್ರಿಯೂ ಎಲ್ಲರಲ್ಲಿಯೂ ವ್ಯಾಪಿಸುವ ದೃಷ್ಟಿಯಿಂದ ಈಗ ಮುಸಲ್ಮಾನರ ಮೇಲೆ ಹಾಕಿರುವ ಮೊಕದ್ದಮೆಗಳನ್ನು ವಾಪಸ್ಸು ತೆಗೆದುಕೊಳ್ಳುವುದು ಸೂಕ್ತವಲ್ಲವೆ ?

**ಉತ್ತರ:** ವಾತಾವರಣದಲ್ಲಿ ಅಹಿಂಸೆಯು ಬಹಳಮಟ್ಟಿಗೆ ಇರುವಂತೆ ನನಗೆ ಕಂಡುಬಂದಿಲ್ಲ. ಆದರೆ ನ್ಯಾಯಸ್ಥಾನಗಳಲ್ಲಿ ನಡೆಯಬೇಕಾದ ವಿಚಾರಣೆಗಳಿಗೆ ಅಹಿಂಸಾತತ್ತ್ವದಿಂದ ಯಾವ ಅಡ್ಡಿಯೂ ಉಂಟಾಗಬಾರದು. ತಪ್ಪಿತಸ್ಥರು ತಮ್ಮ ತಪ್ಪನ್ನು ಒಪ್ಪಿಕೊಂಡು ಪಶ್ಚಾತ್ತಾಪ ಸೂಚಿಸುವವರೆಗೂ ನೊಂದವರು ಅಹಿಂಸಾಮಾರ್ಗದಲ್ಲಿ ವರ್ತಿಸಲು ಸಾಧ್ಯವಾಗಲಾರದು. ವಸ್ತುಸ್ಥಿತಿ ಏನೆಂದರೆ ಅಪರಾಧಿಗಳು ಪಶ್ಚಾತ್ತಾಪ ತೋರಿಸದೆ ಇರುವುದು ಮಾತ್ರವಲ್ಲ, ಅವರು ತಪ್ಪಿಸಿಕೊಂಡು ಓಡಿಹೋಗಿರುವರು. ಸಾಮೂಹಿಕವಾಗಿ ಜನರನ್ನು ಸೆರೆ ಹಿಡಿಯುವುದಕ್ಕೆ ನಾನು ಸಮ್ಮತಿಸಲಾರೆನು. ಯಾರು ಸುಳ್ಳು

ಮೊಕದ್ದಮೆಗಳನ್ನು ತರಲು ಕಾರಣರಾಗಿರುವರೊ ಅಂತಹವರಿಗೆ ಉಗ್ರದಂಡನೆ ಆಗಬೇಕೆಂದು ನನ್ನ ಅಭಿಪ್ರಾಯ.

**ಪ್ರಶ್ನೆ:** ಎಲ್ಲ ಕಡೆಗಳಲ್ಲಿಯೂ ದೊಂಬಿಗಳಿಗೆ ಕಾರಣ ಕಾಂಗ್ರೆಸ್ಸಿಗೂ ಮುಸ್ಲಿಂ ಲೀಗಿಗೂ ಇರುವ ಪರಸ್ಪರ ವೈಷಮ್ಯ. ಹೀಗಿರಬೇಕಾದರೆ ಇಲ್ಲಿ (ನೌಖಾಲಿಯಲ್ಲಿ) ಹಿಂದೂ–ಮುಸ್ಲೀಮರಲ್ಲಿ ಸೌಹಾರ್ದವನ್ನು ಏರ್ಪಡಿಸುವುದು ಸಾಧ್ಯವೆ? ಒಂದು ವೇಳೆ ಅದನ್ನು ಸ್ಥಾಪಿಸಿದರೂ ಅದು ಎಷ್ಟು ಕಾಲ ಉಳಿದೀತು?

**ಉತ್ತರ:** ಕಾಂಗ್ರೆಸ್ಸಿಗೂ ಮುಸ್ಲಿಂ ಲೀಗಿಗೂ ಪರಸ್ಪರ ವೈಷಮ್ಯವಿರುವವರೆಗೂ ಹಿಂದೂಗಳಲ್ಲಿಯೂ ಮುಸಲ್ಮಾನರಲ್ಲಿಯೂ ಪರಸ್ಪರ ಸೌಹಾರ್ದ ಏರ್ಪಡಿಸುವುದು ದುಸ್ತರವೆಂಬ ವಿಷಯವನ್ನು ನಾನು ಒಪ್ಪುತ್ತೇನೆ. ಆದರೆ ಈ ಪಕ್ಷಗಳ ರಾಜಕೀಯ ಏನೇ ಇದ್ದರೂ ನೌಖಾಲಿಯಲ್ಲಿ ವಾಸಮಾಡುವ ಹಿಂದೂಗಳೂ ಮುಸಲ್ಮಾನರೂ ಪರಸ್ಪರ ಸೌಹಾರ್ದದಿಂದ ವರ್ತಿಸುವರೆಂಬ ವಿಶ್ವಾಸ ನನಗಿದೆ. ಅವರು ಭಾರತದ ಇತರ ಪ್ರಾಂತ್ಯಗಳಿಗೆ ಮಾರ್ಗದರ್ಶಕರಾಗಬೇಕು. ವಿಶೇಷವಾಗಿ ಕಾಂಗ್ರೆಸ್ಸಿಗೂ ಮುಸ್ಲಿಂ ಲೀಗಿಗೂ ಇರುವ ವೈಷಮ್ಯವನ್ನು ತೊಡೆದುಹಾಕಲು ಆದರ್ಶವನ್ನು ನೀಡಬೇಕು. ಏನೇ ಇರಲಿ, ಈ ಪವಿತ್ರ ಕಾರ್ಯಕ್ಕಾಗಿಯೇ ನಾನು ನೌಖಾಲಿ ಯಾತ್ರೆಯನ್ನು ಕೈಕೊಂಡುದು. ಶುದ್ಧ ಅಹಿಂಸೆಯ ಆಚರಣೆಯ ಪರೀಕ್ಷೆಯಲ್ಲಿ ಉತ್ತೀರ್ಣರಾಗಬೇಕೆಂದು ನನ್ನ ಬಯಕೆ. ನನ್ನ ಆಚರಣೆ ಶುದ್ಧವಾದ ಪಕ್ಷಕ್ಕೆ ನಾನು ಅಂತಃಕರಣಪೂರ್ವಕವಾಗಿ ಇಚ್ಛಿಸುತ್ತಿರುವ ಸೌಹಾರ್ದ ಸ್ಥಾಪನೆಯಾದೀತು. ಆದುದರಿಂದ ಈ ಪರಿಣಾಮ ಕಾಣದಿದ್ದರೆ ಅದರ ದೋಷ ನನ್ನದೇ ಆಗುವುದು. ಅಹಿಂಸೆಗೆ ಸೋಲಿಲ್ಲ. ಹೀಗಿರುವುದರಿಂದ ನೌಖಾಲಿಯಲ್ಲಿ ನಾನು ಕೃತಕೃತ್ಯನಾಗಬೇಕು; ಇಲ್ಲವೆ ಮಡಿಯಬೇಕು. ಪ್ರಶ್ನೆ ಕೇಳುವವರೂ ಅವರಂತೆ ಯೋಚಿಸುವ ಇತರರೂ ನನ್ನ ಕೆಲಸ ಸಾರ್ಥಕವಾಗುವಂತೆ ನೆರವಾಗಲಿ.

**ಪ್ರಶ್ನೆ:** ಜಮೀನು ಸಾಗುವಳಿಯಲ್ಲಿ ಮಾಲೀಕನಿಗೆ ಅರ್ಧ ಭಾಗ ಕೊಡುವುದಕ್ಕೆ ಬದಲಾಗಿ ಮೂರನೆಯ ಒಂದು ಭಾಗ ಕೊಡಬೇಕೆಂಬ ತತ್ತ್ವಕ್ಕೆ ನಾವು ಒಪ್ಪಿಕೊಳ್ಳುತ್ತೇವೆ. ಆದರೆ ಇದರ ಬಗೆಗೆ ಈಗ ನಡೆಯುತ್ತಿರುವ

ಚಳುವಳಿಯನ್ನು ಮುಂದಕ್ಕೆ ಹಾಕಿದರೆ ಒಳ್ಳೆಯದಲ್ಲವೆ? ಹಾಗೆ ಮುಂದೆ ಹಾಕಿದರೆ ಈಗ ದುಃಸ್ಥಿತಿಯಲ್ಲಿರುವವರಿಗೆ ಬೇರೆ ಬಗೆಯ ಸಂಪಾದನೆ ಸರಕಾರ ದವರು ಒಂದು ದೀರ್ಘಕಾಲದ ಯೋಜನೆಯನ್ನು ಹಾಕಿ ಕಲ್ಪಿಸಬಹುದು.

ಈ ಬಗೆಯ ದೊಡ್ಡ ಸುಧಾರಣೆಯನ್ನು ಅಹಿಂಸೆಯ ಮೂಲಕವೇ ಸಾಧಿಸ ಬೇಕೆಂದು ನಿಮ್ಮ ಅಭಿಪ್ರಾಯ. ಅದು ನಮಗೆ ಗೊತ್ತಿದೆ. ಆದರೆ ಇದರಿಂದ ಲಾಭ ಗಳಿಸುವ ಕೆಲವರು ಈ ಅಂಶವನ್ನು ಮರೆತು ತಾವು ಈ ಸುಧಾರಣೆಗೆ ಬೆಂಬಲ ನೀಡಿರುವವರೆಂಬ ವ್ಯಾಜದಿಂದ ತಮ್ಮದೇ ಆದ ಹಿಂಸಾಮಾರ್ಗಗಳಲ್ಲಿ ಈ ಚಳುವಳಿಯನ್ನು ಮುಂದುವರಿಸುವ ಪ್ರಯತ್ನವನ್ನು ಮಾಡುವರು. ಈ ಚಳುವಳಿಯಿಂದ ಬಂಗಾಳದ ಮಧ್ಯಮ ವರ್ಗ ನಾಶವಾಗುವುದು ಖಂಡಿತ. ಆದುದರಿಂದ ಈ ಪರಿಸ್ಥಿತಿಯಲ್ಲಿ ಈ ಸುಧಾರಣೆಗೆ ತಮ್ಮ ಬೆಂಬಲ ಕೊಡದಿರು ವುದು ಸೂಕ್ತವಲ್ಲವೆ? ಈ ಚಳುವಳಿಯಿಂದ ಸಾಮಾನ್ಯ ಹಳ್ಳಿಯ ಪ್ರಜೆಗಳಿಗೂ ಹಾನಿಯಾಗುತ್ತಿರುವುದು. ಈ ಮಧ್ಯಮ ವರ್ಗದವರಿಂದ ಅವರಿಗೆ ಆಗುತ್ತಿರುವ ಆನುಕೂಲ್ಯಗಳೂ ತಪ್ಪಿಹೋಗುವುದು.

**ಉತ್ತರ:** ಇದಕ್ಕೆ ಉತ್ತರವಾಗಿ ಗಾಂಧೀಜಿಯವರು ಕೇವಲ ತತ್ತ್ವ ಗಳನ್ನು ಕುರಿತು ಮಾತ್ರ ತಮಗೆ ತೋರಿದ ರೀತಿಯಲ್ಲಿ ತಮ್ಮ ಅಭಿಪ್ರಾಯ ಗಳನ್ನು ಸೂಚಿಸುತ್ತಿರುವುದಾಗಿ ಹೇಳಿದರು. ಸ್ಥಳೀಯ ಪರಿಸ್ಥಿತಿಯನ್ನು ಅವರು ವ್ಯಾಸಂಗಮಾಡಿದವರಲ್ಲ. ಆದುದರಿಂದ ತಮ್ಮ ಅಜ್ಞಾನದಿಂದ ಅನ್ಯಾಯ ಸಂಭವಿಸಬಹುದೆಂಬ ಭಯ ಪ್ರಶ್ನೆ ಕೇಳುವವರಲ್ಲಿದೆ.

ಈ ಪ್ರಶ್ನೆಯಲ್ಲಿ ಸ್ವಲ್ಪ ಉತ್ಪ್ರೇಕ್ಷೆ ಇದೆ. ಜಮೀನಿನ ಮಾಲೀಕರು ಸದ್ಯದಲ್ಲಿ ಯಾವ ಭಯವನ್ನೂ ಪಡುವ ಕಾರಣವಿಲ್ಲ. ಅವರ ಜಮೀನನ್ನು ಯಾರೂ ಕಿತ್ತುಕೊಳ್ಳುವ ಮಾತಿಲ್ಲ. ಆತನಿಗೆ ಸಾಗುವಳಿಯಲ್ಲಿ ಸೇರಬೇಕಾದ, ಅವನು ಯಾವ ದೇಶದಲ್ಲಿಯೇ ಇರಲಿ, ಅರ್ಧದಿಂದ ಮೂರನೆಯ ಒಂದು ಭಾಗ ವಾಗಬೇಕು, ಅಷ್ಟೆ. ಇದರಲ್ಲಿ ಯಾವ ನಾಶವೂ ಆಗುವ ಸಂಭವವಿಲ್ಲ. ಕೋಮುವಾರು ಪ್ರಶ್ನೆಯೇ ಅವರ ತಲೆಯ ತುಂಬ ಇರುವಂತೆ ತಮಗೆ ತೋರು ವುದು. ಈ ರೀತಿಯ ದೃಷ್ಟಿಯನ್ನು ಇಟ್ಟುಕೊಳ್ಳದೆ ಒಂದು ಸುಧಾರಣೆಯ ಯುಕ್ತಾಯುಕ್ತತೆಯನ್ನು ಅವರು ಪರಿಶೀಲಿಸಬೇಕು. ಹೀಗೆ ಮಾಡಿದರೆ

ಅವರು ಯಾವ ತಪ್ಪಿಗೂ ಗುರಿಯಾಗಲಾರರು. ಆದುದರಿಂದ ಸಿದ್ಧಾಂತಕ್ಕೆ ಮನ್ನಣೆಯನ್ನು ಕೊಟ್ಟು, ಅದರಲ್ಲಿ ಏನಾದರೂ ತಿದ್ದುಪಡಿಗಳನ್ನು ಮಾಡಲು ವಿಧಾಯಕ ರೀತಿಯಲ್ಲಿ ಅವರು ಪ್ರಯತ್ನಿಸಬೇಕು. ಆಗ ಅವರ ಪ್ರಯತ್ನಗಳು ಸಫಲವಾಗುವುವು. ಅನೇಕ ವರ್ಷಗಳಿಂದ ಭಾರತ ದೇಶದಲ್ಲಿ ವಿತ್ತಾಪಹಾರ ನಡೆಯುತ್ತಿದೆಯೆಂದು ಅವರ ನೆನಪಿನಲ್ಲಿರಲಿ. ಕೈಗಾರಿಕೆಗಳು ಒಂದೊಂದಾಗಿ ನಾಶವಾದುವು. ಕಸಬುದಾರರೂ ಬೇಸಾಯಗಾರರೂ ಎಲ್ಲರೂ ಕ್ರಮೇಣ ದರಿದ್ರರಾದರು.

ಈ ಸುಧಾರಣೆಯನ್ನು ಅಹಿಂಸಾಮಾರ್ಗದಲ್ಲಿ ಕೈಗೊಳ್ಳುವುದಾದರೆ ಉತ್ತಮ ಕಸಬುದಾರರ ಕೌಶಲವು ನಾಶವಾಗದಂತೆ ಉಳಿಯುವುದು. ಅವರು ದುಡಿಯುವವರ ಶೋಷಣೆಯನ್ನು ಮಾಡಲಾರರು. ಭವಿಷ್ಯಕಾಲದಲ್ಲಿ ಬರಲಿರುವ ಅಹಿಂಸಾತ್ಮಕ ಸಮಾಜಪದ್ಧತಿಯಲ್ಲಿ, ಎಲ್ಲ ಜಮೀನೂ ಸರಕಾರದ್ದೇ ಆಗಿರುವುದು ; ಎಲ್ಲ ಭೂಮಿಯೂ ಗೋಪಾಲನದೇ—ಅಂದರೆ ಅದರ ಪಾಲನೆಯನ್ನು ಮಾಡುವವನ ಅಥವಾ ಭಗವಂತನ—ಎಂಬ ನಾಣ್ನುಡಿ ಹಿಂದೀ ಭಾಷೆಯಲ್ಲಿದೆ. ಈ ಪದ್ಧತಿಯಲ್ಲಿ ಯಾರ ಕೌಶಲವೇ ಆಗಲಿ ದುಡಿಮೆಯೇ ಆಗಲಿ ವ್ಯರ್ಥವಾಗಲಾರದು. ಇದನ್ನು ಹಿಂಸಾತ್ಮಕ ಪದ್ಧತಿಯಲ್ಲಿ ಸಾಧಿಸಲಾಗದು. ಈ ಹಿಂಸಾತ್ಮಕ ಪದ್ಧತಿಯಿಂದ ಭೂಮಾಲೀಕರು ಪೂರ್ಣ ನಾಶವಾಗುವರು. ಅಷ್ಟೇ ಅಲ್ಲ, ದುಡಿಯುವವರೂ ರೈತರೂ ಸಹ ಕೊನೆಗೆ ನಾಶಕ್ಕೆ ಗುರಿಯಾಗುವರೆಂದು ಬೇರೆ ಹೇಳಬೇಕೆ? ಆದುದರಿಂದ ಭೂಮಾಲೀಕರು ಬುದ್ಧಿವಂತಿಕೆಯಿಂದ ನಡೆದುಕೊಳ್ಳುವುದಾದರೆ ಯಾರಿಗೂ ನಷ್ಟವಾಗದು.

**ಪ್ರಶ್ನೆ:** ಚಾಪೆಗಳನ್ನು ಹೆಣೆಯುವುದರಿಂದ ತಮ್ಮ ಜೀವನವನ್ನು ನಡೆಸುತ್ತಿರುವ ಕೆಲವು ಸ್ತ್ರೀಯರಿಗೆ ಇವರು ಸಹಕಾರ ಪದ್ಧತಿಯ ಪ್ರಕಾರ ತಮ್ಮ ಕೆಲಸವನ್ನು ಮಾಡಬೇಕೆಂದು ನೀವು ಸಲಹೆ ಮಾಡಿದಿರಿ. ಬಂಗಾಳ ಪ್ರಾಂತ್ಯದಲ್ಲಿ ಭೂಮಿಯು ತಲೆತಲಾಂತರವಾಗಿ ಅತಿಯಾಗಿ ವಿಭಜನೆಯಾಗಿರುವುದರಿಂದ ವ್ಯವಸಾಯದಿಂದ ಯಾವ ಲಾಭವೂ ಆಗದಂತಾಗಿದೆ. ಆದುದರಿಂದ ರೈತರಿಗೂ ಸಹ ಸಹಕಾರಪದ್ಧತಿಯನ್ನು ಅವರು ಅನುಸರಿಸಬೇಕೆಂಬ ಸಲಹೆಯನ್ನು ಕೊಡುವಿರಾ ?

ಹಾಗಾದರೆ ಈಗ ಜಾರಿಯಲ್ಲಿರುವ ಭೂಸ್ವಾಮ್ಯದ ಪದ್ಧತಿಯಲ್ಲಿ ಇದನ್ನು ಹೇಗೆ ಸಾಧಿಸಲಾದೀತು ? ಕಾನೂನಿನಲ್ಲಿ ಆವಶ್ಯಕವಿರುವ ಬದಲಾವಣೆಗಳನ್ನು ಸರಕಾರದವರು ಮಾಡಬೇಕೆ ? ಹೀಗೆ ಮಾಡಲು ಸರಕಾರ ಸಿದ್ಧವಿಲ್ಲದಿದ್ದರೆ, ಒಂದು ವೇಳೆ ಜನರು ಇದಕ್ಕೆ ಸಿದ್ಧರಾಗಿದ್ದರೆ, ಅವರು ಹೇಗೆ ಮುಂದುವರಿಯ ಬೇಕು ?

**ಉತ್ತರ :** ಈ ಪ್ರಶ್ನೆಯ ಮೊದಲನೆಯ ಭಾಗಕ್ಕೆ ಉತ್ತರ ಹೇಳುತ್ತ, ಸಹಕಾರ ಪದ್ಧತಿಯು ಚಾಪೆ ಹೆಣೆಯುವವರಿಗಿಂತಲೂ ವ್ಯವಸಾಯಗಾರರು ಅವಲಂಬಿಸುವುದು ಅಗತ್ಯವೆಂದು ಗಾಂಧೀಜೀ ಹೇಳಿದರು. ಎಲ್ಲ ಭೂಮಿಯೂ ಸರಕಾರದ್ದು, ಸಾರ್ವಜನಿಕರ ಸೊತ್ತು. ಆದುದರಿಂದ ಸಹಕಾರದ ಪದ್ಧತಿಯಲ್ಲಿ ಅದರ ಬೇಸಾಯ ಮಾಡುವುದರಿಂದ ಅದರ ಹುಟ್ಟುವಳಿ ಹೆಚ್ಚಾಗುವುದು.

ಶುದ್ಧವಾದ ಅಹಿಂಸಾಮಾರ್ಗದಲ್ಲಿ ಮಾತ್ರ ಈ ಸಹಕಾರ ಪದ್ಧತಿ ಸ್ಥಾಪಿತವಾಗಬೇಕೆಂಬ ಮಾತು ಮಾತ್ರ ನೆನಪಿನಲ್ಲಿರಲಿ. ಬಲವಂತದಿಂದ ಏರ್ಪಾಡಾಗುವ ಸಹಕಾರವು ಸಹಕಾರವೇ ಅಲ್ಲ. ಈ ಮಾತಿಗೆ ಹಿಟ್ಲರ್ ಉತ್ತಮ ನಿದರ್ಶನವನ್ನು ಒದಗಿಸಿದನು. ಜನರ ಮೇಲೆ ದಬ್ಬಾಳಿಕೆಯಿಂದ ಸಹಕಾರ ಪದ್ಧತಿಯನ್ನು ಅನುಸರಿಸುವಂತೆ ಮಾಡಿದನು. ಇದರ ಪರಿಣಾಮ ವಾಗಿ ಜರ್ಮನಿಗೆ ಎಂತಹ ಗತಿ ಆಯಿತೆಂದು ಎಲ್ಲರಿಗೂ ತಿಳಿದೇ ಇದೆ.

ಆದುದರಿಂದ ಹಿಂಸಾಮಾರ್ಗದಿಂದ ಸಹಕಾರಪದ್ಧತಿಯನ್ನು ಸ್ಥಾಪಿಸಲು ಭಾರತವು ಹೊರಟರೆ, ಇದರಿಂದ ಸಮಾಜಕ್ಕೆ ಯಾವ ಹಿತವೂ ಉಂಟಾಗ ಲಾರದು. ಬಲಾತ್ಕಾರವಾಗಿ ಹಿತವನ್ನು ಸಾಧಿಸಬೇಕೆಂಬ ಪ್ರಯತ್ನದಿಂದ ವ್ಯಕ್ತಿತ್ವ ಬಲಿಯಾಗುವುದು. ಅಹಿಂಸಾಮಾರ್ಗದಿಂದ, ಒಳ್ಳೆಯ ಮಾತಿನಲ್ಲಿ ಇತರರನ್ನು ಒಲಿಸುವುದರಿಂದ, ಅಂದರೆ ಪ್ರೇಮಮಾರ್ಗದಿಂದಲೇ ವ್ಯಕ್ತಿತ್ವ ಉಳಿಯುವುದು, ಸ್ಥಿರಗೊಳ್ಳುವುದು, ಪ್ರಪಂಚದ ಶಾಶ್ವತ ಹಿತವನ್ನು ಸಾಧಿಸ ಲಾಗುವುದು. (ಹರಿಜನ, ೯–೩–೧೯೪೭)

## ಕೆಲವು ಪ್ರಶ್ನೆಗಳು

**ಪ್ರಶ್ನೆ :** ಮುಸ್ಲಿಂ ಲೀಗ್ ಸರಕಾರವು ಅಥವಾ ಬಹುಸಂಖ್ಯೆಯಲ್ಲಿರುವ ಕೋಮಿನವರು ತಕ್ಕ ಪರಿಹಾರವನ್ನು ಕೊಡಲು ಒಪ್ಪಿದ ಪಕ್ಷಕ್ಕೆ, ಹಿಂದೂಗಳು ವೈಷಮ್ಯಪೂರಿತ ಪ್ರದೇಶಗಳನ್ನು ಬಿಟ್ಟು ಆಚೆ ಹೋಗುವುದಕ್ಕೆ ನೀವು ಬೆಂಬಲ ಕೊಡುವಿರಾ ?

**ಉತ್ತರ :** ಅಹಿಂಸಾತತ್ತ್ವದ ದೃಷ್ಟಿಯಿಂದ ಇದಕ್ಕೆ ಗಾಂಧೀಜೀ ಬೆಂಬಲ ನೀಡಿದ್ದರು. ಇದು ಎಲ್ಲ ಪ್ರಾಂತ್ಯಗಳಿಗೂ ಅನ್ವಯಿಸುವ ಸಿದ್ಧಾಂತ. ಬಹುಸಂಖ್ಯಾತರು ಹಿಂದೂಗಳೇ ಇರಲಿ, ಮುಸಲ್ಮಾನರೇ ಇರಲಿ, ಬಹು ಸಂಖ್ಯಾತರು ಅಲ್ಪಸಂಖ್ಯಾತರಿರುವುದನ್ನೇ ಸಹಿಸದೆ ಹೋದರೆ ಸರಕಾರವೇನು ಮಾಡಬೇಕು ? ಈ ಬಹುಸಂಖ್ಯಾತರನ್ನು ಬಲಪ್ರಯೋಗದಿಂದ ಹೆದರಿಸಿ ಅವರನ್ನು ಬಗ್ಗಿಸಲು ಸರಕಾರ ಕ್ರಮ ತೆಗೆದುಕೊಂಡರೆ ಅದಕ್ಕೆ ಗಾಂಧೀಜೀ ಸಮ್ಮತಿಸಲಾರರು. ಉದಾಹರಣೆಗೆ, ಹಿಂದೂಗಳು ರಾಮನಾಮ ಸಂಕೀರ್ತನೆ ಯನ್ನು ಹಾಡಿ ತಾಳಕ್ಕಾಗಿ ಕೈಗಳಿಂದ ಚಪ್ಪಾಳೆ ತಟ್ಟುತ್ತಿದ್ದರೆಂದು ಇಟ್ಟು ಕೊಳ್ಳೋಣ. ರಾಮನೆಂದರೆ ಒಬ್ಬ ವ್ಯಕ್ತಿಯಲ್ಲ, ಅದು ದೇವರ ಹೆಸರೆಂದು ಹೇಳಿದರೂ ಅದಕ್ಕೆ ಒಪ್ಪದೆ ಮುಸಲ್ಮಾನರು ಅಡ್ಡಿ ಮಾಡಿದರೆಂದು ಭಾವಿ ಸೋಣ. ಅವರೇ ಬಹುಸಂಖ್ಯಾತರು. ಅವರಿಗೆ ಚಪ್ಪಾಳೆಯೆಂದರೆ ಆಗದು. ಅಂತಹ ಸಂದರ್ಭದಲ್ಲಿ ಅಲ್ಪಸಂಖ್ಯಾತರಾದ ಹಿಂದೂಗಳಿಗೆ ಸೂಕ್ತ ಪರಿಹಾರ ಕೊಡುವ ಪಕ್ಷಕ್ಕೆ ಹಿಂದೂಗಳು ಆ ಪ್ರದೇಶವನ್ನು ಬಿಟ್ಟು ಬೇರೆ ಕಡೆ ಹೋಗು ವುದಕ್ಕೆ ಗಾಂಧೀಜೀ ಸಮ್ಮತಿಸುವರು.

**ಪ್ರಶ್ನೆ :** ನೌಖಾಲಿಯಲ್ಲಿ ಹಿಂದೂ ಕಾರ್ಯಕರ್ತರು ಮಾಡುವುದೆಲ್ಲ ವನ್ನೂ ವಿರೋಧಿಗಳು ಅಪಾರ್ಥಮಾಡಿ ಅವರ ಬಗೆಗೆ ಅಪಪ್ರಚಾರ ಮಾಡಿದರೆ ಆ ಹಿಂದೂ ಕಾರ್ಯಕರ್ತರು ಏನು ಮಾಡಬೇಕು ?

**ಉತ್ತರ :** ಅಹಿಂಸಾದೃಷ್ಟಿಯಿಂದ ಇದಕ್ಕೆ ಉತ್ತರವಿಷ್ಟೆ : ಒಬ್ಬ ಕಾರ್ಯಕರ್ತನ ಕೆಲಸವೇ ಅವನ ಕೆಲಸಕ್ಕೆ ಸಾಕ್ಷಿ. ಈ ಸಾಮಾನ್ಯ ಸಿದ್ಧಾಂತ ವನ್ನು ನಾವು ಒಪ್ಪಬಹುದಾದರೂ ಕೆಲವು ಸಂದರ್ಭಗಳಲ್ಲಿ ನಮ್ಮ ಕಾರ್ಯದ

ಬಗೆಗೆ ವಿವರಣೆಯನ್ನು ಕೊಡಬೇಕಾಗುತ್ತದೆ, ಸ್ಪಷ್ಟವಾದ ತಿಳುವಳಿಕೆ ಕೊಡಬೇಕಾಗುತ್ತದೆ. ಹೀಗೆ ಕೊಡದಿರುವುದೇ ಒಮ್ಮೊಮ್ಮೆ ಅಸತ್ಯ ನುಡಿಯುವಷ್ಟು ದೋಷವಾಗಬಹುದು. ಆದುದರಿಂದ ಕೆಲಸಮಾಡುವುದರ ಜೊತೆಗೆ ಮಾತನ್ನೂ ಆಡಬೇಕಾದುದು ಕೆಲವು ವೇಳೆ ಬುದ್ಧಿವಂತಿಕೆಯಾಗುತ್ತದೆ. ನಿಜ, ಕೇವಲ ಮಾನಸಿಕ ಪ್ರವೃತ್ತಿಯೊಂದೇ ಮಾತನ್ನೂ ಕಾರ್ಯವನ್ನೂ ಮೀರಿಸುವ ಸಂದರ್ಭ ಉಂಟು. ಅದು ಭಗವಂತನ ಕಾರ್ಯ. ಕೋಟಿ ಜನರಲ್ಲಿ ಒಬ್ಬರಿಗೆ ಇಂತಹ ಮಾನಸಿಕ ಶಕ್ತಿ ಇರಬಹುದು. ಆದರೆ ಗಾಂಧೀಜೀ ಇಂತಹ ಶಕ್ತಿಯನ್ನು ನೋಡಿದವರಲ್ಲ.

**ಪ್ರಶ್ನೆ :** ಬಹುಸಂಖ್ಯಾತರು ಹಟ ಹಿಡಿದು ವೈಷಮ್ಯವನ್ನು ಹಟದಿಂದ ಸಾಧಿಸಿದರೆ ಅಲ್ಪಸಂಖ್ಯಾತರು ಅಂತಹ ಪ್ರದೇಶವನ್ನು ಬಿಟ್ಟುಹೋಗಬಹುದೆಂದು ಸಲಹೆ ಮಾಡಿರುವಿರಿ. ಆದರೆ ನೀವೇ ನಿಜವಾದ ಅಹಿಂಸಾಮಾರ್ಗವನ್ನು ಅವಲಂಬಿಸುವವನು, ತನ್ನ ವಿರೋಧಿಯನ್ನು ಪ್ರೇಮದಿಂದ ಒಲಿಸಬಹುದೆಂಬ ವಿಶ್ವಾಸವನ್ನು ತೊರೆಯಬಾರದೆಂತಲೂ ಹೇಳಿರುವಿರಿ. ಹೀಗಿರುವಲ್ಲಿ ಅಹಿಂಸಾ ಮಾರ್ಗಾವಲಂಬಿಯು ತನ್ನ ಸೋಲನ್ನು ಒಪ್ಪಿಕೊಂಡು ಹೇಗೆ ಪಲಾಯನ ಮಾಡಲಾದೀತು ?

**ಉತ್ತರ :** ನಿಜವಾದ ಅಹಿಂಸಾಮಾರ್ಗಾವಲಂಬಿಯು ತನ್ನ ಸ್ಥಳವನ್ನು ಬಿಟ್ಟು ಕದಲಬಾರದೆಂಬುದೇ ಇದಕ್ಕೆ ಉತ್ತರ. ಇಂತಹವನಿಗೆ ಪರಿಹಾರ ಕೊಡಬೇಕೆಂಬ ಪ್ರಶ್ನೆಯೇ ಹುಟ್ಟುವುದಿಲ್ಲ. ತಾನಿದ್ದ ಸ್ಥಳದಲ್ಲಿಯೇ ನಿಂತು ತನ್ನ ಪ್ರಾಣವನ್ನರ್ಪಿಸುವನು. ಅವನಲ್ಲಿರುವುದರಿಂದ ಸಮಾಜಕ್ಕಾಗಲಿ, ಸರಕಾರಕ್ಕಾಗಲಿ ಯಾವ ಅಪಾಯವೂ ಒದಗಲಾರದೆಂದು ರುಜುವಾತು ಮಾಡುವನು. ಆದರೆ ನೌಖಾಲಿಯಲ್ಲಿ ವಾಸಿಸುವ ಹಿಂದೂಗಳು ಇಂತಹವರಲ್ಲ. ಅವರು ಸಾಮಾನ್ಯ ಜನ; ಪ್ರಪಂಚದ ಮೇಲೆ ಆಸೆ ಇರುವವರು; ಶಾಂತಿಯಿಂದಲೂ ನೆಮ್ಮದಿಯಿಂದಲೂ ತಮ್ಮ ಜೀವನವನ್ನು ಸಾಗಿಸಬೇಕೆಂದು ಬಯಸುವವರು. ಒಂದು ವೇಳೆ ಸರಕಾರದವರು, ಬಹುಸಂಖ್ಯಾತರು ನೆಮ್ಮದಿಯಿಂದ ಬಾಳಬೇಕೆಂಬ ಇಚ್ಛೆಯಿಂದ ಈ ಹಿಂದೂಗಳಿಗೆ ಪರಿಹಾರವನ್ನು ಕೊಡಲು ಒಪ್ಪಿದರೆ ಇದರಿಂದ ತಮ್ಮ ಆತ್ಮಗೌರವಕ್ಕೆ ಯಾವ ಚ್ಯುತಿಯೂ ಆಗದಿದ್ದರೆ, ಅದಕ್ಕೆ

ಒಪ್ಪುವ ಜನ ಇಲ್ಲಿನ ಹಿಂದೂಗಳು. ಬಹುಸಂಖ್ಯೆಯಲ್ಲಿರುವ ಮುಸಲ್ಮಾನರು ಕೆಲವು ಹಿಂದೂಗಳು ತಮ್ಮ ಮಧ್ಯೆ ಇರುವುದನ್ನೇ ಸಹಿಸದೆ ಅದರಿಂದ ಕೆರಳು ವವರಾದರೆ, ಅಂತಹ ಸಂದರ್ಭದಲ್ಲಿ ಈ ಹಿಂದೂಗಳಿಗೆ ಪರಿಹಾರವನ್ನು ಕೊಡು ವುದು ಸರಕಾರದ ಕರ್ತವ್ಯ. ಹೀಗೆಯೇ ಹಿಂದೂಗಳು ಬಹುಸಂಖ್ಯಾತರಾಗಿ ಇರುವ ಪ್ರದೇಶಗಳಲ್ಲಿ ತಮ್ಮ ಮಧ್ಯೆ ಕೆಲವು ಮುಸಲ್ಮಾನರು ವಾಸಿಸುವುದರಿಂದ ಹಿಂದೂಗಳು ಕೆರಳುವವರಾದರೆ ಆ ಮುಸಲ್ಮಾನರಿಗೂ ಪರಿಹಾರ ಕೊಡುವುದು ಸರಕಾರದ ಕರ್ತವ್ಯವಾಗುವುದು.

**ಪ್ರಶ್ನೆ:** ಒಂದು ಪ್ರದೇಶವನ್ನು ಬಿಟ್ಟು ಹೊರಟುಹೋಗುವವರು ಸರಕಾರವನ್ನು ತಮ್ಮ ಚರ-ಸ್ಥಿರ ಆಸ್ತಿಗಳಿಗಾಗಿಯೂ, ತಮ್ಮ ವ್ಯಾಪಾರದ ನಷ್ಟಕ್ಕಾಗಿಯೂ ಪರಿಹಾರ ಕೊಡಬೇಕೆಂದು ಕೇಳಬಹುದೆ? ನಿಮ್ಮ ಅಭಿ ಪ್ರಾಯದಲ್ಲಿ ಎಷ್ಟು ಪ್ರಮಾಣದಲ್ಲಿ ಪರಿಹಾರವನ್ನು ಒದಗಿಸಬೇಕೆನ್ನುವಿರಿ ?

**ಉತ್ತರ:** ಹೊರಟುಹೋಗುವವರಿಗೆ ಹಿಂದೆ ಬಿಟ್ಟು ಹೋಗುವ ಎಲ್ಲ ಚರ-ಸ್ಥಿರ ಆಸ್ತಿಗಳಿಗೂ ಪರಿಹಾರವನ್ನು ನೀಡುವುದೇ ನ್ಯಾಯವಾಗುವುದು. ವ್ಯಾಪಾರದ ನಷ್ಟ ಅಷ್ಟು ಸುಲಭವಾಗಿ ಇತ್ಯರ್ಥಮಾಡುವ ಪ್ರಶ್ನೆಯಲ್ಲ. ಯಾವ ಸರಕಾರವೇ ಆಗಲಿ ಈ ವಿಷಯದಲ್ಲಿ ಪರಿಹಾರವನ್ನು ಒದಗಿಸುವುದು ಕಷ್ಟ ವಾಗುವುದು. ಆದರೆ ಒಬ್ಬ ವ್ಯಾಪಾರಿ ತಾನು ಹೋಗುವ ಸ್ಥಳದಲ್ಲಿ ಹೊಸದಾಗಿ ವ್ಯಾಪಾರವನ್ನು ಆರಂಭ ಮಾಡಲು ಸಹಾಯ ಕೇಳಿದರೆ ಅದರಲ್ಲಿ ಅರ್ಥವಿದೆ.

ಒಂದು ಪ್ರದೇಶದಿಂದ ಜನರು ಬೇರೆ ಕಡೆಗೆ ವಲಸೆ ಹೋಗುವ ಸಮಸ್ಯೆ ಈಗಿದ್ದರೂ ಗಾಂಧೀಜೀ ತಮ್ಮ ದೇಶಾದ್ಯಂತದ ಅನುಭವದಿಂದ ಹಿಂದೂಗಳೂ ಮುಸಲ್ಮಾನರೂ ಶಾಂತಿಯಿಂದ ಒಟ್ಟಿಗೆ ವಾಸಮಾಡಬಲ್ಲರೆಂದು ಅಭಿಪ್ರಾಯ ಪಟ್ಟರು. ತಲೆತಲಾಂತರವಾಗಿ ಈ ಎರಡು ಕೋಮಿನವರೂ ಒಟ್ಟಿಗೆ ಬಾಳುತ್ತ ಬಂದಿದಾರೆ. ಈಗ ಇವರೆಲ್ಲರೂ ತಿಳಿಗೇಡಿಗಳಾಗಿಬಿಟ್ಟಿರುವರೆಂಬ ಮಾತನ್ನು ಗಾಂಧೀಜೀ ನಂಬಲಾರದವರಾದರು.

ದಿವಂಗತ ಇಕ್ಬಾಲ್ ಕವಿ ಹೇಳಿದಂತೆ ಹಿಂದೂಗಳೂ ಮುಸಲ್ಮಾನರೂ ನೂರಾರು ವರ್ಷಗಳು ಹಿಮಾಲಯದ ಛಾಯೆಯಲ್ಲಿ ಒಟ್ಟಿಗೆ ಬಾಳುತ್ತ ಬಂದಿ ದಾರೆ, ಗಂಗಾ-ಯಮುನಾ ನದಿಯ ನೀರನ್ನು ಕುಡಿಯುತ್ತ ಬಂದಿದಾರೆ. **ಅವರ ಸಹಬಾಳ್ವೆ ಪ್ರಪಂಚಕ್ಕೇ ಒಂದು ಪಾಠವನ್ನು ಕಲಿಸಬೇಕಾಗಿದೆ.**

## ಹಿಂಸೆಯನ್ನು ಎದುರಿಸುವ ಬಗೆ

**ಪ್ರಶ್ನೆ :** ಮುಸ್ಲಿಂ ಲೀಗಿನ ಮುಖಂಡರಾಗಲಿ ಅನುಯಾಯಿಗಳಾಗಲಿ ತಮ್ಮ ಗುರಿಯನ್ನು ಸಾಧಿಸುವುದರಲ್ಲಿ ಅಹಿಂಸಾಮಾರ್ಗವನ್ನು ಅನುಸರಿಸ ಬೇಕೆಂದು ನಂಬುವವರಲ್ಲ. ಈ ಸಂದರ್ಭದಲ್ಲಿ ಅವರ ಮನಸ್ಸನ್ನು ಕರಗಿಸಿ, ಹಿಂಸಾಮಾರ್ಗ ತಪ್ಪೆಂದು ಅವರಿಗೆ ಮನದಟ್ಟಾಗುವಂತೆ ಮಾಡುವುದು ಹೇಗೆ ?

**ಉತ್ತರ :** ಹಿಂಸೆಯನ್ನು ಪರಿಣಾಮಕಾರಿಯಾಗಿ ಗೆಲ್ಲಬೇಕಾದರೆ ಅಹಿಂಸೆಯಿಂದಲೇ ಸಾಧ್ಯ. ಇದು ಪುರಾತನ ಸತ್ಯ. ಪ್ರಶ್ನೆಯನ್ನು ಹಾಕಿದವರು ಅಹಿಂಸೆ ಹೇಗೆ ಕೆಲಸಮಾಡುತ್ತಿದೆಯೆಂಬುದನ್ನು ಅರ್ಥಮಾಡಿಕೊಂಡಿಲ್ಲ. ಅರ್ಥಮಾಡಿಕೊಂಡಿದ್ದರೆ ಹಿಂಸಾಮಾರ್ಗದಲ್ಲಿ ಉಪಯೋಗಿಸುವ ಉಪಕರಣ ಗಳು—ಅದು ಅಣುಬಾಂಬಿನಂತಹ ಘೋರ ಶಸ್ತ್ರವೇ ಆದರೂ—ನಿಜವಾದ ಅಹಿಂಸೆಯ ಸಮ್ಮುಖದಲ್ಲಿ ನಿಷ್ಫಲವಾಗುವುದೆಂದು ಅರಿಯುವರು. ಅಹಿಂಸೆಯ ಮಹಾಶಸ್ತ್ರವನ್ನು ಹೇಗೆ ಪ್ರಯೋಗ ಮಾಡಬೇಕೆಂಬುದನ್ನು ಅನೇಕರು ತಿಳಿದಿಲ್ಲವೆಂಬ ಮಾತು ನಿಜ. ಇದಕ್ಕೆ ಬಹಳ ತಿಳುವಳಿಕೆ ಬೇಕು, ಮನೋ ದಾರ್ಢ್ಯ ಬೇಕು. ಸೈನಿಕಶಿಕ್ಷಣ ಕೊಡುವ ಶಾಲೆಗಳಲ್ಲಿಯೂ ಕಾಲೇಜುಗಳ ಲ್ಲಿಯೂ ಕಲಿಸುವ ವಿಷಯಕ್ಕೂ ಇದಕ್ಕೂ ಬಹಳ ಅಂತರವಿದೆ. ಹಿಂಸೆಯನ್ನು ಅಹಿಂಸೆಯಿಂದ ಎದುರಿಸುವುದರಲ್ಲಿ ಕಂಡುಬರುವ ಕಷ್ಟಗಳು ಮನಸ್ಸಿನ ದೌರ್ಬಲ್ಯದಿಂದ ಹುಟ್ಟಿದುವು.

**ಪ್ರಶ್ನೆ :** ಈಗ ಲೀಗಿನ ಪಕ್ಷದವರೊಂದಿಗೆ ಘರ್ಷಣೆಯಾಗುವುದಾದರೂ ಅದು ಹಿಂಸಾತ್ಮಕವಾಗಿ ಆಗುವುದು ಬಹಳ ಸಂಭವವಿದೆಯೆಂದೂ ಅನಿವಾರ್ಯ ವೆಂದೂ ಅನೇಕರಿಗೆ ತೋರುತ್ತಲಿದೆ. ಲೀಗಿನವರು ಬಂಗಾಳದ ಮತ್ತು ಪಂಜಾ ಬಿನ ವಿಭಜನೆಗೆ ಒಪ್ಪದಿರುವ ಪಕ್ಷಕ್ಕೆ ಅವರು ಪಾಕೀಸ್ತಾನ ಸ್ಥಾಪನೆಯಾಗ ಬೇಕೆಂದು ಒತ್ತಾಯಮಾಡುವುದು ನ್ಯಾಯವಲ್ಲವೆಂದು ರಾಷ್ಟ್ರೀಯ ಪಕ್ಷದವರ ಅಭಿಪ್ರಾಯ. ಈ ಸಂದರ್ಭದಲ್ಲಿ ಈ ಸಮಸ್ಯೆಯನ್ನು ಹೇಗೆ ಎದುರಿಸಬೇಕು ?

**ಉತ್ತರ :** ಮೊದಲನೆಯ ಪ್ರಶ್ನೆಗೆ ನಾನು ಕೊಟ್ಟಿರುವ ಉತ್ತರ ಸರಿ ಇರುವ ಪಕ್ಷಕ್ಕೆ ಈ ಪ್ರಶ್ನೆ ಏಳುವುದೇ ಇಲ್ಲ. ಆದರೂ ವಿಷಯವನ್ನು ಸ್ಪಷ್ಟ

ಪಡಿಸಲು ಇದನ್ನು ಚರ್ಚಿಸಬಹುದು. ಮುಸಲ್ಮಾನರಲ್ಲಿ ಬಹುಸಂಖ್ಯಾತರು ಕಾಯ್‌ದೆ-ಆಜಂ ಜಿನ್ನಾರವರ ಅಪ್ಪಣೆಯಂತೆ ನಡೆಯುವವರಾದರೆ, ಹಿಂಸೆಯಿಂದ ಕೂಡಿದ ಘರ್ಷಣೆ ಆಗುವ ಸಂಭವವೇ ಇಲ್ಲ; ಅಥವಾ ಹಿಂದೂಗಳಲ್ಲಿ ಬಹುಸಂಖ್ಯಾತರು ಅಹಿಂಸಾತ್ಮಕ ಮಾರ್ಗವನ್ನು ಅವಲಂಬಿಸುವುದಾದರೆ ಮುಸಲ್ಮಾನರು ಎಷ್ಟೇ ಹಿಂಸೆಯ ಪ್ರಯೋಗ ಮಾಡಿದರೂ ಚಿಂತೆಯಿಲ್ಲ, ಅದೆಲ್ಲವೂ ನಿರರ್ಥಕವಾಗಲೇಬೇಕು. ಆದರೆ ಒಂದು ವಿಷಯವನ್ನು ಮಾತ್ರ ನಾವು ಚೆನ್ನಾಗಿ ಅರ್ಥಮಾಡಿಕೊಳ್ಳಬೇಕು. ಅಹಿಂಸಾಮಾರ್ಗವನ್ನು ಹಿಡಿಯುವವರು ಹಿಂಸಾಕೃತ್ಯಗಳನ್ನು ಮಾಡದೆ ಇರುವುದು ಮಾತ್ರವಲ್ಲ, ಮನಸ್ಸಿನಲ್ಲಿಯೂ ಹಿಂಸೆಯ ಚಿಂತನೆಯನ್ನು ಮಾಡಬಾರದು. ಪಾಕಿಸ್ತಾನದ ಸ್ಥಾಪನೆ ತಪ್ಪಾಗಿರುವ ಪಕ್ಷಕ್ಕೆ ಬಂಗಾಳವನ್ನೂ ಪಂಜಾಬನ್ನೂ ವಿಭಜನೆ ಮಾಡುವುದರಿಂದ ಅದು ಒಪ್ಪಾಗಲಾರದು. ಎರಡು ತಪ್ಪುಗಳು ಒಂದು ಒಪ್ಪಾಗಲು ಸಾಧ್ಯವಿಲ್ಲ.

**ಪ್ರಶ್ನೆ :** ಸಮಾಜವಾದಿಗಳನೇಕರು ಸಮಾಜವಾದದ ಪ್ರಕಾರ ಒಂದು ಕ್ರಾಂತಿಯುಂಟಾದರೆ ಆರ್ಥಿಕ ಪ್ರಶ್ನೆ ಮುಂದಕ್ಕೆ ಬಂದು, ಈ ಕೋಮುವಾರು ವೈಷಮ್ಯ ಮರೆಯಾಗುವುದೆಂದು ವಾದಿಸುವರು. ಇದಕ್ಕೆ ನಿಮ್ಮ ಅಭಿಪ್ರಾಯವೇನು? ಈ ಬಗೆಯ ಕ್ರಾಂತಿಯಾಗುವ ಪಕ್ಷಕ್ಕೆ ಇದರ ಪರಿಣಾಮವಾಗಿ ನೀವು ರಾಮರಾಜ್ಯವೆಂದು ಕರೆಯುವ ಧರ್ಮರಾಜ್ಯ ಅಥವಾ ಭಗವಂತನ ರಾಜ್ಯ ಸ್ಥಾಪನೆಯಾಗುವುದೆ?

**ಉತ್ತರ :** ನೀವು ಸೂಚಿಸುವ ಆರ್ಥಿಕ ಘರ್ಷಣೆ ಅಥವಾ ಕ್ರಾಂತಿ ಹಿಂದೂ–ಮುಸಲ್ಮಾನ ವೈಷಮ್ಯವನ್ನು ಸ್ವಲ್ಪ ಕಡಮೆ ಮಾಡೀತು. ಹಿಂದೂ–ಮುಸಲ್ಮಾನ ವೈಷಮ್ಯ ಕೊನೆಗೊಂಡರೂ ನಮ್ಮ ಎಲ್ಲ ಸಮಸ್ಯೆಗಳೂ ಪರಿಹಾರವಾದಂತೆ ಆಗುವುದಿಲ್ಲ. ಈಗ ನಡೆಯುತ್ತಿರುವುದು ಹೀಗೆ: ನಮ್ಮ ಗುಲಾಮತನವು ಕೊನೆಗೊಂಡು ನಮಗೆ ಸ್ವಾತಂತ್ರ್ಯ ಸಿಗುವ ತರುಣದಲ್ಲಿ ಸಮಾಜದಲ್ಲಿರುವ ದೌರ್ಬಲ್ಯಗಳೆಲ್ಲ ಮೇಲಕ್ಕೆದ್ದು ಕಾಣಿಸಿಕೊಳ್ಳುವುವು. ಇದಕ್ಕಾಗಿ ಅನವಶ್ಯವಾಗಿ ನಾವು ತಲೆಕೆಡಿಸಿಕೊಳ್ಳುವ ಕಾರಣವಿಲ್ಲ. ಈ ಸಂದರ್ಭದಲ್ಲಿ ನಮ್ಮ ಮನಸ್ಸನ್ನು ಸ್ತಿಮಿತದಲ್ಲಿಟ್ಟುಕೊಂಡರೆ ಎಲ್ಲ ಸಿಕ್ಕುಗಳೂ ಪರಿಹಾರವಾಗುವುವು. ಆರ್ಥಿಕ ಸಮಸ್ಯೆಯನ್ನಂತೂ ನಾವು ಎಂದಾದರೂ ಬಿಡಿಸಲೇಬೇಕು. ಈ ಹೊತ್ತು ಬಹಳಮಟ್ಟಿಗೆ ಆರ್ಥಿಕ ಅಸಮಾನತೆ ಇದೆ. ಸಮಾಜ

ವಾದದ ಪ್ರಕಾರ ಜನರಲ್ಲಿ ಸಮಾನತೆ ಇರಬೇಕು. ಈಗಿನ ಪರಿಸ್ಥಿತಿಯಲ್ಲಿ ಕೆಲವರು ಅಪಾರ ಐಶ್ವರ್ಯದಲ್ಲಿ ಮುಳುಗಿರುವರು; ಅನೇಕರು ಹೊಟ್ಟೆಗೆ ಕೂಳಿಲ್ಲದೆ ಇರುವರು. ಇಂತಹದರಲ್ಲಿ ರಾಮರಾಜ್ಯವನ್ನು ಎಂದಿಗೂ ಸ್ಥಾಪಿಸಲು ಸಾಧ್ಯವಿಲ್ಲ. ನಾನು ದಕ್ಷಿಣ ಆಫ್ರಿಕದಲ್ಲಿರುವಾಗಲೇ ಸಮಾಜವಾದದ ತತ್ತ್ವವನ್ನು ಒಪ್ಪಿಕೊಂಡೆ. ಸಮಾಜವಾದಿಗಳಿಗೂ ನನಗೂ ಇರುವ ಅಭಿಪ್ರಾಯ ಭೇದವಿಷ್ಟೆ: ಶಾಶ್ವತವಾದ ಸುಧಾರಣೆಯನ್ನು ಸ್ಥಾಪಿಸಲು ಅವರು ಹಿಂಸಾ ಮಾರ್ಗವನ್ನು ಹಿಡಿಯುವವರೆಗೂ ನಾನು ಅವರ ದಾರಿಯನ್ನು ಒಪ್ಪಲಾರೆ.

**ಪ್ರಶ್ನೆ:** ಒಬ್ಬ ರಾಜನೋ ಜಮೀನುದಾರನೋ ಅಥವಾ ಬಂಡವಾಳಗಾರನೋ ಟ್ರಸ್ಟಿ(ನಿಧಿಪಾಲಕ)ಯಂತೆ ಇರಬೇಕೆಂದು ನೀವು ಹೇಳುವಿರಿ. ಅಂತಹವರು ಯಾರಾದರೂ ಇಂದು ಇರುವರೆ? ಅಥವಾ ಈ ರೀತಿಯಲ್ಲಿ ಅವರು ಬದಲಾಯಿಸಬಹುದೆಂದು ನಿರೀಕ್ಷಿಸುವಿರಾ?

**ಉತ್ತರ:** ಇಂದೂ ಎಲ್ಲೋ ಕೆಲವರಿರುವರು. ಆದರೆ ನಾನು ಹೇಳುವ ಅರ್ಥದಲ್ಲಿ ಪೂರ್ತಿಯಾಗಿಲ್ಲದೆ ಇರಬಹುದು. ಆದರೆ ಆ ಮಾರ್ಗದಲ್ಲಿ ಅವರು ಮುಂದುವರಿಯುತ್ತಿದಾರೆ. ಆದರೆ ಈಗಿನ ರಾಜರೂ ಅವರಂತಹ ಇತರರೂ ಬಡಜನರ ಯೋಗಕ್ಷೇಮವನ್ನು ನೋಡಿಕೊಳ್ಳುವಂತಹವರಾಗಬಹುದೇ ಎನ್ನುವ ಪ್ರಶ್ನೆ ಉಳಿಯುತ್ತದೆ. ತಾನಾಗಿ ಹೀಗೆ ಆಗದೆ ಹೋದ ಪಕ್ಷಕ್ಕೆ ಪರಿಸ್ಥಿತಿಗಳು ಬದಲಾಯಿಸಿ ಅವರು ಹೀಗೆ ಆಗಲೇಬೇಕು, ಇಲ್ಲವಾದರೆ ಅವರು ಅಳಿಯುವರು. ಪಂಚಾಯತ ರಾಜ್ಯವು ಸ್ಥಾಪನೆಯಾದಾಗ ಹಿಂಸಾಮಾರ್ಗದಿಂದ ಸಾಧ್ಯವಾಗದ ಕೆಲಸ ಸಾರ್ವಜನಿಕ ಅಭಿಮತದಿಂದ ಸಾಧ್ಯವಾಗುವುದು. ಸಾಮಾನ್ಯ ಜನರು ತಮ್ಮ ಶಕ್ತಿಯನ್ನು ಅರಿತುಕೊಳ್ಳದೆ ಇರುವವರೆಗೆ ಮಾತ್ರವೆ ಈಗ ಜಮೀನುದಾರರೂ, ರಾಜರೂ ಅನುಭವಿಸುತ್ತಿರುವ ಪ್ರಾಬಲ್ಯ ನಡೆಯುವುದು. ಜಮೀನುದಾರಿಯ ಅಥವಾ ಬಂಡವಾಳಶಾಹಿಯ ದುಷ್ಟಗುಣದೊಂದಿಗೆ ಜನರು ಅಸಹಕಾರ ನಡೆಸಿದರೆ ಈ ಪದ್ಧತಿಗಳು ಕೃಶವಾಗಿ ನಶಿಸಿಹೋಗುವುವು. ಪಂಚಾಯತ ಆಡಳಿತದಲ್ಲಿ ಪಂಚಾಯತಿಗೇ ಎಲ್ಲರೂ ವಿಧೇಯರಾಗಿರುವರು. ತಾವು ರಚಿಸುವ ಶಾಸನದ ಪ್ರಕಾರ ಪಂಚಾಯತು ಕಾರ್ಯವನ್ನು ನಡೆಸುವುದು.

**(ಹರಿಜನ, ೧-೬-೧೯೪೭)** **(ಹಿಂದುಸ್ತಾನಿಯಿಂದ)**
**(ನವದೆಹಲಿ, ೨೫-೫-೧೯೪೭)**

# ದಿಲ್ಲಿಯಲ್ಲಿ

ಪಂಡಿತ ನೆಹರೂರ ಕರೆಯ ಮೇರೆಗೆ ಗಾಂಧೀಜೀ ಮೇ ೨೫ನೇ ತಾರೀಕು ಉರಿಯುವ ಬಿಸಿಲಿನಲ್ಲಿ ದಿಲ್ಲಿಯನ್ನು ತಲಪಿದರು. ಸರದಾರರೂ ನೆಹರೂ ಇಬ್ಬರೂ ಹವಾ ಬದಲಾವಣೆಗೆ ಮುಸ್ಸೋರಿಗೆ ಹೋಗಿದ್ದರು. ಅಲ್ಲಿಗೆ ಗಾಂಧೀಜೀ ದಯಮಾಡಿಸಬೇಕೆಂದು ಇಬ್ಬರೂ ಅವರಿಗೆ ತಾರು ಕೊಟ್ಟಿದ್ದರು. ಆದರೂ ಅವರು ಅಲ್ಲಿಗೆ ಹೋಗಲು ಆಗಲಿಲ್ಲ. ಏಕೆಂದರೆ ತಮ್ಮ ಸೇವಾಕ್ಷೇತ್ರ ಗಳಾದ ನೌಖಾಲಿ, ಬಿಹಾರ್ ಮತ್ತು ಕಲ್ಕತ್ತೆಯಲ್ಲಿ ಹಿಂದೂ-ಮುಸಲ್ಮಾನರಲ್ಲಿ ಸೌಹಾರ್ದ ಉಂಟಾಗುವವರೆಗೂ ತಾವು ಈ ಸ್ಥಳಗಳನ್ನು ಬಿಟ್ಟು ಹೋಗಬಾರ ದೆಂದು ಸಂಕಲ್ಪಮಾಡಿದ್ದರು.

ದೇಶದಲ್ಲಿ ನಡೆಯುತ್ತಿರುವ ಘಟನೆಗಳು ಅವರ ಮನಸ್ಸಿನಲ್ಲಿ ಬಹಳ ದುಗುಡವನ್ನುಂಟುಮಾಡಿವೆ. ತಮ್ಮೊಡನೆ ಯಾವಾಗಲೂ ಇರುತ್ತಿದ್ದ ಪರಿವಾರ ವನ್ನು ಕಳುಹಿಸಿಕೊಟ್ಟು ಏಕಾಂಗಿಯಾಗಿರುವುದರಿಂದ ಅವರ ಶ್ರಮ ಬಹಳ ಹೆಚ್ಚಿದೆ. ತಮ್ಮ ಆರೋಗ್ಯ ಮತ್ತು ಪ್ರಾಣರಕ್ಷಣೆ ಇವುಗಳ ವಿಷಯದಲ್ಲಿ ಸ್ವಲ್ಪವೂ ಲಕ್ಷ್ಯವಿಡದೆ ನಡೆದುಕೊಳ್ಳುತ್ತಿದ್ದರು. 'ಈಗ ನನ್ನೆದುರಿಗೆ ರೂಪು ಗೊಳ್ಳುತ್ತಿರುವ ಭಾರತದಲ್ಲಿ ನನಗೆ ಜಾಗವಿಲ್ಲ' ಎಂದು ಅವರು ಹೇಳಿದರು. ಅವರ ಧ್ವನಿಯಲ್ಲಿ ಉದ್ವೇಗ ಕಾಣುತ್ತಿತ್ತು. ೧೨೫ ವರ್ಷಗಳು ಬದುಕಬೇಕೆಂಬ ಆಸೆಯನ್ನು ನಾನು ಬಿಟ್ಟಿದೇನೆ. ನಾನಿನ್ನು ಒಂದೆರಡು ವರ್ಷ ಬದುಕಬಹುದು. ಅದು ಏನೇ ಆಗಲಿ, ಭಾರತವು ಈ ಹಿಂಸಾಕೃತ್ಯಗಳ ಪ್ರವಾಹದಲ್ಲಿ ಮುಳುಗು ವುದಾದರೆ, ಈಗಿನ ಚಿಹ್ನೆಗಳು ಹಾಗೆಯೇ ಇವೆ, ಬದುಕಿರಲು ನನಗೆ ಇಷ್ಟವಿಲ್ಲ. ಈ ಕೋಮುವಾರು ವಿಷಜ್ವಾಲೆ, ಅದರ ಜೊತೆಗೆ ಸೈನ್ಯದ ಸಿದ್ಧತೆ, ಕೈಗಾರಿಕೆಗಳ ಯಾಂತ್ರೀಕರಣವೆಂದು ಮಾತನಾಡುತ್ತಿದಾರೆ. ಭಾರತವು ಯುದ್ಧಸನ್ನಾಹದಲ್ಲಿ ಪ್ರಥಮ ರಾಷ್ಟ್ರವಾಗಬಹುದು, ದೊಡ್ಡ ಕಾರ್ಖಾನೆಗಳನ್ನೂ ಪಡೆಯಬಹುದು. ಇಂತಹ ರಾಷ್ಟ್ರದಲ್ಲಿ ಅಹಿಂಸೆಗೆ ಸಂಕೇತಗಳಾದ ಗ್ರಾಮೋದ್ಯೋಗಗಳಿಗೂ, ಖಾದಿಗೂ ಸ್ಥಾನವೆಲ್ಲಿ ?

ಹಳೆಯ ಆಶ್ರಮವಾಸಿಗೆ ಬರೆದ ಪತ್ರದಲ್ಲಿ ಹೀಗೆಂದು ಬರೆದರು: 'ನಾನು ಜ್ವಾಲೆಗಳ ಮಧ್ಯೆ ಇದೇನೆ. ಈ ಜ್ವಾಲೆಗಳು ನನ್ನನ್ನು ದಹಿಸದೆ

ಇರುವುದು ದೇವರ ಕರುಣೆಯೇ ಅಥವಾ ಒಂದು ವಿಡಂಬನೆಯೆ?'

ಅವರನ್ನು ಉಳಿಸಿರುವ ಶಕ್ತಿ ಯಾವುದು? ಅದು ಅಪಾರವಾದ, ಹಿಮಾಲಯದಂತಹ ಶ್ರದ್ಧೆ. ಅವರೊಡನೆ ೧೯೪೫ರಲ್ಲಿ ಕೆಲವು ದಿನಗಳಿದ್ದ ಅವರ ಐರೋಪ್ಯ ಮಿತ್ರರೊಬ್ಬರು ಅಮೆರಿಕದಿಂದ ಅವರಿಗೆ ಈ ರೀತಿ ಬರೆಯುತ್ತಾರೆ: 'ನಾನು ಅಣುಬಾಂಬಿಗೆ ಬೇಕಾದ ಸಾಮಗ್ರಿಯಾದ U-೨೩೫ನ್ನು ತಯಾರಿಸುವ ಸ್ಥಳದಿಂದ ಬಹಳ ದೂರವಿಲ್ಲ. ನಾನು ನಿಮ್ಮನ್ನು ನನ್ನ ಪ್ರಾರ್ಥನೆಯಲ್ಲಿ ನೆನಪು ಮಾಡಿಕೊಳ್ಳುತ್ತೇನೆ. ನಮ್ಮ ಪಾಶ್ಚಾತ್ಯ ನಾಗರಿಕತೆ ಉಳಿಯಲು ನಿಮ್ಮ ತೇಜೋಮಯವಾದ ಹಾಗೂ ಸ್ನೇಹಪೂರಿತವಾದ ಮಾರ್ಗದರ್ಶನ, ವಿವೇಕ ಇವೇ ಆಶಾಕಿರಣ.' ಇದಕ್ಕೆ ಉತ್ತರ ಬರೆಯುತ್ತ ಗಾಂಧೀಜೀ ಬರೆದರು: 'ನೀವು ನನ್ನನ್ನು ಹಿಂದೆ ನೋಡಿದಾಗ ಹೇಗಿದ್ದೆನೋ—ಅದೇ ಮನುಷ್ಯನಾಗಿದೇನೆ. ಆದರೆ ನನ್ನ ದೃಢವಾದ ಶ್ರದ್ಧೆ ಪೂರ್ವಕ್ಕಿಂತಲೂ ಹೆಚ್ಚಾಗಿ ಬೆಳೆದಿದೆ.'

ಚೀಣಾದೇಶದ ರಾಯಭಾರಿಯಾದ ಡಾ|| ಲೊಚಿಯಾ ಲೂ ಎನ್ ನೆಹರೂ ಅವರೊಡನೆ ಗಾಂಧೀಜಿಯನ್ನು ನೋಡಲು ಬಂದಿದ್ದರು. ಪರಿಸ್ಥಿತಿಗಳು ಹೇಗೆ ರೂಪುಗೊಳ್ಳಬಹುದೆಂದು ನಿಮಗೆ ತೋರುತ್ತದೆ? ಭವಿಷ್ಯದ ವಿಷಯದಲ್ಲಿ ನಿಮಗೇನು ತೋರುವುದು?' ಎಂದು ಅವರು ಕೇಳಿದರು.

'ನಾನು ಎಂದೂ ಎದೆಗೆಡದ ಆಶಾವಾದಿ' ಎಂದರು ಗಾಂಧೀಜೀ. 'ಬಂಗಾಳ, ಬಿಹಾರ್ ಮತ್ತು ಪಂಜಾಬಿನಲ್ಲಿ ಅರ್ಥವಿಲ್ಲದ ರಕ್ತಪಾತವನ್ನು ನೋಡಿದರೆ ನಾವು ಕಾಡುಜನರು ಆಗುತ್ತಿದೇವೆಯೇ ಎಂಬ ಸಂಶಯ ತೋರಿದರೂ, ನಾವಿಷ್ಟು ವರ್ಷಗಳು ಬದುಕಿ ಶ್ರಮಿಸಿದುದು ವ್ಯರ್ಥವಾಗಿ ಹೋಗಲಾರದು. ನಾವು ನಮ್ಮ ಪಾರತಂತ್ರ್ಯವನ್ನು ಕಿತ್ತು ಸ್ವತಂತ್ರರಾದಂತೆ, ಒಳಗೆ ಹುದುಗಿದ್ದ ಕಶ್ಮಲವೆಲ್ಲವೂ ಮೇಲಕ್ಕೆ ಬರುತ್ತಿದೆಯೆಂದು ನನಗೆ ಅನ್ನಿಸುತ್ತದೆ. ಗಂಗಾನದಿಯಲ್ಲಿ ಪ್ರವಾಹ ಬಂದಾಗ ನೀರು ಕೊಳೆಯಿಂದ ಕೂಡಿರುತ್ತದೆ. ಎಲ್ಲ ಕಶ್ಮಲವೂ ತೇಲಿ ಮೇಲಕ್ಕೆ ಬರುತ್ತದೆ. ಪ್ರವಾಹ ಇಳಿದಾಗ ಕಣ್ಣಿಗೆ ಹಿತಕರವಾದ ನಿರ್ಮಲವಾದ ನೀರು ಹರಿಯುತ್ತದೆ. ಈಗಲೂ ಹೀಗೆ ಆಗಬಹುದೆಂಬ ವಿಶ್ವಾಸವನ್ನುಳ್ಳವನಾಗಿ ನಾನು ಬದುಕಿದೇನೆ. ಭಾರತದೇಶದ ಜನರು ರೂಕ್ಷಾವಸ್ಥೆಗೆ ಇಳಿದುದನ್ನು ನೋಡುತ್ತ ಬದುಕಿರುವುದು ನನಗಿಷ್ಟವಿಲ್ಲ.'

'ಭವಿಷ್ಯವನ್ನು ಯಾರು ನುಡಿಯಲು ಸಾಧ್ಯ? ಬಟ್ಲರ್ ಎಂಬ ಆಂಗ್ಲ ಪಂಡಿತ ಬರೆದ 'ಅನಾಲಜಿ' ಎಂಬ ಪುಸ್ತಕವನ್ನು ನಾನು ಅನೇಕ ವರ್ಷಗಳ ಹಿಂದೆ ಓದಿದೆ. 'ಭವಿಷ್ಯವು ಸ್ವಲ್ಪಮಟ್ಟಿಗೆ ಭೂತಕಾಲದ ಪರಿಣಾಮ'ವೆಂದು ಅಲ್ಲಿ ಓದಿದ್ದೆ. ಇದೇ ಭಾರತೀಯರ ಸಿದ್ಧಾಂತವೂ ಆಗಿದೆ. ಈ ಸಿದ್ಧಾಂತದ ಮನನ ಆಗಾಗ್ಗೆ ಮಾಡುತ್ತಿದೇನೆ. ನಮ್ಮ ಭವಿಷ್ಯವನ್ನು ನಾವೇ ರೂಪಿಸಿ ಕೊಳ್ಳುವವರು. ವರ್ತಮಾನಕಾಲದಲ್ಲಿ ನಾವು ಸೃಷ್ಟಿಮಾಡಬಹುದು ಅಥವಾ ನಾಶಗೊಳಿಸಬಹುದು. ಅದರ ಮೇಲೆ ನಮ್ಮ ಭವಿಷ್ಯ ಅವಲಂಬಿಸಿದೆ.'

ಚೀಣಾ ದೇಶದ ರಾಯಭಾರಿ ಚಿಂತೆಯಲ್ಲಿ ಮಗ್ನರಾದರು. 'ಇತಿಹಾಸವು ಪುನರಾವರ್ತನೆಗೊಳ್ಳುತ್ತದೆ, ಏಕೆಂದರೆ ಅದರ ಪಾಠವನ್ನು ನಾವು ಕಲಿತಿಲ್ಲ.'

'ಅದು ಅರ್ಧ ಸತ್ಯ' ಎಂದು ಗಾಂಧೀಜೀ ಉತ್ತರವಿತ್ತರು. 'ಇತಿಹಾಸ ಇಂದು ಪುನರಾವರ್ತನೆಯಾಗುತ್ತಿರುವಂತೆ ತೋರಬಹುದು. ಆದರೆ ಯಾವುದೂ ಯಥಾಸ್ಥಿತಿಯಲ್ಲಿರುವುದಿಲ್ಲ. ಮಾನವಸ್ವಭಾವವು ಉತ್ತಮಗೊಳ್ಳುತ್ತ ಹೋಗ ಬೇಕು ಅಥವಾ ಪತನವಾಗುತ್ತಿರಬೇಕು. ಭಾರತದೇಶದಲ್ಲಿ ಉತ್ತಮಗೊಳ್ಳು ತ್ತಿದೆಯೆಂಬ ವಿಶ್ವಾಸವನ್ನು ನಾವು ತಾಳೋಣ. ಇಲ್ಲವಾದರೆ ಭಾರತಕ್ಕೆ ಪ್ರಳಯವೇ ಬಂದಂತೆ ಆಗುವುದು. ಪ್ರಾಯಶಃ ಈ ಪ್ರಳಯ ಪ್ರಪಂಚವನ್ನೆಲ್ಲ ಆವರಿಸುವುದು.'

ಚೀಣಾ ದೇಶದಲ್ಲಿ ಯುದ್ಧದಿಂದ ಆದ ಅಪಾರ ನಷ್ಟವನ್ನು ಕುರಿತು ಮಾತನಾಡಿದರು. ಯುದ್ಧದಿಂದ ಬೇಸರಗೊಂಡ ಏಷ್ಯಾ ಖಂಡದ ರಾಷ್ಟ್ರಗಳು ಜಪಾನಿನ ಮೇಲ್ಪಂಕ್ತಿಯನ್ನನುಸರಿಸಿ ಸೈನ್ಯಸಂಚಯನ ಮಾಡುವ ರಾಷ್ಟ್ರ ಗಳಾಗುವುವೆ? ಈ ಪ್ರಶ್ನೆಗೆ ಉತ್ತರವನ್ನು ಭಾರತ ಸೂಚಿಸಬೇಕು. ಅದು ಯಾವ ಕಡೆ ವಾಲುತ್ತದೆಯೋ ಅತ್ತ ಕಡೆ ಇತರ ರಾಷ್ಟ್ರಗಳು ಹಿಂಬಾಲಿಸುವುವು. ಪ್ರಾರ್ಥನಾನಂತರ ಮಾಡಿದ ಪ್ರವಚನದಲ್ಲಿ, 'ಭಾರತವು ಇಂದು ಪ್ರಪಂಚದ ನಗೆಗೀಡಾಗಿದೆ' ಎಂದರು ಗಾಂಧೀಜೀ. 'ನೀವು ಸ್ವಾತಂತ್ರ್ಯವನ್ನು ಸಾಧಿಸಿದ ಅಹಿಂಸೆ ಇಂದೆಲ್ಲಿ ಎಂದು ಪ್ರಪಂಚ ಕೇಳುತ್ತಿದೆ. ನಾನು ನಾಚಿಕೆಯಿಂದ ನನ್ನ ತಲೆತಗ್ಗಿಸಬೇಕಾಗಿದೆ. ಭಾರತವು ಪ್ರಪಂಚದ ಮುಂದೆ ಶಾಂತಿಸಂದೇಶವನ್ನು ನೀಡುವುದೇ ಅಥವಾ ಪ್ರಪಂಚಕ್ಕೇ ಸಂಚಕಾರ ತಂದಿರುವ ದ್ವೇಷ, ಹಿಂಸೆ —ಈ ಪಾಠವನ್ನು ಹೇಳುವುದೆ?'

ಚೀಣಾ ದೇಶದ ರಾಯಭಾರಿ ಗಾಂಧೀಜೀಗೆ ತಮ್ಮ ದೇಶದ ಪೂರ್ಣ ಭಕ್ತಿಯನ್ನೂ ಪ್ರೀತಿಯನ್ನೂ ತಿಳಿಸಿದರು. ತಮ್ಮ ಪ್ರೀತಿ ಬಹಳ ಬೆಲೆಯುಳ್ಳ ದೆಂದು ಗಾಂಧೀಜೀ ಹೇಳಿ, ಭಾರತದೊಂದಿಗೆ ಅನೇಕ ವಿಷಯಗಳಲ್ಲಿ ಸಾಮ್ಯ ಇರುವ ಚೀಣಾ ದೇಶಕ್ಕೆ ಭೇಟಿ ಕೊಡುವ ಆಸೆ ತಮಗಿದೆ ಎಂದರು. ರಾಯ ಭಾರಿ ಚೀಣಾದೇಶದ ತತ್ತ್ವಶಾಸ್ತ್ರವನ್ನು ಕುರಿತು ಹೇಳುತ್ತ ಲಾ ಓಟ್ಸೆಯವರ ನುಡಿಯನ್ನು ಉದಹರಿಸಿದರು: 'ಸ್ವಾಮ್ಯವಿಲ್ಲದ ಉತ್ಪಾದನೆ, ಆತ್ಮಪ್ರತಿಷ್ಠೆ ಇಲ್ಲದ ಕಾರ್ಯ, ರಚನೆ—ಆದರೆ ಅಧಿಕಾರ ಮಾಡಬೇಕೆಂಬ ಲಾಲಸೆ ಇಲ್ಲ ದಿರುವಿಕೆ.' ಗಾಂಧೀಜಿಯ ಮುಖದಲ್ಲಿ ಕಾಂತಿ ತುಂಬಿತು. 'ಉಪನಿಷತ್ತಿನ ವಾಕ್ಯಗಳನ್ನು ನೀವು ಆಡುತ್ತಿರುವಿರಿ' ಎಂದರು. 'ಇದೇ ಮಾತು ಉಪನಿಷತ್ತು ಗಳಲ್ಲಿದೆ.'

(ಹೊಸ ದಿಲ್ಲಿ, ೨೬-೫-೧೯೪೭)
(ಹರಿಜನ, ೮-೬-೧೯೪೭)

## ಅಹಿಂಸಾಶ್ರದ್ಧೆ ಇನ್ನೂ ಬಲಗೊಂಡಿತು

(ಅಮೆರಿಕದ ಯುನೈಟೆಡ್ ಪ್ರೆಸ್ಸಿನವರು ಹಾಕಿದ ಪ್ರಶ್ನೆಗಳಿಗೆ ಗಾಂಧೀಜೀ ಈ ರೀತಿ ಉತ್ತರ ಕೊಟ್ಟರು.)

**ಪ್ರಶ್ನೆ:** ಈಗಿನ ಸಂಧಾನ ಹೇಗಾದರೂ ಕೊನೆಗಾಣಲಿ, ಒಂದು ಕೇಂದ್ರ ಸರಕಾರಕ್ಕೆ ಅಧೀನವಾಗಿ ಒಟ್ಟುಗೂಡಿ ಭಾರತವಿರುವುದೆಂಬ ವಿಶ್ವಾಸ ನಿಮಗಿದೆಯೆ?

**ಉತ್ತರ:** ಈಗ ನಾವು ಹೇಗೆ ವರ್ತಿಸುತ್ತೇವೆಯೋ ಅದರ ಮೇಲೆ ಭವಿಷ್ಯ ರೂಪುಗೊಳ್ಳಬೇಕು.

**ಪ್ರಶ್ನೆ:** ಎಲ್ಲ ರಾಷ್ಟ್ರಗಳನ್ನೂ ಪ್ರತಿನಿಧಿಸುವ ಒಂದು ಸರಕಾರಕ್ಕೆ ಪ್ರಪಂಚವೆಲ್ಲ ಅಧೀನವಾಗುವ ಸಂಭವವಿದೆಯೆ?

**ಉತ್ತರ:** ಹೀಗಾದರೇನೇ ಪ್ರಪಂಚ ಉಳಿಯುವುದು.

**ಪ್ರಶ್ನೆ:** ರಷ್ಯಾಕ್ಕೂ ಅಮೆರಿಕಕ್ಕೂ ಯುದ್ಧವಾಗುವ ಸಂಭವ ಇದೆಯೇ?

**ಉತ್ತರ :** ಏನಾದರೂ ಆಗಬಹುದು ; ಆದರೂ ಇದು ಬಹಳಮಟ್ಟಿಗೆ ಅಸಂಭವ.

**ಪ್ರಶ್ನೆ :** ಪ್ಯಾಲೆಸ್ಟೈನ್ ಸಮಸ್ಯೆಗೆ ಸೂಕ್ತವಾದ ಪರಿಹಾರವೇನು ?

**ಉತ್ತರ :** ಯಹೂದ್ಯರು ಪೂರ್ತಿಯಾಗಿ ಹಿಂಸಾಕೃತ್ಯಗಳನ್ನೂ ಭಯಾನಕ ಮಾರ್ಗವನ್ನೂ ತ್ಯಜಿಸುವುದು.

**ಪ್ರಶ್ನೆ :** ಈಜಿಪ್ಟ್ ಮತ್ತು ಸೂಡಾನ್ ದೇಶಗಳು—ಬ್ರಿಟಿಷರು ಬಿಟ್ಟು ಹೋದನಂತರ ಒಂದು ರಾಷ್ಟ್ರವಾಗಬೇಕೆಂದು ನಿಮ್ಮ ಅಭಿಪ್ರಾಯವೆ ?

**ಉತ್ತರ :** ಅವರು ಹಾಗೆ ಮಾಡಬೇಕೆಂಬ ವಿಷಯದಲ್ಲಿ ನನಗೇನೂ ಶಂಕೆ ಇಲ್ಲ.

**ಪ್ರಶ್ನೆ :** ಈ ಐದು ತಿಂಗಳುಗಳಿಂದ ನಿಮಗಾಗಿರುವ ಅನುಭವದಿಂದ ಪ್ರಪಂಚದ ಸಮಸ್ಯೆಗಳನ್ನು ಪರಿಹಾರಮಾಡಲು ಅಹಿಂಸಾ ಸಿದ್ಧಾಂತವು ಪರಿಣಾಮಕಾರಿಯಾಗುವುದೆಂದು ನೀವು ಎಣಿಸುವಿರಾ ?

**ಉತ್ತರ :** ನೌಖಾಲಿಯಲ್ಲಿ ನಾನು ಈ ಐದು ತಿಂಗಳುಗಳಿಂದ ಪಡೆದ ಅನುಭವ ನಮ್ಮ ಎಲ್ಲ ರೋಗಗಳನ್ನೂ ಅಹಿಂಸೆಯೊಂದೇ ಪರಿಹಾರ ಮಾಡುವುದೆಂಬ ನನ್ನ ಹಿಂದಿನ ಅನುಭವವನ್ನು ದೃಢಗೊಳಿಸಿದೆ.

(ಹರಿಜನ, ೮–೬–೧೯೪೭)

## ದೇವರ ದಾರಿ ಧೀರರಿಗೇ

ಆಹಾರ, ನಿದ್ರೆ, ಉಳಿದ ದೈಹಿಕ ಕ್ರಿಯೆಗಳಲ್ಲಿ ಮನುಷ್ಯರಿಗೂ ಪಶುಗಳಿಗೂ ಏನೂ ವ್ಯತ್ಯಾಸವಿಲ್ಲ. ಆದರೆ ಮಾನವನು ಸತತವಾಗಿ ನೀತಿಮಾರ್ಗದಲ್ಲಿ ಮುಂದೆ ಸಾಗಲು ಪ್ರಯತ್ನ ನಡೆಸುವುದೇ ಮಾನವನಿಗೂ ಪಶುವಿಗೂ ಇರುವ ವ್ಯತ್ಯಾಸ. ಮಾನವನು ಸಾಗುತ್ತಿರುವ ದಾರಿ ಈಗ ಕವಲೊಡೆದಿದೆ. ಅವನು ಮಾನವತೆಯನ್ನು ಸಾಧಿಸಬೇಕೇ ? ಪಶುಗಳ ಮಾರ್ಗವನ್ನು ಹಿಡಿಯಬೇಕೇ ?—ಅವನು ನಿರ್ಧರಿಸಬೇಕಾಗಿದೆ. ಭಾರತದಲ್ಲಿ ನಾವು ೨೫ ವರ್ಷಗಳ ಹಿಂದೆ ಮಾನವತೆಯ ಮಾರ್ಗದಲ್ಲಿ ಮುಂದೆ ಸಾಗಬೇಕೆಂದು ನಿರ್ಧರ ಮಾಡಿ

ದೆವು. ನಾವು ಉತ್ತಮ ಮಾರ್ಗದಲ್ಲಿ ನಡೆಯುವೆವೆಂದು ಹೇಳಿಕೊಂಡರೂ ನಮ್ಮ ಆಚರಣೆ ಒಮ್ಮೊಮ್ಮೆ ಅಷ್ಟು ಉತ್ತಮವಾಗಿಲ್ಲವೆಂದು ವಿಷಾದದಿಂದ ಹೇಳಬೇಕಾಗುತ್ತದೆ. ಅಹಿಂಸೆ ಧೀರರ ಮಾರ್ಗವೆಂದು ನಾವು ಗಟ್ಟಿಯಾಗಿ ಸಾರಿದೇವೆ. ಆದರೆ ನಮ್ಮಲ್ಲಿ ಕೆಲವರು ಅಹಿಂಸಾಮಾರ್ಗ ಬಲಹೀನರಿಗೆ ತಕ್ಕುದೆಂದು ಮಾಡಿ ಈ ಮಾರ್ಗಕ್ಕೇ ಕಳಂಕವನ್ನು ತಂದಿದೇವೆ. ಇತ್ತೀಚೆಗೆ ಬೊಂಬಾಯಿಯಲ್ಲಿ ನಡೆದ ಅತ್ಯಾಚಾರಗಳನ್ನು ನೋಡುತ್ತ ಸುಮ್ಮನೆ ಕೈಕಟ್ಟಿ ಕೊಂಡಿರುವುದೇ ಹೇಡಿತನವೆಂದು ನನ್ನ ಅಭಿಪ್ರಾಯ. ಅಹಿಂಸೆ ಶೂರರ ಮಾರ್ಗವೆಂದು ನಾನು ನಮ್ರತೆಯಿಂದ ಹೇಳಬಯಸುತ್ತೇನೆ. 'ಹರಿಯ ಮಾರ್ಗ ಶೂರರಿಗೆ, ಹೇಡಿಗಳಿಗಲ್ಲ' ಎಂದು ಪ್ರೀತಮ್ ಕವಿ ಹಾಡಿದಾನೆ. ಇಲ್ಲಿ ಹರಿಯ ಮಾರ್ಗವೆಂದರೆ ಸತ್ಯ ಮತ್ತು ಅಹಿಂಸೆಯ ಮಾರ್ಗವೆಂದು ಅರ್ಥ. ಭಗವಂತನೆಂದರೆ ಸತ್ಯ ಮತ್ತು ಅಹಿಂಸೆಯಾಗಿ ನನಗೆ ಕಾಣಿಸುತ್ತಾನೆಂದು ನಾನು ಈ ಮೊದಲೇ ಬಿನ್ನವಿಸಿಕೊಂಡಿದೇನೆ. ಅಹಿಂಸಾತತ್ತ್ವವನ್ನೂ ಅದರ ಪೂರ್ಣ ಅರ್ಥವ್ಯಾಪ್ತಿಯನ್ನೂ ತಿಳಿಯದೆ ನೀವು ಅದನ್ನು ಒಪ್ಪಿಕೊಂಡಿರುವ ಪಕ್ಷದಲ್ಲಿ, ಈಗ ಆ ಮಾರ್ಗವನ್ನು ಬಿಡುವುದಕ್ಕೆ ನಿಮಗೆ ಪೂರ್ಣ ಸ್ವಾತಂತ್ರ್ಯ ವಿದೆ. ನಾವು ಮಾಡಿದ ತಪ್ಪುಗಳನ್ನು ಒಪ್ಪಿಕೊಂಡು ಅವುಗಳನ್ನು ತಿದ್ದಿಕೊಳ್ಳ ಬೇಕೆಂಬ ಸಿದ್ಧಾಂತದಲ್ಲಿ ನನಗೆ ಶ್ರದ್ಧೆ ಇದೆ. ಈ ರೀತಿಯಾಗಿ ಒಪ್ಪಿಕೊಳ್ಳುವುದ ರಿಂದ ನಮಗೆ ಬಲ ಬರುತ್ತದೆ; ನಮ್ಮ ಆತ್ಮಶುದ್ಧಿಯಾಗುತ್ತದೆ. ಅಹಿಂಸಾ ಮಾರ್ಗದಲ್ಲಿ ಪ್ರತೀಕಾರ ಮಾಡದೆ ಎಲ್ಲವನ್ನೂ ಸಹಿಸುವ ಶಕ್ತಿಯೂ ಧೈರ್ಯವೂ ಬೇಕು. ಏಟಿಗೆ ಏಟನ್ನು ಕೊಡದೆ ಏಟುಗಳನ್ನು ತಿನ್ನಬೇಕು. ಇಷ್ಟರಿಂದಲೂ ಅಹಿಂಸೆಯ ಪೂರೈಕೆಯಾಗುವುದಿಲ್ಲ. ಸಂದರ್ಭ ಬಂದಾಗ ಪೂರ್ಣವಾದ ಸತ್ಯವನ್ನು ಹೇಳಿ ಅದರಂತೆ ನಡೆಯಬೇಕಾದೀತು. ಇಂತಹ ಸಂದರ್ಭದಲ್ಲಿ ಮೌನವನ್ನು ತಾಳುವುದು ಹೇಡಿತನವಾದೀತು. ಕಾಂಗ್ರೆಸ್ ಘೋಷಣೆ ಮಾಡಿರುವಂತೆ ನಾವು ಭಾರತದ ಸ್ವಾತಂತ್ರ್ಯವನ್ನು ಸತ್ಯ ಮತ್ತು ಅಹಿಂಸೆಗಳ ಮೂಲಕ ಸಾಧಿಸಬೇಕಾದರೆ ಈ ಬಗೆಯ ಧೈರ್ಯವನ್ನು ಬೆಳೆಸಿಕೊಳ್ಳಬೇಕು. ಈ ಆದರ್ಶಕ್ಕಾಗಿ ಬದುಕಿರುವುದು ಸಾರ್ಥಕ, ಸಾಯುವುದೂ ಸಾರ್ಥಕ. ಈ ಆದರ್ಶವನ್ನು ಒಪ್ಪಿಕೊಂಡಿರುವ ನೀವು ಪ್ರತಿಯೊಬ್ಬರೂ ಒಬ್ಬ ಇಂಗ್ಲೀಷ್ ಮಹಿಳೆಯಾಗಲಿ ಮಗುವಾಗಲಿ ದಾಳಿಗೆ ಗುರಿಯಾದರೆ ಇದು ನಿಮ್ಮ ಅಹಿಂಸಾ

ವ್ರತಕ್ಕೆ ಸವಾಲು ಹಾಕಿದಂತೆ. ಅಂತಹ ದೌರ್ಜನ್ಯಕ್ಕೆ ಗುರಿಯಾದವರನ್ನು ನಿಮ್ಮ ಪ್ರಾಣವನ್ನೂ ಸಹ ಅರ್ಪಿಸಿ ನೀವು ಕಾಪಾಡಬೇಕು. ಹೀಗೆ ಮಾಡಿದರೆ ಮಾತ್ರ 'ಹರಿಯ ಮಾರ್ಗ ಶೂರರಿಗೇ, ಹೇಡಿಗಳಿಗಲ್ಲ' ಎಂಬ ಹಾಡನ್ನು ಹಾಡಲು ನೀವು ಅಧಿಕಾರ ಪಡೆಯುವಿರಿ. (ಹರಿಜನ, ೭-೪-೧೯೪೬)

---

ಅಧ್ಯಾಯ – ೭

# ಅಹಿಂಸೆ—ಸಿದ್ಧಾಂತ ಮತ್ತು ಆಚರಣೆ



## ಪರಿಣಾಮಕಾರಿ ಅಹಿಂಸೆ

ಈ ಸಭೆಗಳಲ್ಲಿ (ಯೂರೋಪಿನಲ್ಲಿ ಪ್ರವಾಸ ಮಾಡುತ್ತಿದ್ದಾಗ) ಕೇಳಿದ ಪ್ರಶ್ನೆಗಳೆಲ್ಲ ವಿಶೇಷವಾಗಿ ಅಹಿಂಸಾತತ್ತ್ವಕ್ಕೆ ಸಂಬಂಧಿಸಿದುವು. ಇದು ಸಹಜವೆ. ಅವನ್ನು ನಾನು (ಅಂದರೆ ಮಹಾದೇವ ದೇಸಾಯಿ) ಇಲ್ಲಿ ಸಂಕ್ಷೇಪವಾಗಿ ಕ್ರೋಢೀಕರಿಸಿದೇನೆ. ಪ್ಯಾರಿಸ್ ಸಭೆಗಳಲ್ಲಿ ಆದ ಪ್ರಶ್ನೋತ್ತರಗಳೂ ಇವುಗಳಲ್ಲಿವೆ.

ಹಿಂಸೆಯ ವಿಧಾನಕ್ಕೂ ಅಹಿಂಸೆಯ ವಿಧಾನಕ್ಕೂ ಇರುವ ವ್ಯತ್ಯಾಸವನ್ನು ಗಾಂಧೀಜೀ ವಿಶದಪಡಿಸಿದುದನ್ನು ಪೀಠಿಕಾರೂಪವಾಗಿ ಕೊಡುತ್ತೇನೆ :

‘ ನಾವು ಭಾರತದಲ್ಲಿ ಅನುಸರಿಸುತ್ತಿರುವ ವಿಧಾನದಲ್ಲಿ ಹಿಂಸೆಯಿಂದಲೂ ಅಸತ್ಯದಿಂದಲೂ ಹುಟ್ಟುವ ಕಪಟ, ಸುಳ್ಳು, ಮೋಸ ಮುಂತಾದ ನೀಚ ಗುಣಗಳಿಗೆ ಅವಕಾಶವಿಲ್ಲ. ಎಲ್ಲವನ್ನೂ ಬಹಿರಂಗವಾಗಿ ನಡೆಸುತ್ತಿದೇವೆ; ಮುಚ್ಚುಮರೆಯಿಲ್ಲ. ಏಕೆಂದರೆ ಸತ್ಯದ ಮಾರ್ಗದಲ್ಲಿ ಬಚ್ಚಿಡುವ ಪದ್ಧತಿ ಇರಲೇ ಆರದು. ನಿಮ್ಮ ಆಚರಣೆಗಳೆಲ್ಲ ಬಹಿರಂಗವಾಗಿರುವ ಪ್ರಮಾಣದಲ್ಲಿ ನೀವು ಸತ್ಯವಂತರಾಗಿರುವಿರಿ. ಯಾವನು ಸತ್ಯ ಮತ್ತು ಅಹಿಂಸೆಯ ತಳಹದಿಯ ಮೇಲೆ ತನ್ನ ಜೀವನವನ್ನು ನಿಲ್ಲಿಸುತ್ತಾನೆಯೊ ಅಂತಹವನು ಸೋಲನ್ನಾಗಲಿ ನಿರಾಶೆಯನ್ನಾಗಲಿ ಅರಿಯನು. ಆದರೂ ಅಹಿಂಸಾಮಾರ್ಗವು ಯಾವ ರೀತಿಯಲ್ಲಿಯೂ ತಟಸ್ಥವಾಗಿರುವುದೆಂದಾಗಲಿ ನಿಷ್ಕ್ರಿಯೆಯೆಂದಾಗಲಿ ಹೇಳಲಾಗದು. ಇದು ಕ್ರಿಯಾತ್ಮಕವಾದುದು. ಶಸ್ತ್ರಗಳ ಪ್ರಯೋಗಗಳಲ್ಲಿ ಇರುವ ಕ್ರಿಯೆಗಿಂತಲೂ ಇದರಲ್ಲಿ ಕ್ರಿಯೆ ಹೆಚ್ಚು. ಪ್ರಾಯಶಃ ಪ್ರಪಂಚದಲ್ಲಿ ಸತ್ಯ ಮತ್ತು ಅಹಿಂಸೆಗಿಂತಲೂ ತೀವ್ರವಾದ ಕ್ರಿಯಾತ್ಮಕ ವಸ್ತುಗಳಿಲ್ಲ. ಮಾರಕ ಶಸ್ತ್ರಗಳನ್ನು ಕೈಯಲ್ಲಿ ಹಿಡಿದು ತನ್ನ ಶತ್ರುಗಳನ್ನು ನಾಶಮಾಡ

ಬೇಕೆಂಬ ಉದ್ಯಮದಲ್ಲಿ ತೊಡಗುವವನೂ ಸಹ ಒಂದು ದಿನದಲ್ಲಿ ಸ್ವಲ್ಪ ಹೊತ್ತಾದರೂ ವಿಶ್ರಮಿಸಿಕೊಳ್ಳಬೇಕಾಗುತ್ತದೆ. ಆದುದರಿಂದ ಆ ಹೊತ್ತಿನಲ್ಲಿ ಅವನು ಏನನ್ನೂ ಮಾಡದೆ ನಿಷ್ಕ್ರಿಯನಾಗಿರುತ್ತಾನೆ. ಆದರೆ ಈ ರೀತಿಯ ನಿಷ್ಕ್ರಿಯತೆ ಸತ್ಯ ಮತ್ತು ಅಹಿಂಸಾವ್ರತಗಳನ್ನು ಕೈಗೊಂಡವನಿಗೆ ಸಾಧ್ಯವಿಲ್ಲ; ಏಕೆಂದರೆ ಅವನು ಬಾಹ್ಯದ ಅಸ್ತ್ರಗಳನ್ನು ಅವಲಂಬಿಸುವುದಿಲ್ಲ. ಅವನ ಅಸ್ತ್ರ ಅವನ ಹೃದಯದಲ್ಲಿದೆ. ಅವು ಸದಾ ಕ್ರಿಯೆಯನ್ನು ಮಾಡುತ್ತವೆ. ಎಚ್ಚರ ದಲ್ಲಿಯೂ ನಿದ್ರೆಯಲ್ಲಿಯೂ ನಡೆಯುತ್ತಿರುವಾಗಲೂ ಆಟವಾಡುತ್ತಿರುವಾಗಲೂ ಅವುಗಳ ಕಾರ್ಯ ನಡೆಯುತ್ತಲೇ ಇರುತ್ತದೆ. ಸತ್ಯ ಮತ್ತು ಅಹಿಂಸೆಗಳೆಂಬ ಶಸ್ತ್ರಗಳನ್ನು ಧರಿಸಿದ ವೀರನು ಸದಾ, ಸರ್ವಕಾಲದಲ್ಲಿಯೂ ಕಾರ್ಯಮಾಡು ತ್ತಿರುತ್ತಾನೆ.'

'ಈ ಅಹಿಂಸೆಯ ಆಚರಣೆಯನ್ನು ಪರಿಣಾಮಕಾರಿಯಾಗಿ ಮಾಡುವುದು ಹೇಗೆ? ಕೇವಲ ಶಸ್ತ್ರಸನ್ಯಾಸಮಾಡಿದರೆ ಸಾಕೆ? ಪ್ರಸಿದ್ಧ ವಿಜ್ಞಾನಿಯಾದ ಐನ್‌ಸ್ಟೈನ್ ಯುದ್ಧದಲ್ಲಿ ಭಾಗವಹಿಸಬಾರದೆಂದು ಜನರಿಗೆ ಆದೇಶವಿತ್ತನು. ಅದು ಸಾಕಾಯಿತೆ?' ಈ ಬಗೆಯ ಪ್ರಶ್ನೆಗಳು ಪದೇ ಪದೇ ಏಳುತ್ತಿದ್ದವು. ಸಂದರ್ಭವೂ ಶ್ರೋತೃಗಳೂ ಅವರಿಗೆ ಸ್ಫೂರ್ತಿ ಒದಗಿಸಿದಂತೆ ಗಾಂಧೀಜೀ ಈ ಪ್ರಶ್ನೆಗಳಿಗೆ ಉತ್ತರಗಳನ್ನು ಕೊಡುತ್ತಿದ್ದರು.

ಐನ್‌ಸ್ಟೈನ್ ಅವರ ಮಾತನ್ನು ಪ್ರಸ್ತಾಪಿಸಿ ಸಭೆಯಲ್ಲಿರುವವರಿಗೆ ತಿಳಿಯುವಂತೆ ಸ್ವಲ್ಪ ಹಾಸ್ಯದ ರೀತಿಯಲ್ಲಿ ಮಾತನಾಡಿದರು:

'ನನ್ನ ಉತ್ತರ ಒಂದೇ: ಈ ಮಾರ್ಗವನ್ನು ಯೂರೋಪಿನವರು ಉತ್ಸಾಹದಿಂದ ಕೈಗೊಂಡ ಪಕ್ಷಕ್ಕೆ ಬಹಳ ಉತ್ತಮವಾದೀತು. ಐನ್‌ಸ್ಟೈನ್ ಬಹಳ ದೊಡ್ಡವರು. ಅವರ ಮೇಲೆ ದೋಷಾರೋಪಣೆ ಹೊರಿಸಬಹುದಾದರೆ, ಈ ಮಾರ್ಗವನ್ನು ಅವರು ನನ್ನಿಂದ ಕದ್ದಿದಾರೆ. ಆದರೆ ಇದನ್ನು ಸ್ವಲ್ಪ ವಿಶದವಾಗಿ ವಿಚಾರಮಾಡಿದರೆ, ಸೈನ್ಯಕ್ಕೆ ಸೇರದಿರುವುದು ಮಾತ್ರ ಸಾಲದು. ನಾವು ಎದುರಿಸಬೇಕಾದ ಕೇಡನ್ನು ಸಕಾಲಕ್ಕೆ ಎದುರಿಸದೆ, ಸೈನ್ಯಕ್ಕೆ ಸೇರಲೊಲ್ಲ ನೆಂದು ಆ ಹೊತ್ತಿಗೆ ಹೇಳಿದರೆ ಏನು ಪ್ರಯೋಜನ? ಕಾಲ ಮೀರಿರುತ್ತೆ. ಈ ಸೈನ್ಯದ ವ್ಯವಸ್ಥೆಯೆನ್ನುವುದು ರೋಗದ ಬಾಹ್ಯ ಚಿಹ್ನೆ; ಜಾಡ್ಯ ಆಳದಲ್ಲಿ ಅಡಗಿದೆ. ಸೈನ್ಯಕ್ಕೆ ಸೇರದೆ ಇರುವವರು ಕೂಡ—ಅವರು ಈ ವಿಷಯದಲ್ಲಿ

ತಮ್ಮ ರಾಷ್ಟ್ರಸರಕಾರಕ್ಕೆ ಬೆಂಬಲ ಕೊಡುತ್ತಿರುವವರೆಗೂ—ಈ ಅಪರಾಧದಲ್ಲಿ ಭಾಗಿಗಳೇ ಆಗುತ್ತಾರೆ. ಯುದ್ಧಕ್ಕೆ ಸಿದ್ಧವಾಗಿರುವ ದೃಷ್ಟಿಯಿಂದ ಒಂದು ರಾಷ್ಟ್ರವು ವ್ಯವಸ್ಥೆಗೊಂಡಿದ್ದರೆ ಆ ಸಿದ್ಧತೆ ಪ್ರತ್ಯಕ್ಷವಾಗಿರಬಹುದು ಅಥವಾ ಪರೋಕ್ಷವಾಗಿರಬಹುದು. ಇಂತಹ ರಾಷ್ಟ್ರಕ್ಕೆ ಬೆಂಬಲ ಕೊಡುವವರು ಯುದ್ಧ ಹೂಡುವ ಪಾಪದಲ್ಲಿ ಭಾಗಿಗಳು. ಮುದುಕರು, ಎಳೆಯ ವಯಸ್ಸಿನವರು ಇಂತಹ ರಾಷ್ಟ್ರಕ್ಕೆ ತೆರಿಗೆಗಳನ್ನು ಸಲ್ಲಿಸಿ ಅದನ್ನು ಪೋಷಿಸುವುದರಿಂದ ಅವರೂ ಈ ಅಪರಾಧದಲ್ಲಿ ಪಾಲುಗೊಳ್ಳುತ್ತಾರೆ. ಆದುದರಿಂದಲೇ ಹೋದ ಯುದ್ಧದಲ್ಲಿ ನಾನು ಸೈನ್ಯದಲ್ಲಿ ಸೇರದಿದ್ದರೂ ಸೈನ್ಯದ ರಕ್ಷಣೆಯಲ್ಲಿರುವ ರಾಷ್ಟ್ರದ ಗೋಧಿಯನ್ನು ತಿನ್ನುವವರಿಗೂ ನಾನೂ ಸೈನ್ಯಕ್ಕೆ ಸೇರಿದಂತೆಯೇ ಆಗಿತ್ತು. ಆದುದರಿಂದ ಸೈನ್ಯಕ್ಕೆ ಸೇರಿ ಗುಂಡಿನೇಟಿನಿಂದ ಸಾಯುವುದು ಮೇಲು. ಇಲ್ಲವಾದರೆ ನಾನು ಎಲ್ಲಿಯೋ ಬೆಟ್ಟಗುಡ್ಡಗಳಿಗೆ ಹೋಗಿ ಅಲ್ಲಿ ಸಿಗುವುದನ್ನು ತಿಂದು ಬದುಕಬೇಕೆಂದು ಎನಿಸಿತು. ಆದುದರಿಂದ ಸೈನ್ಯವೇ ಇರಬಾರದೆನ್ನುವವರು ಆ ರಾಷ್ಟ್ರದ ಸರಕಾರದೊಂದಿಗೆ ಅಸಹಕಾರ ಮಾಡಬೇಕು. ಸೈನ್ಯಕ್ಕೆ ಸೇರದೆ ಇರುವುದು ಕೇವಲ ಬಾಹ್ಯಾಚರಣೆ. ಆದರೆ ಇಂತಹ ಸರಕಾರದೊಂದಿಗೆ ಅಸಹಕಾರ ನಡೆಸುವುದು ಹೆಚ್ಚು ಪರಿಣಾಮಕಾರಿಯಾದ ಮಾರ್ಗ. ಆದರೆ ಈ ಬಗೆಯ ವಿರೋಧ ತಕ್ಷಣವೇ ನಿಮ್ಮನ್ನು ಜೈಲಿಗೆ ಹೋಗುವಂತೆಯೊ ಅಥವಾ ಬೀದಿಯಲ್ಲಿ ತಬ್ಬಲಿಯಾಗಿ ನಿಲ್ಲುವಂತೆಯೋ ಮಾಡುವುದು.'

'ಇಂತಹ ರಾಷ್ಟ್ರದಿಂದ ಸೈನ್ಯೇತರ ಸಹಾಯವನ್ನು ಪಡೆಯಲಾಗದೆ?' ಪಿಯರೀ ಸೆರಿಸೋಲ್ ಅವರು ಈ ವಿಷಯವನ್ನು ಬಹಳ ಆಳವಾಗಿ ವಿಚಾರ ಮಾಡಿದ್ದರು. ಈ ಪ್ರಶ್ನೆಯನ್ನು ಅವರು ಮನಮುಟ್ಟುವಂತೆ ಕೇಳಿದರು. 'ನಾವು ನಮಗೆ ತಿಳಿದಿರುವ ಸತ್ಯವನ್ನು ಹೇಳುತ್ತೇವೆ. ತಾವು ಸತ್ಯದ ಪ್ರತೀಕ. ನಾನು ಎತ್ತಿದ ಸಮಸ್ಯೆ ನಮ್ಮಲ್ಲಿ ಅನೇಕರನ್ನು ಬಾಧಿಸುತ್ತಿದೆ. ಇದರ ಬಗ್ಗೆ ನೀವು ಬೆಳಕು ಬೀರಬೇಕು.'

ಗಾಂಧೀಜೀ ಉತ್ತರವಿತ್ತರು: 'ಮಾನವಸ್ವಭಾವದ ಸೂಕ್ಷ್ಮವಾದ ಭಾಗವನ್ನು ಇದು ತಾಕುವ ಮಾರ್ಮಿಕ ಪ್ರಶ್ನೆ. ಅಸಹಕಾರ ಚಳುವಳಿಯ ಪ್ರವರ್ತಕನಾಗಿ ಈ ಪ್ರಶ್ನೆಯನ್ನೇ ನಾನು ಎದುರಿಸಬೇಕಾಗಿತ್ತು. ಒಂದು ರಾಷ್ಟ್ರ — ಅದರ ಅಧಿಪತಿ ನೀರೋ ಅಥವಾ ಮುಸೋಲನಿ ಅಥವಾ ಬೇರೆ

ಯಾವ ಕ್ರೂರಿಯೇ ಆಗಿರಲಿ—ಕೆಲವು ಒಳ್ಳೆಯ ಲಕ್ಷಣಗಳನ್ನುಳ್ಳದ್ದಾಗಿಯೇ ಇರುತ್ತೆ. ಆದರೆ ಇದರೊಂದಿಗೆ ಅಸಹಕಾರಮಾಡಬೇಕೆಂದು ನಿರ್ಧರಿಸಿದಮೇಲೆ ಎಲ್ಲವನ್ನೂ ಬಹಿಷ್ಕರಿಸಲೇಬೇಕು. ಈ ರೀತಿ ನಾನು ತರ್ಕ ಮಾಡಿಕೊಂಡೆ: 'ನಮ್ಮ ದೇಶದಲ್ಲಿ ದೊಡ್ಡ ರಸ್ತೆಗಳಿವೆ; ಅರಮನೆಗಳಂತಹ ವಿದ್ಯಾಸಂಸ್ಥೆಗಳಿವೆ; ಆದರೆ ಇವೆಲ್ಲವೂ ನಮ್ಮ ಜನರನ್ನು ತುಳಿದುಹಾಕುತ್ತಿರುವ ಒಂದು ವ್ಯವಸ್ಥೆಯ ಭಾಗಗಳು. ಇವುಗಳೊಂದಿಗೆ ನನ್ನ ಸಂಪರ್ಕವನ್ನಿಟ್ಟುಕೊಳ್ಳಬಾರದು. ಒಳ್ಳೆಯ ಮಣಿಯನ್ನು ಧರಿಸಿರುವ ವಿಷಸರ್ಪದಂತೆ ಅವು' ಎಂದು ನಾನು ನನ್ನಲ್ಲಿ ವಾದಿಸಿದೆ. ಭಾರತದಲ್ಲಿ ಬ್ರಿಟಿಷರ ಆಡಳಿತ ಜನರ ವೀರ್ಯವನ್ನು ನಾಶಗೊಳಿಸಿದೆ; ಅವರ ಬೆಳವಣಿಗೆಯನ್ನು ಕುಗ್ಗಿಸಿದೆ ಎನ್ನುವ ತೀರ್ಮಾನಕ್ಕೆ ಬಂದೆನು. ಆದುದರಿಂದ ಈ ಪದ್ಧತಿಯಲ್ಲಿ ನನಗೆ ಒದಗುವ ಅನುಕೂಲ್ಯಗಳನ್ನೂ ಆದರಗಳನ್ನೂ ಅಂದರೆ ಅಧಿಕಾರಸ್ಥಾನಗಳು, ನ್ಯಾಯಾಸ್ಥಾನಗಳು, ಬಿರುದುಗಳು—ಇವೆಲ್ಲವನ್ನೂ ಪರಿತ್ಯಾಗ ಮಾಡಬೇಕು. ಬೇರೆ ಬೇರೆ ದೇಶಗಳಲ್ಲಿ ಈ ಅಸಹಕಾರ ಬೇರೆ ರೂಪಗಳನ್ನು ತಾಳಬಹುದು. ಆದರೆ ಒಟ್ಟಿನಲ್ಲಿ ಸ್ವಾರ್ಥತ್ಯಾಗವೇ ಇದರ ಮುಖ್ಯ ಲಕ್ಷಣವಾಗಿರಬೇಕು. ಐನ್‌ಸ್ಟೈನ್ ಹೇಳಿರುವುದು ವರ್ಷಕ್ಕೊಮ್ಮೆ ಸಂಭವಿಸಬಹುದು; ಕೆಲವರಿಗೆ ಮಾತ್ರ ಅನ್ವಯಿಸುವುದು; ಆದರೆ ರಾಷ್ಟ್ರಸರಕಾರದೊಂದಿಗೆ ಅಸಹಕಾರ ಮಾಡುವುದು ನಮ್ಮ ಪ್ರಥಮ ಕರ್ತವ್ಯವೆಂದು ನನ್ನ ಸೂಚನೆ.'

'ಆದರೆ ಸ್ವತಂತ್ರ ರಾಷ್ಟ್ರಗಳಿಗೂ ಪರಾಧೀನ ರಾಷ್ಟ್ರಗಳಿಗೂ ಈ ವಿಷಯದಲ್ಲಿ ಬಹಳ ಅಂತರವಿರುವುದಲ್ಲವೆ? ಪರದೇಶೀಯರ ಸರಕಾರದೊಂದಿಗೆ ಭಾರತೀಯರಿಗೆ ಮೂಲಭೂತವಾದ ವ್ಯಾಜ್ಯವಿರಬಹುದು. ಆದರೆ ಸ್ವಿಟ್ಸರ್ಲಂಡ್‌ನವರು ನಮ್ಮ ಸರಕಾರದೊಂದಿಗೆ ಹೇಗೆ ವ್ಯಾಜ್ಯ ಮಾಡಲಾದೀತು?'

'ವ್ಯತ್ಯಾಸವಿರುವುದೇನೋ ನಿಜ' ಎಂದರು ಗಾಂಧೀಜೀ. 'ಪರಾಧೀನದಲ್ಲಿರುವ ರಾಷ್ಟ್ರದ ಪ್ರಜೆಗಾಗಿ ಪಾರತಂತ್ರ್ಯವನ್ನು ಕಿತ್ತುಹಾಕುವುದರಿಂದಲೇ ನಾನು ಸಹಾಯ ಮಾಡಲಾಗುವುದು. ಆದರೆ ಇಲ್ಲಿ ಜನರು ಈ ಯುದ್ಧ ಮಾಡುವ ಮನೋಧರ್ಮದಿಂದ ಪಾರಾಗುವುದು ಹೇಗೆ ಎಂಬ ಪ್ರಶ್ನೆಯನ್ನು ನನಗೆ ಹಾಕುತ್ತಿದಾರೆ. ಸರಕಾರದ ಯುದ್ಧದ ವ್ಯವಸ್ಥೆಗೆ ಸಹಾಯ ಮಾಡಿದರೆ ನಿಮಗೆ ಆ ಸರಕಾರದಿಂದ ಅನುಕೂಲ್ಯಗಳು ಸಿಗುವುವು. ಇಂತಹ ಸಂದರ್ಭ

ದಲ್ಲಿ ಆ ಸರಕಾರಕ್ಕೆ ಯುದ್ಧದ ಮನೋಧರ್ಮವೇ ಇಲ್ಲದಂತೆ ಮಾಡಬೇಕು.' ಆದರೆ ಪಿಯರಿ ಸೆರಿಸೋಲ್ ಅವರಿಗೆ ಇನ್ನೂ ಶಂಕೆಗಳಿದ್ದುವು. ಗಾಂಧೀಜಿ ಯವರ ತರ್ಕ ಅವರ ಮನಸ್ಸನ್ನು ಆಕರ್ಷಿಸಿತು. ಆದರೆ ಈ ಮಾರ್ಗವನ್ನು ಪೂರ್ತಿಯಾಗಿ ಅನುಸರಿಸುವುದಾದರೆ ಅವರು ತಾವು ಕೈಗೊಂಡಿರುವ ಪವಿತ್ರ ಸಂಕಲ್ಪವನ್ನು ಸಾಧಿಸುವ ಬಗೆ ಹೇಗೆ? ಜಿನೀವಾದಲ್ಲಿ ನಡೆದ ದೊಡ್ಡ ಸಭೆಯಲ್ಲಿ ಸ್ವಿಟ್ಸರ್ಲಂಡಿನ ಅಂತರರಾಷ್ಟ್ರೀಯ ರೆಡ್‌ಕ್ರಾಸ್ ಸಂಸ್ಥೆಯವರು ಮಾಡುತ್ತಿದ್ದ ದೊಡ್ಡ ಸೇವೆ, ಸಾವಿರಾರು ಯೋಧರನ್ನು ಅವರು ಕಾಪಾಡಿದ ವಿಷಯ— ಇವುಗಳ ಪ್ರಸ್ತಾಪ ಬಂತು. ಈ ಸಂದರ್ಭದಲ್ಲಿ ಗಾಂಧೀಜೀ ಆಡಿದ ಮಾತು ಗಳು ಪಿಯರಿ ಸೆರಿಸೋಲ್ ಅವರ ಶಂಕೆಗಳಿಗೆ ಸಮಾಧಾನ ಕೊಡುವಂತಾದವು. ಅವರು ಕೈಗೊಂಡಿರುವ ಅಂತರರಾಷ್ಟ್ರೀಯ ಸೇವಾಸಂಸ್ಥೆಗೆ ಉತ್ತೇಜಕವಾದ ಒಂದು ಸಂದೇಶವನ್ನು ಕೊಟ್ಟಂತೆ ಆಯಿತು.

'ಈ ಅದ್ಭುತವೂ ಮಹತ್ತರವೂ ಆದ ಸಂಸ್ಥೆಯ ಪೂರ್ವ ಚರಿತ್ರೆಯ ವಿಷಯದಲ್ಲಿ ನನಗೇನೂ ತಿಳುವಳಿಕೆಯೇ ಇಲ್ಲವೆಂದು ನಾನು ನಾಚಿಕೆಯಿಂದ ಒಪ್ಪಿಕೊಳ್ಳಬೇಕಾಗಿದೆ. ಅದು ಸಾವಿರಾರು ಯೋಧರನ್ನು ಕಾಪಾಡಿದ್ದರೆ ಅದಕ್ಕೆ ನಾನು ಮಣಿಯುತ್ತೇನೆ. ಈ ಮೆಚ್ಚುಗೆಯನ್ನು ವ್ಯಕ್ತಪಡಿಸಿದನಂತರ ಒಂದು ಮಾತನ್ನು ನಾನು ಹೇಳಬಹುದಾದರೆ ಈ ಸಂಸ್ಥೆಯು ಯುದ್ಧಾನಂತರದಲ್ಲಿ ಪರಿಹಾರ ಕೊಡುವುದಕ್ಕಿಂತಲೂ ಯುದ್ಧವೇ ಇಲ್ಲದೆ ಈ ಪರಿಹಾರಕಾರ್ಯ ವನ್ನು ಕೈಗೊಳ್ಳಬೇಕು. ಯುದ್ಧದಲ್ಲಿ ಕೆಲವು ಸಲ್ಲಕ್ಷಣಗಳಿವೆ: ಧೈರ್ಯವಿದೆ, ಶೌರ್ಯವಿದೆ. ಇವೂ ಇಲ್ಲದಿದ್ದರೆ ಯುದ್ಧವನ್ನು ಎಲ್ಲರೂ ಧಿಕ್ಕರಿಸುತ್ತಿದ್ದರು. ಅದರ ವಿರೋಧವಾಗಿ ಯಾರೂ ಭಾಷಣಗಳನ್ನು ಮಾಡುವ ಆವಶ್ಯಕತೆಯೇ ಇರುತ್ತಿರಲಿಲ್ಲ. ಆದರೆ ನಾನು ಸೂಚಿಸುತ್ತಿರುವ ಮಾರ್ಗ ರೆಡ್‌ಕ್ರಾಸ್ ಸಂಸ್ಥೆ ಯನ್ನೊಳಗೊಂಡ—ಅನೇಕ ಶಾಖೋಪಶಾಖೆಗಳಿರುವ ಯುದ್ಧದ ಸನ್ನಾಹ ಗಳಿಂದಲೂ ಸಾವಿರ ಪಾಲು ಉದಾತ್ತವಾದ ಮಾರ್ಗ. ಯುದ್ಧದಲ್ಲಿ ಸೆರೆಗೆ ಸಿಕ್ಕುವ ಬಂದಿಗಳಿಗಿಂತಲೂ ಹೆಚ್ಚು ಕೋಟ್ಯಂತರ ಜನರು ತಮ್ಮ ಕಾಮ ಕ್ರೋಧಾದಿಗಳಿಗೆ ಸೆರೆಯಾಳುಗಳಾಗಿರುವ ಮಾನವರಿರುವರು; ತಮ್ಮ ಅವಿವೇಕದಿಂದ ಗಾಯಗೊಂಡಿರುವವರಿರುವರು; ಕೋಟೆಗಟ್ಟಲೆ ಮುರಿದು ಬಿದ್ದ ಮನೆಗಳು ಪ್ರಪಂಚದಲ್ಲಿರುವುವು. ಆದುದರಿಂದ ಮುಂದೆ ಸ್ಥಾಪಿಸಲ್ಪಡುವ

ಶಾಂತಿಸಂಸ್ಥೆಗಳಿಗೆ, ಅವರು ಅಂತರರಾಷ್ಟ್ರೀಯ ಸೇವೆಯನ್ನು ಕೈಗೊಳ್ಳುವುದಾದರೆ ಬಹು ವಿಸ್ತಾರವಾದ ಸೇವಾಕ್ಷೇತ್ರ ಸಿದ್ಧವಾಗಿದೆ. ಸ್ವಿಟ್ಸರ್ಲಂಡ್ ದೇಶ ಈ ಮಹಾತ್ಕಾರ್ಯದಲ್ಲಿ ಪ್ರಪಂಚಕ್ಕೆ ಮಾರ್ಗದರ್ಶನವನ್ನು ನೀಡಲಿ.'

ಇದೇ ರೀತಿಯ ಮತ್ತೊಂದು ಪ್ರಶ್ನೆಗೆ ಬೇರೊಂದು ಸಭೆಯಲ್ಲಿ ಹೀಗೆ ಉತ್ತರವಿತ್ತರು :

'ಸೈನಿಕ ಖಾತೆಯೊಂದಿಗೆ ಅಸಹಕಾರ—ಸೈನ್ಯೇತರ ವಿಷಯಗಳಲ್ಲಿ ಸಹಕಾರ ಮತ್ತು ಸೇವೆ ಪರಸ್ಪರ ವಿರುದ್ಧವಾದ ಆಚರಣೆಗಳು. ಸೈನ್ಯದ ನೌಕರಿ ಅಥವಾ ಸೇವೆ ಎನ್ನುವ ಶಬ್ದವೇ ಸಮಂಜಸವಾಗಿಲ್ಲ. ನಿಮ್ಮ ರಾಷ್ಟ್ರದ ಸರಕಾರ ಸೈನ್ಯದ ಬಲದ ಮೇಲೆ ನಿಂತಿದೆ. ಅಂತಹ ಸರಕಾರದೊಂದಿಗೆ ಸಹಕರಿಸಿದರೆ ಪ್ರತ್ಯಕ್ಷವಾಗಿ ನೀವು ಸೈನ್ಯಕ್ಕೆ ಸೇರದೆ ಹೋದರೂ ಅಪ್ರತ್ಯಕ್ಷ ಆ ಸೈನ್ಯದ ನೌಕರಿಗೆ ಸೇರಿದಂತೆಯೆ. ಟ್ರಾನ್ಸ್‌ವಾಲ್ ಮತ್ತಿತರ ದೇಶಗಳಲ್ಲಿ ಕೆಲವು ಪ್ರಜೆಗಳನ್ನು ಸೈನ್ಯದ ಉದ್ಯೋಗಕ್ಕೆ ಸೇರಿಸುವುದಿಲ್ಲ. ಆದರೂ ಅವರು ಸರಕಾರಕ್ಕೆ ಕೊಡಬೇಕಾದ ತೆರಿಗೆಗಳನ್ನು ಕೊಡಲೇಬೇಕು. ಈ ತೆರಿಗೆಗಳನ್ನು ಕೊಡದೆ ಇರುವಷ್ಟು ನಿಮ್ಮ ಸಹಕಾರವನ್ನು ವಿಸ್ತರಿಸಬೇಕು. ನಮ್ಮ ನೆರೆ ಹೊರೆಯ ದೇಶಗಳ ಪ್ರಜೆಗಳ ಸೇವೆಯನ್ನು ಮಾಡಲು ಯಾವ ಮಿತಿಯೂ ಇಲ್ಲ.' ಈ ರಾಷ್ಟ್ರದ ಎಲ್ಲೆಗಳು ದೇವರ ಸೃಷ್ಟಿ ಅಲ್ಲ.

**ಪ್ರಶ್ನೆ:** ಸೈನ್ಯವನ್ನು ಕಡಮೆ ಮಾಡುವುದು ಅಥವಾ ವಿಸರ್ಜನೆ ಮಾಡುವುದು ಪ್ರಬಲವಾದ ರಾಷ್ಟ್ರಗಳಿಗೆ ಸಂಬಂಧಿಸಿದ ಪ್ರಶ್ನೆ. ಸ್ವಿಟ್ಸರ್ಲಂಡ್ ಸಣ್ಣ ರಾಷ್ಟ್ರ; ಯಾವ ಗುಂಪಿಗೂ ಸೇರಿಕೊಳ್ಳದೆ ತಟಸ್ಥವಾಗಿರುವ ರಾಷ್ಟ್ರ. ಈ ರಾಷ್ಟ್ರ ಸೈನ್ಯವಿಸರ್ಜನೆ ಮಾಡಬೇಕೆಂಬುದರಲ್ಲಿ ಏನು ಅರ್ಥವಿದೆ ?

**ಉತ್ತರ:** ಈ ತಟಸ್ಥವಾದ ಪ್ರದೇಶದಿಂದಲೂ ಈಗ ನಾನು ನಿಮಗೆ ಮಾತ್ರವಲ್ಲ ಇಡೀ ಪ್ರಪಂಚಕ್ಕೆ ಮಾತನಾಡುತ್ತಿದೇನೆ. ನೀವು ಯೂರೋಪಿನ ಇತರ ಭಾಗಗಳಿಗೂ ಈ ಸಂದೇಶವನ್ನು ಮುಟ್ಟಿಸದಿದ್ದರೆ ನನ್ನ ಮೇಲೆ ದೋಷ ವಿಲ್ಲ. ಸ್ವಿಟ್ಸರ್ಲಂಡ್ ಸಣ್ಣ ದೇಶ; ತಟಸ್ಥವಾಗಿರುವುದು; ಯಾರ ಮೇಲೆಯೂ ದಾಳಿ ಮಾಡುವ ಉದ್ದೇಶ್ಯ ಅದಕ್ಕಿಲ್ಲ. ಅಂದಮೇಲೆ ಅದಕ್ಕೆ ಸೈನ್ಯದ ಆವಶ್ಯಕತೆ ಏನಿದೆ? ಮತ್ತು ಎಲ್ಲ ಜನರಿಗೂ ನೀವು ಆತಿಥ್ಯ ನೀಡುವುದರಿಂದಲೂ,

ಅನುಕೂಲಸ್ಥಿತಿಯಲ್ಲಿರುವುದರಿಂದಲೂ ಎಲ್ಲ ದೇಶಗಳ ಜನರೂ ನಿಮ್ಮಲ್ಲಿಗೆ ಬರುತ್ತಾರೆ. ಹೀಗಿರಲು ಸೈನ್ಯವಿಸರ್ಜನೆಯ ವಿಚಾರದಲ್ಲಿ ಪ್ರಪಂಚಕ್ಕೆ ಮಾರ್ಗ ದರ್ಶನ ಮಾಡಲು ನಿಮಗೆ ಸಾಧ್ಯ. ಸೈನ್ಯವಿಲ್ಲದೆಯೇ ಇರುವ ಧೈರ್ಯ ನಿಮಗಿದೆ ಎಂದು ನೀವು ತೋರಿಸಿಕೊಡಬಹುದು.

**ಪ್ರಶ್ನೆ:** ಶಸ್ತ್ರವಿಸರ್ಜನೆಮಾಡಿ ತಟಸ್ಥವಾಗಿರುವ ಒಂದು ರಾಷ್ಟ್ರ ಇತರ ರಾಷ್ಟ್ರಗಳು ನಾಶವಾಗುವುದನ್ನು ನೋಡುತ್ತ ಸುಮ್ಮನಿರಲು ಹೇಗೆ ಸಾಧ್ಯ? ನಮ್ಮ ಗಡಿಗಳಲ್ಲಿ ನಮ್ಮ ಸೈನ್ಯ ಸುಸಜ್ಜಿತವಾಗಿ ಹೋದ ಯುದ್ಧಕಾಲದಲ್ಲಿ ಕಾಯುತ್ತಿತ್ತು. ಇಲ್ಲವಾದರೆ ನಾವು ನಾಶವಾಗುತ್ತಿದ್ದೆವು.

**ಉತ್ತರ:** ನನಗೆ ತೋರಿದ ರೀತಿಯಲ್ಲಿ ಇದಕ್ಕೆ ನಾನು ಉತ್ತರವನ್ನು ಹೇಳಬೇಕು. ನನ್ನನ್ನು ನೀವು ಭ್ರಾಂತನೆಂದೋ ಮೂರ್ಖನೆಂದೋ ಕರೆಯಲೂ ಬಹುದು. ಒಂದು ನೆರೆರಾಷ್ಟ್ರ ಸೈನ್ಯದ ದಾಳಿಗೆ ತುತ್ತಾಗಿ ನಾಶವಾಗುತ್ತಿದ್ದರೆ ಒಂದು ತಟಸ್ಥ ರಾಷ್ಟ್ರ ಅದನ್ನು ನೋಡುತ್ತ ಸುಮ್ಮನಿರುವುದು ಹೇಡಿತನ. ಯುದ್ಧಮಾಡುವ ಸೈನಿಕರಿಗೂ ಅಹಿಂಸೆಯ ಸೈನಿಕರಿಗೂ ಒಂದು ಸಮಾನವಾದ ಆಚರಣೆ ಇದೆ. ನಾನು ಸ್ವಿಟ್ಸರ್ಲೆಂಡ್ ಪ್ರಜೆಯಾಗಿ ಆ ರಾಷ್ಟ್ರದ ಅಧ್ಯಕ್ಷನಾಗಿ ದ್ದಿದ್ದರೆ ದಾಳಿಮಾಡುವ ಸೈನ್ಯ ನಮ್ಮ ರಾಷ್ಟ್ರದ ಮೂಲಕ ಹೋಗಬಾರದೆಂದು ಅಡ್ಡಿಮಾಡಿ ಅವರಿಗೆ ಯಾವ ಆಹಾರಸಾಮಗ್ರಿಗಳೂ ಸಿಗದಂತೆ ಮಾಡುತ್ತಿದ್ದೆ. ಎರಡನೆಯದಾಗಿ, ತರ್ಮಾಪಿಲ್ಲೈ ಎನ್ನುವ ಕಣಿವೆಯಲ್ಲಿ ಗ್ರೀಕ್ ಯೋಧರು ದೊಡ್ಡ ಪಾರಸೀಕ ಸೈನಿಕರನ್ನು ಎದುರಿಸಿ ಎಲ್ಲರೂ ಮಡಿದಂತೆ ಇಲ್ಲಿಯೂ ಅಂತಹ ಪ್ರಕರಣವಾಗುತ್ತಿತ್ತು. ಶಸ್ತ್ರಗಳಿಲ್ಲದ ಗಂಡಸರು, ಹೆಂಗಸರು, ಮಕ್ಕಳು ಒಂದು ಗೋಡೆಯಂತೆ ನಿಂತು ಆ ಸೈನ್ಯವು ಬೇಕಾದರೆ ಇವರೆಲ್ಲರನ್ನೂ ಕೊಂದು ಅವರ ಶವಗಳ ಮೇಲೆ ಕುಳಿತುಕೊಂಡು ಹೋಗಲು ಕರೆಯುತ್ತಿದ್ದೆ. ಇದು ಮನುಷ್ಯರ ಅನುಭವಕ್ಕೂ ಸಹನಾಶಕ್ತಿಗೂ ಮೀರಿದುದೆಂದು ನೀವು ಹೇಳಬಹುದು. ಹಾಗಲ್ಲವೆಂದು ನಾನು ಹೇಳುತ್ತೇನೆ. ಇದು ತೀರ ಸಾಧ್ಯ. ಹೋದ ವರ್ಷ ಗುಜರಾತಿ ಹೆಣ್ಣುಮಕ್ಕಳು ಲಾಠಿ ಏಟಿನ ಪ್ರಹಾರಗಳನ್ನು ಹಿಮ್ಮೆಟ್ಟದೆ ಎದುರಿಸಿ ನಿಂತರು. ಪೆಷಾವರದಲ್ಲಿ ಗುಂಡುಗಳ ಸುರಿಮಳೆಯೇ ಆದಾಗ ಯಾವ ಹಿಂಸಾಕೃತ್ಯವನ್ನೂ ಕೈಗೊಳ್ಳದೆ ಅದನ್ನು ಅನುಭವಿಸಿದರು.

ಒಂದು ದೇಶದ ಮೂಲಕ ಹಾದುಹೋಗಬೇಕೆಂಬ ಸೈನ್ಯವನ್ನು ಎದುರಿಸಿ ಈ ಬಗೆಯಲ್ಲಿ ನಿಲ್ಲುವ ಚಿತ್ರವನ್ನು ಕಲ್ಪಿಸಿಕೊಳ್ಳಿ. ಆ ಸೈನ್ಯಕ್ಕೆ ಇವರನ್ನು ತುಳಿದು ಹಾಕಿ ಮುಂದೆಹೋಗುವ ಪಶುವೃತ್ತಿ ಇರುವುದೆಂದು ನೀವು ಹೇಳಬಹುದು. ಆದರೂ ನಾನು ಹೇಳುವುದಿಷ್ಟೆ : ನೀವು ಎಲ್ಲರೂ ಹತರಾದರೂ ನಿಮ್ಮ ಕರ್ತವ್ಯವನ್ನು ಮಾಡಿರುವಿರಿ. ಹೀಗೆ ಪಶುವೃತ್ತಿಯಿಂದ ಹೆಂಗಸರನ್ನೂ ಮಕ್ಕಳನ್ನೂ ತುಳಿದುಕೊಂಡು ಮುಂದೆ ಸಾಗುವ ಸೈನಿಕರು ಮತ್ತೊಮ್ಮೆ ಹೀಗೆ ವರ್ತಿಸಲಾರರು. ಸಾಮಾನ್ಯ ಜನರಲ್ಲಿ ಈ ವಿಧವಾದ ಅಹಿಂಸಾಮಾರ್ಗಾವಲಂಬನೆ ಅಷ್ಟು ಧೈರ್ಯಸ್ಥೈರ್ಯವಿರಲಾರದೆಂದು ನೀವು ಬೇಕಾದರೆ ಹೇಳಿ, ಆದರೆ ಅಹಿಂಸಾ ಮಾರ್ಗವು ಈ ರೀತಿ ಸ್ಥೈರ್ಯ ಉಳ್ಳವರಿಗೇ ಹೊರತು ದುರ್ಬಲರಿಗಲ್ಲ. ಅದನ್ನು ಅನುಸರಿಸಲು ಬಹಳ ಎದೆಗಾರಿಕೆ ಬೇಕೆನ್ನುವುದನ್ನು ನೀವು ಒಪ್ಪಲೇಬೇಕು.

**ಪ್ರಶ್ನೆ:** ಒಬ್ಬ ಸೈನಿಕನು ಆಕಾಶದಲ್ಲಿ ತೋಪನ್ನು ಹಾರಿಸಿ ಹಿಂಸೆ ಮಾಡದೆ ಇರಬಹುದಲ್ಲವೆ?

**ಉತ್ತರ:** ಸೈನ್ಯಕ್ಕೆ ಸೇರಿದಮೇಲೆ ತಾನು ಹಿಂಸೆಯನ್ನು ಆಚರಿಸದೆ ಆಕಾಶಕ್ಕೆ ಗುಂಡನ್ನು ಹಾರಿಸಿದೆನೆಂದು ಹೇಳಿದರೆ ಅದು ಅವನ ಧೈರ್ಯಕ್ಕಾಗಲಿ, ಅವನ ಅಹಿಂಸಾವರ್ತನೆಗಾಗಲಿ ಕೀರ್ತಿಯನ್ನು ತರುವ ವಿಷಯವಲ್ಲ. ನನ್ನ ಅಭಿಪ್ರಾಯದಲ್ಲಿ ಅಂತಹ ಸೈನಿಕನು ಅಸತ್ಯವಂತ—ಹೇಡಿ ಎಂದು ಅನಿಸಿಕೊಳ್ಳುವನು. ಏಕೆಂದರೆ ದಂಡನೆಯನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಸೈನ್ಯಕ್ಕೆ ಸೇರಿ ಹೇಡಿತನವನ್ನು ತೋರಿಸಿದನು. ಯಾವ ರೀತಿಯಲ್ಲಿ ಗುಂಡು ಹಾರಿಸಬೇಕೆಂದು ಅಧಿಕಾರಿಗಳು ನಿರೀಕ್ಷಿಸಿದರೋ ಹಾಗೆ ಮಾಡದೆ ಅಪ್ರಾಮಾಣಿಕನೆಂಬ ಅಪರಾಧಕ್ಕೆ ಗುರಿಯಾದನು. ಯುದ್ಧವನ್ನು ನಿಲ್ಲಿಸಬೇಕೆಂಬ ಉದ್ಯಮಕ್ಕೆ ಈ ಬಗೆಯ ವರ್ತನೆ ಅಡ್ಡಿಯಾಗುತ್ತದೆ. ಯುದ್ಧವನ್ನು ಪ್ರತಿಭಟಿಸುವವರು ನಿರ್ದೋಷಿಗಳಾಗಿರಬೇಕು. ಅವರ ನೀತಿಯುತವಾದ ನಡತೆಯೇ ಅವರ ಬಲ.

(ಯಂಗ್ ಇಂಡಿಯಾ, ೩೧-೧೨-೧೯೩೧)

# ಎಲ್ಲಕ್ಕೂ ಮಿಗಿಲಾದ ಶಕ್ತಿ

ನನ್ನ ಎಲ್ಲ ಚಟುವಟಿಕೆಗಳಿಗೂ ಅಹಿಂಸೆಯೇ ತಳಹದಿ. ಈಗ ಸದ್ಯಕ್ಕೆ ನಾನು ಮೂರು ಉದ್ಯಮಗಳಲ್ಲಿ ನಿರತನಾಗಿದೇನೆ. ಅಸ್ಪೃಶ್ಯತಾನಿವಾರಣೆ, ಖಾದಿ ಮತ್ತು ಗ್ರಾಮೋದ್ಧಾರ. ಇವೆಲ್ಲಕ್ಕೂ ಕೂಡ ಅಹಿಂಸೆಯೇ ಮೂಲ ಮಂತ್ರ. ಹಿಂದೂ–ಮುಸ್ಲಿಮ್ ಸೌಹಾರ್ದ ನನ್ನ ನಾಲ್ಕನೆಯ ಬಯಕೆ. ಆದರೆ ಬಾಹ್ಯದ ಪರಿಣಾಮದ ದೃಷ್ಟಿಯಿಂದ ನಾನು ಸೋತಿರುವೆನೆಂದು ಒಪ್ಪಿ ಕೊಂಡಿದೇನೆ. ಆದರೆ ಇದರ ವಿಷಯದಲ್ಲಿ ಯಾವ ಕಾರ್ಯವನ್ನೂ ಮಾಡದೆ ಇರುವೆನೆಂದು ಯಾರೂ ಭಾವಿಸಬಾರದು. ನಾನು ಜೀವಂತವಾಗಿದ್ದಾಗ ಇಲ್ಲದಿದ್ದರೂ, ನನ್ನ ಮರಣಾನಂತರವಾದರೂ ಹಿಂದೂಗಳೂ ಮುಸಲ್ಮಾನರೂ ಕೋಮುವಾರು ಸೌಹಾರ್ದಕ್ಕಾಗಿ ಎಡೆಬಿಡದೆ ಶ್ರಮಿಸಿದನೆಂದು ಹೇಳುವರು.

ಅಹಿಂಸೆ ನಮ್ಮ ಆಚರಣೆಯ ಮೂಲತತ್ತ್ವವಾಗಬೇಕಾದರೆ ಅದು ಸರ್ವವ್ಯಾಪಿಯಾಗಬೇಕು. ಒಂದು ಆಚರಣೆ ಅಹಿಂಸಾತ್ಮಕವಾಗಿಯೂ ಉಳಿದುದೆಲ್ಲ ಹಿಂಸಾತ್ಮಕವಾಗಿಯೂ ಇಟ್ಟುಕೊಳ್ಳಲು ಸಾಧ್ಯವಿಲ್ಲ. ಅದು ಕೇವಲ ಅನುಕೂಲದ ಮಾರ್ಗವಾದೀತು; ನಮ್ಮ ಜೀವಶಕ್ತಿಯ ವಿನಿಯೋಗ ವಾಗಲಾರದು. ಆದುದರಿಂದ ಈಗ ಅಬಿಸೀನಿಯದ ಮೇಲೆ ಇಟಲಿ ಮಾಡು ತ್ತಿರುವ ಯುದ್ಧದ ವಿಷಯದಲ್ಲಿ ನಾನು ಉದಾಸೀನನಾಗಿರಲು ಸಾಧ್ಯವಿಲ್ಲ. ಆದರೆ ಈ ವಿಚಾರದಲ್ಲಿ ನನ್ನ ಅಭಿಪ್ರಾಯಗಳನ್ನು ವ್ಯಕ್ತಮಾಡಬೇಕೆಂದೂ, ದೇಶಕ್ಕೆ ಮಾರ್ಗದರ್ಶನ ಮಾಡಬೇಕೆಂದೂ ಅನೇಕರು ಸಲಹೆ ಮಾಡಿದ್ದರೂ ಅದಕ್ಕೆ ನಾನು ಕಿವಿಗೊಡದೆ ಇದೇನೆ, ಸತ್ಯ ಮತ್ತು ಅಹಿಂಸೆಯ ಪಾಲನೆಗಾಗಿ ನಮ್ಮಲ್ಲಿರುವ ಅಭಿಪ್ರಾಯಗಳನ್ನು ಅನೇಕ ವೇಳೆ ವ್ಯಕ್ತಮಾಡದೆ ಇರುವುದು ಆವಶ್ಯಕ. ಭಾರತ ದೇಶವು ಸಾಮೂಹಿಕವಾಗಿ, ಒಂದು ರಾಷ್ಟ್ರವಾಗಿ ಅಹಿಂಸಾ ತತ್ತ್ವವನ್ನು ಆಚರಣೆಗೆ ತರಲು ಸಿದ್ಧವಾಗಿರುವ ಪಕ್ಷಕ್ಕೆ ನಾನು ಮಾರ್ಗ ದರ್ಶನ ಮಾಡಲು ಹಿಂಜರಿಯುತ್ತಿರಲಿಲ್ಲ. ನಮ್ಮ ದೇಶದ ಲಕ್ಷಾಂತರ ಜನರು ನನ್ನ ಮಾತನ್ನು ಕೇಳುತ್ತಾರೆ, ನಿಜ. ಆದರೆ ಎಷ್ಟರಮಟ್ಟಿಗೆ ಕೇಳುವರು— ಹೇಳುವುದು ಕಷ್ಟ. ಅನಾದಿಕಾಲದಿಂದಲೂ ನಮ್ಮ ದೇಶದಲ್ಲಿ ಅಹಿಂಸಾ ಮಾರ್ಗದ ಪ್ರವೃತ್ತಿ ಇದೆ. ಆದರೆ ನನಗೆ ತಿಳಿದಮಟ್ಟಿಗೆ ರಾಷ್ಟ್ರವೆಲ್ಲ ಈ

ತತ್ತ್ವವನ್ನನುಸರಿಸಿ ತನ್ನ ಆಚರಣೆಯನ್ನು ರೂಪಿಸಿಕೊಂಡಿರುವುದನ್ನು ನಾನು ಕಾಣೆ. ಆದರೆ ಇದೇ ಭಾರತದ ಪವಿತ್ರ ಕರ್ತವ್ಯವೆಂದೂ ಪ್ರಪಂಚಕ್ಕೆ ಮಾರ್ಗದರ್ಶನವನ್ನು ಮಾಡಬೇಕೆಂದೂ ನನ್ನ ದೃಢವಿಶ್ವಾಸವಾಗಿದೆ. ಇದನ್ನು ಸಾಧಿಸಬೇಕಾದರೆ ಬಹಳ ಕಾಲ ಬೇಕಾಗಬಹುದು. ಆದರೆ ನಾನು ತಿಳಿದಿರುವ ಮಟ್ಟಿಗೂ ಬೇರೆ ಯಾವ ರಾಷ್ಟ್ರವೂ ಭಾರತಕ್ಕೂ ಮೊದಲೇ ಪ್ರಪಂಚಕ್ಕೆ ಈ ಸಂದೇಶವನ್ನು ನೀಡಲಾರದು.

ಅದು ಏನೇ ಇರಲಿ, ಈ ಅನುಪಮವಾದ ಶಕ್ತಿಯ ವಿಷಯ ಸ್ವಲ್ಪ ವಿಚಾರಮಾಡುವುದು, ಮನನಮಾಡುವುದು ಈಗ ಸಮಯೋಚಿತವಾಗಿದೆ. ಕೆಲವು ದಿನಗಳ ಹಿಂದೆ ಕೆಲವು ಮಿತ್ರರು ಏನೋ ಮಾತು ಬಂದು ಮೂರು ಖಚಿತವಾದ ಪ್ರಶ್ನೆಗಳನ್ನು ಹಾಕಿದರು :

(೧) ಒಂದು ವೇಳೆ ಇಂಗ್ಲೆಂಡ್ ದೇಶವು ನಿಮ್ಮ ಅರ್ಥದಲ್ಲಿ ಅಹಿಂಸಾಮಾರ್ಗವನ್ನು ಹಿಡಿಯುವುದಾದರೆ ಹಟವನ್ನು ಹಿಡಿದಿರುವ ಇಟಲಿಗೆ ವಿರುದ್ಧವಾಗಿ, ಈ ರಾಷ್ಟ್ರಗಳ ಸಮೂಹದಲ್ಲಿ (League of Nations) ಬಹುಮುಖ್ಯವೂ ಬಲಿಷ್ಠವೂ ಆದ ಇಂಗ್ಲೆಂಡ್ ಏನು ಮಾಡಲಾದೀತು?

(೨) ಅಷ್ಟು ಸೈನ್ಯಬಲವಿಲ್ಲದ ಅಬಿಸೀನಿಯ ಒಂದು ವೇಳೆ ಅಹಿಂಸಾಮಾರ್ಗವನ್ನು ಅವಲಂಬಿಸಿದ ಪಕ್ಷಕ್ಕೆ ಬಲಿಷ್ಠವಾದ ಇಟಲಿಯನ್ನು ಎದುರಿಸಲು ಏನು ಮಾಡಲು ಸಾಧ್ಯ ?

(೩) ಭಾರತವು ತತ್‌ಕ್ಷಣವೇ ಅಹಿಂಸಾಮಾರ್ಗವನ್ನು ಹಿಡಿಯುವ ಪಕ್ಷಕ್ಕೆ ಏನು ಮಾಡಲು ಸಾಧ್ಯ ?

ಈ ಪ್ರಶ್ನೆಗಳಿಗೆ ಉತ್ತರ ಕೊಡುವುದಕ್ಕೆ ಪೂರ್ವದಲ್ಲಿ—ಅಹಿಂಸೆಯ ಆಚರಣೆಗೆ ಸಂಬಂಧಿಸಿದ ಐದು ಸರಳವಾದ ನಿಯಮಗಳನ್ನು ನನಗೆ ತಿಳಿದ ಮಟ್ಟಿಗೂ ನಾನು ಪ್ರತಿಪಾದಿಸುವೆನು :

**(೧) ಸಾಧ್ಯವಾದಮಟ್ಟಿಗೂ ಅಹಿಂಸಾವ್ರತವನ್ನು ಆಚರಿಸುವವರಲ್ಲಿ ಅಂತಃ ಶುದ್ಧಿ ಇರಬೇಕು.**

(೨) ಹೆರರಿಗೆ ಹಿಂಸೆಯನ್ನು ಮಾಡಬಲ್ಲ ಶಕ್ತಿ—ಅವನ ಇಚ್ಛೆಯಲ್ಲ— ಅಹಿಂಸಾವ್ರತಿಯಲ್ಲಿ ಎಷ್ಟು ಪ್ರಮಾಣದಲ್ಲಿರುವುದೊ ಅಷ್ಟು ಪ್ರಮಾಣ ದಲ್ಲಿ ಅವನ ಅಹಿಂಸೆಯ ಶಕ್ತಿ ಪರಿಣಾಮಕಾರಿಯಾಗುವುದು.

(೩) ಯಾವ ವಿನಾಯಿತಿಯೂ ಇಲ್ಲದೆ ಹಿಂಸೆಗಿಂತಲೂ ಅಹಿಂಸೆಯೇ ಉತ್ತಮ ಮಾರ್ಗ, ಅಂದರೆ ಅಹಿಂಸಾವ್ರತಿ ಉಪಯೋಗಿಸಬಹುದಾದ ಶಕ್ತಿಗೆ ಇರುವಷ್ಟು ಅವಕಾಶ ಅವನು ಹಿಂಸಾಮಾರ್ಗವನ್ನು ಹಿಡಿದರೆ ಅವನಿಗೆ ಎಂದೂ ಇರಲಾರದು.

(೪) ಅಹಿಂಸಾಮಾರ್ಗದಲ್ಲಿ ಅಪಜಯವೆನ್ನುವುದಿಲ್ಲ. ಹಿಂಸೆ ಅಂತಿಮದಲ್ಲಿ ಅಪಜಯವನ್ನು ಖಂಡಿತವಾಗಿ ಅನುಭವಿಸುವುದು.

(೫) ಜಯವೆಂಬ ಪದವನ್ನು ಅಹಿಂಸೆಗೆ ಉಪಯೋಗಿಸಬಹುದಾದರೆ ಉತ್ತ ರೋತ್ತರ ಅಹಿಂಸೆಯೇ ಜಯಪ್ರದವಾಗುವುದು. ನಿಜವಾಗಿಯೂ ಹೇಳುವುದಾದರೆ ಅಪಜಯವೆಂಬ ಭಾವನೆಯೇ ಇಲ್ಲದಿರುವಾಗ ಜಯ ವೆಂಬ ಭಾವನೆಯೂ ಇಲ್ಲ.

ಇನ್ನು, ಮೇಲೆ ಕೇಳಿರುವ ಪ್ರಶ್ನೆಗಳನ್ನು ಈ ಪ್ರಮೇಯಗಳಿಗನುಸಾರ ವಾಗಿ ಉತ್ತರಿಸಬಹುದು :

(೧) ಅಬಿಸೀನಿಯಾ ಅಹಿಂಸಾಮಾರ್ಗವನ್ನು ಹಿಡಿಯುವ ಪಕ್ಷಕ್ಕೆ ಅದಕ್ಕೆ ಶಸ್ತ್ರಗಳು ಬೇಡ; ಅವುಗಳನ್ನು ಬಯಸಲೂ ಆರದು. ರಾಷ್ಟ್ರಗಳ ಸಮೂಹಕ್ಕಾಗಲಿ, ಬೇರೆ ಯಾವ ರಾಷ್ಟ್ರಕ್ಕಾಗಲಿ ಸೈನ್ಯಸಹಾಯಮಾಡಿ ತನ್ನನ್ನು ರಕ್ಷಿಸಬೇಕೆಂದು ಕೇಳಿಕೊಳ್ಳಲಾಗದು. ಇತರರು ಆಕ್ಷೇಪಿಸಲು ಯಾವ ಅವಕಾಶವನ್ನೂ ಕೊಡಲಾಗದು. ಅಬಿಸೀನಿಯದವರು ಸೈನ್ಯ ಬಲವಿಲ್ಲದೆಯೇ ಇಟಲಿಯನ್ನು ಎದುರಿಸಿದರೂ ಇಟಲಿಗೆ ಯುದ್ಧಮಾಡಿ ಗೆಲ್ಲುವ ಅವಕಾಶವೇ ತಪ್ಪುವುದು. ಮತ್ತು ಅಬಿಸೀನಿಯದವರು ಇಟಲಿಯವರಿಗೆ ತಾವಾಗಿಯಾಗಲಿ ನಿರ್ಬಂಧದಿಂದಲಾಗಲಿ ಯಾವ ಸಹಕಾರವನ್ನೂ ನೀಡಲಾಗದು. ಅಂದಮೇಲೆ ಇಟಲಿಯವರು ಅಬಿಸೀನಿ ಯದ ಭೂಮಿಯನ್ನು ಆಕ್ರಮಿಸಬಹುದೇ ಹೊರತು ಅವರ ಜನರ

ಮೇಲೆ ಆಳ್ವಿಕೆಯನ್ನು ನಡೆಸಲು ಸಾಧ್ಯವಾಗಲಾರದು. ಆದರೆ ಇಟಲಿಯ ಉದ್ದೇಶ್ಯ ಇದಲ್ಲ. ಆ ಸುಂದರವಾದ ದೇಶದ ಜನರು ತಮ್ಮ ಅಧೀನ ರಾಗಬೇಕೆಂದು ಇಟಲಿ ಬಯಸುವುದು.

(೨) ಇಂಗ್ಲೆಂಡಿನ ಜನರು, ನಿಜವಾಗಿಯೂ ಹೃದಯಾಂತರಾಳದಲ್ಲಿ ಅಹಿಂಸಾ ವ್ರತಿಗಳಾದ ಪಕ್ಷಕ್ಕೆ, ತಮ್ಮ ಚಕ್ರಾಧಿಪತ್ಯವನ್ನು ಬಿಟ್ಟುಕೊಡುವರು. ತಮ್ಮ ಶಸ್ತ್ರಾಸ್ತ್ರಗಳನ್ನು ವಿಸರ್ಜನೆ ಮಾಡುವರು. ಇಂತಹ ಮಹಾತ್ಯಾಗ ಒಂದು ಪ್ರಬಲವಾದ ನೈತಿಕ ಶಕ್ತಿಯ ಪ್ರಭಾವವನ್ನು ಬೀರುವುದು. ಇಟಲಿಯವರು ತಾವಾಗಿಯೇ ತಮ್ಮ ತಪ್ಪು ದಾರಿಯಿಂದ ಹಿಮ್ಮೆಟ್ಟು ವಂತೆ ಇದು ಮಾಡುವುದು. ನಾನು ಹೇಳಿದ ನಿಯಮಗಳಿಗೆ ಪ್ರತೀಕ ವಾಗಿ ಇಂಗ್ಲೆಂಡ್ ರೂಪುಗೊಳ್ಳುವುದು. ಇದು ಎಂದೂ ಯಾರೂ ಕಾಣದ ಪವಾಡದಂತಾಗುವುದು. ಆದರೆ ಇಂತಹುದಾಗಲೇಬೇಕು. ಇಲ್ಲವಾದರೆ ಅಹಿಂಸೆ ಒಂದು ಹಗಲುಗನಸಿನಂತೆ—ಅದರಲ್ಲಿ ಅರ್ಥವಿಲ್ಲ. ಹೀಗೆ ಆದೀತೆಂಬ ವಿಶ್ವಾಸದಿಂದ ಕೂಡಿದವನಾಗಿ ನಾನು ಬದುಕಿದೇನೆ.

ಕೊನೆಯ ಪ್ರಶ್ನೆಯನ್ನು ಈ ರೀತಿ ಉತ್ತರಿಸಬಹುದು :

(೩) ನಾನು ಮೊದಲೇ ಹೇಳಿದಂತೆ ಭಾರತವು ಇನ್ನೂ ಅಹಿಂಸಾತತ್ತ್ವವನ್ನು ಪೂರ್ಣವಾಗಿ ಅರಗಿಸಿಕೊಂಡಿಲ್ಲ. ಅದು ಹಿಂಸಾಮಾರ್ಗವನ್ನು ಅನು ಸರಿಸಲು ಸಮರ್ಥವಾಗಿಲ್ಲ. ಶಸ್ತ್ರಗಳಿಲ್ಲವೆಂಬ ಕಾರಣದಿಂದಲ್ಲ, ಶೂರರಿಗೆ ಶಸ್ತ್ರಗಳಿರುವುದು ಅಷ್ಟು ಅವಶ್ಯವಿಲ್ಲ. ಭಾರತದ ಅಹಿಂಸೆ ಬಲಹೀನರ ಅಹಿಂಸೆ. ತನ್ನ ನಿತ್ಯಜೀವನದ ಅನೇಕ ಆಚರಣೆಗಳಲ್ಲಿ ದುರ್ಬಲತೆ ಕಾಣುತ್ತದೆ. ಪ್ರಪಂಚದ ಮುಂದೆ ಅದು ಅವನತರಾಷ್ಟ್ರವೆಂದು ಕಾಣು ತ್ತಲಿದೆ. ಇದನ್ನು ರಾಜಕೀಯ ಅರ್ಥದಿಂದ ನಾನು ಹೇಳುತ್ತಿಲ್ಲ. ಕೇವಲ ನೈತಿಕದೃಷ್ಟಿಯಿಂದ, ಅಹಿಂಸಾತತ್ತ್ವದ ದೃಷ್ಟಿಯಿಂದ ಹೇಳು ತ್ತಿದೇನೆ. ಅದು ದೇಹಬಲದಿಂದ ಪ್ರತಿಭಟನೆಯನ್ನು ಮಾಡಲು ಸಮರ್ಥ ವಾಗಿಲ್ಲ. ತನಗೆ ಬಲವಿದೆ ಎಂಬ ಪ್ರಜ್ಞೆ ಭಾರತಕ್ಕಿಲ್ಲ. ತಾನೂ ದುರ್ಬಲ ವಾಗಿದೆ ಎಂಬ ಪ್ರಜ್ಞೆಯೇನೊ ಇದೆ. ಹೀಗಿಲ್ಲದೆ ಇದ್ದ ಪಕ್ಷಕ್ಕೆ ಕೋಮು ವಾರು ಸಮಸ್ಯೆಗಳಾಗಲಿ, ರಾಜಕೀಯ ಸಮಸ್ಯೆಗಳಾಗಲಿ ಇರುತ್ತಿರಲಿಲ್ಲ.

ತನ್ನ ಬಲದ ಪ್ರಜ್ಞೆ ಅದಕ್ಕೆ ಇದ್ದು ಅಹಿಂಸಾಮಾರ್ಗದ ಅನುಷ್ಠಾನ ಮಾಡಿದ್ದೇ ಆದರೆ ಇಂಗ್ಲೀಷ್ ಜನರು ನಂಬಿಕೆಯನ್ನು ಕಳೆದುಕೊಂಡ ದೇಶವನ್ನು ಗೆದ್ದ ಜನರಾಗುತ್ತಿರಲಿಲ್ಲ. ರಾಜಕೀಯದಲ್ಲಿ ನಮ್ಮ ಇಷ್ಟ ಬಂದಂತೆ ನಾವು ಮಾತನಾಡಬಹುದು. ನ್ಯಾಯವಾಗಿಯೂ ಇಂಗ್ಲೀಷ್ ಆಡಳಿತದವರನ್ನು ದೂರಬಹುದು. ಆದರೆ ಭಾರತೀಯರಾದ ನಾವು ಶಕ್ತಿಯುತರಾದರೂ ಆ ಶಕ್ತಿಯನ್ನು ಹಿಂಸಾಮಾರ್ಗದಲ್ಲಿ ಪ್ರಯೋಗ ಮಾಡಲು ಧಿಕ್ಕರಿಸುವೆವು ಎಂಬ ಭಾವನೆಯನ್ನು ಒಂದು ಕ್ಷಣ ಮಾತ್ರ ನಮ್ಮಲ್ಲಿ ತಂದುಕೊಂಡೆವಾದರೆ—ಇಂಗ್ಲೀಷ್ ಜನರನ್ನು ಕಂಡು—ಅವರು ಸೈನಿಕರೇ ಆಗಲಿ, ವರ್ತಕರೇ ಆಗಲಿ, ಆಡಳಿತಗಾರರೇ ಆಗಲಿ—ನಾವು ಹೆದರುತ್ತಿರಲಿಲ್ಲ—ಅವರೂ ನಮ್ಮಲ್ಲಿ ಸಂಶಯಗ್ರಸ್ತರಾಗಿರುತ್ತಿರಲಿಲ್ಲ. ಆದುದರಿಂದ ನಾವು ನಿಜವಾಗಿಯೂ ಅಹಿಂಸಾಮಾರ್ಗವನ್ನು ಅವಲಂಬಿಸಿದರೆ ನಮ್ಮ ಕಾರ್ಯಗಳಿಗೆ ಇಂಗ್ಲೀಷ್ ಜನರು ಬೆಂಬಲ ನೀಡುವರು. ಅಂದರೆ ನಾವು ಕೋಟ್ಯಂತರ ಜನರಾಗಿರುವುದರಿಂದ ನಮ್ಮ ನೈತಿಕಬಲ ಪ್ರಪಂಚದಲ್ಲಿಯೇ ದೊಡ್ಡ ಬಲವಾಗುವುದು. ನಮ್ಮ ಸ್ನೇಹಪೂರಿತವಾದ ಸಲಹೆಗೆ ಇಟಲಿ ಕಿವಿಗೊಡುವುದು.

ಪ್ರಮೇಯಗಳು, ನಿಯಮಗಳು—ಇವೆಲ್ಲ ಸ್ವತಸ್ಸಿದ್ಧ. ಅವಕ್ಕೆ ಬೇರೆ ಪ್ರಮಾಣ ಅಥವಾ ರುಜುವಾತು ಬೇಕಾಗಿರುವುದಿಲ್ಲ. ಆದರೆ ನಾನು ಈವರೆಗೂ ಅವುಗಳಿಗೆ ರುಜುವಾತನ್ನು ಕೊಡುವ ಏನೋ ಒಂದು ಬಗೆಯ ವಿಚಿತ್ರ ಪ್ರಯತ್ನವನ್ನು ಮಾಡಿದೇನೆ. ಇದನ್ನು ಪಾಠಕರು ಗಮನಿಸಿರಬಹುದು.

ಯೂಕ್ಲಿಡಿನ ಭೂಮಿತಿಗ್ರಂಥದ ಮೊದಲ ಹನ್ನೆರಡು ಪ್ರಮೇಯಗಳನ್ನು ಮತ್ತೆ ಮತ್ತೆ ಓದಿದಾಗಲೆಲ್ಲ ಭೂಮಿತಿಶಾಸ್ತ್ರದ ಪರಿಜ್ಞಾನ ನನ್ನಲ್ಲಿ ಹುಟ್ಟುವವರೆಗೂ ನನಗೆ ಏನೂ ಅರ್ಥವಾಗದೆ ತಲೆತಿರುಗುತ್ತಿತ್ತು. ಈ ಪರಿಜ್ಞಾನವಾದ ಮೇಲೆ ಭೂಮಿತಿಯಷ್ಟು ಸುಲಭವಾದ ಶಾಸ್ತ್ರ ಬೇರೊಂದಿಲ್ಲವೆಂದು ತೋರಿತು. ಅಹಿಂಸಾಶಾಸ್ತ್ರದ ವಿಚಾರದಲ್ಲಿಯೂ ಇನ್ನೂ ಹೆಚ್ಚಾಗಿ ಈ ಮಾತು ಅನ್ವಯಿಸುವುದು. ಈ ವಿಷಯವನ್ನು ತರ್ಕದಿಂದ ರುಜುವಾತು ಮಾಡಲಾಗದು. ತರ್ಕ ಸ್ವಲ್ಪ ದೂರ ಮಾತ್ರ ಸಾಗುವುದು. ಇದು ಶ್ರದ್ಧೆಯ ವಿಷಯ, ಅನು

ಭವದ ವಿಷಯ. ಪ್ರಪಂಚಕ್ಕೆ ಈ ತತ್ತ್ವದಲ್ಲಿ ನಂಬಿಕೆ ಹುಟ್ಟದೆ ಇರುವವರೆಗೂ ಒಂದು ಪವಾಡವೇ ನಡೆಯಬೇಕು. ಅಂದರೆ ಸಾಮೂಹಿಕವಾಗಿ ಜನಸ್ತೋಮವೇ ಅಹಿಂಸಾಮಾರ್ಗವನ್ನು ಅನುಸರಿಸಿ ತೋರಿಸಬೇಕು. ಆಗ ಇದರಲ್ಲಿ ಶ್ರದ್ಧೆ ಉಂಟಾಗುವುದು. ಇದು ಮಾನವಸ್ವಭಾವಕ್ಕೆ ವಿರುದ್ಧವೆನ್ನುತ್ತಾರೆ. ಅಹಿಂಸೆಯ ಆಚರಣೆಯನ್ನು ವ್ಯಕ್ತಿ ಮಾತ್ರ ಮಾಡಬಲ್ಲನೆನ್ನುತ್ತಾರೆ. ಹಾಗಾದರೆ ಮನುಷ್ಯರಿಗೂ ಪಶುಗಳಿಗೂ ಇರುವ ವ್ಯತ್ಯಾಸವೇನು ? (ಹರಿಜನ, ೧೨-೧೦-೧೯೩೫)

## ಅಹಿಂಸೆಯ ವಿಚಾರದಲ್ಲಿ ಮಾತುಕಥೆ

ಗಾಂಧೀಜಿಯವರನ್ನು ನೋಡಲು ಬಂದವರು ಒಂದು ಸಣ್ಣ ಚರ್ಚೆಯನ್ನೇ ಆರಂಭಿಸಿದರು. ಈ ಅವಕಾಶ ಸಿಗುವುದೆಂದೇ ಅವರು ಬಂದಿದ್ದರು.

ಡಾ|| ತರ್‌ಮಾನ್‌ರು ಕೇಳಿದರು : ' ನಿಮ್ಮ ದೃಷ್ಟಿಯಿಂದ ಅಹಿಂಸೆ ಪ್ರತ್ಯಕ್ಷವಾದ ಕ್ರಿಯಾಚರಣೆಯ ಒಂದು ರೂಪವಲ್ಲವೆ ? '

' ಒಂದು ರೂಪ ಮಾತ್ರವಲ್ಲ, ಅದೊಂದೇ ರೂಪ. ಪ್ರತ್ಯಕ್ಷ ಕ್ರಿಯಾಚರಣೆ ಅಥವಾ ನೇರವಾದ ಪ್ರತಿಭಟನೆ—ಇದೊಂದು ಪಾರಿಭಾಷಿಕ ಶಬ್ದವಾಗಿದೆ—ಆ ಅರ್ಥದಲ್ಲಿ ಮಾತ್ರ ನಾನು ಇದನ್ನು ಉಪಯೋಗಿಸುತ್ತಿಲ್ಲ. ಆದರೆ ಪ್ರತ್ಯಕ್ಷವಾಗಿಯೂ ಕ್ರಿಯಾತ್ಮಕವಾಗಿಯೂ ಇದನ್ನು ಪ್ರಯೋಗಮಾಡದಿದ್ದರೆ ಅಹಿಂಸೆ ನಿರರ್ಥಕವೆಂದು ನನ್ನ ಭಾವನೆ. ಪ್ರಪಂಚದಲ್ಲಿ ಇದಕ್ಕಿಂತಲೂ ಮಹತ್ತರವಾದ ಪರಿಣಾಮಕಾರಿಯಾದ ಶಕ್ತಿ ಮತ್ತೊಂದಿಲ್ಲ. ತಟಸ್ಥವಾಗಿ ಕುಳಿತು ಅಹಿಂಸೆಯನ್ನು ಆಚರಿಸಲು ಸಾಧ್ಯವಿಲ್ಲ. ಅಹಿಂಸೆ ಎನ್ನುವ ಶಬ್ದಕ್ಕೆ ಇಂಗ್ಲೀಷಿನಲ್ಲಿ ' ನಾನ್-ವಯೊಲೆನ್ಸ್ ' ಎಂಬ—' ನಾನ್ ' ಎಂಬ ನಕಾರ ಪ್ರತ್ಯಯವನ್ನು ಸೇರಿಸಿ ಮಾಡಬೇಕಾಯಿತು. ಈ ನಕಾರವಿದ್ದರೂ, ಅದು ಕ್ರಿಯಾಶೂನ್ಯವಲ್ಲ. ಬಾಹ್ಯದಲ್ಲಿ ನಮ್ಮ ಸುತ್ತಲೂ ಹೋರಾಟ, ರಕ್ತಪಾತ ನಡೆಯುತ್ತಲೇ ಇದೆ. ಪ್ರಾಣಿಗಳು ಇತರ ಪ್ರಾಣಿಗಳನ್ನು ವಧೆಮಾಡಿ ಬದುಕುವುದನ್ನು ಕಾಣುತ್ತೇವೆ. ಆದರೆ ಹಿಂದೆ ಯಾವುದೋ ಒಂದು ಕಾಲದಲ್ಲಿ ಒಬ್ಬ ಪರಮಜ್ಞಾನಿ ಸತ್ಯವನ್ನು ಸೂಕ್ಷ್ಮದೃಷ್ಟಿಯಿಂದ ಹೊಕ್ಕು, ' ಮಾನವನು ತನ್ನ

ಪುರುಷಾರ್ಥವನ್ನು ಸಾಧಿಸಬೇಕಾದರೆ ತನ್ನ ಜೊತೆಯಲ್ಲಿರುವವರಿಗೆ ತನ್ನ ಕರ್ತವ್ಯವನ್ನು ಸಲ್ಲಿಸಬೇಕಾದರೆ ಹೋರಾಟದಿಂದಲೂ ಹಿಂಸೆಯಿಂದಲೂ ಅದು ಸಾಧ್ಯವಿಲ್ಲ, ಅಹಿಂಸೆಯಿಂದಲೇ ಸಾಧ್ಯ ' ಎಂದು ಸಾರಿರಬೇಕು. ವಿದ್ಯುಚ್ಛಕ್ತಿಗಿಂತಲೂ ಅದು ಚಟುವಟಿಕೆಯಿಂದ ಕೂಡಿದ್ದು; ಆಕಾಶತತ್ತ್ವಕ್ಕಿಂತಲೂ ಶಕ್ತಿಯುತವಾದುದು; ಸ್ವಯಂಪ್ರೇರಿತವೂ ಕ್ರಿಯಾನ್ವಿತವೂ ಆದ ಒಂದು ಶಕ್ತಿ ಅದರಲ್ಲಿ ಅಡಗಿದೆ. ಕ್ರೈಸ್ತಪ್ರವಾದಿಯಾದ ಸೆಂಟ್ ಪಾಲ್ ಪ್ರೇಮವನ್ನು ವರ್ಣಿಸಿದ್ದಾನೆ. ಸೊಗಸಾದ ವರ್ಣನೆ—ಅದನ್ನು ನಾನು ಬಲ್ಲೆ. ಅಂತಹುದೇ ಅಹಿಂಸೆ. ಎಲ್ಲ ಸೃಷ್ಟಿಯನ್ನೂ ಸಮಸ್ತ ಜೀವರಾಶಿಗಳನ್ನೂ ಅದು ಒಳಗೊಳ್ಳುತ್ತದೆ. ಕೇವಲ ಮಾನವರನ್ನು ಮಾತ್ರವಲ್ಲ. ' ಪ್ರೇಮ 'ವೆಂಬ ಶಬ್ದವನ್ನೇ ನಾನು ಉಪಯೋಗಿಸಬಹುದಾಗಿತ್ತು. ಆದರೆ ಆ ಪದಕ್ಕೆ ಬೇರೆ ಅರ್ಥಗಳೂ ಇವೆ. ಆದುದರಿಂದ ಈ ನಕಾರವುಳ್ಳ ಶಬ್ದವನ್ನು ಉಪಯೋಗಿಸಬೇಕಾಯಿತು. ಆದರೆ ಕೇವಲ ನಿಷೇಧಾತ್ಮಕವಾದ ಅರ್ಥವನ್ನಾಗಲಿ ಅಥವಾ ಶೂನ್ಯವಾದ ಸ್ಥಿತಿಯನ್ನಾಗಲಿ ಅದು ವರ್ಣಿಸುವುದಿಲ್ಲ. ಎಲ್ಲಕ್ಕೂ ಮಿಗಿಲಾದ ಶಕ್ತಿ ಇದು. ಅಹಿಂಸಾವ್ರತವನ್ನು ಅನುಸರಿಸುವ ಒಬ್ಬ ಮನುಷ್ಯನು ಪಶುಬಲವನ್ನು ಪ್ರದರ್ಶಿಸುವ ಅನೇಕರ ಶಕ್ತಿಗಿಂತಲೂ ಹೆಚ್ಚು ಶಕ್ತಿಯನ್ನು ಪಡೆದಿರುತ್ತಾನೆ.

**ಪ್ರಶ್ನೆ :** ಯಾವ ವ್ಯಕ್ತಿಯೇ ಆಗಲಿ ಇದನ್ನು ಪಡೆಯಲು ಸಾಧ್ಯವೆ ?

**ಉತ್ತರ :** ಖಂಡಿತವಾಗಿಯೂ ಸಾಧ್ಯ. ಇದು ಅಷ್ಟು ವಿಶೇಷವೂ ಅಪೂರ್ವವೂ ಆಗಿದ್ದ ಪಕ್ಷಕ್ಕೆ ಅದರ ಗೋಜಿಗೆ ನಾನು ಹೋಗುತ್ತಿರಲಿಲ್ಲ, ಅದನ್ನು ಆ ಕ್ಷಣವೇ ಬಿಟ್ಟುಬಿಡುತ್ತಿದ್ದೆ.

**ಪ್ರಶ್ನೆ :** ಸ್ವಂತದ್ದು ಅಥವಾ ಸೊತ್ತೆಂಬ ಆಕಾಂಕ್ಷೆ ಅದಕ್ಕಿರುವುದಿಲ್ಲವಲ್ಲವೆ ?

**ಉತ್ತರ :** ಹೌದು. ಅದಕ್ಕೆ ಸೊತ್ತೆಂದು ಯಾವುದೂ ಇಲ್ಲ. ಆದುದರಿಂದ ಅದಕ್ಕೆ ಎಲ್ಲವೂ ಸ್ವಂತದ್ದೇ.

**ಪ್ರಶ್ನೆ :** ಇದರ ಮೇಲೆ ಯಾವಾಗಲೂ ದಾಳಿ ಮಾಡುತ್ತಿರುವುದನ್ನು ಒಬ ಮನುಷ್ಯನು ತಡೆಗಟ್ಟಬಲ್ಲನೆ ?

**ಉತ್ತರ :** ಅದು ಸಾಧ್ಯ. ಪ್ರಾಯಶಃ ನಿಮ್ಮ ಪ್ರಶ್ನೆಗೆ ನೀವು ಕೊಟ್ಟಿರುವ ಅರ್ಥಕ್ಕಿಂತಲೂ ಹೆಚ್ಚು ವ್ಯಾಪಕಾರ್ಥವಿದೆ. ಉದಾಹರಣೆಗೆ, ಮೂವತ್ತು ಕೋಟಿ ಭಾರತೀಯರ ಶೋಷಣೆಯನ್ನು ಒಬ್ಬ ಮನುಷ್ಯ ಪ್ರತಿಭಟಿಸಬಲ್ಲನೆ ?—ಎಂದು ನಿಮ್ಮ ಅರ್ಥವಿರಬಹುದು. ಅಥವಾ ಒಬ್ಬ ಮನುಷ್ಯನನ್ನು ಇಡೀ ಪ್ರಪಂಚವೇ ವಿರೋಧಿಸಿದರೆ ಆಗ ಅವನು ಏನು ಮಾಡಬಲ್ಲನು ? —ಹೀಗಾದರೂ ನಿಮ್ಮ ಪ್ರಶ್ನೆಯ ಅರ್ಥವಿರಬಹುದು.

**ಪ್ರಶ್ನೆ :** ಹೌದು. ಅದು ಪ್ರಶ್ನೆಯ ಅರ್ಧಭಾಗ. ಒಬ್ಬ ಮನುಷ್ಯನಿಂದ ತನ್ನ ಸುತ್ತಮುತ್ತಲಿನಲ್ಲಿ ಅವನ ಮೇಲೆ ಬೀಳುವ ಹಿಂಸಾಪ್ರವೃತ್ತಿಯನ್ನು ಎದುರಿಸಲು ಸಾಧ್ಯವೇ ?—ಎಂದು ನನ್ನ ಪ್ರಶ್ನೆ.

**ಉತ್ತರ :** ಸಾಧ್ಯವಿಲ್ಲದಿದ್ದರೆ ಅವನು ಅಹಿಂಸೆಯ ನಿಜವಾದ ಪ್ರತಿನಿಧಿಯಲ್ಲ. ತನ್ನ ಶತ್ರುವಿನ ಮನಸ್ಸನ್ನು ತಿರುಗಿಸಿ ಒಲಿಸಿಕೊಂಡ ಒಬ್ಬನಾದರೂ ಇಲ್ಲವೆಂದರೆ—ಅಹಿಂಸೆಯನ್ನು ಪರಿಪೂರ್ಣವಾಗಿ ಪ್ರತಿನಿಧಿಸಿದವನು ಒಬ್ಬನಾದರೂ ಇಲ್ಲವೆಂದು ತಿಳಿಯಬೇಕು.

**ಪ್ರಶ್ನೆ :** ಹಾಗಾದರೆ ಇದು ಎಲ್ಲ ಶಕ್ತಿಗಳಿಗೂ ಮಿಗಿಲಾದುದೆ ?

**ಉತ್ತರ :** ಹೌದು. ಜೀವನದಲ್ಲಿ ಇದೊಂದೇ ನಿಜವಾದ ಶಕ್ತಿ.

**ಪ್ರಶ್ನೆ :** ‘ ಕ್ಷಮಿಸಬೇಕು. ಒಂದು ಪ್ರಶ್ನೆಯನ್ನು ಕೇಳಬಯಸುತ್ತೇನೆ. ಅದು ದೌರ್ಬಲ್ಯದಿಂದ ಕೂಡಿದ ಪ್ರಶ್ನೆಯಾಗಿದ್ದೀತು ’ ಎಂದು ಈ ಚರ್ಚೆಯಲ್ಲಿ ಮಗ್ನರಾಗಿಹೋಗಿದ್ದ ಡಾ॥ ತರ್‌ಮನ್ ಕೇಳಿದರು : ‘ ಈ ದೌರ್ಬಲ್ಯವನ್ನು ಕ್ಷಮಿಸಬೇಕು. ಈ ಕಠಿಣವಾದ ಕಲೆಯಲ್ಲಿ ಉತ್ತೀರ್ಣರಾಗುವಂತೆ ವ್ಯಕ್ತಿಗಳನ್ನೂ, ಸಮೂಹಗಳನ್ನೂ ಹೇಗೆ ತರಪೇತು ಮಾಡಬೇಕು ? ’

**ಉತ್ತರ :** ಇದಕ್ಕೆ ರಾಜಮಾರ್ಗವಿಲ್ಲ—ಒಂದೇ ಮಾರ್ಗ—ನೀವು ನಿಮ್ಮ ನಿತ್ಯಜೀವನದಲ್ಲಿ ಇದಕ್ಕೆ ಪ್ರತೀಕವಾಗಿರಬೇಕು. ನಿಮ್ಮ ಜೀವನವೇ ಉಪದೇಶ. ಈ ರೀತಿಯ ಜೀವನವನ್ನು ಸಾಧಿಸಬೇಕಾದರೆ ಬಹಳ ಅಧ್ಯವಸಾಯ, ನಿರಂತರ ಮಹಾಪ್ರಯತ್ನ, ಚಿತ್ತನೈರ್ಮಲ್ಯ ಇವೆಲ್ಲವೂ ಅಗತ್ಯ. ಭೌತಶಾಸ್ತ್ರ ಒಂದನ್ನು ಪೂರ್ಣ ತಿಳಿಯಬೇಕಾದರೆ ಮನುಷ್ಯನ ಆಯುಷ್ಯವೆಲ್ಲ

ಬೇಕಾಗುತ್ತದೆ. ಹೀಗಿರುವಲ್ಲಿ ಈ ಅಪಾರಶಕ್ತಿಯ ಸಾಧನೆಯನ್ನು ಮಾಡ ಬೇಕಾದರೆ ಎಷ್ಟು ಆಯುಷ್ಯಗಳಾದರೂ ಬೇಕಾಗಬಹುದು. ಅದಕ್ಕಾಗಿ ಚಿಂತಿಸು ವುದೇತಕ್ಕೆ ? ಇದೊಂದೇ ನಿತ್ಯವಾದ ವಸ್ತುವಾದ ಪಕ್ಷಕ್ಕೆ, ಇದೇ ಎಲ್ಲಕ್ಕಿಂತಲೂ ಅಮೂಲ್ಯವಾದ ಸಾಧನವಾಗಿರುವ ಪಕ್ಷಕ್ಕೆ, ಇದಕ್ಕಾಗಿ ನೀವು ವಿನಿಯೋಗ ಮಾಡುವ ಶ್ರಮವೆಲ್ಲವೂ ಸಾರ್ಥಕವೆ. 'ಮೊದಲು ದೇವರ ರಾಜ್ಯವನ್ನು ಅರಸುತ್ತ ಹೋಗಿ—ಉಳಿದುದೆಲ್ಲವೂ ನಿಮಗೆ ಪ್ರಾಪ್ತವಾಗುವುದು' ಎಂದು ಬೈಬಲ್ ಹೇಳುತ್ತದೆ. ಅಹಿಂಸೆಯೇ ಆ ದೇವರ ರಾಜ್ಯ.

ಶ್ರೀಮತಿ ತರ್‌ಮನ್ ಈವರೆಗೂ ಮೌನವಾಗಿದ್ದವರು ಒಂದು ಪ್ರಶ್ನೆ ಯನ್ನೂ ಕೇಳದೆ ಈ ಸಂಭಾಷಣೆಯನ್ನು ಮುಗಿಸಲು ಇಷ್ಟಪಡಲಿಲ್ಲ. ಒಂದಲ್ಲ ಒಂದು ದಿನ ಆಕೆ ಉತ್ತರ ಒದಗಿಸಬೇಕಾಗಿದ್ದ ಪ್ರಶ್ನೆ ಇದು: 'ಒಂದು ವೇಳೆ ನನ್ನ ಸಹೋದರನೇ ಬಿಳಿ ಜನರ ದೌರ್ಜನ್ಯಕ್ಕೆ ನನ್ನ ಕಣ್ಣೆದುರಿಗೆ ಗುರಿಯಾದರೆ ನಾನು ಹೇಗೆ ನಡೆದುಕೊಳ್ಳಬೇಕು ?' ಎಂದು ಕೇಳಿದರು.

ಗಾಂಧೀಜೀ ಉತ್ತರವಿತ್ತರು: 'ನಮ್ಮನ್ನು ನಾವೇ ಬಲಿಕೊಟ್ಟು ಕೊಳ್ಳುವ ಮಾರ್ಗವೊಂದಿದೆ. ನಾನು ನೀಗ್ರೋ ಆಗಿದ್ದ ಪಕ್ಷಕ್ಕೆ—ನನ್ನ ಸಹೋದರಿಯೇ ಅತ್ಯಾಚಾರಕ್ಕೆ ಗುರಿಯಾಗಿ ಬಿಳಿ ಜನರೆಲ್ಲ ಅವಳ ಮೇಲೆ ಬಿದ್ದರೆ—ನನ್ನ ಕರ್ತವ್ಯವೇನೆಂದು ನಾನೇ ಪ್ರಶ್ನೆಮಾಡಿಕೊಂಡಿದೇನೆ. ಅದಕ್ಕೆ ನನ್ನ ಉತ್ತರ: ನಾನು ಇವರನ್ನು ದ್ವೇಷಿಸಬಾರದು; ಆದರೂ ಇವರೊಂದಿಗೆ ನನ್ನ ಸಹಕಾರವಿರಬಾರದು. ಪ್ರಾಯಶಃ ನನ್ನ ಹೊಟ್ಟೆಪಾಡಿಗಾಗಿ ಈ ಜನರನ್ನೇ ನಾನು ಅವಲಂಬಿಸಿದೇನೆ. ನಾನು ಅವರೊಂದಿಗೆ ಸಹಕರಿಸು ವುದಿಲ್ಲ; ಅವರಿಂದ ಒದಗುವ ಆಹಾರವನ್ನು ನಾನು ಮುಟ್ಟುವುದಿಲ್ಲ; ಈ ಅನ್ಯಾಯವನ್ನು ಸಹಿಸಿಕೊಂಡಿರುವ ನೀಗ್ರೋಗಳೊಂದಿಗೂ ನಾನು ಸಹಕರಿಸು ವುದಿಲ್ಲ—ಇದೇ ಆತ್ಮಬಲಿಯೆಂದು ನಾನು ಹೇಳುವುದು. ನನ್ನ ಸ್ವಂತ ಜೀವನ ದಲ್ಲಿ ಈ ವಿಧಾನವನ್ನು ನಾನು ಅನುಸರಿಸಿದೇನೆ. ಸುಮ್ಮನೆ ಅರ್ಥವಿಲ್ಲದೆ ಉಪವಾಸ ಮಾಡುವುದರಿಂದ ಯಾವ ಪ್ರಯೋಜನವೂ ಇಲ್ಲ. ನಮ್ಮ ಪ್ರಾಣ ಕ್ಷಣಕ್ಷಣಕ್ಕೂ ಕುಂದುತ್ತಿರುವಾಗಲೂ ನಮ್ಮ ಶ್ರದ್ಧೆ ಪ್ರಕಾಶಿಸುತ್ತಿರಬೇಕು. ಆದರೆ ಅಹಿಂಸೆಯ ಆಚರಣೆಗೆ ನಾನು ಅಷ್ಟು ಒಳ್ಳೆಯ ಉದಾಹರಣೆಯಲ್ಲ. ನನ್ನ ಉತ್ತರ ನಿಮ್ಮ ಮನಸ್ಸಿಗೆ ಒಪ್ಪಿಗೆ ಆಗದೆ ಇರಬಹುದು. ಆದರೆ ನಾನು

ಭಗೀರಥಪ್ರಯತ್ನ ಮಾಡುತ್ತಿದೇನೆ. ಈ ಜನ್ಮದಲ್ಲಿ ನನಗೆ ಪೂರ್ಣ ಜಯ ದೊರೆಯದಿದ್ದರೂ ನನ್ನ ಶ್ರದ್ಧೆ ಕುಂದಲಾರದು.'

ಶ್ರೀಮತಿ ತರ್‌ಮನ್ ಮನೋರಂಜಕವಾಗಿ ಹಾಡಬಲ್ಲವರು. ದಂಪತಿಗಳು ತೆರಳುವುದಕ್ಕೆ ಮುನ್ನ ನಮ್ಮ ನೆನಪಿನಲ್ಲಿ ಸ್ಥಿರವಾಗಿರುವಂತೆ ಒಂದು ಹಾಡನ್ನು ಹಾಡಿಹೋಗಬೇಕೆಂದು ಬಯಸಿದರು. ನೀಗ್ರೋ ಜನರು ಬಳಸುವ ಭಕ್ತಿಗೀತೆಗಳೆರಡನ್ನು ಹಾಡಿದರು. ನಮಗೆ ಪರಮಾನಂದವಾಯಿತು. 'ನಮ್ಮ ಪ್ರಭುವನ್ನು ಸಿಲುಬೆಗೇರಿಸಿದಾಗ ನೀವಲ್ಲಿದ್ದಿರಾ ?', 'ನಾವು ಯಾಕೋಬಿನ ಏಣಿಯನ್ನು ಹತ್ತುವೆವು' ಎಂಬ ಕೀರ್ತನೆಗಳವು. ಈ ಎರಡನೇ ಹಾಡು ನಮ್ಮೆಲ್ಲರ ಅಂತರಾಳದಲ್ಲಿರುವ ಆಸೆ–ಆಕಾಂಕ್ಷೆಗಳನ್ನು ಉಸಿರುತ್ತಿತ್ತು. ಪ್ರಪಂಚದಲ್ಲಿ ತುಳಿತಕ್ಕೆ ಗುರಿಯಾಗಿರುವ ಎಲ್ಲ ಜನರು ಮೇಲಕ್ಕೆ ಕ್ರಮೇಣ ಹತ್ತಿ ತಮ್ಮ ಗುರಿಯನ್ನು ಸಾಧಿಸಿಕೊಳ್ಳಬೇಕೆಂಬ ಭಾವ ಅದರಲ್ಲಿತ್ತು.

ಇನ್ನು ಬೀಳ್ಕೊಡುವ ಸಮಯ ಬಂತು. 'ತಾವು ಅಮೆರಿಕಾ ದೇಶಕ್ಕೆ ಬರಬೇಕು' ಎಂದರು ಆ ಅತಿಥಿಗಳು. ಈ ಕರೆಯಲ್ಲಿ ಒತ್ತಾಯವಿತ್ತು, ಪ್ರೇಮವಿತ್ತು. ಶ್ರೀಮತಿ ತರ್‌ಮನ್‌ರು ಈ ಪ್ರಾರ್ಥನೆಯನ್ನು ಪುಷ್ಟೀಕರಿಸುತ್ತ ಹೇಳಿದರು: 'ತಾವು ಅಮೆರಿಕಕ್ಕೆ ಬಿಳಿ ಜನರ ಸಲುವಾಗಿ ಅಲ್ಲ—ನೀಗ್ರೋಗಳಿಗಾಗಿ ಬರಬೇಕು. ನಾವು ಅಗತ್ಯವಾಗಿ ಬಿಡಿಸಬೇಕಾದ ಸಮಸ್ಯೆಗಳು ಅನೇಕವಿವೆ. ತಮ್ಮ ಆಗಮನದ ಆವಶ್ಯಕತೆ ಬಹಳವಿದೆ.'

'ಇದು ಸಾಧ್ಯವಾಗಲೆಂದು ನಾನು ಬಹಳ ಬಯಸುತ್ತೇನೆ. ಆದರೆ ನಾನು ಹೇಳುವುದಕ್ಕೆಲ್ಲ ಪ್ರತ್ಯಕ್ಷವಾದ ಪ್ರಯೋಗ ಇಲ್ಲಿ ಆಗದ ಹೊರತು ನಾನು ನಿಮಗೇನು ತಂದುಕೊಡಲಿ? ನಾನು ಪರಾಜಿತನಾದೆನೆಂದು ಹೇಳುತ್ತಿಲ್ಲ; ಆದರೆ ಇನ್ನೂ ನಾನು ಪರಿಪೂರ್ಣತೆಯನ್ನು ಪಡೆಯಬೇಕು. ಹೊರಡಬೇಕೆಂದು ನನ್ನ ಅಂತರಾತ್ಮ ಹೇಳಿದ ಕೂಡಲೆ ನಾನು ತಡಮಾಡಲಾರೆನೆಂಬ ಭರವಸೆಯನ್ನು ಕೊಡುತ್ತೇನೆ.'

ನೀಗ್ರೋ ಜನರು ಗಾಂಧೀಜಿಯ ಸಂದೇಶವನ್ನು ಪಡೆಯಲು ಸಿದ್ಧರಾಗಿರುವರೆಂದು ಡಾ|| ತರ್‌ಮನ್‌ರು ಹೇಳಿದರು.

'ನಾವು ಕ್ರೈಸ್ತ ಧರ್ಮವನ್ನು ನಮ್ಮದೇ ಆದ ರೀತಿಯಲ್ಲಿ ಅರ್ಥಮಾಡಿಕೊಂಡಿದೇವೆ. ನಮ್ಮ ಜೀವನವೈಶಿಷ್ಟ್ಯಕ್ಕೆ ಅದೇ ಹಿನ್ನೆಲೆಯಾಗಿದೆ. ನೀಗ್ರೋ

ಜನರು ಹಾಡುವ ಭಕ್ತಿಗೀತೆಗಳನ್ನು ವಿಮರ್ಶೆ ಮಾಡುತ್ತ ಹೋದರೆ ತಾವು ಈ ದಿನ ಹೇಳಿದ ಮಾತುಗಳನ್ನು ಪದೇ ಪದೇ ನೆನೆಯುವಂತೆ ಆಗುತ್ತದೆ.'

'ಒಳ್ಳೆಯದು, ನೀಗ್ರೋ ಜನರ ಮೂಲಕವೇ ಅಹಿಂಸೆಯ ಶುದ್ಧವಾದ ಸಂದೇಶವು ಪ್ರಪಂಚದಲ್ಲಿ ಪ್ರಸಾರಗೊಳ್ಳುವಂತೆ ಆದರೂ ಆಗಬಹುದು.'

(ಹರಿಜನ, ೧೪-೩-೧೯೩೬)

## ಒಗಟುಗಳು : ಅಹಿಂಸೆಯ ಕಠಿಣ ಸಮಸ್ಯೆಗಳು

ಒಬ್ಬ ಕಾಲೇಜು ಪ್ರಾಧ್ಯಾಪಕರೂ, ಅವರ ವರ್ಗದಲ್ಲಿರುವ ಐವತ್ತು ವಿದ್ಯಾರ್ಥಿಗಳ ಪೈಕಿ ಇಬ್ಬರು ಪ್ರತಿನಿಧಿಗಳೂ ಈ ರೀತಿ ಬರೆಯುತ್ತಾರೆ :

'ಈ ವರ್ಷದ ಇಂಟರ್‌ಮೀಡಿಯೇಟ್ ಪರೀಕ್ಷೆಗೆ ಇಟ್ಟಿರುವ ಇಂಗ್ಲೀಷ್ ಪಠ್ಯಪುಸ್ತಕದಲ್ಲಿ ನಿಮ್ಮ ಆತ್ಮಕಥೆಯಿಂದ ಆಯ್ದ ಐದು ಪುಟಗಳಷ್ಟು ಒಂದು ಭಾಗವಿದೆ. ಅದರ ಶೀರ್ಷಿಕೆ 'ಅಹಿಂಸೆ'. ಈ ತತ್ತ್ವವನ್ನು ಕುರಿತು ಕೆಲವು ವಿಚಾರಗಳನ್ನೂ ನಮ್ಮ ನಿತ್ಯಜೀವನದಲ್ಲಿ ಅದರ ಪ್ರಯೋಗವನ್ನೂ ನೀವು ವಿವರಿಸಿದೀರಿ.

'ನಾನೂ ಐವತ್ತು ವಿದ್ಯಾರ್ಥಿಗಳೂ ಈ ಪ್ರಬಂಧವನ್ನು ಅಧ್ಯಯನ ಮಾಡುತ್ತಿದೇವೆ. ಅನೇಕ ಗಂಟೆಗಳ ಕಾಲ ಈ ಅಧ್ಯಯನ, ಚರ್ಚೆ, ವಿಮರ್ಶೆ ಇವು ನಡೆದಿವೆ. ವಿಷಯ ಪ್ರಯೋಜನಕಾರಿಯಾದುದು ; ವಿಚಾರಶಕ್ತಿಯನ್ನು ಕೆರಳಿಸುವಂತಹುದು. ಇದು ಸಹಜ. ಭಾರತೀಯ ವಿದ್ಯಾರ್ಥಿಗಳಿಗೆ ತಮ್ಮ ದೇಶದ ಅಭ್ಯುದಯದ ವಿಷಯದಲ್ಲಿ ಬಹಳ ಆಸಕ್ತಿ ಇದೆ. ಒಟ್ಟಿನಲ್ಲಿ ನೀವು ಅಹಿಂಸೆಯ ಬಗೆಗೆ ಮಾಡಿರುವ ವ್ಯಾಖ್ಯೆಯನ್ನು ನಾವು ಹೃತ್ಪೂರ್ವಕ ಒಪ್ಪಿಕೊಳ್ಳುತ್ತೇವೆ. ನಮ್ಮ ಜೀವನದಲ್ಲಿ ಈ ಕಠಿಣವಾದರೂ ಉದಾತ್ತ ತತ್ತ್ವವನ್ನು ಅಳವಡಿಸಿಕೊಳ್ಳಬೇಕೆಂಬ ಪ್ರೇರಣೆಯುಂಟಾಗಿದೆ.

'ಒಂದು ವಿಷಯದಲ್ಲಿ ಮಾತ್ರ ನಾನೂ ನನ್ನ ವಿದ್ಯಾರ್ಥಿಗಳೂ ನಿಮ್ಮ ಅಭಿಪ್ರಾಯವನ್ನು ಸ್ಪಷ್ಟವಾಗಿ ಗ್ರಹಿಸಲು ಅಶಕ್ತರಾದೆವು. ಅಹಿಂಸೆಯನ್ನು ಆಚರಿಸುವವನು ಯುದ್ಧದ ಸಂದರ್ಭದಲ್ಲಿ ಹೇಗೆ ನಡೆದುಕೊಳ್ಳಬೇಕೆಂದು ಈ ವಾಕ್ಯಗಳನ್ನು ಬರೆದಿದೀರಿ : 'ಎರಡು ರಾಷ್ಟ್ರಗಳು ಯುದ್ಧಮಾಡುತ್ತಿದ್ದರೆ

ಅದನ್ನು ನಿಲ್ಲಿಸುವುದು ಅಹಿಂಸಾವ್ರತವನ್ನು ಪಾಲಿಸುವವನ ಕರ್ತವ್ಯ. ಈ ಕರ್ತವ್ಯವನ್ನು ಮಾಡಲಾಗದವನು, ಯುದ್ಧವನ್ನು ಪ್ರತಿಭಟಿಸಲು ಅಶಕ್ತನಾದವನು, ಅಂತಹ ಪ್ರತಿಭಟನೆಯನ್ನು ಮಾಡಲು ಯೋಗ್ಯತೆ ಇಲ್ಲದವನು, ಯುದ್ಧದಲ್ಲಿ ಭಾಗಿಯಾಗಬಹುದು—ಆದರೂ ಅವನು ಅದರಿಂದ ತಾನೂ ತನ್ನ ದೇಶವೂ ಪ್ರಪಂಚವೂ ವಿಮುಕ್ತವಾಗುವಂತೆ ಪ್ರಯತ್ನಿಸಬಹುದು.' ಮುಂದುವರಿಯುತ್ತ, ಐರೋಪ್ಯ ಯುದ್ಧವು ಆರಂಭವಾಗುವ ಸಂದರ್ಭದಲ್ಲಿ ತಾವು ಯಾವ ಮಾರ್ಗವನ್ನು ಹಿಡಿಯಬಹುದೆಂದು ಪ್ರಸ್ತಾಪಿಸುತ್ತ ಹೀಗೆ ಬರೆದಿದೀರಿ: '....ಅಥವಾ ನಾನು ಚಕ್ರಾಧಿಪತ್ಯದ ಕಡೆ ಸೇರಿಕೊಂಡು ಯುದ್ಧದಲ್ಲಿ ಭಾಗಿಯಾಗಬಹುದು. ಹೀಗೆ ಮಾಡುವುದು ಯುದ್ಧದ ಹಿಂಸೆಯನ್ನು ಪ್ರತಿಭಟಿಸುವ ಯೋಗ್ಯತೆಯನ್ನು ಸಂಪಾದಿಸುವ ಸಲುವಾಗಿ. ಈ ಯೋಗ್ಯತೆಯೂ ಸಿದ್ಧತೆಯೂ ನನ್ನಲ್ಲಿ ಸಾಕಷ್ಟು ಇರಲಿಲ್ಲವಾದುದರಿಂದ ಬೇರೆ ಉಪಾಯವಿಲ್ಲದೆ ನಾನು ಯುದ್ಧದಲ್ಲಿ ಸೇವೆ ಸಲ್ಲಿಸಬೇಕಾಯಿತು.'

'ಈ ವಿಷಯದಲ್ಲಿ ನಿಮ್ಮ ಹಿಂದಿನ ಮತ್ತು ಈಗಿನ ಅಭಿಪ್ರಾಯಗಳನ್ನು ಸ್ಪಷ್ಟವಾಗಿ ವಿಶದಮಾಡಿದರೆ ನಮಗೆ ಬಹಳ ಉಪಕಾರ ಮಾಡಿದಂತಾಗುವುದು. ಏಕೆಂದರೆ ಸನ್ನಿಹಿತವಾಗಿರುವ ಯುದ್ಧವು ಪ್ರಾರಂಭವಾಗುವ ಪಕ್ಷಕ್ಕೆ ವಿದ್ಯಾರ್ಥಿಗಳು ತಮ್ಮ ನಿಲುವು ಎಂತಹುದೆಂದು ಸರಿಯಾಗಿ ನಿಶ್ಚಯಿಸಿಕೊಳ್ಳಬೇಕಾಗಿದೆ. ಅವರು ಅಹಿಂಸಾತತ್ತ್ವವನ್ನು ಪಾಲಿಸುತ್ತ ಯಾವ ಕಾರಣದಿಂದಲೇ ಆಗಲಿ ಯುದ್ಧದಲ್ಲಿ ಮನಃಪೂರ್ವಕವಾಗಿ ಭಾಗವಹಿಸಲಾದೀತೆ ?

'ಕಾತರರಾದ ಐವತ್ತು ವಿದ್ಯಾರ್ಥಿಗಳ—ಅಷ್ಟೇ ಆಸಕ್ತಿಯುಳ್ಳ ತಮ್ಮ ಅಧ್ಯಾಪಕರ ಮನಸ್ಸಿಗೆ ಸಮಾಧಾನವಾಗುವಂತೆ ತಾವು ಉತ್ತರ ಕೊಡುವಷ್ಟು ಅನುಕೂಲ ಕಲ್ಪಿಸಿಕೊಳ್ಳುವಿರೆಂದು ನಂಬಿದೇನೆ.'

ಯಾವ ಕಾಲೇಜಿನಿಂದ ಈ ಪತ್ರ ಬಂದಿರುವುದೆಂದು ನಾನು ತಿಳಿಸಿಲ್ಲ; ಅವರ ಹೆಸರುಗಳನ್ನೂ ಪ್ರಕಟಿಸಲಿಲ್ಲ. ಹೀಗೆ ಇವುಗಳನ್ನು ಗುಪ್ತವಾಗಿಡುವ ಕಾರಣವಿಲ್ಲವೆಂದು ತೋರುತ್ತದೆ. ಅಂಚೆ ಚೀಟಿಯೊಂದಿಗೆ ಉತ್ತರವನ್ನು ಕಳುಹಿಸಲು ಒಂದು ಲಕೋಟೆಯನ್ನೂ ಈ ವಿದ್ವಾಂಸರು ಕಳುಹಿಸಿದಾರೆ. ಅಂದರೆ ನಾನು ವೈಯಕ್ತಿಕವಾಗಿ ಬರೆಯಬೇಕೆಂದು ಇದರ ಸೂಚನೆ. ಈಗ ನಾನು ಇಬ್ಬರು ರೋಗಿಗಳ ಆರೈಕೆಯಲ್ಲಿ ನಿರತನಾಗಿದೇನೆ, ಬಿಡುವಿಲ್ಲ.

‘ ಹರಿಜನ ’ ಪತ್ರಿಕೆಯ ವಾಚಕರಿಗೂ ನನ್ನ ಸಾಪ್ತಾಹಿಕದ ಮಾತುಗಳನ್ನು ಹೇಳಬೇಕಾಗಿದೆ. ಆದುದರಿಂದ ಎರಡು ಉದ್ದೇಶ್ಯಗಳನ್ನೂ ಪೂರೈಸುವಂತೆ ಪತ್ರಿಕೆಯಲ್ಲಿ ಬರೆಯುತ್ತಿದೇನೆ. ಪತ್ರಲೇಖಕರು ಕ್ಷಮಿಸುವರೆಂದು ನಂಬಿದೇನೆ. ಸಮಯದ ಉಳಿತಾಯಕ್ಕಾಗಿ ಹೀಗೆ ಮಾಡುತ್ತಿದೇನೆ.

ಇವರು ಎತ್ತಿರುವ ಪ್ರಶ್ನೆ ಬಹಳ ಮುಖ್ಯವಾದುದು. ನನಗೆ ಇದನ್ನು ಬಿಡಿಸುವುದು ಬಹಳ ಕಷ್ಟವೇ ಆಗಿದೆ. ಒಂದು ಸಮಯದಲ್ಲಿ ಯಾವ ದಾರಿಯನ್ನು ಹಿಡಿಯಬೇಕೆಂದು ನಿರ್ಧರಿಸುವುದು ಕಷ್ಟವಲ್ಲ; ಆದರೆ ಅಹಿಂಸೆಯ ದೃಷ್ಟಿಯಿಂದ ಅದನ್ನು ಸಮರ್ಥನೆ ಮಾಡುವುದೇ ಕಷ್ಟದ ಕೆಲಸ. ಏಕೆಂದರೆ ವ್ರತವನ್ನು ಪಾಲಿಸುವವನೂ, ಪಾಲಿಸದವನೂ ಬಾಹ್ಯದೃಷ್ಟಿಯಿಂದ ಒಂದೇ ದಾರಿಯನ್ನು ಹಿಡಿಯಬಹುದು. ಆದರೆ ಆಚರಣೆಯ ಹಿನ್ನೆಲೆಯಲ್ಲಿರುವ ಉದ್ದೇಶ್ಯವೇ ಅದರ ಗುಣಕ್ಕೆ ಕಾರಣವಾಗುತ್ತದೆ.

ನಾನು ಇದನ್ನು ಬರೆಯುತ್ತಿರಬೇಕಾದರೆ ನನ್ನ ಬಳಿ ಈ ಪುಸ್ತಕವೂ ಇಲ್ಲ, ಈ ಲೇಖನದ ಗುಜರಾತಿ ಮೂಲವೂ ಇಲ್ಲ. ಆದರೆ ಏನು ಬರೆದೆನೆಂಬುದರ ನೆನಪಿದೆ. ಅಷ್ಟೇ ಅಲ್ಲ, ನನಗೆ ತಿಳಿದಷ್ಟುಟ್ಟಿಗೆ, ಅಹಿಂಸೆಯ ಬಗೆಗೆ ನನ್ನ ಅಭಿಪ್ರಾಯಗಳು ಹಿಂದೆ ಇದ್ದಂತೆಯೇ ಇವೆ, ಯಾವ ಬದಲಾವಣೆಯನ್ನೂ ಹೊಂದಿಲ್ಲ.

ನಾನು ಕಳೆದ ಐರೋಪ್ಯ ಯುದ್ಧವಾದಾಗ ಯಾವ ರೀತಿ ನಡೆದುಕೊಂಡೆನೋ—ಈ ಬರವಣಿಗೆಗೆ ಅದೇ ಆಧಾರ. ನನ್ನ ಪ್ರಾಣದ ಮೇಲೆಯೂ ಲಕ್ಷ್ಯವಿಡದೆ ಅದರಲ್ಲಿ ಪೂರ್ಣವಾಗಿ ಭಾಗಿಯಾದೆ. ಯುದ್ಧದಲ್ಲಿನ ಪ್ರಾಣಾಪಾಯವಲ್ಲ—ನಾನು ಎರಡು-ಮೂರು ತಿಂಗಳುಗಳ ಹಿಂದೆ ಹದಿನಾಲ್ಕು ದಿನ ಉಪವಾಸ ಮಾಡಿ ಅಶಕ್ತನಾಗಿದ್ದೆ. ಅದೇ ಸ್ಥಿತಿಯಲ್ಲಿ ಕವಾಯತು ಮುಂತಾದ ಶ್ರಮಸಾಧ್ಯವಾದ ಅಭ್ಯಾಸಗಳಲ್ಲಿ ತೊಡಗಿ ನನ್ನ ದೇಹಸ್ಥಿತಿ ತೀರ ಕೆಟ್ಟಿತು. ಒಟ್ಟಿನಲ್ಲಿ ಬ್ರಿಟಿಷ್ ಚಕ್ರಾಧಿಪತ್ಯದಿಂದ ಮಾನವಸಮೂಹಕ್ಕೆ ಉಪಕಾರವಾಗುವುದೆಂಬ ವಿಶ್ವಾಸ ಆಗ ನನ್ನಲ್ಲಿತ್ತು. ಅದು ಯುದ್ಧಮಾರ್ಗವನ್ನು ಬಿಟ್ಟು ಶಾಂತಿಯ ಮಾರ್ಗವನ್ನು ಹಿಡಿಯುವಂತೆ—ಅದು ತನ್ನ ಅಸ್ತಿತ್ವವನ್ನು ಬೇರೆ ರೂಪದಲ್ಲಿಯಾದರೂ ಉಳಿಸಿಕೊಳ್ಳಲು ಅಗತ್ಯ—ಈ ವಿಶ್ವಾಸವನ್ನು ನಾನು ತಾಳಿದ್ದೆ. ಆದರೆ ನನ್ನ ಶಕ್ತಿ ಬಹಳ ಸೀಮಿತವಾದುದೆಂದೂ ಬಲ್ಲವನಾಗಿದ್ದೆ.

ಅದರ ಸಾಮಾನ್ಯ ಘೋರಣೆಯನ್ನು ಎದುರಿಸುವಷ್ಟು ಶಕ್ತನಲ್ಲ—ನಾನು ಒಂದು ಅಣುಮಾತ್ರದ ಮನುಷ್ಯ. ನಾನು ಯುದ್ಧದಲ್ಲಿ ಪ್ರತ್ಯಕ್ಷವಾಗಿ ಭಾಗವಹಿಸಿದರೂ ಅಥವಾ ವಹಿಸದಿದ್ದರೂ, ನಾನು ನಿರುಪಾಯನಾಗಿ ಭಾಗಿಯೇ ಆಗುತ್ತಿದ್ದೆ. ಏಕೆಂದರೆ ಅದರ ನೌಕಾಬಲದ ರಕ್ಷಣೆಗೆ ಒಳಪಟ್ಟ ವ್ಯಾಪಾರದಿಂದಲೇ ನನಗೆ ಆಹಾರ ಒದಗುತ್ತಿತ್ತು. ಅದರ ರಕ್ಷಣೆಯಲ್ಲಿಯೇ ನನಗೆ ವ್ಯಕ್ತಿಸ್ವಾತಂತ್ರ್ಯವೂ ದೊರೆತಿತ್ತು. ಆದುದರಿಂದ ಹೇಗೂ ಯುದ್ಧದಲ್ಲಿ ಭಾಗಿಯೇ ಆಗಿರುವುದರಿಂದ ಅಹಿಂಸಾವ್ರತವನ್ನು ಮುಂದುವರಿಸುವುದಕ್ಕಾಗಿ ಈ ಯುದ್ಧವನ್ನು ಕೊನೆಗಾಣಿಸಲು ಅದರಲ್ಲಿ ನೇರವಾದ ಪಾತ್ರವನ್ನು ವಹಿಸುವುದೇ ನನಗೆ ಉತ್ತಮವೆಂದೆನಿಸಿತು. ಈ ಎಲ್ಲ ತರ್ಕವೂ ನನ್ನ ದೌರ್ಬಲ್ಯದಿಂದ ಹುಟ್ಟಿದ್ದಾಗಿ ಇರಬಹುದು. ಯುದ್ಧವು ಕೆಟ್ಟುದೆಂದು ಭಾವಿಸಿದಮೇಲೆ ಅದರಿಂದ ದೂರವಾಗಿ—ನಿರಶನವನ್ನೋ ಬಂಡುಗಾರನ ಸಾವನ್ನೋ ನಾನು ಅನುಭವಿಸಲು ಸಿದ್ಧನಾಗಿರಬಹುದಾಗಿತ್ತು. ಆದರೆ ಆಗ ಹೀಗೆ ನನಗನಿಸಲಿಲ್ಲ; ಈಗಲೂ ಅನಿಸುವುದಿಲ್ಲ.

ಈಗ ನನ್ನ ಅಭಿಪ್ರಾಯವೇನೆನ್ನುವುದು ಅಪ್ರಕೃತ. ಏಕೆಂದರೆ ಚಕ್ರಾಧಿಪತ್ಯದ ವಿಚಾರದಲ್ಲಿ ನನ್ನ ವಿಶ್ವಾಸ ತಪ್ಪಿಹೋಗಿದೆ. ಒಟ್ಟಿನಲ್ಲಿ ಅದರಿಂದ ಉಪಕಾರ ಉಂಟೆಂಬ ಭಾವನೆ ಈಗ ನಾನು ಉಳ್ಳವನಾಗಿಲ್ಲ.

ನನ್ನ ಉತ್ತರಕ್ಕೆ ಅರ್ಥಪುಷ್ಟಿಯಾಗುವಂತೆ ನನ್ನ ಜೀವನದಿಂದ ಮತ್ತೆ ಒಂದು ಉದಾಹರಣೆಯನ್ನು ಕೊಡಬಹುದು. ನಾನು ಸಣ್ಣ ಹುಡುಗನಾಗಿದ್ದಾಗಲೇ ಈ ಅಸ್ಪೃಶ್ಯತೆಯ ಪದ್ಧತಿಯಲ್ಲಿ ನನಗೆ ಅತಿ ಜಿಗುಪ್ಸೆ ಉಂಟಾಗಿತ್ತು. ಆದರೆ ನಮ್ಮ ಕುಟುಂಬದಲ್ಲಿ ನಾನೊಬ್ಬ ಯಃಕಶ್ಚಿತ್ ಹುಡುಗ. ಹರಿಜನರ ವಿಚಾರದಲ್ಲಿ ನಮ್ಮವರು ತೋರಿಸುತ್ತಿದ್ದ ಘೋರಣೆಯನ್ನು ನಾನು ಎದುರಿಸಲಿಲ್ಲ. ಈಗ ಆ ರೀತಿಯಲ್ಲಿ ನಾನು ಸಮ್ಮತಿ ಕೊಡಲು ಸಿದ್ಧನಾಗಿಲ್ಲ. ಹುಡುಗನಾಗಿದ್ದಾಗ ನನ್ನ ನಡತೆಯನ್ನು ಸಮರ್ಥನೆ ಮಾಡುವಷ್ಟು ಜಾಣನಾಗಿರಲಿಲ್ಲವೆಂದು ಬೇರೆ ಹೇಳಬೇಕಾಗಿಲ್ಲ. ನನ್ನ ವೈಯಕ್ತಿಕ ಅಭಿಪ್ರಾಯ ಭಿನ್ನವಾಗಿದ್ದರೂ ಆ ಕುಟುಂಬದಲ್ಲಿರಲು ಏನೂ ಅಡ್ಡಿ ಇಲ್ಲವೆಂದು ನನಗೆ ತೋರಿತು.

**ನಮ್ಮ ಜೀವನದಲ್ಲಿ ಹೀಗೆ ರಾಜಿಗಳು ಮಾಡಬೇಕಾಗಿ ಬರುತ್ತದೆ.**

ಅಹಿಂಸೆ—ಅತಿ ಶುದ್ಧವಾದ, ನಿಸ್ಸ್ವಾರ್ಥವಾದ ಪ್ರೇಮದ ಸ್ವರೂಪ. ಅದರ ಆಚರಣೆಯಲ್ಲಿ ಇಂತಹ ಸಂದಿಗ್ಧ ಪರಿಸ್ಥಿತಿಗಳೊದಗುತ್ತವೆ; ರಾಜಿ ಮಾಡಬೇಕಾಗಿ ಬರುತ್ತದೆ. ಅದರ ಪರಿಶುದ್ಧತೆ ಮತ್ತು ನಿಸ್ಸ್ವಾರ್ಥತೆ ಅದಕ್ಕೆ ಅತ್ಯಗತ್ಯವಾಗಿ ಇರಲೇಬೇಕಾದ ಲಕ್ಷಣಗಳು. ನಮ್ಮ ಕಾರ್ಯದಲ್ಲಿ ಸ್ವಾರ್ಥ ಇರಬಾರದು, ಭಯವಿರಬಾರದು, ಅಸತ್ಯವಿರಬಾರದು; ಅಹಿಂಸೆಯನ್ನು ಪೋಷಿಸುವಂತಹುದಾಗಿರಬೇಕು. ಇದಕ್ಕಾಗಿ ನಾವು ಮಾಡುವ ರಾಜಿಗಳು ನಮ್ಮ ಸ್ವಭಾವಕ್ಕನುಗುಣವಾಗಿರಬೇಕು; ಮತ್ತೊಬ್ಬರು ನಮ್ಮ ಮೇಲೆ ಹೇರುವಂತಹುದಾಗಿರಬಾರದು.

ಈ ನನ್ನ ಉತ್ತರ ಪ್ರಾಧ್ಯಾಪಕರಿಗೂ ವಿದ್ಯಾರ್ಥಿಗಳಿಗೂ ಸಮಾಧಾನ ಒದಗಿಸುವುದೋ ಇಲ್ಲವೋ ನಾನು ಕಾಣೆ. ಹಾಗೆ ಒದಗಿಸದಿದ್ದರೆ ಅದರಲ್ಲೇನೂ ಆಶ್ಚರ್ಯವಿಲ್ಲ. ನನ್ನ ಸ್ವಂತ ಕಾರ್ಯಗಳನ್ನೇ ನಾನು ಆಗಾಗ್ಗೆ ಉದಹರಿಸುವುದರ ಬಗೆಗೆ ಕ್ಷಮೆ ಇರಲಿ. ಇದಕ್ಕೆ ಕಾರಣ ಸ್ಪಷ್ಟವಾಗಿಯೇ ಇದೆ. ನಾನು ಹೆಚ್ಚು ಓದಿದವನಲ್ಲ. ಅಹಿಂಸೆಯ ವಿಷಯದಲ್ಲಿ ನನಗಿರುವ ಜ್ಞಾನವೆಲ್ಲವೂ ನನ್ನ ಸ್ವಾನುಭವದಿಂದ ಗಳಿಸಿದ್ದು. ಒಬ್ಬ ವಿಜ್ಞಾನಶಾಸ್ತ್ರ ಸಂಶೋಧಕನು ಪ್ರಯೋಗಗಳನ್ನು ನಡೆಸಿದ ರೀತಿಯಲ್ಲಿ ನಾನು ನಮ್ರಭಾವದಿಂದಲೂ ಯಾವ ಗುಟ್ಟೂ ಇಲ್ಲದೆ ಬಹಿರಂಗವಾಗಿಯೂ—ಭಗವತ್ಸ್ವರೂಪವಾದ ಸತ್ಯದಲ್ಲಿ ಭಯಭಕ್ತಿಯನ್ನು ತಾಳಿ ನಡೆಸಿದ ಪ್ರಯೋಗಗಳ ಫಲ.

(ಹರಿಜನ, ೨೭–೧೦–೧೯೩೬)

## ಅಹಿಂಸೆಯ ವಿಷಯದಲ್ಲಿ ಒಂದು ಪ್ರವಚನ

ಒಂದು ವರ್ಷದ ಹಿಂದೆ ನೀಗ್ರೋ ನಿಯೋಗದವರು ಗಾಂಧೀಜಿಯವರನ್ನು ಭೇಟಿಯಾದಾಗ ಅವರ ಸಂಭಾಷಣೆಯ ಮುಖ್ಯ ವಿಷಯ ಅಹಿಂಸೆಯಾಗಿತ್ತೆಂದು 'ಹರಿಜನ' ವಾಚಕರ ನೆನಪಿನಲ್ಲಿ ಪ್ರಾಯಶಃ ಇರಬೇಕು. ಈಚೆಗೆ ವೈ.ಎಂ.ಸಿ.ಎ. ಆಶ್ರಯದಲ್ಲಿ ನಡೆದ ಮಹಾಸಮ್ಮೇಳನಕ್ಕಾಗಿ ಬಂದಿದ್ದ ಇಬ್ಬರು ನೀಗ್ರೋ ಮಹಾಶಯರೂ ಇದೇ ವಿಷಯವನ್ನೇ ಎತ್ತಿ ಮಾತನಾಡಿದರು. ನಮ್ಮ ಸಮಸ್ಯೆಗಳಿಗೂ ಅವರ ಸಮಸ್ಯೆಗಳಿಗೂ ಎಷ್ಟು ಸಾಮ್ಯವಿದೆ

ಎಂದು ಇದರಿಂದ ತಿಳಿಯುತ್ತದೆ. ಡಾ|| ಟೋಬಯಸ್ ಅವರು ಗಾಂಧೀಜಿಯವರು ಮೌನವಾಗಿದ್ದ ದಿನ ಅವರನ್ನು ಭೇಟಿಮಾಡಿದರು. ಇದು ಅನಂತರ ನಡೆದ ಭೇಟಿಯಾದರೂ ಇದನ್ನು ಕುರಿತು ಮೊದಲು ಪ್ರಸ್ತಾಪಿಸುತ್ತೇನೆ. ಏಕೆಂದರೆ ಪ್ರೊಫೆಸರ್ ಮೇಸ್‌ರೊಂದಿಗೆ ಅದಕ್ಕೆ ಪೂರ್ವದಲ್ಲಿ ನಡೆದ ಭೇಟಿಯಲ್ಲಿ ಗಾಂಧೀಜಿಯವರು ಕೊಟ್ಟ ದೀರ್ಘವಾದ ಉತ್ತರಗಳು ಡಾ|| ಟೋಬಯಸ್ ಅವರಿಗೆ ಬರವಣಿಗೆಯ ಮೂಲಕ ಕೊಟ್ಟ ಸಂಕ್ಷೇಪವಾದ ಸೂತ್ರಗಳಿಗೆ ವ್ಯಾಖ್ಯಾನಗಳಂತಿವೆ. ಈ ಎರಡನ್ನೂ ಒಟ್ಟಿಗೆ ತೆಗೆದುಕೊಂಡರೆ ಗಾಂಧೀಜಿಯವರು ಆಗಾಗ್ಗೆ ಅಹಿಂಸೆಯ ವಿಚಾರದಲ್ಲಿ ಮಾಡುತ್ತಿರುವ ಸ್ವಾರಸ್ಯವಾದ ಪ್ರವಚನಗಳಿಗೆ ಒಂದು ಉತ್ತಮ ಉದಾಹರಣೆಯಾಗಿರುತ್ತದೆ.

'ಅಹಿಂಸೆಯ ಬಗೆಗೆ ತಾವು ಮಾಡುವ ಉಪದೇಶ ನನ್ನ ಮೇಲೆ ಬಹಳ ಪ್ರಭಾವವನ್ನು ಬೀರಿದೆ' ಎಂದರು ಡಾ|| ಟೋಬಯಸ್. 'ಆ ತತ್ತ್ವದಲ್ಲಿ ನಿಮ್ಮ ಶ್ರದ್ಧೆ ಹಿಂದಿನಷ್ಟು ಗಾಢವಾಗಿಯೇ ಉಳಿದಿದೆಯೆ ?'

'ಹೌದು—' ಎಂದರು ಗಾಂಧೀಜೀ. 'ಮತ್ತಷ್ಟು ಬಲವಾಗುತ್ತಿದೆ.'

'ಅಮೆರಿಕ ಸಂಯುಕ್ತಸಂಸ್ಥಾನದಲ್ಲಿ ವಾಸಿಸುವ ೧೨೦ ಲಕ್ಷ ನೀಗ್ರೋ ಜನರು ತಮ್ಮ ಮೂಲಭೂತ ಹಕ್ಕುಗಳನ್ನು ಕಾಪಾಡಿಕೊಳ್ಳಲು ಹೆಣಗುತ್ತಿರುವರು. ಜನರು ದೊಂಬಿಯೆದ್ದು ತಮ್ಮ ಮೇಲೆ ಬೀಳದಂತೆಯೂ, ತಮಗೆ ಮತದಾನದ ಅಧಿಕಾರ ನಿರಾತಂಕವಾಗಿರುವಂತೆಯೂ, ತಾವು ಪ್ರತ್ಯೇಕ ವಸತಿಗಳನ್ನು ಮಾಡಿಕೊಳ್ಳಬೇಕೆಂಬ ನಿರ್ಬಂಧವಿಲ್ಲದಂತೆಯೂ ಬಹಳ ಶ್ರಮಿಸುತ್ತಿರುವರು. ನೀವು ಭಾರತದಲ್ಲಿ ದೊಡ್ಡ ಆಂದೋಲನವನ್ನು ನಡೆಸುತ್ತಿರುವಿರಿ; ನಮಗೂ ಒಂದು ಉತ್ತೇಜಕ ಮಾತನ್ನೂ ಸಲಹೆಯನ್ನೂ ಕೊಡಬಲ್ಲಿರಾ ?'

'ನಾನು ದಕ್ಷಿಣ ಆಫ್ರಿಕದಲ್ಲಿ ಇದ್ದಾಗ ಸಣ್ಣ ಪ್ರಮಾಣದ್ದಾದರೂ ನಿಮ್ಮಂತಹ ಪರಿಸ್ಥಿತಿಯಲ್ಲಿದ್ದೆ. ಅದನ್ನು ಎದುರಿಸಬೇಕಾಯಿತು. ಅಲ್ಲಿನ ಕಷ್ಟಗಳು ಇನ್ನೂ ಕೊನೆಗಾಣಲಿಲ್ಲ. ಇಷ್ಟು ಹೇಳಬಲ್ಲೆ: ಅಹಿಂಸಾಮಾರ್ಗವನ್ನು ಬಿಟ್ಟರೆ ಬೇರೆ ಉಪಾಯವಿಲ್ಲ. ಇದು ದುರ್ಬಲರ, ಜ್ಞಾನವಿಲ್ಲದವರ ಮಾರ್ಗವಲ್ಲ—ಶಕ್ತಿವಂತರ, ಬುದ್ಧಿವಂತರ ಮಾರ್ಗವಿದು.'

'ಅಸ್ಪೃಶ್ಯರೊಂದಿಗೆ ಏಕೀಭವಿಸುವುದರ ಫಲವನ್ನು ತಿರುವಾಂಕೂರು

ಸಂಸ್ಥಾನದಲ್ಲಿ ಈಗ ನಾವು ಕಾಣುತ್ತಿದೇವೆ. ಇತರ ಪ್ರಾಂತ್ಯಗಳವರೂ ಈ ಮೇಲ್ಪಂಕ್ತಿಯನ್ನು ಅನುಸರಿಸುವರೆ ? '

' ಹಾಗೆ ಆಗದಿದ್ದರೆ ನನಗೆ ಆಶ್ಚರ್ಯವಾಗುವುದು.'

' ನೀಗ್ರೋಗಳ ಭವಿಷ್ಯದ ವಿಚಾರದಲ್ಲಿ ನನ್ನ ಬಂಧುವರ್ಗಕ್ಕೆ ನಾನು ನಿಮ್ಮಿಂದ ಏನು ಸಂದೇಶವನ್ನು ತಲಪಿಸಲಿ ? '

' ಅವರ ಕಡೆ ನ್ಯಾಯವಿದೆ. ಅವರು ಮನಃಪೂರ್ವಕವಾಗಿ ಅಹಿಂಸಾ ಮಾರ್ಗವನ್ನೇ ಹಿಡಿದರೆ ಅವರಿಗೆ ಮುಂದೆ ಒಳ್ಳೆಯ ಯಶಸ್ಸು ಲಭಿಸೀತು.'

ಗಾಂಧೀಜೀ ಸೇವಾಗ್ರಾಮದಲ್ಲಿ ಬಿಡುವಾಗಿದ್ದ ಸಮಯ. ಪ್ರೊ॥ ಮೇಸ್ ಅವರ ಅದೃಷ್ಟ. ಅವರೊಂದಿಗೆ ಬೇಕಾದಷ್ಟು ಹೊತ್ತು ಮಾತುಕಥೆಯಾಯಿತು. ತಮ್ಮ ಜೀವಮಾನವನ್ನೆಲ್ಲ ಯಾವ ತತ್ತ್ವದ ಪ್ರಯೋಗದಿಂದ ಒಂದು ನಿಶ್ಚಯಕ್ಕೆ ತಂದಿದ್ದರೊ ಅದರ ರಹಸ್ಯವನ್ನು ಬಿಚ್ಚಿ ಹೇಳಿದರು.

ಅವರ ಮಾತುಕಥೆ ಮುಂದುವರಿದಂತೆ, ಕೇವಲ ತಮ್ಮ ಪಂಚೇಂದ್ರಿಯಗಳಿಗೆ ಅತೀತವಾದ ಆರನೆಯ ಸೂಕ್ಷ್ಮ ಇಂದ್ರಿಯಕ್ಕೆ ಗೋಚರವಾಗುವಂತಹ ವಿಷಯಗಳನ್ನು ಪ್ರೊ॥ ಮೇಸ್ ಅವರಿಗೆ ಹೇಳುವಂತಿತ್ತು. ರೂಡಾಲ್ಫ್ ಸ್ಟೇನರ್ ಎಂಬಾತನು ಎರಡನೆಯ ದೃಷ್ಟಿಯನ್ನು ಪಡೆದಿದ್ದನಂತೆ. ಇದನ್ನು ನೆನಪಿಗೆ ತರುವಂತಿತ್ತು. ಒಬ್ಬ ಲೇಖಕ ಹೀಗೆಂದು ಬರೆಯುತ್ತಾನೆ: ' ಗಣಿತವನ್ನು ಅಭ್ಯಾಸಮಾಡುವುದರಿಂದ ಆವನ ಮನಸ್ಸಿಗೆ ಕೆಲವು ವಿಷಯಗಳ ನಿಶ್ಚಯ ಜ್ಞಾನ ಉಂಟಾಯಿತು. ಭೂಮಿತಿಯಲ್ಲಿ ನಮ್ಮ ಚರ್ಮಚಕ್ಷುಸ್ಸಿಗೆ ಕಾಣದ ವಿಷಯಗಳು ಅವನಿಗೆ ಮೊಟ್ಟಮೊದಲು ಅನುಭವವಾದುವು. ಅವನು ಭೂಮಿತಿ ಶಾಸ್ತ್ರದಲ್ಲಿ ಕಲಿತದ್ದು ತ್ರಿಕೋಣವಲ್ಲ—ಎಲ್ಲ ತ್ರಿಕೋಣಗಳ ಸಾರವದು. ಈ ಆದರ್ಶ ತ್ರಿಕೋಣದ ನಕಲನ್ನು ಮಾಡಲು ಸಾಧ್ಯವಿಲ್ಲ—ಅದನ್ನು ಅಂತಶ್ಚಕ್ಷುಸ್ಸಿನಿಂದಲೇ ಕಾಣಬೇಕು. ಈ ರೀತಿಯಲ್ಲಿ ಆ ಹುಡುಗನಿಗೆ ಭೂಮಿತಿಯಲ್ಲಿ ಬರುವ ರೂಪಗಳನ್ನು ವಿಮರ್ಶೆಮಾಡಿ ನಮ್ಮ ಬಾಹ್ಯಚಕ್ಷುಸ್ಸಿಗೆ ಕಾಣದ ವಸ್ತುಗಳನ್ನು ಕಾಣುವುದರಲ್ಲಿ ಯಾವ ತಪ್ಪೂ ಇಲ್ಲವೆಂದು ತೋರಿತು. ಡಾ॥ ಮೇಸ್ ಅವರಿಗೆ ಗಾಂಧೀಜೀ ಅಹಿಂಸೆಯ ಗಣಿತಶಾಸ್ತ್ರವನ್ನು ಪ್ರತಿಪಾದಿಸಿದರೆಂದು ಹೇಳಬಹುದು.

## ಸರಿಯಾದ ಹೆಸರಲ್ಲ

'ನಿಶ್ಶಸ್ತ್ರ ಪ್ರತೀಕಾರ' (Passive Resistance) ಅಹಿಂಸಾತ್ಮಕ ಪ್ರತಿಭಟನೆಗೆ ಸರಿಹೊಂದುವುದಿಲ್ಲ. ಇದು ಹಿಂಸಾತ್ಮಕವಾಗಿ ಪ್ರತಿಭಟಿಸುವುದಕ್ಕಿಂತಲೂ ಕ್ರಿಯಾತ್ಮಕವಾದುದು. ಇದು ನೇರವಾದುದು, ಅವಿಶ್ರಾಂತವಾದುದು; ಆದರೆ ಮೂರುಪಾಲು ಕಣ್ಣಿಗೆ ಕಾಣಿಸುವುದಿಲ್ಲ—ಒಂದು ಪಾಲು ಮಾತ್ರ ಕಾಣಿಸುವುದು. ಕಣ್ಣಿಗೆ ಕಾಣುವ ಅಂಶ ಪರಿಣಾಮಕಾರಿಯಲ್ಲವೆಂದು ತೋರುವುದು. ಉದಾಹರಣೆಗೆ, ಚರಖಾ—ಇದನ್ನು ನಾನು ಅಹಿಂಸೆಯ ಪ್ರತೀಕವೆಂದು ಕರೆದಿದೇನೆ. ಹೊರಗಿನ ಕಣ್ಣಿಗೆ ಇದು ನಿಷ್ಕ್ರಿಯೆಯೆಂದು ಕಂಡರೂ ನಿಜವಾಗಿಯೂ ಇದು ಅತ್ಯಂತ ಕ್ರಿಯಾತ್ಮಕವಾದುದು, ಉತ್ತರೋತ್ತರ ಬಹಳ ಪರಿಣಾಮಕಾರಿಯಾದುದು. ಈ ಪ್ರಜ್ಞೆ ನನ್ನಲ್ಲಿರುವುದರಿಂದ ಅಹಿಂಸಾವ್ರತಾವಲಂಬಿಗಳು ತಾವು ಚರಖಾದಿಂದ ನೂಲುವ ವಿಧಾನದಲ್ಲಿ ದೋಷಗಳನ್ನು ಗುರುತಿಸಬಲ್ಲವನಾಗಿದೇನೆ. ಸದಾ ಎಚ್ಚರವಾಗಿರಬೇಕೆಂದೂ ಸದಾ ಅವಿಶ್ರಾಂತವಾಗಿ ಶ್ರಮಿಸಬೇಕೆಂದೂ ನಾನು ಆಶಿಸುತ್ತೇನೆ. ಅಹಿಂಸೆಯನ್ನು ಸರಿಯಾಗಿ ಅರ್ಥಮಾಡಿಕೊಂಡು ಅದನ್ನು ಪ್ರಯೋಗಮಾಡಿದರೆ ಅದು ಅತ್ಯಂತ ತೀವ್ರವಾದ ಶಕ್ತಿ. ಹಿಂಸೆಯಲ್ಲಿ ವಿಶ್ವಾಸವುಳ್ಳವನ ಕಾರ್ಯ ಅದು ನಡೆಯುವವರೆಗೂ ಹೊರಗಣ್ಣಿಗೆ ಗೋಚರವಾಗುತ್ತದೆ; ಆದರೆ ಅದು ಶಾಶ್ವತವಲ್ಲ. ಇಟಾಲಿಯನ್ನರಿಂದ ಅಬಿಸೀನಿಯನ್ನರು ಹತರಾದರು. ಇದಕ್ಕಿಂತಲೂ ಕಣ್ಣಿಗೆ ಗೋಚರವಾಗುವ ವಿಷಯ ಬೇರೆ ಯಾವುದುಂಟು? ಅಲ್ಲಿ ನಡೆದುದು ಇಷ್ಟೇ—ಅಲ್ಪ ಪ್ರಮಾಣದ ಹಿಂಸೆ ದೊಡ್ಡ ಪ್ರಮಾಣದ ಹಿಂಸೆಯನ್ನು ಎದುರಿಸಿತು. ಆದರೆ ಅಬಿಸೀನಿಯನ್ನರು ಯುದ್ಧರಂಗದಿಂದ ಹಿಮ್ಮೆಟ್ಟಿ ಹತರಾಗಲು ಸಿದ್ಧರಾಗಿದ್ದರೆ ಅವರು ನಿಷ್ಕ್ರಿಯರಾದರೆಂದು ಹೊರಗಣ್ಣಿಗೆ ಕಂಡರೂ ಅದು ಹೆಚ್ಚು ಪರಿಣಾಮವನ್ನುಂಟುಮಾಡುತ್ತಿತ್ತು. ಆದರೆ ಆ ಹೊತ್ತಿಗೆ ಆ ಪರಿಣಾಮವೇನೆಂಬುದು ಗೋಚರವಾಗುತ್ತಿರಲಿಲ್ಲ. ಒಂದು ಕಡೆ ಹಿಟ್ಲರ್ ಮತ್ತು ಮುಸೊಲಿನಿ, ಮತ್ತೊಂದು ಕಡೆ ಸ್ಟಾಲಿನ್ ಹಿಂಸೆಯ ಪ್ರತ್ಯಕ್ಷ ಪರಿಣಾಮವನ್ನು ತೋರಿಸಬಲ್ಲವರಾಗಿದಾರೆ. ಆದರೆ ಚೆಂಗೇಸ್‌ಖಾನನ ಸಾಮೂಹಿಕ ಕೊಲೆಗಳಂತೆ ಇವೂ ಅಶಾಶ್ವತ. ಆದರೆ ಬುದ್ಧಭಗವಾನನ ಅಹಿಂಸಾತ್ಮಕ ಕಾರ್ಯಗಳು

ಶಾಶ್ವತ ಪರಿಣಾಮವನ್ನುಂಟುಮಾಡಿವೆ; ಯುಗ ಯುಗಾಂತರಕ್ಕೂ ಅವು ನಿಂತಿವೆ. ಇದನ್ನು ಅಭ್ಯಾಸಮಾಡಿದಷ್ಟು ಅದರ ಪರಿಣಾಮ ಹೆಚ್ಚುತ್ತದೆ— ಅದಕ್ಕೆ ಚ್ಯುತಿಯಿಲ್ಲ. ಕೊನೆಗೆ ಪ್ರಪಂಚವು ಚಕಿತಗೊಂಡು ವಿಸ್ಮಯಪೂರಿತ ವಾಗಿ 'ಆಹಾ! ಏನು ಪವಾಡ ನಡೆದುಹೋಯಿತು!' ಎಂದು ಉದ್ಗಾರ ಮಾಡುತ್ತದೆ. ಎಲ್ಲ ಪವಾಡಗಳೂ ಗುಪ್ತವಾದರೂ ಪರಿಣಾಮಕಾರಿಯಾದ ಅದೃಶ್ಯ ಶಕ್ತಿಗಳ ಕ್ರಿಯೆ. ಅಹಿಂಸೆ ಅದೃಶ್ಯವಾದ ಶಕ್ತಿ—ಆದರೆ ಅದಕ್ಕಿಂತಲೂ ಪರಿಣಾಮಕಾರಿಯಾದ ಶಕ್ತಿ ಮತ್ತೊಂದಿಲ್ಲ.

## ಜನಸ್ತೋಮವನ್ನು ಸಿದ್ಧಗೊಳಿಸಲು ಸಾಧ್ಯವೆ?

'ಅಹಿಂಸೆಯೇ ಉತ್ತಮವಾದ ಶಕ್ತಿಯೆಂಬುವ ವಿಚಾರದಲ್ಲಿ ನನ್ನ ಮನಸ್ಸಿನಲ್ಲಿ ಯಾವ ಶಂಕೆಯೂ ಇಲ್ಲ' ಎಂದರು ಪ್ರೊ॥ ಮೋಸ್. 'ಆದರೆ ನನ್ನನ್ನು ಬಾಧಿಸುತ್ತಿರುವ ಪ್ರಶ್ನೆ ಏನೆಂದರೆ: ಇದನ್ನು ಸಾಮೂಹಿಕವಾಗಿ ದೊಡ್ಡ ಪ್ರಮಾಣದಲ್ಲಿ ಪ್ರಯೋಗಮಾಡುವುದು ಸಾಧ್ಯವೇ? ಎಂದು. ಎಲ್ಲರೂ ಪ್ರೇಮದಿಂದ ಪ್ರೇರಿತರಾಗಿ ವರ್ತಿಸುವಂತೆ ಅವರಲ್ಲಿ ಶಿಸ್ತನ್ನುಂಟುಮಾಡುವುದು ಶಕ್ಯವೆ? ವ್ಯಕ್ತಿಗಳನ್ನು ಈ ಮಾರ್ಗದಲ್ಲಿ ತರಬೇತುಮಾಡಬಹುದು. ಕೆಲವರು ಅತಿಕ್ರಮಿಸಿ ನಡೆದಾಗ ಉಪಾಯವೇನು? ನಾವು ಹಿಂತಿರುಗುವುದೇ ಅಥವಾ ಮುಂದೆ ಸಾಗುವುದೆ?'

'ಇಲ್ಲಿ ನಮ್ಮ ಆಂದೋಲನದಲ್ಲಿ ಈ ಅನುಭವ ನನಗುಂಟಾಗಿದೆ' ಎಂದರು ಗಾಂಧೀಜೀ. 'ಜನರಿಗೆ ಉಪದೇಶ ಮಾಡುವುದರಿಂದ ಈ ತರಬೇತು ಅವರಿಗೆ ಒದಗುವುದಿಲ್ಲ. ಅಹಿಂಸೆ ಉಪದೇಶದ ವಿಷಯವಲ್ಲ; ಆಚರಣೆಯ ವಿಷಯ. ಬಾಹ್ಯ ಪ್ರತೀಕಗಳ ಸಹಾಯದಿಂದ ಅಹಿಂಸೆಯನ್ನು ಜನರಿಗೆ ಬೋಧಿಸಬಹುದು. ಗುಂಡು ಹಾರಿಸಲು ಕಲಿಯುವವರು ಮೊದಲು ಹಲಗೆ ಗಳಿಗೆ ಗುರಿಯಿಡುತ್ತಾರೆ, ಆಮೇಲೆ ದೂರದಲ್ಲಿರುವ ಲಕ್ಷ್ಯದ ವರ್ತುಲಗಳಿಗೆ ಹೊಡೆಯುತ್ತಾರೆ; ಆಮೇಲೆ ಮೃಗಗಳ ಮೇಲೆ ಪ್ರಯೋಗ ಮಾಡುತ್ತಾರೆ. ಈ ತರಬೇತು ಮುಗಿದಮೇಲೆ ಕೊಲ್ಲುವುದರಲ್ಲಿ ನಿಷ್ಣಾತನೆಂದು ಅನಿಸಿಕೊಳ್ಳು ತ್ತಾನೆ. ಆದರೆ ಅಹಿಂಸೆ ಆಚರಿಸುವವನ ಬಳಿ ಯಾವ ಆಯುಧವೂ ಇಲ್ಲ.

ಆದುದರಿಂದ ಅವನ ಮಾತು, ಅವನ ಕಾರ್ಯ ಪರಿಣಾಮಕಾರಿಯಲ್ಲವೆಂದು ತೋರುತ್ತದೆ. ನಾನು ನಿಮಗೆ ಅನೇಕ ಸಿಹಿಯಾದ ಮಾತುಗಳನ್ನು—ಮನಸ್ಸಿನಲ್ಲಿ ಅದಕ್ಕನುಗುಣವಾದ ಭಾವವಿಲ್ಲದೆ—ಆಡಲು ಸಾಧ್ಯ. ಅದಕ್ಕೆ ವ್ಯತಿರಿಕ್ತವಾಗಿ ನನ್ನ ಮನಸ್ಸಿನಲ್ಲಿ ಪ್ರೇಮವಿರಬಹುದು. ಆದರೆ ನನ್ನ ಬಾಹ್ಯ ವರ್ತನೆ ಕಟುವಾಗಿ ತೋರಬಹುದು. ಆದುದರಿಂದ ನನ್ನ ಆಚರಣೆ ಎರಡು ಸಂದರ್ಭಗಳಲ್ಲಿಯೂ ಒಂದೇ ಆದರೂ ಅವುಗಳ ಪರಿಣಾಮ ಬೇರೆಬೇರೆಯಾಗಿರಬಹುದು. ಹೊರನೋಟಕ್ಕೆ ಕಾಣಿಸಿಕೊಳ್ಳದಿದ್ದರೂ, ನಮ್ಮ ಕಾರ್ಯಗಳ ಶಕ್ತಿ ತೀವ್ರವಾಗಿರಬಹುದು. ನೀವು ನನ್ನ ಮೇಲೆ ನಿಮಗೆ ತಿಳಿಯದೆಯೇ ಬೀರುತ್ತಿರುವ ಪ್ರಭಾವ ನನಗೆ ತಿಳಿಯದೆ ಹೋಗಬಹುದು. ಆದರೆ ಪ್ರಯತ್ನ ಪೂರ್ವಕವಾಗಿ ಮಾಡುವ ಕಾರ್ಯದ ಪ್ರಭಾವಕ್ಕಿಂತಲೂ ಇದು ಸಾವಿರ ಪಾಲು ಹೆಚ್ಚಿನದು. ಹಿಂಸೆಯಲ್ಲಿ ಕಣ್ಣಿಗೆ ಎಲ್ಲವೂ ಗೋಚರ—ಕಾಣಿಸದೆ ಆಗುವ ಪರಿಣಾಮವೇನೂ ಇಲ್ಲ. ಆದರೆ ಅಹಿಂಸೆಯಲ್ಲಿ ಮೂರು ಪಾಲು ಅದೃಶ್ಯ—ಎಷ್ಟೆಷ್ಟು ಅದೃಶ್ಯವೋ ಅಷ್ಟಷ್ಟು ಪರಿಣಾಮಕಾರಿ. ಅಹಿಂಸೆಯು ಕ್ರಿಯಾತ್ಮಕವೂ ಪ್ರಭಾವಯುತವೂ ಆದಾಗ ಅತಿವೇಗವಾಗಿ ಸಂಚರಿಸುವುದು—ಒಂದು ಪವಾಡವೇ ಆಗಿಬಿಡುವುದು. ಹೀಗೆ ಜನಸಾಮಾನ್ಯರ ಮನಸ್ಸು ಅಗೋಚರವಾದ ರೀತಿಯಲ್ಲಿ ಒಂದು ಪ್ರಭಾವಕ್ಕೆ ಒಳಗಾಗುತ್ತದೆ; ಆಮೇಲೆ ಗೋಚರವಾದ ರೀತಿಯಲ್ಲಿ ಆಗುತ್ತದೆ. ಗೋಚರವಾದ ಪ್ರಭಾವಕ್ಕೆ ಒಳಪಟ್ಟಾಗ ಎಲ್ಲರೂ ಕಾಣುವಂತಹ ಜಯ ಅದಕ್ಕೆ ಲಭಿಸುತ್ತದೆ. ನನ್ನ ಅನುಭವದ ಮಾತನ್ನೇ ಹೇಳುತ್ತೇನೆ. ಜನರು ಸೋತಂತೆ ಕಂಡಾಗ ನನ್ನಲ್ಲಿ ಸೋಲಿನ ಮನೋಭಾವವಿರಲಿಲ್ಲ. ೧೯೨೨ರಲ್ಲಿ ಶಾಂತಿಯುತ ಶಾಸನೋಲ್ಲಂಘನದ ಆಂದೋಲನವನ್ನು ನಿಲ್ಲಿಸಿದೆವು. ಅದಾದಮೇಲೆ ಅಹಿಂಸೆಯೇ ಪರಿಣಾಮಕಾರಿಯಾದ ಮಾರ್ಗವೆಂದು ನನ್ನ ವಿಶ್ವಾಸ ದೃಢಗೊಂಡಿತು. ಇಂದಿಗೂ ಅದೇ ವಿಶ್ವಾಸದ ಮನೋಧರ್ಮವುಳ್ಳವನಾಗಿದೇನೆ. ಇದು ಕೇವಲ ಒಬ್ಬ ಭಾವುಕನ ಸ್ಥಿತಿಯಲ್ಲ. ಒಂದು ವೇಳೆ ಪೂರ್ವ ದಿಕ್ಕಿನಲ್ಲಿ ಬೆಳಕು ಹರಿಯದಿದ್ದರೆ ನನ್ನ ಆಸೆಯನ್ನು ನಾನು ತೊರೆಯಬಾರದು. ಎಲ್ಲಕ್ಕೂ ಕಾಲ ಒದಗಿಬರಬೇಕು.

'ಇಲ್ಲಿ ನನ್ನ ಸಹೋದ್ಯೋಗಿಗಳೊಂದಿಗೆ ನಾವು ಮಾಡುತ್ತಿರುವ ಕಕ್ಕಸನ್ನು ಶುದ್ಧಮಾಡುವ ಕೆಲಸದ ವಿಚಾರದಲ್ಲಿ ಚರ್ಚಿಸಿದೇನೆ. 'ಸ್ವರಾಜ್ಯ

ಬಂದಮೇಲೆ ಇದನ್ನೇಕೆ ಕೈಗೊಳ್ಳಬಾರದು ?' ಎನ್ನುತ್ತಾರೆ ಅವರು. 'ಇಲ್ಲ, ಸ್ವರಾಜ್ಯ ಬಂದಮೇಲೆ ಮತ್ತಷ್ಟು ಚೆನ್ನಾಗಿ ಮಾಡೋಣ ಎಂದು ಹೇಳುತ್ತೇನೆ. ಇಂದಿನಿಂದಲೇ ಸುಧಾರಣೆ ಆರಂಭವಾಗಬೇಕು. ಸ್ವರಾಜ್ಯ ಬರುವವರೆಗೂ ನಾವು ಕಾದಿರಬಾರದು. ನಿಜವಾಗಿಯೂ ಇಂತಹ ಕೆಲಸದ ಫಲವಾಗಿಯೇ ಸರಿಯಾದ ಸ್ವರಾಜ್ಯ ಪ್ರಾಪ್ತವಾಗುವುದು. ಸ್ವರಾಜ್ಯಕ್ಕೂ ಕಕ್ಕಸು ಶುದ್ಧ ಮಾಡುವುದಕ್ಕೂ ಏನು ಸಂಬಂಧವಿದೆಯೆಂದು ಪ್ರಾಯಶಃ ನನ್ನ ಸಹೋದ್ಯೋಗಿಗಳಿಗೆ ನಾನು ಸ್ಪಷ್ಟಪಡಿಸಲಾಗಲಿಲ್ಲ—ನಿಮಗೂ ನಾನು ಸ್ಪಷ್ಟಪಡಿಸಲಾಗಲಿಲ್ಲ. ಸ್ವರಾಜ್ಯವನ್ನು ಅಹಿಂಸಾಮಾರ್ಗದಿಂದ ಗಳಿಸಬೇಕಾದರೆ ನಮ್ಮ ಜನರಲ್ಲಿ ಶಿಸ್ತು ಬೆಳೆಯಬೇಕು. ಹೆಳವರು, ಕುರುಡರು, ಕುಷ್ಠರೋಗಿಗಳು ಹಿಂಸಾಮಾರ್ಗದ ಸೈನ್ಯದಲ್ಲಿ ಸೇರಲು ಸಾಧ್ಯವಿಲ್ಲ. ಅಲ್ಲದೆ ಸೈನ್ಯಕ್ಕೆ ಸೇರಲು ವಯಸ್ಸಿನ ನಿರ್ಬಂಧ ಬೇರೆ ಇದೆ. ಆದರೆ ಅಹಿಂಸಾತ್ಮಕ ಹೋರಾಟದಲ್ಲಿ ಭಾಗವಹಿಸಲು ವಯಸ್ಸಿನ ಮಿತಿಯಿಲ್ಲ. ಕುರುಡರು, ಕುಂಟರು, ರೋಗಿಗಳು ಎಲ್ಲರೂ ಸೇವೆ ಮಾಡಬಹುದು. ಗಂಡಸರು ಮಾತ್ರವಲ್ಲ ಹೆಂಗಸರೂ ಸೇವೆ ಸಲ್ಲಿಸಬಹುದು. ಈ ಅಹಿಂಸಾತ್ಮಕ ನಿಷ್ಠೆ ಎಲ್ಲರಲ್ಲಿಯೂ ಆವಿರ್ಭೂತವಾಗಿ ಅದು ಕೆಲಸಮಾಡಲು ಪ್ರಾರಂಭಿಸಿದಾಗ ಅದರ ಪರಿಣಾಮ ಎಲ್ಲರಿಗೂ ಗೋಚರವಾಗುತ್ತದೆ.

ಈಗ ನಿಮ್ಮ ಪ್ರಶ್ನೆ: ನೀವು ನಂಬಿರುವಂತೆ ಅಹಿಂಸೆಯಲ್ಲಿ ನಂಬಿಕೆ ಇಲ್ಲದ ಜನರಿದಾರೆಂದು ಹೇಳುತ್ತೀರಿ. ನೀವು ಸುಮ್ಮನೆ ಕುಳಿತಿರಲು ಸಾಧ್ಯವೆ ? 'ಈಗಲ್ಲದಿದ್ದರೆ—ಯಾವಾಗ ನಾವು ಕಾರ್ಯ ಮಾಡುವುದು ?' ಎಂದು ಮಿತ್ರರು ಪ್ರಶ್ನಿಸುತ್ತಾರೆ. ಅದಕ್ಕೆ ನನ್ನ ಉತ್ತರವಿಷ್ಟೆ: 'ನನ್ನ ಜೀವಮಾನದಲ್ಲಿ ನನಗೆ ಯಶಸ್ಸು ದೊರೆಯದೆ ಹೋಗಬಹುದು; ಆದರೆ ನಮ್ಮ ಜಯ ಅಹಿಂಸೆಯ ಮೂಲಕ ಮಾತ್ರ ಸಾಧ್ಯವೆಂಬ ನನ್ನ ವಿಶ್ವಾಸ ಎಂದಿಗಿಂತಲೂ ದೃಢವಾಗಿದೆ. ನಾನು ಫೈಜಪುರದಲ್ಲಿ ಚರಖಾದ ತತ್ತ್ವವನ್ನು ಕುರಿತು ಮಾತನಾಡಿದಾಗ, ಒಂದು ಪತ್ರಿಕೆಯ ಬಾತ್ಮಿದಾರರು ನನ್ನಲ್ಲಿ ಚಾಣಾಕ್ಷತನವಿದೆಯೆಂದು ಆರೋಪಿಸಿದರು. ಹೀಗೆಂದಿಗೂ ನನ್ನ ಮನಸ್ಸಿನಲ್ಲಿರಲಿಲ್ಲ. ನಾನು ಸೇವಾಗ್ರಾಮಕ್ಕೆ ಬಂದಮೇಲೆ ಜನರು ನನ್ನೊಂದಿಗೆ ಸಹಕರಿಸಲಾರರೆಂದು—ನನ್ನನ್ನು ಬಹಿಷ್ಕರಿಸಲೂಬಹುದೆಂದು ನನಗೆ ಜನರು ಹೇಳಿದರು. ಅದಕ್ಕೆ ನಾನು ಹೇಳಿದೆ:

'ಆಗಬಹುದು; ಆದರೆ ಅಹಿಂಸೆ ಈ ಮಾರ್ಗದಲ್ಲಿಯೇ ಕೆಲಸಮಾಡುವುದು. ಇನ್ನೂ ದೂರವಿರುವ ಹಳ್ಳಿಗೆ ನಾನು ಹೋದೆನಾದರೆ ನನ್ನ ಪ್ರಯೋಗ ಮತ್ತಷ್ಟು ಯಶಸ್ವಿಯಾಗಬಹುದು. ಅಹಿಂಸೆಯ ಪ್ರಯೋಗದ ವಿಧಾನವನ್ನು ಹುಡುಕುತ್ತ ಈ ಹಳ್ಳಿ ನನಗೆ ಸಿಕ್ಕಿತು. ನಾನು ಇದರಲ್ಲಿ ಸಿದ್ಧಿಯನ್ನು ಹೊಂದಬೇಕೆಂದು—ಇಲ್ಲವಾದರೆ ಹಾಗೆ ದೈವೇಚ್ಛೆಯಿದ್ದರೆ ಈ ಪ್ರಯತ್ನದಲ್ಲಿ ಮಡಿಯಬೇಕೆಂದೂ ನನ್ನ ಶ್ರದ್ಧೆ ಬಲಗೊಳ್ಳುತ್ತಲಿದೆ. ಅಹಿಂಸೆಯಲ್ಲಿ ನಿಜವಾದ ಸತ್ತ್ವವಿರುವ ಪಕ್ಷಕ್ಕೆ ಅದು ವಿರೋಧಶಕ್ತಿಗಳ ಮಧ್ಯೆ ಕೆಲಸಮಾಡಬೇಕು. ಆದರೆ ಅಕರ್ಮದಲ್ಲಿ ಕರ್ಮವು ಅಡಗಿರಬಹುದು; ಕೆಲವು ವೇಳೆ ಕರ್ಮವು ಅಕರ್ಮಕ್ಕಿಂತಲೂ ಕೇಡನ್ನುಂಟುಮಾಡಬಹುದು.'

'ಹಿಂಸೆಯನ್ನು ಪ್ರೇಮಪೂರಿತವಾಗಿ ಉಪಯೋಗಿಸಲು ಎಂದಾದರೂ ಸಾಧ್ಯವೆ?'

'ಇಲ್ಲ—ಎಂದಿಗೂ ಸಾಧ್ಯವಿಲ್ಲ. ನನ್ನ ಸ್ವಂತ ಪ್ರಯೋಗದಿಂದ ಒಂದು ಉದಾಹರಣೆಯನ್ನು ಕೊಡುತ್ತೇನೆ. ಒಂದು ಕರು ಕುಂಟಾಯಿತು. ವ್ರಣಗಳು ತೋರಿಕೊಂಡವು. ಆಹಾರ ತೆಗೆದುಕೊಳ್ಳಲು ಅದಕ್ಕೆ ಸಾಧ್ಯವಾಗಲಿಲ್ಲ. ಉಸಿರುಬಿಡುವುದೇ ಪ್ರಯಾಸವಾಗಿತ್ತು. ನನ್ನ ಸಹೋದ್ಯೋಗಿಗಳೊಂದಿಗೆ ಮೂರು ದಿನ ಚರ್ಚಿಸಿದಮೇಲೆ ಅದರ ಪ್ರಾಣವನ್ನು ಕೊನೆಗಾಣಿಸಿದೆವು. ಈ ಕಾರ್ಯ ಅಹಿಂಸಾತ್ಮಕವಾದುದು. ಏಕೆಂದರೆ ಕೇವಲ ನಿಸ್ಸ್ವಾರ್ಥಬುದ್ಧಿಯಿಂದ ಹೀಗೆ ಮಾಡಿದೆವು. ಕರುವನ್ನು ಚಿತ್ರಹಿಂಸೆಯಿಂದ ರಕ್ಷಿಸುವುದೇ ನಮ್ಮ ಉದ್ದೇಶ್ಯವಾಗಿತ್ತು. ಕೆಲವರು ಇದನ್ನು ಹಿಂಸಾಕೃತ್ಯವೆಂದರು. ನಾನು ಇದನ್ನು ಶಸ್ತ್ರಚಿಕಿತ್ಸೆ ಎನ್ನುತ್ತೇನೆ. ನನ್ನ ಸ್ವಂತ ಮಗು ಇದೇ ಸ್ಥಿತಿಯಲ್ಲಿ ಇದ್ದಿದ್ದರೆ ಹೀಗೆಯೇ ಮಾಡುತ್ತಿದ್ದೆ. ನಾನು ಹೇಳುವುದಿಷ್ಟೆ: ಅಹಿಂಸೆ ನನ್ನ ಜೀವನದ ಪರಮಧರ್ಮವಾದರೆ ಅದಕ್ಕೆ ವಿನಾಯಿತಿಗಳು ಹುಟ್ಟಿಕೊಂಡರೆ ಅದು ಪರಮಧರ್ಮವಾಗಿ ಉಳಿಯಲಾರದು.'

'ಬಹುಸಂಖ್ಯಾತರನ್ನೆದುರಿಸಿ, ಕೇವಲ ಅಲ್ಪಸಂಖ್ಯಾತರು ಏನು ಮಾಡಬೇಕು?' ಎಂದು ಪ್ರೊ|| ಮೇಸ್ ಪ್ರಶ್ನಿಸಿದರು.

'ಬಹುಸಂಖ್ಯಾತರಿಗಿಂತಲೂ ಅಲ್ಪಸಂಖ್ಯಾತರೇ ಅಹಿಂಸಾಮಾರ್ಗದಲ್ಲಿ ಹೆಚ್ಚು ಮುಂದುವರಿಯಬಹುದೆಂದು ನಾನು ಹೇಳುತ್ತೇನೆ. ಸಿಮಂಡ್ಸ್

ಎಂದು ನನಗೆ ಇಂಗ್ಲಿಷ್ ಮಿತ್ರರೊಬ್ಬರಿದ್ದರು. 'ನೀನು ಅಲ್ಪಸಂಖ್ಯಾತ ರಲ್ಲಿರುವವರೆಗೂ ನಾನು ನಿನ್ನ ಬೆಂಗಲಿಗನಾಗಿರುತ್ತೇನೆ' ಎಂದು ಅವರು ಹೇಳುತ್ತಿದ್ದರು. 'ನೀವು ಬಹುಸಂಖ್ಯಾತರ ಪೈಕಿ ಆದಮೇಲೆ ನಾನು ನಿಮ್ಮ ಜೊತೆ ಬಿಟ್ಟೆ' ಎನ್ನುತ್ತಿದ್ದರು. ದಕ್ಷಿಣ ಆಫ್ರಿಕದಲ್ಲಿದ್ದಾಗ ನಾವು ಅಲ್ಪ ಸಂಖ್ಯಾತರಾಗಿದ್ದೆವು. ಆಗ ನಮ್ಮ ಜನರನ್ನು ನಡೆಸಲು ಅಷ್ಟು ಕಷ್ಟವಿರಲಿಲ್ಲ. ಇಲ್ಲಿ ಬಹುಸಂಖ್ಯಾತರಾಗಿದೇವೆ. ಇಲ್ಲಿ ಅಹಿಂಸಾಮಾರ್ಗವನ್ನು ಅನುಸರಿಸಿ ಜನರನ್ನು ಕೊಂಡೊಯ್ಯುವುದು ಅಲ್ಲಿಗಿಂತಲೂ ಕಷ್ಟವಾಗಿದೆ. ಆದರೆ ಈ ಕಾರಣದಿಂದ ಅಹಿಂಸೆ ದುರ್ಬಲರ ಅಸ್ತ್ರವೆಂದು ಹೇಳುವುದು ತೀರ ತಪ್ಪಾಗು ವುದು. ಹಿಂಸೆಯನ್ನು ಆಚರಿಸುವುದಕ್ಕೆ ಬೇಕಾಗುವ ಶೌರ್ಯಕ್ಕಿಂತಲೂ ಅಹಿಂಸಾಮಾರ್ಗದಲ್ಲಿ ಹೆಚ್ಚು ಶೌರ್ಯ ಬೇಕಾಗುವುದು. ಡೇನಿಯಲ್ ಎಂಬ ಪ್ರವಾದಿ-ಸಂತನು ಮೀಡ್ ಮತ್ತು ಪಾರಸೀಕರ ಕಾನೂನುಗಳನ್ನೆದುರಿಸಿದಾಗ ಆತನು ಅಹಿಂಸಾಮಾರ್ಗವನ್ನೇ ಅನುಸರಿಸಿದನು.

## ಶತ್ರುವಿನ ಮೇಲೆ ಆಗುವ ಪರಿಣಾಮ

'ನನ್ನ ಅಹಿಂಸಾಪ್ರಯೋಗದ ಫಲವಾಗಿ ಶತ್ರುವಿನ ಮೇಲೆ ಆಗಬಹು ದಾದ ಪರಿಣಾಮ ನಮ್ಮನ್ನು ತಡೆಗಟ್ಟಬಹುದೆ ?'

'ಅಗತ್ಯವಾಗಿ. ದಕ್ಷಿಣ ಆಫ್ರಿಕದಲ್ಲಿ ಕಾರ್ಮಿಕರಾಗಿದ್ದ ಬಿಳಿ ಜನರು ಬಂಡಾಯವೆದ್ದರು. ಆಗ ನಾನು ಸರಕಾರದ ಮೇಲೆ ಹೂಡಿದ್ದ ಆಂದೋಲನ ವನ್ನು ನಿಲ್ಲಿಸಿದೆ. ಈ ಕಾರ್ಮಿಕರು ನಾವು ಅವರೊಂದಿಗೆ ಸೇರಿಕೊಳ್ಳಬೇಕೆಂದು ಕರೆದರು. ನಾನು ಒಲ್ಲೆನೆಂದೆ.'

'ಮತ್ತು ಅಹಿಂಸೆಯಲ್ಲಿ ಒಂದು ಗುಣವಿದೆ—ಅಹಿಂಸಾಕೃತ್ಯಗಳಲ್ಲಿ ಆಗುವಂತೆ ಅದು ನಮ್ಮ ಮೇಲೆ ತಿರುಗಿ ಬಂದು ನಮ್ಮ ನಾಶಕ್ಕೆ ಕಾರಣವಾಗು ವುದಿಲ್ಲ' ಎಂದರು ಪ್ರೊ|| ಮೇಸ್.

'ಹೌದು. ಹಿಂಸೆಯಿಂದ ಹಿಂಸೆ ಹುಟ್ಟುತ್ತದೆ. ಆದರೆ ಈ ಸಂದರ್ಭದಲ್ಲಿ ನಾನು ಒಂದು ಮಾತನ್ನು ಹೇಳಬೇಕು. ನನ್ನ ವಾದವನ್ನು ಒಬ್ಬ ಮಹನೀ ಯರು ಪ್ರತಿಭಟಿಸಿ ಹೀಗೆಂದರು : 'ಅಹಿಂಸೆಯ ಚರಿತ್ರೆಯನ್ನು ನೋಡಿ.

ಏಸು ಕ್ರಿಸ್ತನು ಸಿಲುಬೆಯ ಮೇಲೆ ಸತ್ತನು. ಆದರೆ ಆತನ ಅನುಯಾಯಿಗಳು ರಕ್ತಪಾತಕ್ಕೆ ಕಾರಣರಾದರು. ಇದರಿಂದ ಯಾವ ಸಿದ್ಧಾಂತವೂ ಹೊರಡುವುದಿಲ್ಲ. ನಾವು ತೀರ್ಮಾನಮಾಡಲು ನಮ್ಮ ಮುಂದೆ ಸಾಕಷ್ಟು ಸಾಮಗ್ರಿ ಇಲ್ಲ. ಏಸುವಿನ ಪೂರ್ಣ ಜೀವನವನ್ನು ನಾವು ಅರಿಯೆವು. ಆತನ ಅನುಯಾಯಿಗಳು ಪ್ರಾಯಶಃ ಆತನ ಅಹಿಂಸಾತತ್ತ್ವವನ್ನು ಚೆನ್ನಾಗಿ ಅರಗಿಸಿಕೊಂಡಿರಲಿಲ್ಲ. ಆದರೆ ನಾನು ಒಂದು ಎಚ್ಚರಿಕೆಯನ್ನು ಕೊಡಬೇಕು. ನನ್ನ ಮಾತನ್ನು ಸಿದ್ಧಾಂತವೆಂದು ನೀವು ಭಾವಿಸಬಾರದು. ನನ್ನ ಶಕ್ತಿಯ ಪರಿಮಿತಿಯನ್ನು ನಾನು ಬಲ್ಲೆ. ನಾನು ಸತ್ಯವನ್ನು ಅರಸುತ್ತಿರುವ ನಮ್ರ ಸಾಧಕ. ನಾನು ಮಾಡುತ್ತಿರುವ ಪ್ರಯೋಗದ ಫಲವಾಗಿ ಮಾನವನಿಗೆ ಅಹಿಂಸೆಗಿಂತಲೂ ಪ್ರಬಲವಾದ ಅಸ್ತ್ರ ಮತ್ತೊಂದಿಲ್ಲವೆನ್ನುವ ನಂಬಿಕೆ ನನ್ನಲ್ಲಿ ದೃಢಗೊಳ್ಳುತ್ತಿದೆ ಎಂದು ನಾನು ಹೇಳಬಲ್ಲೆ. ಇದರ ಪ್ರಯೋಗ ಕೇವಲ ವ್ಯಕ್ತಿಗಳು ಮಾತ್ರ ಮಾಡುವಂತಹುದಲ್ಲ. ಇದನ್ನು ಸಾಮೂಹಿಕವಾಗಿಯೂ ಆಚರಿಸಬಹುದು.'

(ಹರಿಜನ, ೨೦-೩-೧೯೩೭)

## ಸತ್ಯಾಗ್ರಹ—ಜೀವಿಸುವ ಮತ್ತು ಮಡಿಯುವ ಒಂದು ಕಲೆ

ದಿನಾಂಕ ೧೪-೩-೧೯೪೬ರಂದು ಶಿವಾಜಿ ಪಾರ್ಕಿನಲ್ಲಿ ಸುಮಾರು ಎರಡು ಲಕ್ಷ ಜನರು ಸೇರಿದ್ದ ಪ್ರಚಂಡ ಸಭೆಯಲ್ಲಿ ಗಾಂಧೀಜಿಯವರು ಮಾಡಿದ ಗಮನಾರ್ಹವಾದ ಹಿಂದೂಸ್ತಾನಿ ಭಾಷಣದ ಒಂದು ಸಂಕ್ಷಿಪ್ತ ವರದಿಯನ್ನು ಈ ಕೆಳಗೆ ಕೊಟ್ಟಿದೆ :

' ದಕ್ಷಿಣ ಆಫ್ರಿಕದಲ್ಲಿ ಸತ್ಯಾಗ್ರಹ ಸಮರ ಆರಂಭವಾಗುವುದಕ್ಕೆ ಸ್ವಲ್ಪ ಪೂರ್ವದಲ್ಲಿ ಸಾಮೂಹಿಕ ಪ್ರಾರ್ಥನೆಯನ್ನು ರೂಢಿಗೆ ತಂದೆ. ಅಲ್ಲಿ ವಾಸವಾಗಿದ್ದ ಭಾರತೀಯರು ಬಹಳ ಅಪಾಯದ ಪರಿಸ್ಥಿತಿಯಲ್ಲಿದ್ದರು. ಮನುಷ್ಯ ಪ್ರಯತ್ನಕ್ಕೆ ಸಾಧ್ಯವಾದುದೆಲ್ಲವನ್ನೂ ನಾವು ಮಾಡಿದೆವು. ನಮ್ಮ ಕಷ್ಟಗಳ ಪರಿಹಾರಕ್ಕಾಗಿ ಪತ್ರಿಕೆಗಳಲ್ಲಿ ಲೇಖನಗಳನ್ನು ಪ್ರಕಟಿಸಿದೆವು, ಸಭೆಗಳನ್ನು ಮಾಡಿದೆವು, ಅರ್ಜಿಗಳನ್ನು ಅರ್ಪಿಸಿದೆವು, ನಿಯೋಗಗಳನ್ನು ಕಳುಹಿಸಿ ಮೊರೆ ಇಟ್ಟೆವು. ಎಲ್ಲವೂ ವಿಫಲವಾಯಿತು. ಅನಕ್ಷರಸ್ಥರಾದ ಕೆಲವೇ ಕೂಲಿಜನ,

ಕೆಲವು ವರ್ತಕರು, ಬೀದಿಗಳಲ್ಲಿ ಸಾಮಾನು ಹೊತ್ತು ಚಿಲ್ಲರೆ ವ್ಯಾಪಾರ ಮಾಡುವವರು—ಈ ಭಾರತೀಯರು ಬಹುಸಂಖ್ಯಾತರಾದ ನೀಗ್ರೋ ಜನ ಮತ್ತು ಬಿಳಿಯ ಜನ ಇವರ ಮಧ್ಯೆ ಇದ್ದುಕೊಂಡು ಏನು ಮಾಡಲಾದೀತು? ಬಿಳಿಯ ಜನ ಶಸ್ತ್ರಸಜ್ಜಿತರಾಗಿದ್ದರು. ಭಾರತೀಯರು ತಮ್ಮ ಹಕ್ಕುಗಳನ್ನು ಸಾಧಿಸಿ ತಲೆಯೆತ್ತಿ ನಿಲ್ಲಬೇಕಾದರೆ ಶಸ್ತ್ರಬಲದಿಂದ ಸಾಧ್ಯವಿಲ್ಲವೆಂಬುದು ಸ್ಪಷ್ಟವಾಯಿತು. ಬೇರೆ ರೀತಿಯ ಶಸ್ತ್ರಗಳಿಗಿಂತಲೂ ಪ್ರಬಲವಾದ ಒಂದು ಶಕ್ತಿಯನ್ನು ಅವರು ಪ್ರಾಪ್ತಿಸಿಕೊಳ್ಳಬೇಕಾಗಿತ್ತು. ಆ ಸಂದರ್ಭದಲ್ಲಿ ಫೀನಿಕ್ಸ್‌ನಲ್ಲಿಯೂ ಟಾಲ್‌ಸ್ಟಾಯ್ ಫಾರಂನಲ್ಲಿಯೂ ಆತ್ಮಬಲ ಅಥವಾ ಸತ್ಯಾಗ್ರಹಕ್ಕೆ ಸಿದ್ಧತೆಯನ್ನು ಪಡೆಯಲೋಸುಗ ಸಾಮೂಹಿಕ ಪ್ರಾರ್ಥನೆಯನ್ನು ಆರಂಭ ಮಾಡಿದೆ.

ಸತ್ಯಾಗ್ರಹದ ಮೂಲ ಪ್ರಾರ್ಥನೆಯಲ್ಲಿದೆ. ಸತ್ಯಾಗ್ರಹಿಯು ಪಶುಬಲ ತನ್ನನ್ನು ತುಳಿಯುತ್ತಿರಲು ತನ್ನ ರಕ್ಷಣೆಗಾಗಿ ದೇವರಲ್ಲಿ ಮೊರೆ ಇಡುತ್ತಾನೆ. ಅಂದಮೇಲೆ ಬ್ರಿಟಿಷರೇ ಆಗಲಿ, ಬೇರೆ ಯಾರೇ ಆಗಲಿ ನಿಮಗೆ ದ್ರೋಹ ಮಾಡಬಹುದೆಂಬ ನಿರಂತರ ಭಯದಲ್ಲಿ ನೀವೇಕೆ ಇರಬೇಕು? ಯಾರಾದರೂ ನಿಮ್ಮನ್ನು ಮೋಸಗೊಳಿಸಿದರೆ ಅದರಿಂದ ಅವರಿಗೇ ನಷ್ಟ. ಸತ್ಯಾಗ್ರಹ ಆತ್ಮಬಲವುಳ್ಳ ಧೀರರಿಗೆ—ಸಂಶಯಾತ್ಮರಿಗಲ್ಲ, ಅಂಜುಬುರುಕರಿಗಲ್ಲ. ಬದುಕುವ ಕಲೆಯನ್ನೂ ಮಡಿಯುವ ಕಲೆಯನ್ನೂ ಸತ್ಯಾಗ್ರಹ ನಮಗೆ ಕಲಿಸುತ್ತದೆ. ಮರ್ತ್ಯರು ಹುಟ್ಟಲೂ ಬೇಕು, ಸಾಯಲೂ ಬೇಕು. ಪಶುವಿಗೂ ಮಾನವನಿಗೂ ಇರುವ ವ್ಯತ್ಯಾಸವಿಷ್ಟೇ—ಮಾನವನು ಆತ್ಮಜ್ಞಾನವನ್ನು ಪಡೆಯಲು ಸದಾ ಪ್ರಯತ್ನಿಸುವನು. ಭಗವದ್ಗೀತೆಯ ಎರಡನೆಯ ಅಧ್ಯಾಯದ ಕೊನೆಯ ಹದಿನೆಂಟು ಶ್ಲೋಕಗಳು ಜೀವನಕಲೆಯ ರಹಸ್ಯವನ್ನು ಸಂಕ್ಷೇಪವಾಗಿ ತಿಳಿಸುತ್ತವೆ. ಅಲ್ಲಿ ಸ್ಥಿತಪ್ರಜ್ಞನ ಲಕ್ಷಣಗಳೇನೆಂದು ಹೇಳಲಾಗಿದೆ. ಸ್ಥಿತಪ್ರಜ್ಞನೆಂದರೆ ಸತ್ಯಾಗ್ರಹಿ. ಅರ್ಜುನ ಕೃಷ್ಣನಿಗೆ ಹಾಕಿದ ಪ್ರಶ್ನೆಗೆ ಉತ್ತರವಾಗಿ ಭಗವಂತನು ಹೇಳಿದ ಮಾತಿದು.

ಬದುಕುವ ಕಲೆಯಲ್ಲಿ ನಿರತನಾದವನಿಗೆ ಸಾಯುವ ಕಲೆ ಸಹಜವಾಗಿ ಹಸ್ತಗತವಾಗುತ್ತದೆ. ಎಲ್ಲರೂ ಸಾಯಲೇಬೇಕು. ಸಿಡಿಲು ಬಡಿದು ಸಾಯಬಹುದು—ಹೃದಯಕ್ರಿಯೆ ನಿಂತು ಸಾಯಬಹುದು—ಶ್ವಾಸಬಂಧನವಾಗಿ

ಸಾಯುಬಹುದು. ಆದರೆ ಸತ್ಯಾಗ್ರಹಿ ಪ್ರಾರ್ಥಿಸುವುದು ಇಂತಹ ಸಾವನ್ನಲ್ಲ. ತನ್ನ ಕರ್ತವ್ಯವನ್ನು ಮಾಡುತ್ತ ನಗುಮುಖದಿಂದ ಸಾಯುವುದನ್ನು ಸತ್ಯಾಗ್ರಹಿ ಬಯಸುವನು. ಈ ಕಲೆಯನ್ನು ಬೊಂಬಾಯಿಯ ಪುರಜನರು ಇನ್ನೂ ಕಲಿತಂತೆ ಕಾಣುವುದಿಲ್ಲ. ನಿಮ್ಮ ಎದುರಾಳಿಯನ್ನು ನೋಯಿಸದೆ ಇರುವುದು ಅಥವಾ ಕೊಲ್ಲದೆ ಇರುವುದು—ಇಷ್ಟು ಮಾತ್ರ ಸಾಲದು. ತನ್ನ ಶತ್ರುವನ್ನು ಜನರು ಕೊಲ್ಲುತ್ತಿದ್ದರೆ ಅದನ್ನು ನೋಡುತ್ತ ತಟಸ್ಥನಾಗಿರುವವನು ಸತ್ಯಾಗ್ರಹಿಯಲ್ಲ. ನಿಮ್ಮ ಪ್ರಾಣವನ್ನಾದರೂ ಕೊಟ್ಟು ಆ ಶತ್ರುವನ್ನು ರಕ್ಷಿಸಬೇಕು. ಭಾರತದಲ್ಲಿ ಸಾವಿರಾರು ಜನರು ಈ ಕಲೆಯನ್ನು ಕಲಿತದ್ದೇ ಆದರೆ, ಭಾರತವು ಒಂದು ಕ್ಷಣದಲ್ಲಿ ಪರಿವರ್ತನೆ ಹೊಂದುವುದು. ಯಾರೂ ಆಗ ಭಾರತದ ಅಹಿಂಸಾಮಾರ್ಗ ಅದರ ದುರ್ಬಲತೆಯನ್ನು ಮುಚ್ಚಿಡುವ ಒಂದು ನೆವವೆಂದು ಹೀಯಾಳಿಸಲು ಸಾಧ್ಯವಿಲ್ಲ. ನಡೆಯುವ ಅತ್ಯಾಚಾರಗಳಿಗೆಲ್ಲ ಗೂಂಡಾ ಜನರು ಕಾರಣರೆಂದು ಹೇಳುವ ಅಭ್ಯಾಸ ಆಗ ತಪ್ಪುವುದು. ಈ ಗೂಂಡಾ ಜನರನ್ನೂ ನಮ್ಮ ಅಂಕೆಯಲ್ಲಿ ನಾವು ಇಟ್ಟುಕೊಳ್ಳಲು ಸಾಧ್ಯವಾಗುವುದು.

ನಾವು ನಮ್ಮ ಚರಿತ್ರೆಯ ಒಂದು ವಿಷಮ ಘಟ್ಟದಲ್ಲಿದೇವೆ. ನಮ್ಮ ಸುತ್ತಲೂ ಅಪಾಯವು ಆವರಿಸಿದೆ. ಆದರೆ ಇದನ್ನು ಸದವಕಾಶವನ್ನಾಗಿ ಮಾರ್ಪಡಿಸಿಕೊಳ್ಳಬಹುದು. ಪ್ರಪಂಚದಲ್ಲಿ ಸತ್ಯಾಗ್ರಹದ ಶಕ್ತಿಗೆ ಮಿಗಿಲಾದುದಿಲ್ಲವೆಂದು ಮನಗಾಣುವುದೇ ಇದಕ್ಕೆ ಉಪಾಯ.

(ಉರಳಿ, ೨೪–೩–೧೯೪೬) (ಹರಿಜನ, ೭–೪–೧೯೪೬)

ನಮ್ಮ ದೇಶದ ಸ್ತ್ರೀಯರು ಇಲ್ಲವೇ ತಮ್ಮ ಪತಿಗಳೊಂದಿಗಿರಬೇಕು ಅಥವಾ ಚಿತೆಯನ್ನು ಹತ್ತಬೇಕು ಎನ್ನುವ ಮನೋಧರ್ಮದಲ್ಲಿ ಬೆಳೆದಿರುವರು. ಇಷ್ಟು ಅಸಹಾಯರಾಗಿರುವುದಕ್ಕಿಂತಲೂ ಅವರು ಆಯುಧಪಾಣಿಗಳಾಗಿರುವಂತೆ ತರಬೇತಾಗುವುದು ಮೇಲೆಂದು ಗಾಂಧೀಜೀ ಅಭಿಪ್ರಾಯಪಟ್ಟರು. ಪಿಸ್ತೂಲುಗಳನ್ನೂ ಆಯುಧಗಳನ್ನೂ ಸ್ತ್ರೀಯರು ಧರಿಸುವುದು ಹೆಚ್ಚಾಗುತ್ತಲಿದೆ. ಆದರೆ ತಮ್ಮ ಮೇಲೆ ಅತ್ಯಾಚಾರ ನಡೆಸುವವರ ಮೇಲೆ ಪ್ರಯೋಗ ಮಾಡಲು ಈ ಆಯುಧಗಳು ಅಷ್ಟು ಉಪಯೋಗವಾಗಲಾರವೆಂದು ತಾವು ಬಲ್ಲರು. ಈ ಆಯುಧಗಳು ದುರ್ಬಲತೆಯ ಚಿಹ್ನೆಯೇ ಹೊರತು ಶಕ್ತಿಯ

ಚಿಹ್ನೆಯಲ್ಲ. ಈ ಆಯುಧಗಳು ಕೈತಪ್ಪಿದರೆ ಶರಣುಹೋಗುವುದೊಂದೇ ಉಳಿಯುವ ಮಾರ್ಗ.

ಅನಂತರ ತಮಗೆ ಮುಸ್ಲಿಂ ಮಿತ್ರರು ಬರೆದ ಪತ್ರವೊಂದನ್ನು ಕುರಿತು ಪ್ರಸ್ತಾಪಿಸಿದರು. ಮುಸ್ಲಿಮರು ಅತ್ಯಾಚಾರಗಳನ್ನು ಮಾಡಿದರೆ ಮಾತ್ರ ಅವನ್ನು ಗಾಂಧೀಜೀ ಖಂಡಿಸುವರೆಂದೂ ಹಿಂದೂಗಳು ಮಾಡಿದರೆ ಗಾಂಧೀಜೀ ಮೌನ ತಾಳುವರೆಂದೂ ಆ ಮಿತ್ರರು ಬರೆದಿದ್ದರು. ಈ ದೂರು ನಿರಾಧಾರವಾದುದು. ಗಾಂಧೀಜೀ ಇಷ್ಟೇ ಹೇಳಲು ಬಯಸುವರು : ಅವರಿಗೆ ಮಾನವರೆಲ್ಲರೂ ತಮ್ಮ ಜೊತೆಯಲ್ಲಿ ಹುಟ್ಟಿದ ಅಣ್ಣತಮ್ಮಂದಿರಂತೆ.

(ಹರಿಜನ, ೨೭–೧೦–೧೯೪೬) (ಹೊಸ ದಿಲ್ಲಿ, ೧೮–೧೦–೧೯೪೬)

## ಹೇಡಿತನಕ್ಕಿಂತಲೂ ಪಾಪವಿಲ್ಲ

ಪೂರ್ವ ಬಂಗಾಳದಲ್ಲಿ ನಮ್ಮ ಸ್ತ್ರೀಯರ ಮೇಲೆ ನಡೆದ ಅತ್ಯಾಚಾರವನ್ನು ಪ್ರಾರ್ಥನಾಸಭೆಯಲ್ಲಿ ಪ್ರಸ್ತಾಪಿಸುತ್ತ ನಮ್ಮ ಸ್ತ್ರೀಯರು ಬಹಳ ಬೇಗ ಹೆದರುವರೆಂದು ಗಾಂಧೀಜೀ ಹೇಳಿದರು. ಅವರು ಅಪಮಾನಕ್ಕೆ ಗುರಿಯಾಗುವುದಕ್ಕಿಂತಲೂ ಪ್ರಾಣತ್ಯಾಗವನ್ನು ಮಾಡಬೇಕೆಂದು ಗಾಂಧೀಜೀ ಮಾಡಿದ ಸಲಹೆಯನ್ನು ಅಪಾರ್ಥ ಮಾಡಿಕೊಂಡಿರುವರು. ತಮ್ಮ ಆತ್ಮರಕ್ಷಣೆಗೆ ಬೇಕಾದರೆ ಬಳಿಯಲ್ಲಿ ಒಂದು ಆಯುಧವನ್ನು ಇಟ್ಟುಕೊಳ್ಳಲಿ. ಆದರೆ ಹತ್ತಾರು ಜನರು ಒಬ್ಬರ ಮೇಲೆ ದಾಳಿ ಮಾಡಿದರೆ ಆಯುಧದಿಂದೇನು ಪ್ರಯೋಜನ? ಹೀಗೆ ಅಪಮಾನಕ್ಕೆ ಒಳಪಡುವುದಕ್ಕಿಂತಲೂ ವಿಷವನ್ನು ಕುಡಿದು ಸಾಯಬಹುದೆಂದು ತಾವು ಹೇಳಿದ್ದುಂಟು. ಈ ರೀತಿ ಸಿದ್ಧವಾಗಿರುವಿಕೆಯೇ ಅವರಲ್ಲಿ ಶೌರ್ಯವನ್ನು ಉಂಟುಮಾಡುವುದು. ಯಾರು ಸಾಯಲು ಸಿದ್ಧರೋ ಅಂತಹವರಿಗೆ ಯಾರು ಅಪಮಾನಮಾಡಿಯಾರು ? ಆತ್ಮರಕ್ಷಣೆಗೆ ಎರಡು ಮಾರ್ಗ : ಕೊಲ್ಲುವುದು—ಕೊಲ್ಲಿಸಿಕೊಳ್ಳುವುದು ಅಥವಾ ಕೊಲ್ಲದೆ ತಾನೇ ಸಾಯುವುದು. ಅವರಿಗೆ ಎರಡನೆಯ ಮಾರ್ಗವನ್ನು ಗಾಂಧೀಜೀ ಹೇಳಬಲ್ಲರೆ ಹೊರತು ಮೊದಲನೆಯ ಮಾರ್ಗವನ್ನಲ್ಲ. ಎಲ್ಲಕ್ಕೂ ಮಿಗಿಲಾಗಿ ಅವರು ನಿರ್ಭಯರಾಗಿರಬೇಕೆಂದು ಗಾಂಧೀಜಿಯ ಇಚ್ಛೆ. ಪೂರ್ವ ಬಂಗಾಳದಲ್ಲಿ ಜನರು ಅನುಸರಿಸಿದರೆಂದು

ಹೇಳುವ ಮಾರ್ಗವನ್ನು ಅವರು ಅನುಸರಿಸಬಾರದು. ಮೌಲಾನಾರವರ ಹಾಗೂ ಅಖಿಲ ಭಾರತ ಮಜ್ಲಿಸ್-ಎ-ಅಹ್ರಾರ್ ಅದರ ಮಾಜಿ ಅಧ್ಯಕ್ಷರ ಹೇಳಿಕೆಯನ್ನು ಅವರು ಓದಿರಬೇಕು. ಒತ್ತಾಯವಾಗಿ ತಮ್ಮ ಮತಕ್ಕೆ ಸೇರಿಸಿಕೊಳ್ಳುವುದಕ್ಕೂ ಸ್ತ್ರೀಯರನ್ನು ಅಪಹರಿಸುವುದಕ್ಕೂ ಅವರ ಮೇಲೆ ಅತ್ಯಾಚಾರ ನಡೆಸುವುದಕ್ಕೂ ಇಸ್ಲಾಂ ಧರ್ಮದ ಪ್ರಕಾರ ಅವಕಾಶವಿಲ್ಲವೆಂದು ಅವರು ಹೇಳಿರುವರು. (ಹೊಸ ದಿಲ್ಲಿ, ೨೭-೧೦-೧೯೪೬)

(ಹರಿಜನ, ೩-೧೧-೧೯೪೬)

## ಖಡ್ಗವಲ್ಲ—ಶೀಲ

ಚಂಡಿಪುರದಲ್ಲಿ ಗಾಂಧೀಜೀ ವಾಸವಾಗಿದ್ದ ಮನೆಯ ಅಂಗಳದಲ್ಲಿ ಒಂದು ಸ್ತ್ರೀಯರ ಸಭೆ ನಡೆಯಿತು. ಆ ಸಭೆಯಲ್ಲಿ ಮಾತನಾಡುತ್ತ, ಸ್ತ್ರೀಯರು ದೇವರ ಮೇಲೆಯೂ ತಮ್ಮ ಸ್ವಶಕ್ತಿಯ ಮೇಲೆಯೂ ಅವಲಂಬಿಸಬೇಕೇ ಹೊರತು ಹೆರರ ಮೇಲಲ್ಲವೆಂದರು. ಅವರು ಮತ್ತಷ್ಟು ಧೈರ್ಯವನ್ನು ತಂದು ಕೊಳ್ಳಬೇಕು. ತಮ್ಮ ಸ್ವಶಕ್ತಿಯ ಮೇಲೆ ಹೆಚ್ಚು ಭರವಸೆಯನ್ನಿಟ್ಟುಕೊಳ್ಳ ಬೇಕು. ಅವರು ಹೆದರಿದ್ದೇ ಆದರೆ ದುಷ್ಟರ ಕೈಗೆ ಸಿಕ್ಕಿಬೀಳುವರು.

ಭಾರತೀಯ ಸ್ತ್ರೀಯರು ಅಬಲೆಯರಲ್ಲ. ಹಿಂದಿನ ಕಾಲದಲ್ಲಿ ಮಹಾ ಸಾಹಸಕಾರ್ಯಗಳನ್ನು ಅವರು ಮಾಡಿರುವರು. ಇವು ಖಡ್ಗದ ಸಹಾಯ ದಿಂದಲ್ಲ—ತಮ್ಮ ಶೀಲ ಮತ್ತು ಗುಣಗಳಿಂದ. ಈಗಲೂ ಅವರಿಂದ ದೇಶಕ್ಕೆ ಅನೇಕ ವಿಧವಾದ ಸೇವೆ ಸಲ್ಲಬಹುದಾಗಿದೆ. ಅವರು ಉಪಯುಕ್ತವಾದ ಕಾರ್ಯಗಳಲ್ಲಿ ತೊಡಗಿ ಅದರಿಂದ ತಮಗೂ ದೇಶಕ್ಕೂ ಹಿತವಾಗುವಂತೆ ಮಾಡಬಹುದು. ದೇಶವು ತನ್ನ ಗುರಿಯನ್ನು ಸಾಧಿಸಲು ಇದು ಅನುಕೂಲ ವಾಗುವುದು.

ನೌಖಾಲಿಯಲ್ಲಿ ನಡೆದುಹೋದ ಘಟನೆಗಳಿಗೆ ಕೇವಲ ಗಂಡಸರು ಮಾತ್ರವಲ್ಲ—ಸ್ತ್ರೀಯರೂ ಜವಾಬ್ದಾರರೆ. ಅವರೆಲ್ಲರೂ ನಿರ್ಭಯತೆಯನ್ನು ಕಲಿಯಬೇಕು. ಪುರಾಣಕಾಲದ ದ್ರೌಪದಿ-ಸೀತೆಯರಂತೆ ಆಗಬೇಕು— ಇಷ್ಟೇ ಗಾಂಧೀಜಿಯ ಪ್ರಾರ್ಥನೆ. (ಹರಿಜನ, ೨೬-೧-೧೯೪೭)

## ಅಧ್ಯಾಯ – ೮

# ಅಪ್ರತಿಭಟನೆ



ತಮ್ಮ ಪ್ರಾರ್ಥನಾನಂತರದ ಭಾಷಣದಲ್ಲಿ ತಮಗೆ ಈಚೆಗೆ ಬಂದಿದ್ದ ಪತ್ರವೊಂದನ್ನು ಕುರಿತು ಗಾಂಧೀಜೀ ಪ್ರಸ್ತಾಪಮಾಡಿದರು. ತಮ್ಮನ್ನು ಯಾರಾದರೂ ಬೈದರೆ ಅದಕ್ಕೆ ಪ್ರತಿಯಾಗಿ ಬೈದವರನ್ನು ಬೈಯುವುದು ಸೂಕ್ತವಲ್ಲ—ಇದು ಆ ಪತ್ರದ ಸಂಬಂಧದಲ್ಲಿ ಗಾಂಧೀಜೀ ಹೇಳಲು ಬಯಸಿದುದು. ಒಂದು ಕೆಡಕನ್ನು ಮತ್ತೊಂದು ಕೆಡಕಿನಿಂದ ಎದುರಿಸಿದರೆ—ಕೆಡಕು ಇಮ್ಮಡಿಯಾಗುವುದು—ಎಂದಿಗೂ ಕ್ಷೀಣವಾಗಲಾರದು. ಹಾಗೆಯೇ ಹಿಂಸೆಯನ್ನು ಅದಕ್ಕೂ ಹೆಚ್ಚಿನ ಹಿಂಸೆಯಿಂದ ಗೆಲ್ಲಲು ಸಾಧ್ಯವಿಲ್ಲ—ಅಹಿಂಸೆ ಅಥವಾ ಅಪ್ರತಿಭಟನೆಯಿಂದಲೇ ಅದನ್ನು ಗೆಲ್ಲಬೇಕು. ಇದು ಶಾಶ್ವತವಾದ ನಿಯಮ. ಆದರೆ ಈ ಅಪ್ರತಿಭಟನೆಯ ನಿಜವಾದ ಸ್ವರೂಪವನ್ನು ತಪ್ಪಾಗಿ ಅರ್ಥಮಾಡಿಕೊಂಡಿರುವರು, ಅದನ್ನು ವಿರೂಪಗೊಳಿಸಿರುವರು. ಹಿಂಸೆಯ, ದಬ್ಬಾಳಿಕೆಯ ಮುಂದೆ ತಲೆಬಾಗಬೇಕೆಂದು ಇದರ ಅರ್ಥವಲ್ಲ. ದಬ್ಬಾಳಿಕೆಗೆ ಪ್ರತಿಯಾಗಿ ಹಿಂಸೆಯನ್ನು ಮಾಡದಿರುವುದು ಮಾತ್ರವಲ್ಲ. ಪ್ರಾಣ ಹೋದರೂ ಅದರ ಮುಂದೆ ತಲೆಬಾಗದಿರಬೇಕು. ಅದೇ ಅಪ್ರತಿಭಟನೆಯ ನಿಜವಾದ ಅರ್ಥ.

ಉದಾಹರಣೆಗೆ, ಪಾಕಿಸ್ತಾನ್ ಆಗಬೇಕೆಂದು ಹಿಂಸೆಯ ಪ್ರದರ್ಶನದ ಮೂಲಕ ನಮ್ಮನ್ನು ನಿರ್ಬಂಧಪಡಿಸಿದರೆ—ಅದಕ್ಕೆ ಪ್ರತಿಯಾಗಿ ನಾವೂ ಹಿಂಸೆಯನ್ನು ಆಚರಿಸುವುದು ಸರಿಯಾದ ಮಾರ್ಗವಲ್ಲ; ಬಹಳ ನಮ್ರತೆಯಿಂದ ಈ ಪಾಕಿಸ್ತಾನ್ ಬೇಕೆಂಬ ಕೂಗಿನ ಅರ್ಥವೇನೆಂದು ಕೇಳಿ ತಿಳಿದುಕೊಳ್ಳಬೇಕು. ಇದು ಆಗತಕ್ಕದ್ದೆಂದು ಮನಗಂಡ ಪಕ್ಷಕ್ಕೆ ತಾವು ಘಂಟಾಘೋಷವಾಗಿ ಈ ಬೇಡಿಕೆ ನ್ಯಾಯವೆಂದೂ ಎಲ್ಲರೂ ಒಪ್ಪಿಕೊಳ್ಳಬಹುದಾದುದೆಂದೂ ಸಾರಲು ಹಿಂಜರಿಯಲಾರರು. ಆದರೆ ಈ ಬೇಡಿಕೆಯನ್ನು ಹಿಂಸಾಕೃತ್ಯಗಳ ಮೂಲಕ ಸಾಧಿಸಿ ಜನರ ಒಪ್ಪಿಗೆಯನ್ನು ನಿರ್ಬಂಧದ ಮೂಲಕ ಪಡೆಯಬೇಕೆಂದಿದ್ದರೆ ಅದು ನ್ಯಾಯವಲ್ಲವೆಂದು ತೋರುವತನಕ ಅದನ್ನು ಶಾಂತ

ರೀತಿಯಿಂದ ಪ್ರತಿಭಟಿಸುವುದೊಂದೇ ದಾರಿ. ಹಿಂಸೆಯನ್ನು ಪ್ರತಿಹಿಂಸೆಯಿಂದ ಎದುರಿಸಬಾರದು. ಆದರೆ ಅಸಹಕಾರದಿಂದ ಅದನ್ನು ನಿಶ್ಶಕ್ತವನ್ನಾಗಿ ಮಾಡಬೇಕು; ಮತ್ತು ದರ್ಪಕ್ಕೆ ತಲೆಬಾಗದಿರಬೇಕು. ಇದೊಂದೇ ಪ್ರಪಂಚದಲ್ಲಿ ಬಾಳುವ ಸಭ್ಯ ಮಾರ್ಗ. ಬೇರಾವುದೇ ಮಾರ್ಗ ಶಸ್ತ್ರಾಸ್ತ್ರ ತಯಾರಿಕೆಯ ಸ್ಪರ್ಧೆಗೆ ಒಯ್ದೀತು; ನಡುನಡುವೆ ಅಗತ್ಯದ ಹಾಗೂ ಬಳಲಿಕೆಯ ನಿಮಿತ್ತವಾಗಿ ಶಾಂತಿಯ ಅವಧಿಗಳು ಇದ್ದಾವು, ಆಗಲೂ ಉನ್ನತ ಮಟ್ಟದ ಹಿಂಸೆಗೆ ಸಿದ್ಧತೆ ನಡೆಯುತ್ತಲಿದ್ದೀತು. ಹೆಚ್ಚುಹೆಚ್ಚಾಗಿ ಹಿಂಸೆಯ ಪ್ರಯೋಗದಿಂದ ಶಾಂತಿಯನ್ನು ಸ್ಥಾಪಿಸಬೇಕೆಂಬ ಪ್ರಯತ್ನ ಅಣುಬಾಂಬಿನಲ್ಲಿ ಕೊನೆಮುಟ್ಟಿತು. ಇದು ಅಹಿಂಸೆ ಹಾಗೂ ಪ್ರಜಾತಂತ್ರದ ಪೂರಾ ಅಭಾವ—ಅಹಿಂಸೆ ಇಲ್ಲದೆ ಪ್ರಜಾತಂತ್ರ ಸಾಧ್ಯವೇ ಇಲ್ಲ.

ಮೇಲೆ ವಿವರಿಸಿದ ಅಹಿಂಸಾತ್ಮಕ ಪ್ರತಿಭಟನೆಗೆ ಹಿಂಸಾತ್ಮಕಯುದ್ಧಕ್ಕೂ ಬೇಕಾಗುವುದಕ್ಕಿಂತ ಉತ್ತಮ ರೀತಿಯ ಶೌರ್ಯ ಆವಶ್ಯಕ. ಕ್ಷಮಾಗುಣ ಶೂರರ ಲಕ್ಷಣ, ಹೇಡಿಗಳದಲ್ಲ. ಈ ಸಂದರ್ಭದಲ್ಲಿ ಗಾಂಧೀಜೀ ಮಹಾಭಾರತದಿಂದ ಒಂದು ಕಥೆಯನ್ನು ಉದಹರಿಸಿದರು. ಪಾಂಡವರು ಅಜ್ಞಾತವಾಸದಲ್ಲಿ ವಿರಾಟರಾಯನ ನಗರದಲ್ಲಿದ್ದರು. ಅವರು ಮಾರುವೇಷಗಳನ್ನು ಧರಿಸಿದ್ದರು. ಧರ್ಮರಾಯನಿಗೆ ಏಟು ಬಿತ್ತು. ಇದರ ವೃತ್ತಾಂತ ಹೊರಬೀಳಬಾರದು. ಅಲ್ಲದೆ ಧರ್ಮರಾಯನ ರಕ್ತ ನೆಲವನ್ನು ಸೋಕಿದರೆ ಅದರಿಂದ ವಿರಾಟರಾಯನಿಗೂ ಕೇಡುಂಟಾದೀತು. ಆದುದರಿಂದ ಆ ರಕ್ತದ ಬಿಂದುಗಳನ್ನು ಚಿನ್ನದ ಬಟ್ಟಲಿನಲ್ಲಿ ಹಿಡಿದರಂತೆ! ಪ್ರತಿಯೊಬ್ಬ ಭಾರತೀಯನೂ, ಅವನು ಯಾವ ಮತದವನೇ ಆಗಲಿ—ಹಿಂದೂ, ಮುಸಲ್ಮಾನ, ಈಸಾಯಿ, ಪಾರಸೀ, ಸೀಖ್—ಪ್ರತಿಯೊಬ್ಬರೂ ಈ ಬಗೆಯ ಕ್ಷಮೆ ಹಾಗೂ ಶೌರ್ಯವನ್ನು ಕಲಿಯಬೇಕು. ಈಗಿನ ಅವನತಸ್ಥಿತಿಯಿಂದ ಅದೊಂದೇ ಉದ್ಧರಿಸಿ ಕಾಪಾಡುವುದು.

ಎಲ್ಲ ಧರ್ಮಗಳಲ್ಲಿಯೂ ಅಹಿಂಸೆಯ ಉಪದೇಶವಿದೆ. ಆದರೆ ಅದರ ಆಚರಣೆ ಶಾಸ್ತ್ರರೀತಿಯಲ್ಲಿ ಬೆಳೆದುಬಂದಿರುವುದು ಭಾರತ ದೇಶದಲ್ಲಿ ಮಾತ್ರ ಎಂದು ಗಾಂಧೀಜಿಯ ನೆಚ್ಚಿನ ನಂಬಿಕೆ. ಅಸಂಖ್ಯಾತ ಸಾಧುಸಂತರು ತಪಸ್ಸುಮಾಡಿ—ತಮ್ಮ ತಪಸ್ಸಿನಿಂದ ಹಿಮಾಲಯದ ಧವಳಕೀರ್ತಿಯನ್ನು

ಮತ್ತಷ್ಟು ಪವಿತ್ರವೂ ಪ್ರಕಾಶಮಾನವೂ ಮಾಡಿದರೆಂದು ಕವಿಗಳು ಹಾಡಿರುವರು. ಆದರೆ ಇಂದು ಅಹಿಂಸೆಯ ಆಚರಣೆಯೇ ಲುಪ್ತವಾಗಿದೆಯೆಂದು ಹೇಳಬಹುದು. ಕೋಪವನ್ನು ಪ್ರೇಮದಿಂದ, ಹಿಂಸೆಯನ್ನು ಅಹಿಂಸೆಯಿಂದ ಗೆಲ್ಲುವ ಈ ಅಮರ ಧರ್ಮವನ್ನು ನಾವು ಪುನರುಜ್ಜೀವನಗೊಳಿಸಬೇಕು. ಇದನ್ನು ಮಾಡಲು ಜನಕಮಹಾರಾಜನೂ, ಶ್ರೀರಾಮಚಂದ್ರನೂ ಓಡಾಡಿದ ಈ ಪ್ರದೇಶಕ್ಕಿಂತಲೂ ಬೇರೆ ಯಾವುದು ಉತ್ತಮವಾದೀತು ? (ಹರಿಜನ, ೩೦-೩-೧೯೪೭)

## ಅಮೆರಿಕದಿಂದ

ಅಮೆರಿಕದ ಸಂಯುಕ್ತ ಸಂಸ್ಥಾನದಿಂದ ರಿಚರ್ಡ್ ಗ್ರೆಗ್ ಹೀಗೆ ಬರೆಯುತ್ತಾರೆ :

‘ ಹೊಸ ದಿಲ್ಲಿಯಿಂದ ನ್ಯೂಯಾರ್ಕ್ ಪತ್ರಿಕೆಗೆ ಬಂದಿರುವ ವರದಿಯ ಪ್ರಕಾರ ನೀವು ೧೨೫ ವರ್ಷಗಳು ಬದುಕಿರುವ ಆಸೆಯನ್ನು ಬಿಟ್ಟಿರುವಿರೆಂದಿದೆ. ಇದಕ್ಕೆ ಕಾರಣ ಈಗ ಭಾರತ ದೇಶದಲ್ಲಿ ಆಗುತ್ತಿರುವ ರಕ್ತಪ್ರವಾಹ. ಈ ವರದಿ ಸರಿಯಾಗಿರುವ ಪಕ್ಷಕ್ಕೆ ತಾವು ತಮ್ಮ ನಿಲುವನ್ನು ಮತ್ತೆ ವಿಮರ್ಶೆಮಾಡಿಕೊಳ್ಳಬೇಕು. ಇನ್ನು ಭಾರತದಲ್ಲಿ ೧೨೫ ವರ್ಷಗಳವರೆಗೆ ಈ ಹಿಂಸೆಯ ವಾತಾವರಣವೇ ಮುಂದುವರೆದರೂ ಬೇರೆ ಮಹತ್ತರವಾದ ಸಮಸ್ಯೆಗಳನ್ನು ಪರಿಹಾರಮಾಡಬೇಕಾಗಿ ಉಳಿದಿದೆ.

‘ ಅತ್ಯಂತ ಆಳವಾದ ಮತ್ತು ಶಕ್ತಿಯುತವಾದ ಆಧ್ಯಾತ್ಮಿಕದೃಷ್ಟಿ ಹಾಗೂ ಸಂಸ್ಕೃತಿಗೆ ಭಾರತವೇ ಪ್ರಪಂಚಕ್ಕೆ ಮೂಲ. ಈ ಸಂಸ್ಕೃತಿ ಶಾಶ್ವತವಾದುದು. ಆಧುನಿಕ ಕಾಲದಲ್ಲಿ ಧರ್ಮದಲ್ಲಿ ಶ್ರದ್ಧೆ ಕಡಮೆಯಾಗಿದೆ—ಕೇವಲ ಲೌಕಿಕ ದೃಷ್ಟಿಯನ್ನೇ ಉಳ್ಳ ಪಾಶ್ಚಾತ್ಯ ದೇಶಗಳ ಸಂಪರ್ಕದಿಂದ ಹಿಂದೂ ಸಂಸ್ಕೃತಿಗೆ ಬಹಳ ಹಾನಿ ಸಂಭವಿಸಿದೆ. ಹೀಗಿದ್ದರೂ ಈ ಸಂಸ್ಕೃತಿಯೇ ಸರ್ವೋತ್ತಮವಾಗಿ ನಿಂತಿದೆ. ಹಿಂಸೆಯಿಂದಲೂ, ಲೋಭದಿಂದಲೂ, ನಿರೀಶ್ವರವಾದದಿಂದಲೂ ಪ್ರಪಂಚದ ಬಹುಭಾಗ ನಾಶಹೊಂದುವುದರಲ್ಲಿದೆ. ಈ ಸರ್ವನಾಶವಾಗುವ ಸಂದರ್ಭದಲ್ಲಿ ಭಾರತದಲ್ಲಿ ಕೆಲವರಾದರೂ ಈ ಆಧ್ಯಾತ್ಮಿಕ ಸಂಸ್ಕೃತಿಯ ಬೆಳಕನ್ನು ನಂದಿಹೋಗದೆ ಕಾಪಾಡಿಕೊಂಡು ಬರಬೇಕೆಂದು ನನ್ನ ವಿಶ್ವಾಸ.

ಪ್ರಳಯದ ಮಧ್ಯೆ ಒಂದು ದ್ವೀಪದಂತೆ—ಅಂಧಕಾರದಲ್ಲಿ ಒಂದು ಬೆಳಕಿನ ಆಶಾಕಿರಣದಂತೆ—ಎಷ್ಟೇ ಅಲ್ಪ ಪ್ರಮಾಣದಲ್ಲಿದ್ದರೂ— ನೊಂದ ಪ್ರಪಂಚಕ್ಕೆ ಮತ್ತೊಮ್ಮೆ ಮಾರ್ಗದರ್ಶನವನ್ನು ಭಾರತೀಯರು ಮಾಡುವರು. ಪ್ರಪಂಚಕ್ಕೆ ವಿವೇಕವನ್ನೂ ಪ್ರಾಣವನ್ನೂ ಒದಗಿಸುವರು.

'ಎಲ್ಲರಿಗಿಂತಲೂ ಹೆಚ್ಚಾಗಿ ತಾವು ಆ ಬಗೆಯ ಹಿಂದೂ ಸಂಸ್ಕೃತಿಯ ಪ್ರತೀಕವಾಗಿದೀರಿ. ತಾವು ಜೀವಂತವಾಗಿರುವುದು ಪ್ರಪಂಚಕ್ಕೆ ಬಹು ಮುಖ್ಯವಾದ ವಿಷಯ. ನಿಮ್ಮೊಂದಿಗೆ ಬೆರೆತು ನಿಮ್ಮ ಮಾರ್ಗವನ್ನು ನಿಜವಾಗಿ ಅನುಸರಿಸುವವರ ಸಂಖ್ಯೆ ಬಹಳ ಕಡಮೆಯಾಗುತ್ತ ಹೋಗಬಹುದು. ಆದರೆ ಈ ಅಲ್ಪಸಂಖ್ಯಾತರಲ್ಲಿ ಗುಣವಿರುತ್ತೆ, ತೇಜಸ್ಸಿರುತ್ತೆ. ಪ್ರಪಂಚವು ಸಂಕಟ ಗಳನ್ನು ಅನುಭವಿಸಿ ಬುದ್ಧಿ ಕಲಿತಾಗ (ಅದು ಬುದ್ಧಿ ಕಲಿಯಲು ಬೇರೆ ಮಾರ್ಗ ವಿರುವಂತೆ ಕಾಣುವುದಿಲ್ಲ) ಆಗ ಆಧ್ಯಾತ್ಮಿಕ ಜೀವನದ ಕಡೆ ಅವರು ತಿರುಗು ವರು. ಪ್ರಪಂಚದ ಜನ ತಿಳಿಗೇಡಿಗಳಾಗಿದಾರೆ. ಅವರು ನಾವು ಆಶಿಸುವಂತೆ ಸರಿಯಾಗಿ ಒಂದು ಕ್ಲುಪ್ತ ಕಾಲದೊಳಗೆ ಬುದ್ಧಿ ಕಲಿಯದಿದ್ದರೆ ನಾವು ಅವರಿಗಾಗಿ ಏನು ಮಾಡಲೂ ಆಗದು—ಬದುಕಲೂ ಆಗದು—ಹೀಗೆಂದು ನಾವು ಭಗವಂತನ ಮುಂದೆ ಹೇಳಿಕೊಳ್ಳಲಾದೀತೆ? ನೀವು ನಮ್ಮ ಮಧ್ಯೆ ಉಳಿಯಬೇಕೆಂಬ ನನ್ನ ಉತ್ಕಟ ಆಕಾಂಕ್ಷೆ—ಈ ಮಾತುಗಳನ್ನು ಬರೆಯುವ ಸಾಹಸಕ್ಕೆ ನನ್ನನ್ನು ಗುರಿಮಾಡಿದೆ.

'ನನ್ನ ವಿಚಾರವನ್ನು ನಾನು ಮತ್ತಷ್ಟು ವಿಶದಗೊಳಿಸುತ್ತೇನೆ. ಅರ್ಥ ಶಾಸ್ತ್ರದಲ್ಲಿ ಬಹಳ ದೀರ್ಘಕಾಲದ ಪರಿಸ್ಥಿತಿಗಳನ್ನು ಪರಿಶೋಧನೆ ಮಾಡು ವುದರಲ್ಲಿ ಮಾನವನ ಸ್ಥಿತಿಯಲ್ಲಿ ಆಗುವ ಏರಿಳಿತಗಳು ಯಾವುದೋ ಒಂದು ನಿಯಮದ ಪ್ರಕಾರ ತರಂಗತರಂಗವಾಗಿ ಅಥವಾ ಪರಿಭ್ರಮಣ ರೂಪದಲ್ಲಿ ಮಾರ್ಪಡುತ್ತ ಹೋಗುತ್ತವೆಂದು ಕಾಣುತ್ತದೆ. ಉದಾಹರಣೆಗೆ, ಬೆಲೆವಾಸಿ ಗಳಲ್ಲಿ ೫೪ ವರ್ಷಗಳಿಗೊಮ್ಮೆ ಒಂದು ಪರಿಸ್ಥಿತಿ ಉಂಟಾಗುತ್ತದೆ. ಮನೆ-ಜಮೀನು ಕೊಳ್ಳುವುದು-ಮಾರುವುದು ಈ ವ್ಯವಹಾರದಲ್ಲಿ ೧೮ ವರ್ಷಕ್ಕೊಮ್ಮೆ ಒಂದು ಘಟ್ಟ ಉಂಟಾಗುತ್ತದೆ. ಹೀಗೆಯೇ ೯ ವರ್ಷಕ್ಕೊಮ್ಮೆ ಮತ್ತೊಂದು ಆರ್ಥಿಕ ಪರಿಸ್ಥಿತಿಯ ಬದಲಾವಣೆ; ೩ತ್ತಿ ವರ್ಷಕ್ಕೊಮ್ಮೆ ಬೇರೊಂದು ಬಗೆಯದು. ಆರ್ಥಿಕ ಮುಗ್ಗಟ್ಟುಗಳೂ-ಕ್ಷೋಭೆ—ಈ ನಿಯಮದ ಪ್ರಕಾರ

ನಡೆದಿವೆ. ಈ ಚಲನವಲನಗಳೆಲ್ಲ ೧೯೫೧-೫೨ಕ್ಕೆ ಒಂದು ಘಟ್ಟಕ್ಕೆ ಮುಟ್ಟು ವುವು. ದೊಡ್ಡ ಕೈಗಾರಿಕೆಗಳನ್ನು ನಡೆಸುತ್ತಿರುವ ರಾಷ್ಟ್ರಗಳು ಬಹಳ ದೊಡ್ಡ ಕ್ಷೋಭೆಯನ್ನು ಅನುಭವಿಸುವ ಕಾಲಕ್ಕೆ ನಾವು ಕಾಲಿಡುತ್ತಿದೇವೆ. ಇದು ಅಮೆರಿಕ ಮತ್ತಿತರ ದೇಶಗಳನ್ನೂ ಆವರಿಸುವುದು. ಗ್ರೇಟ್ ಬ್ರಿಟನ್ ಅಮೆರಿಕದ ಸಹಾಯವನ್ನು ಅವಲಂಬಿಸಿದೆ. ಅದು ನಿಂತರೆ ಅದು ಭಾರತದ ಗೋಜನ್ನು ಬಿಡುವುದೆಂದು ನನ್ನ ನಂಬಿಕೆ. ಮತ್ತೊಂದು ಯುದ್ಧವಾದರೆ— ಅದು ಅಮೆರಿಕಕ್ಕೂ ರಷ್ಯಾ ದೇಶಕ್ಕೂ ಆಗುವ ಸೂಚನೆಗಳಿವೆ—ಅಲ್ಲಿಗೆ ಪಾಶ್ಚಾತ್ಯ ನಾಗರಿಕತೆಯ ಸಮಾಪ್ತಿಕಾಲವೆಂದು ಹೇಳಬಹುದು. ಪ್ರಪಂಚದಲ್ಲಿ ಬಿಳಿಯ ಜನರ ಪ್ರಾಬಲ್ಯ ಕೊನೆಗಾಣುವುದು. ಆ ಕಾಲಕ್ಕೆ ಈ ರುದ್ರಭೂಮಿ ಯಿಂದ ಪ್ರಪಂಚವನ್ನು ಹಿಂದೂ ಜನರು ರಕ್ಷಿಸುವರೆಂದು ನನ್ನ ವಿಶ್ವಾಸ. ಆದುದರಿಂದ ೧೨೫ ವರ್ಷಗಳವರೆಗೂ ಬದುಕಿರಬೇಕೆಂಬ ಆಸೆಯನ್ನು ಬಿಡಬೇಡಿ. ಆ ಸಂಧಿಕಾಲದಲ್ಲಿ ನಿಮ್ಮಿಂದ ಆಗಬೇಕಾದ ಸೇವೆ ಬಹಳವಿದೆ. ಈಗ ನೀವು ಬೇಕಾಗಿರುವುದಕ್ಕಿಂತಲೂ ಆಗ ನೀವು ಬೇಕಾಗುವಿರಿ. ಜಗದೀ ಶ್ವರನು ಈ ಪ್ರಪಂಚವನ್ನು ಕೆಲವು ಧರ್ಮದ ನಿಯಮಗಳಿಗನುಸಾರವಾಗಿ ನಡೆಸಿಕೊಂಡು ಹೋಗುತ್ತಿದಾನೆ. ಆ ನಿಯಮಗಳನ್ನು ನೂರಾರು ವರ್ಷಗಳಿಂದ ಉಲ್ಲಂಘಿಸಿರುವ ರಾಷ್ಟ್ರಸರಕಾರಗಳು ಅದರ ಫಲವನ್ನನುಭವಿಸಲೇಬೇಕು. ಪ್ರಪಂಚವು ಅನುಭವಿಸಬೇಕಾಗಿರುವ ಸಂಕಟಗಳು ಊಹಿಸಲೂ ಸಹ ಕಷ್ಟ. ಆದರೆ ಆ ಸಂಕಟಗಳು ಬಾರದಿದ್ದರೆ ಪ್ರಪಂಚ ಒಂದು ಧರ್ಮದ, ನೀತಿಯ ನೆಲೆಗಟ್ಟಿನಲ್ಲಿ ಸಾಗುತ್ತಿದೆಯೆಂದು ಹೇಗೆ ಹೇಳಲಾದೀತು? ಒಂದು ನಿಯಮ ವಿದೆಯೆನ್ನುವುದಕ್ಕೆ ಈ ಸಂಕಟಗಳೇ ಸಾಕ್ಷಿ. ಅವುಗಳನ್ನು ಎಂದಿಗೂ ಉಲ್ಲಂಘಿ ಸಲು ಸಾಧ್ಯವಿಲ್ಲ.

'ದೇವರು ನಿಮ್ಮನ್ನು ಕಾಪಾಡಲಿ, ಉಳಿಸಲಿ. ದಯೆಯಿಟ್ಟು—ಪ್ರಪಂಚ ಕ್ಕಾಗಿ, ಭಾರತಕ್ಕಾಗಿ ಬದುಕಿರಿ. ದೇಶಗಳಲ್ಲಿ ಅಥವಾ ದೇಶದೊಳಗೆ ಪಕ್ಷಗಳಲ್ಲಿ ಅಧಿಕಾರ ಬದಲಾವಣೆ ಆಗುವ ಸಂದರ್ಭದಲ್ಲಿ ಹಿಂಸಾಕೃತ್ಯಗಳು ಅನಿವಾರ್ಯ ವೆಂದು ನಾನು ಹಿಂದಿನ ಪತ್ರದಲ್ಲಿ ನಿಮಗೆ ಬರೆದಿದೇನೆ. ೧೭೭೬ರಲ್ಲಿ ನಮ್ಮ ೧೩ ಪ್ರಾಂತಗಳು ಬ್ರಿಟಿಷರ ಅಂಕೆಯಿಂದ ಹೊರಬಿದ್ದಾಗ ದೊಂಬಿಗಳಾದುವು, ಹೋರಾಟವಾಯಿತು. ಅದಕ್ಕೆ 'ಷೇ' ಅವನ ಬಂಡಾಯವೆಂದು ಹೆಸರಿಟ್ಟರು.

ಇದು ಚರಿತ್ರೆಯಲ್ಲಿ ನಾವು ಕಾಣುವ ವಿಷಯ. ಭಾರತಕ್ಕೂ ಪಾಶ್ಚಾತ್ಯ ದೇಶಗಳ ಸೋಂಕಿನಿಂದ ಅಲ್ಲಿಯೂ ಇದೇ ಕಂಡುಬರುತ್ತದೆ. ಆದರೆ ಮತ್ತೊಂದು ದೊಡ್ಡ ಯುದ್ಧ ಆರಂಭವಾದಾಗ ಭಾರತವು ಈ ಜಾಡ್ಯವನ್ನು ಕಳೆದುಕೊಂಡು, ಧರ್ಮವಿಹೀನವಾದ ಪಾಶ್ಚಾತ್ಯ ರಾಷ್ಟ್ರಗಳು ಯಾವ ಅಧೋಗತಿಗೆ ಹೋಗುತ್ತಿರುವುವೆಂದು ಸ್ಪಷ್ಟವಾಗಿ ಕಾಣುವುದು.'

ಗ್ರೆಗ್ ಎತ್ತಿ ಬರೆದಿರುವ ವರದಿ ನಿಜವಾದ ವರದಿಯೇ ಹೌದು. ಸಾಕಷ್ಟು ನಿರ್ಲಿಪ್ತನಾಗಿ—ನಾನು ಮನೋವೇಗಗಳನ್ನು ಜಯಿಸದೆ ಇರುವ ಕಾರಣ ನನಗೆ ನಿರಾಶೆ ಉಂಟಾಗಿದೆ. ನನ್ನ ವೈರಾಗ್ಯ ಸಾಕಷ್ಟಿಲ್ಲವೆಂದು ಒಂದು ದಿನ ನನಗೆ ಮನವರಿಕೆ ಆಯಿತು. ಸೇವೆಯನ್ನು ಮಾಡಲು ಅಶಕ್ತನಾದರೆ ಅಂತಹವನು ಪ್ರಪಂಚದಲ್ಲಿ ಬದುಕಿರಲು ಕಾರಣವಿಲ್ಲ. ಗೀತೆಯ ಅರ್ಥದಲ್ಲಿ ಅನಾಸಕ್ತಿಯನ್ನು ಸಾಧಿಸದೆ ಇರುವವನು ಸೇವೆಯನ್ನು ಮಾಡಲಾರನು.

ನಮ್ಮ ಲೋಪಗಳನ್ನು ಮುಚ್ಚುಮರೆಯಿಲ್ಲದೆ ಬಹಿರಂಗಪಡಿಸುವುದು ಆತ್ಮಶುದ್ಧಿಯ ದೃಷ್ಟಿಯಿಂದ ಒಳ್ಳೆಯದು. ಆರೋಪಗಳನ್ನು ಸರಿಪಡಿಸಿಕೊಳ್ಳಲು ದಾರಿಯಾಗುತ್ತದೆ. ನಾನು ಈ ಪ್ರಯತ್ನ ಮಾಡುತ್ತಿದೇನೆಂದೂ—ಕಳೆದು ಹೋದ ಆಸೆಯನ್ನು ಮರಳಿ ಹೊಂದಲು ಹೆಣಗುತ್ತಿದೇನೆಂದೂ 'ಹರಿಜನ' ಪತ್ರಿಕೆಯ ವಾಚಕರಿಗೆ ಹೇಳಬಯಸುತ್ತೇನೆ. ಇದು ಎಲ್ಲರಿಗೂ ಸಾಧ್ಯ—ಯಾರು ಸೇವಾದೀಕ್ಷೆಯನ್ನು ತೊಟ್ಟಿರುವರೊ ಅಂತಹವರೆಲ್ಲರೂ ಈ ವಿಶ್ವಾಸವನ್ನೂ ಆಸೆಯನ್ನೂ ತಾಳಬಹುದು. ಇದು ಬರೀ ಕನಸೆಂದು ಯಾರೂ ನಗಲು ಕಾರಣವಿಲ್ಲ. ನಾನಾಗಲಿ, ನನ್ನ ಜೊತೆಗಾರರಾಗಲಿ ಇದನ್ನು ಸಾಧಿಸದೆ ಹೋದರೆ ಈ ವಿಶ್ವಾಸವೇ ನಿರರ್ಥಕವೆಂದು ಹೇಳುವುದು ತಪ್ಪಾದೀತು.

ಹಿಂಸೆಯ ಮೇಲೆ ನಿಂತಿರುವ ಸಮಾಜದಲ್ಲಿ ನನಗೆ ಸ್ಥಾನವಿಲ್ಲವೆಂದು ಹೇಳುವ ಮಾತಿಗೂ—ನನಗೆ ನಿರಾಶೆಯಾಗಿದೆಯೆಂದು ವರದಿಯಾಗಿರುವ ಮಾತಿಗೂ ಸಂಬಂಧವಿಲ್ಲ. 'ವರದಿಯಾಗಿರುವ' ಮಾತೆಂದು ಅರ್ಥಸಹಿತವಾಗಿ ಬರೆಯುತ್ತೇನೆ. ಏಕೆಂದರೆ ನಾನು ನಿರಾಶೆಗೆ ಎಡೆಕೊಡಲು ಸಿದ್ಧನಾಗಿಲ್ಲ. ಆ ವರದಿಯಾದಾಗ ಇದ್ದ ಪರಿಸ್ಥಿತಿ ಈಗ ಬದಲಾಗಿದೆ. ಈಗ ಅದು ಅಷ್ಟು ಪ್ರಮಾಣದಲ್ಲಿ ಅನ್ವಯಿಸುವುದಿಲ್ಲ.

ಶಾಂತಿಮಾರ್ಗವನ್ನು ಬಯಸುವವನಿಗೆ ಘರ್ಷಣೆಯಿಂದ ತುಂಬಿದ ಸಮಾಜದಲ್ಲಿ ಸ್ಥಾನವಿಲ್ಲವೆನ್ನುವುದು ಸ್ಪಷ್ಟವಾಗಿದೆ. ಆದರೆ ಇಂತಹವನೂ ೧೨೫ ವರ್ಷಗಳು ಬದುಕಿರಬಹುದು, ಸತತವಾಗಿ ಶಾಂತಿಪ್ರಯತ್ನವನ್ನು ನಡೆಸಿ ತನ್ನ ಸ್ಥಾನವನ್ನು ಭದ್ರಮಾಡಿಕೊಳ್ಳಬಹುದು. ನಾನು ಮೇಲೆ ಬರೆದಿರುವ ವಾಕ್ಯಕ್ಕೆ ಇದೇ ಅರ್ಥ. ನಾನು ಆ ಸಮಾಜದ ಮಧ್ಯೆ ಇದೇನೆ—ಆದರೆ ಅದರಲ್ಲಿ ಬೆರೆತಿಲ್ಲ—ಅದನ್ನು ಪ್ರತಿಭಟಿಸುತ್ತಲೇ ಇರುತ್ತೇನೆ.

ಈ ಮೂವತ್ತು ವರ್ಷಗಳ ಅಹಿಂಸಾಮಾರ್ಗದ ಸಾಧನೆ ಮಣ್ಣುಪಾಲು ಆಯಿತೆ? ಈ ವಿಷಯದಲ್ಲಿ ನನ್ನ ಅಭಿಪ್ರಾಯವೇನೆಂದು ಈ ಪತ್ರಿಕೆಯಲ್ಲಿ ಬರೆದಿದೇನೆ, ನನ್ನ ಭಾಷಣಗಳಲ್ಲಿ ತಿಳಿಸಿದೇನೆ. ಈ ಹಿಂಸಾಮನೋಧರ್ಮವು ಭಾರತದ ಹಳ್ಳಿಗಳನ್ನು ಪ್ರವೇಶಿಸಿಲ್ಲವೆಂದು ವಿಶ್ವಾಸ ತಾಳೋಣ. ಅದು ಏನೇ ಇರಲಿ, ಗ್ರೆಗ್ ಬರೆದಿರುವ 'ಅವರು ನಾವು ಆಶಿಸುವಂತೆ ಸರಿಯಾಗಿ ಒಂದು ಕ್ಲ್ಪಪ್ತ ಕಾಲದೊಳಗೆ ಬುದ್ಧಿ ಕಲಿಯದಿದ್ದರೆ ನಾವು ಅವರಿಗಾಗಿ ಏನು ಮಾಡಲೂ ಆಗದು—ಬದುಕಲೂ ಆಗದು—ಹೀಗೆಂದು ಭಗವಂತನ ಮುಂದೆ ಹೇಳಿಕೊಳ್ಳಲಾದೀತೆ?'—ಈ ಎಚ್ಚರಿಕೆಗೆ ನನ್ನ ಪೂರ್ಣ ಒಪ್ಪಿಗೆ ಇದೆ. ವರದಿಯಾಗಿರುವ ಭಾಗ ಸಂದರ್ಭದಿಂದ ಬೇರೆಮಾಡಲ್ಪಟ್ಟುದಾದುದರಿಂದ ಅಪಾರ್ಥಕ್ಕೆ ಎಡೆ ಕೊಟ್ಟಿದೆ. ಗ್ರೆಗ್ ಅವರ ಸಂಶಯಗಳಿಗೆ ಆಸ್ಪದ ಕೊಟ್ಟಿದೆ. ಭಗವಂತನಿಗೆ ತೀರ್ಪುಗಾರನಾಗುವ ಶಕ್ತಿ ನನ್ನಲ್ಲಿಲ್ಲವೆಂದು ನಂಬಿದೇನೆ.

(ಹರಿಜನ, ೨೯–೬–೧೯೪೭) (ಹೊಸ ದಿಲ್ಲಿ, ೨೮–೬–೧೯೪೭)

## ಅಹಿಂಸೆ

(ದಿನಾಂಕ ೧೫–೬–೧೯೪೭ರಂದು ನಡೆದ ಪ್ರಾರ್ಥನಾಸಭೆಗೆ ಈ ಕೆಳಗೆ ಕೊಟ್ಟಿರುವ ಲಿಖಿತ ಸಂದೇಶವನ್ನು ಗಾಂಧೀಜೀ ಕಳುಹಿಸಿಕೊಟ್ಟರು.)

ಪ್ರಪಂಚದ ನಾನಾ ಭಾಗಗಳಿಂದ ನನಗೆ ಬಂದಿರುವ ಒಂದು ಪ್ರಶ್ನೆಗೆ ಉತ್ತರ ಕೊಡುವ ಪ್ರಯತ್ನವನ್ನು ಮಾಡಲು ನಾನು ಇಚ್ಛೆಯುಳ್ಳವನಾಗಿದೇನೆ. ಆ ಪ್ರಶ್ನೆ ಹೀಗಿದೆ:

'ನಿಮ್ಮ ದೇಶದಲ್ಲಿ ರಾಜಕೀಯ ಪಕ್ಷಗಳು ತಮ್ಮ ರಾಜಕೀಯ ಗುರಿಯನ್ನು ಸಾಧಿಸಲು ಹೆಚ್ಚುಹೆಚ್ಚಾಗಿ ಹಿಂಸಾಮಾರ್ಗವನ್ನು ಅವಲಂಬಿಸುತ್ತಿರುವರಲ್ಲಾ, ಇದಕ್ಕೆ ಕಾರಣವೇನು ? ಬ್ರಿಟಿಷರ ಆಡಳಿತವನ್ನು ಕೊನೆಗಾಣಿಸಲು ಮೂವತ್ತು ವರ್ಷಗಳಿಂದ ನಡೆದ ಅಹಿಂಸಾತ್ಮಕ ಹೋರಾಟ ಈ ರೀತಿ ಪರಿಣಾಮಗೊಂಡಿದೆಯೆ ? ನೀವು ಸಾರುತ್ತಿರುವ ಅಹಿಂಸಾಮಾರ್ಗ ಈಗಲೂ ಪ್ರಪಂಚಕ್ಕೆ ಅನ್ವಯವಾಗುವಂತಹುದೆ ?'

ಪತ್ರಕರ್ತರು ಬರೆದಿರುವ ಅಭಿಪ್ರಾಯಗಳನ್ನು ನನ್ನ ಭಾಷೆಯಲ್ಲಿ ಮೇಲ್ಕಂಡಂತೆ ನಾನು ಸಂಕ್ಷೇಪಗೊಳಿಸಿದೇನೆ. ಉತ್ತರವಾಗಿ ನನ್ನ ದಿವಾಳಿತನವನ್ನು ನಾನು ಒಪ್ಪಿಕೊಳ್ಳಲೇಬೇಕು; ಅಹಿಂಸೆಯದಲ್ಲ. ಈ ಮೂವತ್ತು ವರ್ಷಗಳಿಂದ ನಾವು ಅನುಸರಿಸಿದ ಅಹಿಂಸೆ—ಬಲಹೀನರದೆಂದು ನಾನು ಈ ಮೊದಲೇ ಹೇಳಿದೇನೆ. ಬದಲಾಗಿರುವ ಈಗಿನ ಪರಿಸ್ಥಿತಿಯಲ್ಲಿ ಈ ಬಗೆಯ ಅಹಿಂಸೆ ಕೆಲಸಕ್ಕೆ ಬರಲಾರದೆಂದೂ ಒಪ್ಪಿಕೊಳ್ಳಬೇಕಾಗುತ್ತದೆ. ಶಕ್ತಿವಂತರ ಅಹಿಂಸೆಯ ಅನುಭವ ಭಾರತಕ್ಕೆ ಇಲ್ಲ. ಶಕ್ತಿವಂತರ ಅಹಿಂಸೆಗಿಂತಲೂ ಬಲವತ್ತರವಾದ ಶಕ್ತಿ ಪ್ರಪಂಚದಲ್ಲಿ ಬೇರೊಂದಿಲ್ಲವೆಂದು ಮತ್ತೆ ಮತ್ತೆ ನಾನು ಹೇಳುವುದರಲ್ಲಿ ಏನು ಪ್ರಯೋಜನ ? ಈ ಸತ್ಯವನ್ನು ಸತತವಾಗಿ, ವ್ಯಾಪಕವಾಗಿ ಪ್ರಯೋಗಿಸಿ ಪ್ರದರ್ಶಿಸಬೇಕು. ಹೀಗೆ ಆಗುವಂತೆ ನಾನು ನನ್ನ ಶಕ್ತ್ಯನುಸಾರ ಪ್ರಯತ್ನ ಮಾಡುತ್ತಿದೇನೆ. ನನ್ನ ಸರ್ವಶಕ್ತಿ ವಿನಿಯೋಗವಾದರೂ ಅದು ಸಾಲದು—ಆದರೂ ಏನಾಯಿತು ? ನಾನು ಒಂದು ಭ್ರಾಂತಿಯ ಪ್ರಪಂಚದಲ್ಲಿ ಜೀವಿಸುತ್ತಿರಬಹುದು. ಈ ಬಿಸಿಲುಕುದುರೆಯನ್ನು ಹಿಡಿಯಲು ನಾನು ಇತರರನ್ನು ನನ್ನನ್ನು ಹಿಂಬಾಲಿಸುವಂತೆ ನಾನೇತಕ್ಕೆ ಕರೆಯಬೇಕು ? ಇವೆಲ್ಲವೂ ಸಂದರ್ಭೋಚಿತ ಪ್ರಶ್ನೆಗಳೆ. ನಾನು ಹೇಳುವ ಉತ್ತರವಿಷ್ಟೆ—ಬಹಳ ಸುಲಭವಾದ ಉತ್ತರ: ಯಾರೂ ನನ್ನನ್ನು ಹಿಂಬಾಲಿಸುವಂತೆ ಹೇಳುವುದಿಲ್ಲ. ಪ್ರತಿಯೊಬ್ಬರೂ ತಮ್ಮ ಅಂತರಾತ್ಮನ ದನಿ ನುಡಿದಂತೆ ವರ್ತಿಸಲಿ. ಅದು ಕೇಳಿಸದಿದ್ದ ಪಕ್ಷಕ್ಕೆ ತಮಗೆ ಶಕ್ಯವಿದ್ದಷ್ಟು ಪ್ರಯತ್ನಪಡಬೇಕು. ಕುರಿಗಳಂತೆ ಇತರರ ಜಾಡನ್ನು ಹಿಡಿದುಕೊಂಡು ಹೋಗಬಾರದು.

ಈಗ ಮತ್ತೊಂದು ಪ್ರಶ್ನೆಯನ್ನು ಕೇಳಿದಾರೆ—ಕೇಳುತ್ತಲೂ ಇದಾರೆ. ಭಾರತವು ತಪ್ಪುದಾರಿಯಲ್ಲಿ ಹೋಗುತ್ತಿರುವುದೆಂದು ನಿಮಗೆ ಖಚಿತವಾಗಿದ್ದರೆ,

ತಪ್ಪು ಮಾಡುವವರ ಸಹವಾಸವನ್ನು ನೀವೇಕೆ ಮಾಡುವಿರಿ? ನಿಮ್ಮ ದಾರಿಯನ್ನೇ ನೀವು ಏಕಾಂಗಿಯಾಗಿ ಹಿಡಿದು ಮುಂದೆ ಹೋಗಿ—ಇತರರು ನಿಮ್ಮನ್ನು ಹುಡುಕಿಕೊಂಡು ಬರುವಂತೆ ಏಕೆ ಮಾಡುವುದಿಲ್ಲ? ಇದು ನ್ಯಾಯವಾದ ಪ್ರಶ್ನೆಯೆಂದೇ ನನಗೆ ತೋರುತ್ತದೆ. ಇದಕ್ಕೆ ಪ್ರತಿಯಾಗಿ ನಾನು ವಾದಿಸಲಾರೆ. ನನ್ನ ವಿಶ್ವಾಸ ಎಂದಿಗಿಂತಲೂ ಈಗ ದೃಢವಾಗಿದೆಯೆಂದು ಹೇಳಬಲ್ಲೆ. ನಾನು ಅನುಸರಿಸುತ್ತಿರುವ ವಿಧಾನಗಳಲ್ಲಿ ತಪ್ಪು ಇರಬಹುದು. ಇಂತಹ ಸಂದರ್ಭಗಳಲ್ಲಿ ಪೂರ್ವಕಾಲದ ನಿದರ್ಶನಗಳು ಯಾವುವೂ ನಮಗೆ ಮಾರ್ಗವನ್ನು ಸೂಚಿಸುವಂತಿಲ್ಲ. ನಾವು ಕಣ್ಣು ಮುಚ್ಚಿಕೊಂಡು ನಿರ್ಜೀವ ಯಂತ್ರಗಳಂತೆ ವರ್ತಿಸುವುದು ಮಾತ್ರ ಆಗದು. ಆದುದರಿಂದ ನನಗೆ ಉಪದೇಶ ಕೊಡುವವರೆಲ್ಲರಿಗೂ ನನ್ನ ಪ್ರಾರ್ಥನೆ ಇಷ್ಟೆ: ನನ್ನ ವಿಷಯದಲ್ಲಿ ತಾಳ್ಮೆಯಿಂದಿರಿ. ಅಹಿಂಸಾಮಾರ್ಗವನ್ನು ಬಿಟ್ಟರೆ—ಅದು ಬಹು ಇಕ್ಕಟ್ಟೂ ನೇರವೂ ಆದ ಮಾರ್ಗ—ಈ ನೊಂದಿರುವ ಪ್ರಪಂಚಕ್ಕೆ ಪರಿಹಾರವನ್ನು ತರಬಲ್ಲ ಮಾರ್ಗ ಬೇರೊಂದಿಲ್ಲವೆಂಬ ನನ್ನ ನಂಬಿಕೆಯೊಂದಿಗೆ ಸಹಾನುಭೂತಿಯನ್ನೂ ತಾಳಿ. ನನ್ನಂತಹ ಲಕ್ಷಾಂತರ ಜನರು ತಮ್ಮ ಬಾಳುವೆಯಲ್ಲಿ ಈ ಸತ್ಯವನ್ನು ಸಿದ್ಧ ಮಾಡಿ ತೋರಲು ವಿಫಲರಾಗಬಹುದು. ಅದು ಅವರ ಸೋಲಾದೀತು—ಶಾಶ್ವತಧರ್ಮದ ಸೋಲು ಎಂದಿಗೂ ಅಲ್ಲ. (ಹರಿಜನ, ೨೯–೬–೧೯೪೭)

## ಶೂರರ ಅಹಿಂಸಾಮಾರ್ಗ

ಬ್ರಿಟಿಷರೊಂದಿಗೆ ನಡೆಸಿದ ಹೋರಾಟದಲ್ಲಿ ಗಾಂಧೀಜೀ ನಮಗೆ ಅಹಿಂಸಾ ಮಾರ್ಗವನ್ನು ತೋರಿಸಿಕೊಟ್ಟಂತೆ ಕೋಮುವಾರು ಘರ್ಷಣೆಯನ್ನು ತಡೆಗಟ್ಟುವುದರಲ್ಲಿ ಅಹಿಂಸಾಮಾರ್ಗವನ್ನು ಅವರು ತೋರಿಸಿಕೊಟ್ಟಿಲ್ಲವೆಂದು ಎ.ಐ.ಸಿ.ಸಿ. ಮುಂದೆ ಕಾಂಗ್ರೆಸ್ ಅಧ್ಯಕ್ಷರು ಮಾಡಿದ ತಮ್ಮ ಮುಕ್ತಾಯ ಭಾಷಣದಲ್ಲಿ ಹೇಳಿದರು. ಗಾಂಧೀಜಿಯವರು ಕತ್ತಲೆಯಲ್ಲಿ ತಡಕಾಡುತ್ತಿರುವುದಾಗಿ ಹೇಳಿರುವರು. ಅವರು ನೌಖಾಲಿಯಲ್ಲಿಯೂ ಬಿಹಾರದಲ್ಲಿಯೂ ಮಾಡಿದ ಸೇವೆಯಿಂದ ಇಡೀ ಭಾರತದಲ್ಲಿ ಹಿಂದೂ-ಮುಸಲ್ಮಾನರಲ್ಲಿ ಆಗಿರುವ ವೈಷಮ್ಯವನ್ನು ಪರಿಹಾರ ಮಾಡುತ್ತಿದ್ದರು—ಈ ವಿಧಾನವನ್ನು ಸಾಮೂಹಿಕವಾಗಿ ಹೇಗೆ

ಪ್ರಯೋಗ ಮಾಡಬಹುದೆಂದು ಅರ್ಥವಾಗುವುದಿಲ್ಲ. ಆದುದರಿಂದ ಗಾಂಧೀಜಿಯವರ ಬಳಿ ನಿಲ್ಲದೆ, ಅಧ್ಯಕ್ಷರು ಭಾರತ ಇಬ್ಭಾಗವಾಗುವುದಕ್ಕೆ ಒಪ್ಪಿಕೊಂಡಿರುವರು.

ತಮ್ಮ ನಿಲುವನ್ನು ಎಲ್ಲ ಜನರೂ ಅರ್ಥಮಾಡಿಕೊಳ್ಳುವಂತೆ ತಾವು ಮಾಡಲಾಗದೆ ಇರುವುದರಿಂದ, ತಾವು ಕತ್ತಲೆಯಲ್ಲಿ ತಡಕಾಡುತ್ತಿರುವುದಕ್ಕೆ ಇದೇ ಅರ್ಥವೆಂದು ಗಾಂಧೀಜೀ ಹೇಳಿದರು. ಬ್ರಿಟಿಷರೊಂದಿಗೆ ನಡೆಸಿದ ಹೋರಾಟದಲ್ಲಿ ಅಹಿಂಸೆ ಎಷ್ಟು ಪರಿಣಾಮಕಾರಿಯಾದ ಶಸ್ತ್ರವಾಯಿತೊ—ಕೋಮುವಾರು ಘರ್ಷಣೆಯ ಪರಿಹಾರಕ್ಕೂ ಅಷ್ಟೇ ಪರಿಣಾಮಕಾರಿಯಾದ ಶಸ್ತ್ರವಾಗುವುದು. ಆಗ ಜನರು ಗಾಂಧೀಜಿಯನ್ನು ಹಿಂಬಾಲಿಸಿದರು. ಏಕೆಂದರೆ ಬ್ರಿಟಿಷರ ಶಸ್ತ್ರಬಲವನ್ನು ಎದುರಿಸುವ ಮಾರ್ಗ ಬೇರೆ ಯಾವುದೂ ಇರಲಿಲ್ಲ. ಇದು ದುರ್ಬಲರ ಅಹಿಂಸೆ. ಕೋಮುವಾರು ಘರ್ಷಣೆಯ ಪರಿಹಾರಕ್ಕೆ ಈ ಬಗೆಯ ಅಹಿಂಸೆ ಕೆಲಸಕ್ಕೆ ಬರುವಂತಿಲ್ಲ. ಶೂರರು ಕೈಗೊಳ್ಳಬಹುದಾದ ಅಹಿಂಸೆಯ ಶುದ್ಧ ಸ್ವರೂಪ ಇದಕ್ಕೆ ಬೇಕಾದೀತು.

ಪ್ರಾರ್ಥನಾಸಭೆಯಲ್ಲಿ ಮಾತನಾಡುತ್ತ ಈ ಶೂರರ ಅಹಿಂಸೆಯನ್ನು ವ್ಯಾಪಕಗೊಳಿಸಲು ತಮ್ಮ ಅಶಕ್ತತೆಯನ್ನು ವ್ಯಕ್ತಮಾಡಿದರು. ಈ ಅನುಪಮ ಶಕ್ತಿಯನ್ನು ಬೆಳೆಸುವ ಮಾರ್ಗ ಅವರಿಗೆ ಗೊತ್ತಿಲ್ಲವೆಂದು ಇದರ ಅರ್ಥವಲ್ಲ. ನಮ್ಮ ಅಂತರ್ಯಾಮಿಯಾಗಿ ಪರಮಾತ್ಮನ ಸಾನ್ನಿಧ್ಯವಿದೆಯೆಂಬ ಪ್ರಜ್ಞೆ ಮಾಡಲು ಅಗತ್ಯವಾಗಿ ಉಂಟಾಗಬೇಕು. ಈ ಪ್ರಜ್ಞೆಯನ್ನು ಪಡೆಯುವುದಕ್ಕೆ ಗುಡಿಗಳಿಗೆ ಹೋಗಬೇಕಾಗಿಲ್ಲ. ನಿತ್ಯಪಾರಾಯಣ, ನಾಮಸ್ಮರಣೆ—ಇವುಗಳಲ್ಲಿ ಒಂದು ನಿರ್ದಿಷ್ಟವಾದ ಗುಣವುಂಟು. ಭಾರತದಲ್ಲಿ ವಾಸಮಾಡುವ ಕೋಟ್ಯಂತರ ಜನರು ಒಂದು ಕ್ಲ್ಲಪ್ತ ಸಮಯದಲ್ಲಿ ನಿತ್ಯವೂ ತಮ್ಮ ಇಷ್ಟದೇವತೆಯ, ಅಂದರೆ ರಾಮ, ಅಲ್ಲಾ, ಖುದಾ, ಅಹುರಾಮಜ್ದಾ, ಜೆಹೋವಾ—ಈ ಹೆಸರನ್ನು ಎತ್ತಿ ನಾಮೋಚ್ಚಾರಣೆ ಮಾಡುವರೆಂದು ಭಾವಿಸೋಣ. ಆದರೆ ಆ ವೇಳೆಗೆ ಕುಡುಕತನ, ವ್ಯಭಿಚಾರ, ಜೂಜಾಟ, ಕಾಳಸಂತೆ—ಇವನ್ನೂ ಮಾಡುತ್ತಿದ್ದರೆ—ಈ ಬಗೆಯ ನಾಮೋಚ್ಚಾರಣೆ ನಿರರ್ಥಕ; ಲಜ್ಜಾಸ್ಪದವಾದೀತು. ಕೆಟ್ಟಮನಸ್ಸುಳ್ಳವನು ದೇವರ ಸಾನ್ನಿಧ್ಯದ ಸರ್ವಪಾವನಕರ ಪ್ರಜ್ಞೆಯನ್ನು ಪಡೆಯಲಾರ. ಆದುದರಿಂದ ಶೂರರು ಅವಲಂಬಿಸಬಹುದಾದ

ಅಹಿಂಸಾಮಾರ್ಗಕ್ಕೆ ಇನ್ನೂ ಭಾರತ ಸಿದ್ಧವಾಗಿಲ್ಲವೆಂದು ಹೇಳಿದರೆ ಅದು ಸರಿಯಾದೀತು. ಇದಕ್ಕೆ ಸರಿಯಾದ ಕಾರ್ಯಯೋಜನೆಯನ್ನು ಹಾಕಿಲ್ಲವೆಂಬ ದೂರು ಅಷ್ಟು ಸರಿಯಾದುದಲ್ಲ. ಈ ಬಗೆಯ ಕಾರ್ಯಯೋಜನೆ—ದುರ್ಬಲರು ಅನುಸರಿಸಬಹುದಾದ ಅಹಿಂಸಾಮಾರ್ಗದಷ್ಟು ಆಕರ್ಷಕವಾಗಿರಲಾರದೆಂಬುದು ತೀರ ಸತ್ಯವಾದ ಮಾತು. ಪ್ರತಿನಿತ್ಯವೂ ತಮ್ಮ ಪ್ರಾರ್ಥನಾಸಭೆಗೆ ಬರುವವರು ತಮ್ಮ ಜೀವನದಲ್ಲಿ ಈ ಶೂರರ ಅಹಿಂಸಾಮಾರ್ಗಕ್ಕೆ ಮಾರ್ಗದರ್ಶನವನ್ನು ಕೊಡುವರೆಂದು ಗಾಂಧೀಜೀ ಆಶಿಸಿದರು. (ಹರಿಜನ, ೨೯-೬-೧೯೪೭)

## ಅಹಿಂಸೆ ಎಂದೂ ವ್ಯರ್ಥವಲ್ಲ

ಒಬ್ಬ ಐರೋಪ್ಯ ಮಿತ್ರರಿಗೂ ಗಾಂಧೀಜೀಗೂ ನಡೆದ ಪತ್ರವ್ಯವಹಾರವನ್ನು ಎಲ್ಲರ ಅವಗಾಹನೆಗಾಗಿ ಇಲ್ಲಿ ಕೊಡಲಾಗಿದೆ :

ರಾಯ್‌ವಾಕರ್ ಅವರು 'ಸುವರ್ಣಖಡ್ಗ'ವೆಂಬ ಶೀರ್ಷಿಕೆಯಲ್ಲಿ ಗಾಂಧೀಜಿಯ ಪ್ರಶಂಸನೀಯವಾದ ಕೆಲಸದ ರೋಮಾಂಚಕ ಕಥೆಯನ್ನು ಚೆನ್ನಾಗಿ ವಿಮರ್ಶೆ ಮಾಡಿದಮೇಲೆ ನೀವು ನಿಮ್ಮ ಆಯುಸ್ಯವೆಲ್ಲವನ್ನೂ ವಿನಿಯೋಗಿಸಿ ನಡೆಸಿದ ಅಹಿಂಸಾತ್ಮಕ ಚಳುವಳಿ ಯಶಸ್ವಿಯಾಗಿ ಕೊನೆಗಂಡುದಕ್ಕೆ ತೃಪ್ತಿಹೊಂದಿದೆ. ನಿಮ್ಮ ಶ್ರದ್ಧೆ ಅಪಾರವಾದುದು. ಭಾರತ ದೇಶದ ನಾಯಕರು ಮತ್ತು ಜನರು—ಇವರ ಮಟ್ಟಿಗಾದರೂ ಅಹಿಂಸಾತ್ಮಕ ಚಳುವಳಿ ಯಶಸ್ವಿಯಾಗಿದೆ. ಬ್ರಿಟಿಷರು ನಿಮ್ಮ ದೇಶವನ್ನು ಬಿಟ್ಟು ಯಾವ ವೈಮನಸ್ಯವೂ ಇಲ್ಲದೆ ಸ್ನೇಹಪರರಾಗಿ ದೂರ ಸರಿದರು. ಅಂದರೆ ಅಹಿಂಸಾತ್ಮಕ ಮಾರ್ಗವನ್ನು ಪರಕೀಯರೂ ಸಹ ಮೆಚ್ಚಿದಂತಾಯಿತು. ಹಿಂಸಾಮಾರ್ಗವೇ ಇದುವರೆಗೂ ರೂಢಿಯಲ್ಲಿದೆ—ಈ ಕೋಟೆಯನ್ನು ಭೇದಿಸಿದಂತಾಯಿತು. ಮಾನವರ ಭವಿಷ್ಯ ಉತ್ತಮಗೊಳ್ಳುವುದಕ್ಕೆ ಇದು ಸ್ಪಷ್ಟವಾದ ಚಿಹ್ನೆಯಾಗಿದೆ.

'ನೀವು ಇತ್ತೀಚೆಗೆ ವ್ಯಕ್ತಮಾಡಿದ ಆತ್ಮಪರೀಕ್ಷಣೆಯ ಹಾಗೂ ನಿಂದನೆಯ ಮಾತುಗಳು ಎಲ್ಲರನ್ನೂ ಕುಗ್ಗಿಸುವಂತಹುದಾಗಿವೆ. ಇದರ ವರದಿಯನ್ನು 'ಪೀಸ್ ನ್ಯೂಸ್' ಎಂಬ ಪತ್ರಿಕೆಯಲ್ಲಿ ಜಾರ್ಜ್ ಡೇವಿಸ್

ಅವರು ಮಾಡಿರುವರು. ಈಗ ನಿಮಗೆ ತೋರುತ್ತಿರುವ ನಿರಾಶೆಯಷ್ಟು ಕಗ್ಗತ್ತಲೆಯನ್ನು ನೀವು ಎಂದೂ ಅನುಭವಿಸಿಲ್ಲವೆಂಬುದನ್ನು ಓದಿ ನನಗೆ ದುಃಖ ವಾಯಿತು. ಮಾನವರಿಂದ ದೇವರು ಬಯಸುವುದು ಜಯವನ್ನಲ್ಲ—ಸತ್ಯವನ್ನು ಮತ್ತು ಪ್ರೇಮವನ್ನು. ಈ ಮಾತು ನಿಜವೇ ಆದರೂ ನೀವೂ ನಿಮ್ಮ ಕೆಲವೇ ಮಿತ್ರರೂ ಅನೇಕ ವರ್ಷಗಳಿಂದ ಎಸಗಿರುವ ಸ್ವಾರ್ಥತ್ಯಾಗಕ್ಕೂ ತೋರಿಸಿರುವ ಆತ್ಮಶಕ್ತಿಗೂ ಒಲಿಯದೆ ಜನರು ಹಿಂಸಾಮಾರ್ಗದಲ್ಲಿಯೇ ಸಿಕ್ಕಿಬಿದ್ದಿರುವುದು ಬಹಳ ಶೋಚನೀಯ ದೃಶ್ಯ.

'ನನಗಿಂತಲೂ ಈಗಿನ ಪರಿಸ್ಥಿತಿಯ ಒಳಮರ್ಮವನ್ನು ನೀವು ಅರಿಯ ಬಲ್ಲವರಾಗಿದೀರಿ. ಆದರೂ ನಿಮ್ಮ ವೀರ ಪ್ರಯತ್ನಗಳೆಲ್ಲವೂ ನಿರರ್ಥಕವೆಂದು ನಾನು ನಂಬಲಾರೆ. ನಿಮ್ಮ ಕೃತಿಗಳಿಂದಲೂ ಮಾತುಗಳಿಂದಲೂ ನಿಮ್ಮ ಸುತ್ತಮುತ್ತಲೂ ಬಿತ್ತಿರುವ ಬೀಜಗಳು ವ್ಯರ್ಥವಾಗಿ ಹೋಗುವುವೆಂದು ನಾನು ನಂಬಲಾರೆ.

'ಅದು ಹೇಗೇ ಇರಲಿ—ನನ್ನ ಪರವಾಗಿಯೂ, ನನ್ನಂತೆ ಭಾವಿಸುವ ಲಕ್ಷಗಟ್ಟಲೆ ಜನರ ಪರವಾಗಿಯೂ ಮಾನವ ಉದ್ಧಾರಕ್ಕೆ ಸರಿಯಾದ ದಾರಿ ಯೆಂದು ನಿಮಗೆ ತೋರಿದುದನ್ನು ಸಾಧಿಸಲು ನಿಮ್ಮ ಜೀವನವನ್ನೇ ಮುಡುಪಾ ಗಿಟ್ಟುದುದಕ್ಕಾಗಿ ನನ್ನ ಅಪಾರವಾದ ಕೃತಜ್ಞತೆಯನ್ನು ವ್ಯಕ್ತಪಡಿಸುವುದು ನನ್ನ ಕರ್ತವ್ಯ.'

ಗಾಂಧೀಜಿಯವರು ಹೀಗೆ ಉತ್ತರ ಬರೆದರು :

'ನೀವು ಪ್ರಸ್ತಾಪಿಸಿರುವ ವರದಿಯನ್ನು ನಾನು ನೋಡಿರುವುದಿಲ್ಲ. ಏನೇ ಇರಲಿ, ನಾನು ಹೇಳಿರುವುದು ಅಹಿಂಸಾಮಾರ್ಗ ತಪ್ಪಾಗುವುದೆಂಬ ಅಭಿಪ್ರಾಯವನ್ನು ಎಂದೂ ಸೂಚಿಸಿಲ್ಲ. ನಾನು ಅಹಿಂಸೆಯೆಂದು ಭಾವಿಸಿದ್ದು ನಿಜವಾದ ಅಹಿಂಸೆಯಾಗಿರಲಿಲ್ಲ; ಅದು ಬಲಹೀನರ ತಟಸ್ಥ ರೀತಿಯ ಪ್ರತಿ ಭಟನೆಯಾಗಿತ್ತು. ಇದನ್ನು ಎಂದಿಗೂ ಅಹಿಂಸಾಮಾರ್ಗವೆಂದು ಕರೆಯ ಲಾಗದು. ಈ ವಿಷಯ ನನಗೆ ತಡವಾಗಿ ತಿಳಿದುಬಂತು. ನಮ್ಮ ದೇಶದ ಜನರು ದುರ್ಬಲರಾಗಿರುವುದರಿಂದಲೇ ಇಷ್ಟು ಆಂತರಿಕ ಘರ್ಷಣೆಗಳೂ ಕಲಹ ಗಳೂ ತಲೆದೋರಿವೆ. ಈ ಪ್ರಪಂಚದಲ್ಲೆಲ್ಲ ಹಿಂಸೆ ಮೇಲೆದ್ದು ತಾಂಡವವಾಡು

ತ್ತಿದೆ. ಬಲಿಷ್ಠರಾದವರು ಯಾವ ವಿಧಾನವನ್ನನುಸರಿಸಿ ತಮ್ಮ ಅಹಿಂಸಾ ಪ್ರಯೋಗವನ್ನು ಮಾಡುವರೊ ಇದನ್ನು ನಾವು ಸರಿಯಾಗಿ ಕಂಡುಕೊಂಡಿಲ್ಲ. ಈ ದೃಷ್ಟಿಯಿಂದ ಈಗಿನ ಹಿಂಸಾಮಾರ್ಗದ ಪ್ರಕೋಪಗಳನ್ನು ನಾವು ಗಮನಿಸಿ ನೋಡಬೇಕು. ಅಹಿಂಸೆಯಲ್ಲಿ ಅಡಕವಾಗಿರುವ ಬಲದ ಒಂದು ಸ್ವಲ್ಪ ಭಾಗ ವಾದರೂ ವ್ಯರ್ಥವಾಗುವುದಿಲ್ಲ. ನಾನು ವೈಯಕ್ತಿಕವಾಗಿ ಈ ಶೂರರ ಅಹಿಂಸೆ ಹೇಗಿರುವುದನ್ನು ತೋರಿಸಲು ಯಾವ ಬಗೆಯ ಕಾರ್ಯವನ್ನೂ ಮಾಡಿರುವು ದಿಲ್ಲ. ನಾನು ಮಾಡಿರುವೆನೆಂಬ ಭ್ರಾಂತಿಯೂ ನನಗಿಲ್ಲ. ನಿಮ್ಮಂತಹವರು ಈ ಭ್ರಾಂತಿಯನ್ನೂ ಇಟ್ಟುಕೊಳ್ಳಬಾರದು. ಆ ದಿಕ್ಕಿನ ಕಡೆ ಹೆಜ್ಜೆ ಇಡುತ್ತ ನಾನು ಎಡೆ ಇಲ್ಲದೆ ಮುಂದೆ ಸಾಗುತ್ತಿದೇನೆಂದು ಮಾತ್ರ ಹೇಳಬಲ್ಲೆ. ನನ್ನ ಆತ್ಮಪರೀಕ್ಷಣದ ಈ ಮಾತುಗಳು ನಿಮ್ಮನ್ನೂ ಇತರ ಮಿತ್ರರನ್ನೂ ಅಹಿಂಸಾ ಮಾರ್ಗದಲ್ಲಿ ಮುಂದುವರಿಯುವಂತೆ ಪ್ರೇರಿಸಬೇಕು.'

(ಹರಿಜನ, ೧೧-೧-೧೯೪೮)

## ಅಹಿಂಸೆ ಹೇಗೆ ಕಾರ್ಯ ಮಾಡುವುದು ?

ಪ್ರಾರ್ಥನಾಸಭೆಯಲ್ಲಿ ಯಾರಾದರೂ ಕುರಾನಿನ ಭಾಗವನ್ನು ಪಠಿಸಲು ಆಕ್ಷೇಪಿಸುವರೇ ಎಂದು ಎಂದಿನಂತೆ ಪ್ರಶ್ನಿಸಿದಾಗ ಒಬ್ಬರು ಎದ್ದು ತಮ್ಮ ಆಕ್ಷೇಪಣೆಯನ್ನು ಸೂಚಿಸಿದರು. ಈ ರೀತಿ ಆಕ್ಷೇಪಣೆ ಇದ್ದ ಪಕ್ಷಕ್ಕೆ ಬಹಿರಂಗ ಪ್ರಾರ್ಥನಾಸಭೆಯಾಗಲಿ, ಅನಂತರ ಪ್ರಚಲಿತ ವಿಷಯಗಳನ್ನು ಕುರಿತು ತಮ್ಮ ಭಾಷಣವನ್ನಾಗಲಿ ಇಟ್ಟುಕೊಳ್ಳಲು ಸಾಧ್ಯವಾಗಲಾರದೆಂದು ಗಾಂಧೀಜೀ ಸ್ಪಷ್ಟಪಡಿಸಿದ್ದರು. ಆದುದರಿಂದ ಅಂದು ಪ್ರಾರ್ಥನೆಯಾಗಲಿ, ಪ್ರಾರ್ಥನಾ ನಂತರದ ಭಾಷಣವಾಗಲಿ ನಡೆಯಲಾರದೆಂದು ಹೇಳಿಕಳುಹಿಸಿದರು. ಆದರೆ ಗಾಂಧೀಜಿಯವರ ದರ್ಶನ ಪಡೆಯದೆ ಸೇರಿದ್ದ ಜನರು ಹೊರಟುಹೋಗಲು ಒಪ್ಪಲಿಲ್ಲ. ಆದುದರಿಂದ ವೇದಿಕೆಯನ್ನು ಹತ್ತಿ ಕೆಲವು ಮಾತುಗಳನ್ನು ಆಡಿ ದರು. ಪ್ರಾರ್ಥನೆಯನ್ನು ನಿಲ್ಲಿಸಲು ಏನು ಕಾರಣವಿತ್ತೆಂದು ತಿಳಿಸಿದರು. ಅಹಿಂಸೆ ಹೇಗೆ ಕೆಲಸಮಾಡುವುದೆಂದು ಕುರಿತು ಎರಡು ಮಾತು ಹೇಳಿದರು. ಇದು ಖಾಸಗಿ ಮನುಷ್ಯರ ಮನೆಗೆ ಸೇರಿದ ಆವರಣ. ಇಲ್ಲಿ ಹೊರಗಿನವರು ಪ್ರಾರ್ಥನೆಯ ರೂಪಕ್ಕೆ ಆಕ್ಷೇಪವನ್ನೆತ್ತುವುದು ಅನುಚಿತವೆಂದು ಗಾಂಧೀಜೀ

ಹೇಳಿದರು. ಆಕ್ಷೇಪಿಸುವವರು ಒಬ್ಬರು ಮಾತ್ರವಿದ್ದರೂ ಬಹುಸಂಖ್ಯಾತರು ಆ ಆಕ್ಷೇಪಣೆಯನ್ನು ತೊಡೆದುಹಾಕುವ ಅವಕಾಶವಿದ್ದ ಈ ಸಂದರ್ಭದಲ್ಲಿ ಆ ಒಬ್ಬರನ್ನು ರಕ್ಷಣೆ ಮಾಡುವಂತೆ ತಮ್ಮ ಅಹಿಂಸಾಧರ್ಮ ಸೂಚಿಸುತ್ತದೆ. ಸಭೆಯಲ್ಲಿ ಎಲ್ಲರೂ ಆಕ್ಷೇಪಣೆ ಮಾಡಿದ್ದರೆ ಅದು ಬೇರೆ ಮಾತಾಗಿತ್ತು. ಆಗ ಜನರು ತಮಗೆ ಏನೇ ತೊಂದರೆ ಮಾಡಿದ್ದರೂ ಪ್ರಾರ್ಥನೆಯನ್ನು ನಡೆಸುವುದು ತಮ್ಮ ಕರ್ತವ್ಯವಾಗುತ್ತಿತ್ತು. ಒಬ್ಬರು ಆಕ್ಷೇಪಿಸಿದರೆಂಬ ಕಾರಣಕ್ಕಾಗಿ ಅನೇಕ ಜನರಿಗೆ ನಿರಾಶೆಯನ್ನುಂಟುಮಾಡುವುದು ಸರಿಯೆ ಎಂಬ ಪ್ರಶ್ನೆಯೂ ಉದ್ಭವಿಸುತ್ತದೆ. ಇದರ ಪರಿಹಾರ ಬಹಳ ಸುಲಭ. ಈ ಬಹುಸಂಖ್ಯಾತರು ಸಂಯಮದಿಂದ ವರ್ತಿಸಿ, ಆ ಒಬ್ಬ ಆಕ್ಷೇಪಕನ ಮೇಲೆ ಯಾವ ಕೋಪವಾಗಲಿ ವೈಷಮ್ಯವಾಗಲಿ ತಾಳದೆ ಇದ್ದ ಪಕ್ಷಕ್ಕೆ ಪ್ರಾರ್ಥನೆಯನ್ನು ನಡೆಸುವುದು ತಮ್ಮ ಕರ್ತವ್ಯವಾದೀತು. ಇಡೀ ಸಭೆ ತಮ್ಮ ಉದ್ದೇಶ್ಯದಲ್ಲಿಯೂ, ಕಾರ್ಯದಲ್ಲಿಯೂ ಅಹಿಂಸಾಮಾರ್ಗವನ್ನು ಅವಲಂಬಿಸಿದರೆ ಆ ಒಬ್ಬ ಆಕ್ಷೇಪಕನು ಅಡ್ಡಿಮಾಡುವ ಸಂಭವವಿಲ್ಲ. ತಾನೇ ಸುಮ್ಮನಾಗಿಬಿಡುವನು. ಅಹಿಂಸೆ ಕೆಲಸಮಾಡುವ ಬಗೆ ಹೀಗೆ. ಸತ್ಯ ಮತ್ತು ಅಹಿಂಸೆಗಳ ಸಾಧನೆ ಎಲ್ಲಿಯೋ ಕೆಲವು ಪರಿಣತರ ಸಾಧನಮಾರ್ಗವಲ್ಲ. ಎಲ್ಲ ಸಾಮಾನ್ಯ ನಿಯಮಗಳು—ಇವುಗಳಿಗೆ ದೇವರ ಆದೇಶಗಳೆಂದೂ ಹೇಳುವುದುಂಟು—ಬಹು ಸರಳವಾದುವು. ಅರ್ಥಮಾಡಿ ಕೊಳ್ಳುವುದಕ್ಕೂ—ದೃಢಮನಸ್ಸಿದ್ದರೆ ಆಚರಿಸುವುದಕ್ಕೂ ಸುಲಭವೆ. ಮಾನವರ ತಾಮಸಗುಣದಿಂದ ಈ ನಿಯಮಗಳು ಕಠಿಣವೆಂದು ತೋರುವುವು. ಪ್ರಕೃತಿ ಯಲ್ಲಿ ಯಾವುದೂ ನಿಂತಲ್ಲಿ ನಿಂತಿರುವುದಿಲ್ಲ. ದೇವರೊಬ್ಬನೇ ಸ್ಥಿರ. ಅವನು ಹಿಂದೆ ಇದ್ದನು, ಈಗಿದ್ದಾನೆ, ಮುಂದೆ ಇರುವನು ; ನಿನ್ನೆ-ಇಂದು-ನಾಳೆ— ತ್ರಿಕಾಲಗಳಲ್ಲಿ ಯಾವ ಬದಲಾವಣೆ ಇಲ್ಲದೆ ಇರುವನು ; ಆದರೂ ಚಲಿಸುತ್ತಲೇ ಇರುವನು. ದೇವರ ಗುಣಗಳನ್ನು ಕುರಿತು ನಾವು ವಿಚಾರಮಾಡಬೇಕಾಗಿಲ್ಲ. ನಾವು ಸದಾ ಮುಂದೆ ಸಾಗುತ್ತಿದೇವೆಯೇ ಎಂಬುದನ್ನು ಮಾತ್ರ ವಿಚಾರ ಮಾಡಬೇಕು. ಮಾನವಜಾತಿ ಬದುಕಿರಬೇಕಾದರೆ ಅದು ಹೆಚ್ಚುಹೆಚ್ಚಾಗಿ ಸತ್ಯ ಮತ್ತು ಅಹಿಂಸೆಯ ಮಾರ್ಗವನ್ನು ಹಿಡಿಯಬೇಕು. ಈ ಎರಡನ್ನೂ ಕಾಪಾಡಲು ತಾವೂ ತಮ್ಮ ಮುಂದಿದ್ದ ಶ್ರೋತೃಗಳೂ ಶ್ರಮಿಸಬೇಕು, ಬದುಕ ಬೇಕು.

(ಹರಿಜನ, ೯–೧೧–೧೯೪೭)

## ಅಹಿಂಸೆಯ ದೃಢವ್ರತ

ದಾಳಿಕಾರರಿಂದ ತಪ್ಪಿಸಿಕೊಳ್ಳಲು ತಮ್ಮ ರಕ್ಷಣೆಯನ್ನು ಯಾರು ಮಾಡಿಕೊಳ್ಳುತ್ತಿದಾರೊ ಅಂತಹವರಿಗೆ ಶಸ್ತ್ರಗಳ ಸಹಾಯವನ್ನು ಒದಗಿಸುವುದು ಅಹಿಂಸಾವಿಧಾನವಾಗಲಾರದು. ಇವರಿಗೆ ಯಾವ ಲೋಪವೂ ಇಲ್ಲದೆ ಕೇಂದ್ರ ಸರಕಾರದಿಂದ ಶಾಂತಿಯುತ ಸಹಾಯ ದೊರೆಯಬಹುದು. ಆದರೆ ದಾಳಿಗೆ ಗುರಿಯಾದವರು—ದಾಳಿಕಾರರ ಸಂಖ್ಯೆ ಎಷ್ಟೇ ಇರಲಿ ಅದಕ್ಕೆ ಲಕ್ಷ್ಯಮಾಡದೆ —ಯಾವ ಸಹಾಯವನ್ನೂ ಇದಿರುನೋಡದೆ ಶಾಂತ ರೀತಿಯಲ್ಲಿ ಪ್ರತಿಭಟಿಸುವರು. ಇಂತಹವರು ತ್ರಿಕರಣಗಳಲ್ಲಿ ತಮ್ಮ ಎದುರಾಳಿಗಳ ಮೇಲೆ ಯಾವ ದ್ವೇಷವೂ ಇಲ್ಲದೆ ತಮ್ಮ ಪ್ರಾಣವನ್ನು ಬಲಿದಾನ ಮಾಡಿದ್ದೇ ಆದರೆ ಪ್ರಪಂಚದ ಇತಿಹಾಸದಲ್ಲಿಯೇ ಇದೊಂದು ಅನುಪಮ ಘಟನೆಯಾಗುವುದು. ಹೀಗಾದರೆ ಕಾಶ್ಮೀರವೂ ಭಾರತಕ್ಕೆ ಮಾತ್ರವಲ್ಲ ಇಡೀ ಜಗತ್ತಿಗೇ ಯಾತ್ರಾಸ್ಥಳವಾಗುವುದು; ಅದರ ಸೌರಭ ವಿಶ್ವದಲ್ಲೆಲ್ಲ ವ್ಯಾಪಿಸುವುದು. ಇದು ಅಹಿಂಸೆಯ ವಿಧಾನ. ಆದರೆ ಇದನ್ನು ವರ್ಣಿಸಿದಮೇಲೆ ತಮ್ಮ ದುರ್ಬಲತೆಯನ್ನು ತಾವು ಒಪ್ಪಿಕೊಳ್ಳಬೇಕೆಂದರು ಗಾಂಧೀಜೀ. ಗೀತೆಯ ಎರಡನೆಯ ಅಧ್ಯಾಯದಲ್ಲಿ ವರ್ಣಿಸಿರುವ ಸ್ಥಿತಪ್ರಜ್ಞನ ಲಕ್ಷಣಗಳಲ್ಲಿ ಸೂಚಿಸಿರುವ ಪೂರ್ಣ ಆತ್ಮಸಂಯಮದಿಂದ ಒದಗುವ ಶಕ್ತಿ ತಮ್ಮಲ್ಲಿ ಇಲ್ಲವೆಂದರು; ತಮ್ಮಲ್ಲಿ ಸಾಕಷ್ಟು ತಪಸ್ಸಿದ್ಧಿ ಇಲ್ಲವೆಂದರು; ತಾವು ದೇವರಲ್ಲಿ ಇದಕ್ಕಾಗಿ ಮೊರೆ ಇಡಬಹುದು; ಸಭಿಕರು ಅದಕ್ಕಾಗಿ ಪ್ರಾರ್ಥಿಸಲಿ; ತಾವು ಈ ಸಿದ್ಧಿಯನ್ನು ಪಡೆಯುವಂತೆ ದೇವರ ಅನುಗ್ರಹವಾಗಬೇಕು (ಹರಿಜನ, ೧೬–೧೧–೧೯೪೭)

## ಯಾವ ಮೇರೆ ಮಿತಿಗಳೂ ಇಲ್ಲ

ಒಬ್ಬ ಮಿತ್ರರು ಬರೆದಿರುವ ಅಭಿಪ್ರಾಯವನ್ನು ಈ ರೀತಿ ಸಂಕ್ಷೇಪಗೊಳಿಸಬಹುದು:

'ವೈಯಕ್ತಿಕ ಅಹಿಂಸೆ ನನಗೆ ಅರ್ಥವಾಗುತ್ತದೆ. ಸಾಮೂಹಿಕವಾದ ಮಿತ್ರರ ಮಧ್ಯೆ ಅಹಿಂಸಾವರ್ತನೆಯನ್ನೂ ಅರ್ಥಮಾಡಿಕೊಳ್ಳಬಹುದು. ಆದರೆ

ಬದ್ಧವೈರಿಗಳ ವಿಷಯದಲ್ಲಿ ಅಹಿಂಸೆಯ ಮಾತನ್ನಾಡುತ್ತೀರಿ. ಇದು ಬಿಸಿಲು ಕುದುರೆಯ ಸವಾರಿ. ನಿಮ್ಮ ಹಟಮಾರಿತನವನ್ನು ಬಿಟ್ಟರೆ ದಯೆ ತೋರಿದಂತೆ ಆಗುವುದು; ಬಿಡದಿದ್ದರೆ ನಿಮಗೆ ಈಗಿರುವ ಗೌರವವನ್ನು ಕಳೆದುಕೊಳ್ಳುವಿರಿ. ಅಷ್ಟೇ ಅಲ್ಲ, ಅದಕ್ಕಿಂತಲೂ ಕೇಡೇನೆಂದರೆ ನೀವು ಮಹಾತ್ಮರೆಂದು ಅನಿಸಿಕೊಂಡಿರುವುದರಿಂದ ನಿಮ್ಮ ಮಾತಿನಲ್ಲಿ ಕುರುಡುನಂಬಿಕೆ ಇರುವವರನ್ನು ತಪ್ಪು ದಾರಿಗೆ ಕೊಂಡೊಯ್ಯುತ್ತಿದೀರಿ. ಇದರಿಂದ ಅವರಿಗೂ ಹಾನಿ, ಸಮಾಜಕ್ಕೂ ಹಾನಿ.'

ವ್ಯಕ್ತಿ ಮಾತ್ರ ಅನುಸರಿಸಬಹುದಾದಂಥ ಅಹಿಂಸೆ ಸಾಮಾಜಿಕ ದೃಷ್ಟಿಯಿಂದ ಅಷ್ಟು ಫಲಕಾರಿಯಲ್ಲ. ಮಾನವನು ಸಮಾಜ ಜೀವಿ. ಅವನಲ್ಲಿರುವ ವಿಶೇಷ ಗುಣಗಳಿಂದ ಸಮಾಜಕ್ಕೆ ಪ್ರಯೋಜನವಾಗಬೇಕಾದರೆ ಯಾರಾದರೂ ಆ ಗುಣಗಳನ್ನು ಆವಶ್ಯಕ ಜಾಗ್ರತೆಯಿಂದ ಪಡೆಯುವಂತಾಗಬೇಕು. ಮಿತ್ರರ ಮಧ್ಯೆ ಮಾತ್ರ ಆಚರಿಸಬಹುದಾದ ಅಹಿಂಸಾವರ್ತನೆ ಒಂದು ಕಿಡಿಯಂತೆ ಕ್ಷಣಿಕ. ಅದು ಅಹಿಂಸಾವಿಧಾನವೆಂದೇ ಎನಿಸಿಕೊಳ್ಳದು. 'ಅಹಿಂಸೆಯ ಎದುರಿನಲ್ಲಿ ವೈರ ಮಾಯವಾಗುತ್ತದೆ' ಎಂಬುದು ದೊಡ್ಡ ಸೂತ್ರ. ವೈರ ಎಷ್ಟು ಪ್ರಬಲವೊ ಅಷ್ಟೇ ಪ್ರಮಾಣದಲ್ಲಿ ಅಹಿಂಸೆಯೂ ಆಚರಣೆಯೂ ಇರಬೇಕೆಂಬುದು ಇದರ ಅರ್ಥ. ಇದರ ಅಭ್ಯಾಸಕ್ಕೆ ದೀರ್ಘಕಾಲ ಬೇಕಾಗಬಹುದು; ಅನೇಕ ಜನ್ಮಗಳೇ ಬೇಕಾಗಬಹುದು. ಆದುದರಿಂದ ಇದು ನಿರರ್ಥಕವೆಂದು ಹೇಳಲಾಗದು. ಈ ದಾರಿಯಲ್ಲಿ ಮುಂದುವರಿದಂತೆಲ್ಲ ಯಾತ್ರಿಕನು ಅಮೂಲ್ಯವಾದ ಅನುಭವಗಳನ್ನು ಪಡೆಯುವನು. ಶಿಖರದ ಮೇಲೆ ವಿರಾಜಿಸುವ ಸುಂದರ ದೃಶ್ಯವನ್ನು ಕ್ರಮೇಣ ಕಾಣುವಂತಾಗುವುದು. ಇದು ಅವನಿಗೆ ಉತ್ಸಾಹವನ್ನು ಕೊಡುವುದು. ದಾರಿಯುದ್ದಕ್ಕೂ ಮುಳ್ಳುಗಳೇ ಇಲ್ಲದೆ ಪುಷ್ಪರಾಶಿ ಇದೆಯೆಂದು ಯಾರೂ ಭಾವಿಸಬಾರದು. ದೇವರನ್ನು ಸೇರಬೇಕಾದರೆ ಕೆಚ್ಚೆದೆ, ಧೈರ್ಯ ಬೇಕು. ಅದು ಹೇಡಿಗಳಿಗೆ ಸಾಧ್ಯವಿಲ್ಲವೆಂದು ಒಬ್ಬ ಕವಿ ಹಾಡಿದಾನೆ. ಇಂದು ನಮ್ಮ ಸುತ್ತಮುತ್ತಲೂ ವಿಷತುಂಬಿದ ವಾತಾವರಣವಿದೆ; ನಮ್ಮ ಪೂರ್ವಕಾಲದವರ ಜ್ಞಾನವನ್ನು ನಾವು ಅರಿಯಲಾಗದವರಾಗಿದೇವೆ; ಅಹಿಂಸೆಯ ದಾರಿಯಲ್ಲಿ ಸಾಗುತ್ತ ನಮಗುಂಟಾಗುತ್ತಿರುವ ಅನುಭವಗಳನ್ನು ಮೆಚ್ಚಲಾರದವರಾಗಿದೇವೆ. ಒಳ್ಳೆಯದನ್ನು ಮಾಡಿ

ಕೆಡಕನ್ನು ನಿಗ್ರಹಿಸಬಹುದೆಂಬ ಸದ್ಬುದ್ಧಿಯನ್ನು ನಾವು ನಮ್ಮ ನಿತ್ಯದ ಆಚರಣೆ ಗಳಿಂದ ಪಡೆಯಬಹುದು. ಪ್ರಪಂಚದ ವ್ಯಾಪಾರವೆಲ್ಲವೂ ಒಟ್ಟಿನಲ್ಲಿ ವಿಧ್ವಂಸಕ ವಾಗಿದ್ದ ಪಕ್ಷಕ್ಕೆ ಎಷ್ಟೋ ಹಿಂದೆಯೇ ಪ್ರಪಂಚ ನಾಶವಾಗಿರಬೇಕಲ್ಲವೆ? ಇದನ್ನು ನಾವು ಅರಿಯುತ್ತಿಲ್ಲ. ಈ ಭೂಮಂಡಲವನ್ನು ಧಾರಣೆಮಾಡುತ್ತಿರು ವುದು—ಪ್ರೇಮ ಅಥವಾ ಅಹಿಂಸೆ.

ಒಂದು ಮಾತನ್ನು ಒಪ್ಪಿಕೊಳ್ಳಬೇಕು. ಈ ಸದ್ಗುಣವನ್ನು ಪ್ರಯತ್ನ ಪೂರ್ವಕವಾಗಿ ಸಾಧಿಸಬೇಕು. ಏಕೆಂದರೆ ಇದು ಅಭ್ಯುದಯದ ಮಾರ್ಗ. ಇಳಿಯುವುದು ಸುಲಭ, ಹತ್ತುವುದು ಕಷ್ಟ. ನಮ್ಮಲ್ಲಿ ಅನೇಕರು ನಿಷ್ಠಾವಂತ ರಲ್ಲ. ಆದುದರಿಂದ ಏನಾದರೂ ಹೆಚ್ಚು ಕಡಮೆಯಾದರೆ ವ್ಯಾಜ್ಯಮಾಡುವುದು, ಬೈಯುವುದು ನಮಗೆ ರೂಢಿಯಾಗಿಬಿಟ್ಟಿದೆ. ಸ್ವಲ್ಪ ನೆವ ಸಿಕ್ಕಿದರೆ ಹೀಗೆ ವರ್ತಿಸುತ್ತೇವೆ.

ಅಹಿಂಸೆಯ ಈ ಅತ್ಯಮೋಘ ಗುಣ ಕಠಿಣ. ಸಂಯಮಿಗೆ ಸುಲಭಸಾಧ್ಯ.

(ಹರಿಜನ, ೧೪-೦೨-೧೯೪೭)



## ಅಧ್ಯಾಯ – ೯

# ಶಾಂತಿಸೇನೆ



### ಆತ್ಮಪರೀಕ್ಷೆಗೆ ಕರೆ

(ಮಾರ್ಚ್ ೨೫ನೇ ದಿನಾಂಕ ಓಡಿಸ್ಸಾ ಪ್ರಾಂತ್ಯದ ಡೆಲಾಂಗ್ ಎಂಬ ಗ್ರಾಮದಲ್ಲಿ ಸೇರಿದ ಗಾಂಧೀ ಸೇವಾ ಸಂಘದ ಸಮ್ಮೇಳನದಲ್ಲಿ ಗಾಂಧೀಜೀ ಮಾಡಿದ ಆರಂಭ ಭಾಷಣದ ಸಾರಾಂಶ.)

ನನಗಿಂತಲೂ ಹೆಚ್ಚು ಅಸ್ವಸ್ಥರಾಗಿರುವ ನಮ್ಮ ಅಧ್ಯಕ್ಷ ಕಿಶೋರಲಾಲ ಭಾಯಿ ದೀರ್ಘವೂ ವಿಚಾರಪೂರಿತವೂ ಆದ ಭಾಷಣವನ್ನು ಸಿದ್ಧಮಾಡಿರುವರು. ನಮ್ಮಲ್ಲಿ ಪರಸ್ಪರವಿರುವ ವೈಷಮ್ಯವನ್ನೂ ಮನಸ್ತಾಪಗಳನ್ನೂ ಅಸಹನೆಯನ್ನೂ ಅವರು ವಿಶದವಾಗಿ ಪ್ರಸ್ತಾಪಿಸಿರುವರು. ನಮ್ಮಲ್ಲಿ ಶ್ರದ್ಧೆ ಇರುವ ಪಕ್ಷಕ್ಕೆ ಅದು ನಮ್ಮ ನಿತ್ಯವ್ಯವಹಾರಗಳಲ್ಲಿ ಕಾಣದಿದ್ದರೆ ಅದರಿಂದ ಪ್ರಯೋಜನವೇನೆಂದು ಪ್ರಶ್ನಿಸಿರುವರು. ನಾವು ಪ್ರತಿನಿತ್ಯವೂ ನಮ್ಮ ಗುರಿಯ ಕಡೆ ಹೆಜ್ಜೆ ಇಡುತ್ತ ಮುಂದೆ ಸಾಗುತ್ತಿದೇವೆಯೇ? ಹೋದ ವರ್ಷ ಸಭೆ ಸೇರಿದ ಕಾಲಕ್ಕಿಂತಲೂ ಈ ವರ್ಷ ಹೆಚ್ಚು ಅಹಿಂಸಾತ್ಮಕರಾಗಿದೇವೆಯೇ? ನಮ್ಮ ಕೋಪತಾಪಗಳಿಗೆ ಅವಕಾಶ ಕೊಟ್ಟ ಸಂದರ್ಭಗಳು ಕಡಮೆ ಆಗಿವೆಯೆ? ಈ ಬಗೆಯ ಪ್ರಶ್ನೆಗಳನ್ನು ನಾವು ಮೇಲಿಂದಮೇಲೆ ಹಾಕಿಕೊಳ್ಳುತ್ತಿರಬೇಕು. ಏಕೆಂದರೆ ಸತ್ಯ ಮತ್ತು ಅಹಿಂಸೆಗಳ ದಾರಿ ಕತ್ತಿಯ ಅಲಗಿನಂತೆ ಬಹು ಹರಿತ. ನಮ್ಮ ನಿತ್ಯ ಆಹಾರದ ಸೇವನೆಗಿಂತಲೂ ಇದರ ಅಭ್ಯಾಸ ಮಿಗಿಲು. ಸರಿಯಾಗಿ ತೆಗೆದುಕೊಂಡ ಆಹಾರ ದೇಹವನ್ನು ಪೋಷಿಸುತ್ತದೆ. ಸರಿಯಾಗಿ ಅಭ್ಯಾಸ ಮಾಡಿದರೆ ಅಹಿಂಸೆ ಆತ್ಮವನ್ನು ಪೋಷಿಸುತ್ತದೆ. ದೇಹಕ್ಕೆ ಬೇಕಾದ ಆಹಾರವನ್ನು ಒಂದು ಮಿತಿಯಲ್ಲಿ ಕ್ಲೃಪ್ತಕಾಲಗಳಲ್ಲಿ ಸೇವನೆ ಮಾಡಬೇಕು. ಆದರೆ ಆತ್ಮಕ್ಕೆ ಆಹಾರವಾದ ಅಹಿಂಸೆಯನ್ನು ನಿರಂತರವೂ ಸೇವನೆಮಾಡುತ್ತಿರಬೇಕು. ಇದರಲ್ಲಿ ಅತಿ ಆಯಿತೆಂಬುದಿಲ್ಲ. ಪ್ರತಿ ಕ್ಷಣದಲ್ಲಿ ನನ್ನ ಗುರಿಯ ಕಡೆ ಸಾಗು

ತ್ತಿದೇನೆಯೇ ಎಂಬ ಪ್ರಜ್ಞೆ ಇರಬೇಕು; ನನ್ನ ಆತ್ಮಪರೀಕ್ಷಣವನ್ನು ಮಾಡಿ ಕೊಳ್ಳುತ್ತಿರಬೇಕು.

ನಮ್ಮ ನಿತ್ಯಜೀವನದ ಪರಸ್ಪರ ವ್ಯವಹಾರಗಳಲ್ಲಿ ಸತ್ಯಸಂಧತೆ, ನಮ್ರತೆ, ಸಹನೆ, ಪ್ರೇಮಪೂರ್ಣ ವರ್ತನೆ ಇವನ್ನು ಬೆಳೆಸಿಕೊಳ್ಳುವುದೇ ಅಹಿಂಸಾಮಾರ್ಗದ ಮೊದಲನೆಯ ಹೆಜ್ಜೆ. ಇಂಗ್ಲೀಷ್ ಭಾಷೆಯಲ್ಲಿ 'ಪ್ರಾಮಾಣಿಕತೆ ಉತ್ತಮ ನೀತಿಧೋರಣೆ' ಎಂದು ಒಂದು ನಾಣ್ಣುಡಿ ಇದೆ. ಆದರೆ ಅಹಿಂಸೆಯ ಅಭ್ಯಾಸ ದಲ್ಲಿ ಇದು ಕೇವಲ ಒಂದು ಉಪಾಯ ಮಾತ್ರವಲ್ಲ; ಈ ಉಪಾಯಗಳು ಅಥವಾ ಧೋರಣೆಗಳು ಆಗಿಂದಾಗ್ಗೆ ಬದಲಾವಣೆ ಆಗಬಹುದು—ಆಗುತ್ತವೆ. ಆದರೆ ಅಹಿಂಸೆ ಬದಲಾವಣೆ ಆಗದಂತಹ ಒಂದು ಧರ್ಮ. ನಮ್ಮ ಸುತ್ತ ಮುತ್ತಲೂ ಹಿಂಸೆ ಇದ್ದರೂ ಅದನ್ನು ನಾವು ಆಚರಿಸಲೇಬೇಕು. ಅಹಿಂಸಾ ವಾದಿಯೊಂದಿಗೆ ಅಹಿಂಸಾವರ್ತನೆ ಮಾಡುವುದರಲ್ಲಿ ಏನು ವಿಶೇಷ ಗುಣವಿದೆ? ಅಂತಹ ಸಂದರ್ಭದಲ್ಲಿ ಇದಕ್ಕೆ ಅಹಿಂಸೆಯ ಆಚರಣೆಯೆಂದು ಗುರುತಿಸುವುದೇ ಕಷ್ಟ. ಆದರೆ ಅದು ಹಿಂಸೆಯನ್ನು ಎದುರಿಸಿದಾಗ—ಈ ಎರಡಕ್ಕೂ ಇರುವ ಅಂತರವನ್ನು ಸ್ಪಷ್ಟವಾಗಿ ಕಾಣುತ್ತೇವೆ. ನಾವು ಸದಾ ಜಾಗರೂಕರಾಗಿಯೂ, ಎಚ್ಚರಿಕೆಯುಳ್ಳವರಾಗಿಯೂ, ಪ್ರಯತ್ನಶೀಲರಾಗಿಯೂ ಇಲ್ಲದಿದ್ದರೆ ಇದನ್ನು ಚೆನ್ನಾಗಿ ಅರಿತುಕೊಳ್ಳಲಾರೆವು.

## ದೊಂಬಿಗಳು

ಉತ್ತರ ಪ್ರದೇಶದಲ್ಲಿ ನಡೆದ ದೊಂಬಿಗಳು ನನ್ನ ಮನಸ್ಸನ್ನು ಬಹಳ ವಾಗಿ ಕಲಕಿದುವು. ನಾನು ಅವುಗಳ ವಿಚಾರದಲ್ಲಿ ಅಹಿಂಸೆಯ ದೃಷ್ಟಿಯಿಂದ ಮೌಲಾನಾ ಆಜಾದ್ ಅವರೊಡನೆಯೂ, ಬೋಸ್ ಸಹೋದರರೊಡನೆಯೂ ಚರ್ಚೆಮಾಡಿದೆ. ನಾವು ನಮ್ಮ ಗುರಿಯ ಕಡೆ ಸಾಗುವುದಕ್ಕೆ ಬದಲಾಗಿ ದೂರ ಸರಿಯುತ್ತಿದೇವೆಂದು ನನಗೆ ಅನಿಸಿತು. ಹರಿಪುರದ ಕಾಂಗ್ರೆಸ್ಸಿನ ಅಧಿವೇಶನದ ಫಲವಾಗಿ ನಾವು ಶಕ್ತರಾಗುತ್ತಿದೇವೆಯೆಂತಲೂ, ನಮ್ಮ ಲೋಪಗಳೆಷ್ಟು ಇದ್ದರೂ ನನ್ನ ಜೀವಿತಕಾಲದಲ್ಲಿ ಸ್ವರಾಜ್ಯವನ್ನು ನೋಡುವ ಆಸೆ ನನ್ನಲ್ಲಿ ಉದ್ಭವಿಸಿತು. ಈ ವರ್ಷ ಪೂರ್ತಿಯಾಗುವುದರಲ್ಲಿ ನಾವು ಶಕ್ತಿಯನ್ನು

ಸಂಪಾದಿಸುವೆವೆಂದು ಭಾವಿಸಿದೆ. ಆದರೆ ಅಲಹಾಬಾದ್ ಮತ್ತು ಇತರ ಸ್ಥಳಗಳಲ್ಲಿ ನಡೆದ ದೊಂಬಿಗಳು ನನ್ನ ಮನಸ್ಸಿಗೆ ಆಘಾತವನ್ನುಂಟುಮಾಡಿವೆ. ಪೋಲೀಸ್ ಮತ್ತು ಸೈನ್ಯದ ಸಹಾಯವನ್ನು ನಾವು ಯಾಚಿಸಬೇಕಾಯಿತು. ಇದು ನಾಚಿಕೆಗೇಡು.

ವೈಸರಾಯರು ಅಧ್ಯಕ್ಷರನ್ನು ಬರಮಾಡಿಕೊಂಡು 'ನಿಮ್ಮ ಷರತ್ತುಗಳನ್ನು ಹೇಳಿ' ಎಂದು ಕೇಳಿದರೆಂದು ಭಾವಿಸೋಣ. ಆ ಸಂದರ್ಭದಲ್ಲಿ ನಮ್ಮ ಅಧ್ಯಕ್ಷರು 'ಸರಕಾರದ ಆಡಳಿತವನ್ನು ನಡೆಸುವ ಶಕ್ತಿ ಕಾಂಗ್ರೆಸ್ಸಿಗಿದೆ, ಬ್ರಿಟಿಷರು ಹೋಗಬಹುದು' ಎಂದು ಹೇಳುವಷ್ಟು ಶಕ್ತಿ ಅವರಲ್ಲಿ ಇದ್ದೀತೆ? ಪೋಲೀಸ್ ಮತ್ತು ಸೈನ್ಯದ ಸಹಾಯವಿಲ್ಲದೆ ನಮ್ಮ ವ್ಯವಹಾರಗಳನ್ನು ನಡೆಸಬಲ್ಲೆವು. ದೇಶೀಯ ರಾಜರೊಂದಿಗೂ, ಜಮೀನುದಾರರೊಂದಿಗೂ, ಮುಸಲ್ಮಾನರೊಂದಿಗೂ ನಾವು ಒಪ್ಪಂದ ಮಾಡಿಕೊಳ್ಳಬಲ್ಲೆವು—ಹೀಗೆ ನಾವು ಹೇಳಲು ಸಾಧ್ಯವಾದೀತೆ? ಈ ರೀತಿಯ ಒಪ್ಪಂದವನ್ನು ನಾವು ಮಾಡಲು ಸಾಧ್ಯವೆಂದು ನಾವು ಹೇಳುವ ಸ್ಥಿತಿಯಲ್ಲಿ ನಿಜವಾಗಿಯೂ ಇಲ್ಲ. ಆದರೆ ನಮ್ಮಲ್ಲಿ ನಿಜವಾದ ಅಹಿಂಸಾಶಕ್ತಿ ಇದ್ದ ಪಕ್ಷಕ್ಕೆ ಹೀಗೆ ಹೇಳಲೂ ಸಾಧಿಸಲೂ ಸಾಧ್ಯವಾಗುತ್ತಿತ್ತು.

## ದುರ್ಬಲರ ಅಸ್ತ್ರವಲ್ಲ

ಆದುದರಿಂದ ನಿಮಗೂ ನನಗೂ ಒಂದು ಪ್ರಶ್ನೆಯನ್ನು ಕೇಳುತ್ತೇನೆ: ನಮ್ಮ ಅಹಿಂಸೆ ದುರ್ಬಲರದೇ ಅಥವಾ ಅದು ಇರಬೇಕಾದಂತೆ ಶಕ್ತಿವಂತರದೇ? ದುರ್ಬಲರ ಕೈಯಲ್ಲಿಯೂ ಅದರ ಕೆಲಸ ಸ್ವಲ್ಪ ನಡೆದೀತೆನ್ನುವುದು ನಿಜ. ಆದರೆ ನಮ್ಮ ದೌರ್ಬಲ್ಯಕ್ಕೆ ಅದೊಂದು ಸೋಗಾದರೆ ಅದು ನಮ್ಮನ್ನು ನಿರ್ವೀರ್ಯರನ್ನಾಗಿ ಮಾಡುತ್ತದೆ. ನಿರ್ವೀರ್ಯತೆಗಿಂತ ಬಲಿಷ್ಠರ ಹಿಂಸೆಯೇ ಎಷ್ಟೋ ಪಾಲು ಉತ್ತಮ. ಹೇಡಿತನಕ್ಕಿಂತಲೂ ಯುದ್ಧದಲ್ಲಿ ಹೋರಾಡಿ ಮಡಿಯುವುದು ಉತ್ತಮ. ನಾವೆಲ್ಲರೂ ಆರಂಭದಲ್ಲಿ ಪಶುವೃತ್ತಿಯುಳ್ಳವರಾಗಿದ್ದೆವು. ಆ ಸ್ಥಿತಿಯಿಂದ ಕ್ರಮೇಣ ವಿಕಾಸಗೊಂಡು ನಾವು ಮಾನವತ್ವವನ್ನು ನಿಧಾನವಾಗಿ ಪಡೆದಿದೇವೆಂದು ನಂಬಲು ನಾನು ಸಿದ್ಧನಾಗಿದೇನೆ. ನಾವು ಜನ್ಮತಃ

ಪಶುಬಲವನ್ನು ಪಡೆದಿದೇವೆ. ಆದರೆ ಅಂತರ್ಯಾಮಿಯಾಗಿರುವ ಭಗವಂತ ನನ್ನು ಅರಿಯಲು ಮಾನವಜನ್ಮವನ್ನು ತಾಳಿದೇವೆ. ಅದೇ ನಿಜಕ್ಕೂ ಮಾನವನ ದೊಂದು ಭಾಗ್ಯ, ಇದೇ ಮಾನವನಿಗೂ ಪಶುಪ್ರಾಣಿಗಳಿಗೂ ಇರುವ ಅಂತರ. ಆದರೆ ಭಗವಂತನನ್ನು ಕಾಣುವುದೆಂದರೆ—ಎಲ್ಲ ಭೂತಗಳಲ್ಲಿಯೂ ಅವನನ್ನು ಕಾಣುವುದು—ಅಂದರೆ ಸೃಷ್ಟಿಯೊಂದಿಗೆ ನಾವು ಅಭಿನ್ನರಾಗಿದೇವೆಯೆಂದು ಮನಗಾಣುವುದು. ನಾವು ಪ್ರಯತ್ನಪೂರ್ವಕವಾಗಿ ಪಶುಬಲದ ಪ್ರಯೋಗ ವನ್ನು ತ್ಯಜಿಸಿದ ಹೊರತು ಇದು ಸಾಧ್ಯವಿಲ್ಲ. ನಮ್ಮಲ್ಲಿ ಸುಪ್ತವಾಗಿರುವ ಆತ್ಮಬಲವನ್ನೂ ಅಹಿಂಸೆಯ ಶಕ್ತಿಯನ್ನೂ ನಾವು ಬೆಳೆಸಿಕೊಳ್ಳಬೇಕು. ಇದು ನಮ್ಮ ಶಕ್ತಿವಿಶೇಷದ ಸಾಧನೆ. ಈ ಬಗೆಯ ಶಕ್ತಿಪೂರಿತವಾದ ಅಹಿಂಸೆ ನಮ್ಮಲ್ಲಿದೆಯೆ? ಇದು ಮುಟ್ಟಲಾಗದ ಗುರಿಯೆಂದು ಬೇಕಾದರೆ ಹೇಳಿ ಹಿಂಸೆಯ ಮಾರ್ಗವನ್ನು ಅವಲಂಬಿಸಲು ನಮಗೆ ಅವಕಾಶವಿದೆ. ಆದರೆ ನಾವು ಯಾವ ಮಾರ್ಗವನ್ನು ಆರಿಸಿಕೊಳ್ಳುತ್ತೇವೆಂದು ನಿರ್ಧರಿಸಿಕೊಳ್ಳಬೇಕು.

ಇದು ಶಕ್ತಿವಂತರ ಅಸ್ತ್ರವಾದುದರಿಂದ ಕೆಲವು ಪರಿಣಾಮಗಳು ಅನಿವಾರ್ಯವಾಗಿವೆ. ದೊಂಬಿಗಳನ್ನು ನಾವು ನಿಲ್ಲಿಸುವಂತಾಗಬೇಕು; ಹಿಂದೂ-ಮುಸಲ್ಮಾನರಲ್ಲಿ ಬೆಳೆಯುತ್ತಿರುವ ಘರ್ಷಣೆಯನ್ನು ನಿವಾರಿಸಬೇಕು; ನಾವು ಅಹಿಂಸಾವ್ರತವನ್ನು ಕೈಗೊಂಡವರಾಗಿ ಈ ದೊಂಬಿಗಳನ್ನು ನಿಲ್ಲಿಸಲು ಏನು ಮಾಡಿದೇವೆಂದು ಪ್ರಶ್ನಿಸಿಕೊಳ್ಳಬೇಕು. ಇವುಗಳನ್ನು ನಿಲ್ಲಿಸುವ ಕರ್ತವ್ಯ ಪ್ರಥಮತಃ ಕಾಂಗ್ರೆಸ್ ಸಮಿತಿಗಳಿಗೆ ಸೇರಿದ್ದು. ಇಂತಹ ವಿಷಮ ಸಂದರ್ಭ ಗಳಲ್ಲಿ ಸೇವೆಯನ್ನು ಸಲ್ಲಿಸಲು ಸಾವಿರಾರು ಸ್ವಯಂಸೇವಕರು ಸಿದ್ಧರಿರಬೇಕು. ೧೯೨೧ರಲ್ಲಿ ಸ್ವಯಂಸೇವಕರಿಗೆ ಒಂದು ಪ್ರಮಾಣಪತ್ರಿಕೆಯನ್ನು ಹೊರಡಿಸಿ ದೆವು. ಅದರಲ್ಲಿ ಕಾಯೇನ, ವಾಚಾ, ಮನಸಾ ಸ್ವಯಂಸೇವಕನು ಅಹಿಂಸೆ ಯನ್ನು ಪಾಲಿಸಬೇಕೆಂದಿತ್ತು. ಆಗ ಅಧ್ಯಕ್ಷರಾಗಿದ್ದ ಹಕೀಂ ಅಜಮಲ್ ಖಾನರು ಇದೇ ಬಗೆಯ ಪ್ರಮಾಣವಚನವನ್ನು ಖಿಲಾಫತ್ ಸ್ವಯಂಸೇವಕರೂ ಪಾಲಿಸಬೇಕೆಂದು ಏರ್ಪಾಡು ಮಾಡಿದರು. ಖಿಲಾಫತ್ ಸಮ್ಮೇಳನದಲ್ಲಿ ಇದನ್ನು ಅಂಗೀಕರಿಸಬೇಕಾದರೆ ಸ್ವಲ್ಪ ತಕರಾರಾಯಿತು. ಕಾಯೇನ, ವಾಚಾ ಅಹಿಂಸೆ ಆಗಬಹುದು. ಆದರೆ ಮನಸಾ ಅಹಿಂಸೆಯ ಪಾಲನೆ ಮಾಡ ಬೇಕೆನ್ನುವುದು ಭಾರೀ ಕಟ್ಟೆಪ್ಪಣೆ ಎಂದು ಕೆಲ ಮೌಲಾನಾಗಳು ಆಕ್ಷೇಪಿಸಿದರು.

ಇಷ್ಟು ನಾವು ನಿರೀಕ್ಷಿಸಬಾರದೆಂದರು. ನಾನು ಅವರ ಮನಸ್ಸನ್ನೂ ಆಳಲು ಯತ್ನಿಸುತ್ತಿರುವೆನೆಂದು ಹೇಳಿದರು. 'ಇಲ್ಲ—ಆಳುವುದು ಅಹಿಂಸಾತತ್ತ್ವ, ಯಾವ ವ್ಯಕ್ತಿಯೂ ಅಲ್ಲ' ಎಂದು ನಾನು ಹೇಳಿದೆ. ಕೊನೆಗೆ ಆ ಪ್ರಮಾಣ ವಚನಕ್ಕೆ ಒಪ್ಪಿಗೆ ಕೊಟ್ಟರು. ೧೭ ವರ್ಷಗಳ ಹಿಂದೆ ಈ ರೀತಿ ಇದಕ್ಕೆ ಒಪ್ಪಿಗೆ ಯಾಗಿದ್ದರೂ ಇದರಿಂದ ಉದ್ಭವಿಸಬಹುದಾದ ಶಕ್ತಿಯನ್ನು ನಾವು ಬೆಳೆಸಿ ಕೊಂಡಿಲ್ಲ. ಇದಕ್ಕೆ ಕಾರಣವೇನೆಂದರೆ ಇಂತಹ ಅಹಿಂಸಾತ್ಮಕ ಸ್ವಯಂಸೇವಕ ದಳವನ್ನು ನಿರ್ಮಾಣ ಮಾಡಲು ನಾವು ತೊಂದರೆ ತೆಗೆದುಕೊಳ್ಳಲಿಲ್ಲ, ಶ್ರಮಿಸ ಲಿಲ್ಲ. ನಾವು ಹೀಗೆ ಮಾಡಲಾಗದಿದ್ದರೆ, ನಾವು ಮಾಡಿರುವ ಪ್ರಮಾಣವನ್ನು ಸಾರ್ಥಕ ಮಾಡಲಾಗದಿದ್ದರೆ, ನಮ್ಮ ಪರಿಸ್ಥಿತಿಯನ್ನು ಕುರಿತು ವಿಚಾರಮಾಡ ಬೇಕು. ಈ ಪ್ರಮಾಣವಚನ ಇಂದಿನವರೆಗೂ ಜಾರಿಯಲ್ಲಿದೆ—ಕಾಗದದ ಮೇಲಿದೆ—ಅದೇ ವಿಷಾದದ ಸಂಗತಿ. ಈ ಪ್ರಮಾಣವಚನದಲ್ಲಿ ಉದ್ದೇಶಿಸಿರು ವಂತೆ ಸಾಕಷ್ಟು ಸಂಖ್ಯೆಯ ಒಂದು ಅಹಿಂಸಾತ್ಮಕ ದಳವನ್ನು ನಾವು ಕಟ್ಟಿದ್ದರೆ ಈ ದೊಂಬಿಗಳು ಆಗುತ್ತಿರಲಿಲ್ಲ. ಆ ದಳವು ಈ ಘರ್ಷಣೆಯನ್ನು ಅಡಗಿಸು ತ್ತಿತ್ತು, ಇಲ್ಲವೇ ಮಡಿಯುತ್ತಿತ್ತು. ಒಬ್ಬರೇ ಒಬ್ಬರು ತಮ್ಮ ಪ್ರಾಣವನ್ನು ಕಳೆದುಕೊಂಡರೆಂದು ಕೇಳುತ್ತೇವೆ. ಆತನ ಬಲಿದಾನವನ್ನು ನಾನು ಪ್ರಶಂಸಿಸು ತ್ತೇನೆ. ಆದರೆ—ಆತನ ಹೆಸರು ಗುಪ್ತನೆಂದು—ಅನೇಕ ಗುಪ್ತರಿದ್ದ ಪಕ್ಷಕ್ಕೆ ನನ್ನ ಎದೆ ಸಂತೋಷದಿಂದ ಹಿಗ್ಗುತ್ತಿತ್ತು.

ಇದು ಬರಿಯ ಕನಸೆಂದು ನಿಮಗೆ ತೋರುವುದೆ? ಈ ದೊಂಬಿಗಳನ್ನು ಈ ಬಗೆಯ ಅಹಿಂಸಾತ್ಮಕ ಸೇನೆಯಿಂದ ಅಡಗಿಸಲಾಗದೆಂದು ನೀವು ಭಾವಿಸು ವಿರಾ? ಹೀಗೆ ನೀವು ಭಾವಿಸುವುದಾದರೆ ಶಾಂತರೀತಿಯಲ್ಲಿ ಯಾವ ಉದ್ವೇ ಗವೂ ಇಲ್ಲದೆ ಪರ್ಯಾಲೋಚಿಸಿ ನೀವು ಈ ತೀರ್ಮಾನಕ್ಕೆ ಬರುವುದಾದರೆ, ನಮಗೆ ಸ್ವರಾಜ್ಯವೂ ಕೂಡ ಅಹಿಂಸಾಮಾರ್ಗದಿಂದ ಲಭ್ಯವಾಗಲಾರದೆಂಬ ತೀರ್ಮಾನಕ್ಕೆ ನೀವು ಬರಬೇಕಾಗುತ್ತದೆ. (ಹರಿಜನ, ೨-೪-೧೯೩೮)

## ಶಾಂತಿಸೇನೆಯ ಲಕ್ಷಣಗಳು

ಕೆಲವು ಕಾಲಕ್ಕೆ ಹಿಂದೆ ಗಲಭೆಗಳನ್ನು—ವಿಶೇಷವಾಗಿ ಕೋಮುವಾರು ಗಲಭೆಗಳನ್ನು ಅಡಗಿಸಲು ತಮ್ಮ ಪ್ರಾಣವನ್ನೇ ಅರ್ಪಿಸಲು ಸಿದ್ಧರಾಗಿರುವ ಜನಗಳನ್ನೊಳಗೊಂಡ ಒಂದು ಶಾಂತಿಸೈನ್ಯದ ಸ್ಥಾಪನೆಯನ್ನು ಕುರಿತು ನಾನು ಪ್ರಸ್ತಾಪಿಸಿದೆ. ಈ ಸೈನ್ಯ ಪೋಲೀಸ್ ಮತ್ತು ಮಿಲಿಟರಿಗೆ ಬದಲಾಗಿ ಕೆಲಸ ಮಾಡಬೇಕೆಂದು ಇದರ ಅಭಿಪ್ರಾಯ. ಈ ಆಕಾಂಕ್ಷೆ ಅತಿ ದೊಡ್ಡದೆಂದು ತೋರಬಹುದು. ಇದನ್ನು ನಾವು ಸಾಧಿಸದೆ ಹೋಗಬಹುದು. ಆದರೆ ಕಾಂಗ್ರೆಸ್ ಸಂಸ್ಥೆ ತನ್ನ ಅಹಿಂಸಾತ್ಮಕ ಉದ್ಯಮದಲ್ಲಿ ಯಶಸ್ಸನ್ನು ಗಳಿಸಬೇಕಾದರೆ ಈ ಬಗೆಯ ಸಂದರ್ಭಗಳಲ್ಲಿ ತನ್ನ ಅಹಿಂಸಾತ್ಮಕಶಕ್ತಿಯನ್ನು ಬೆಳೆಸಿಕೊಳ್ಳಬೇಕು. ಈ ಕೋಮುವಾರು ಗಲಭೆಗಳನ್ನು ರಾಜಕಾರಣಿಗಳು ಎಬ್ಬಿಸುತ್ತಾರೆ. ಅದರಲ್ಲಿ ಭಾಗಿಗಳಾದವರನೇಕರು ಈ ರಾಜಕಾರಣಿಗಳ ಪ್ರಭಾವಕ್ಕೆ ಒಳಗಾದವರು. ಶಾಂತರೀತಿಯಲ್ಲಿ ಈ ಬಗೆಯ ಅವಲಕ್ಷಣವಾದ ಕೋಮುವಾರು ಗಲಭೆಗಳನ್ನು ನಿಲ್ಲಿಸುವ ಸಾಮರ್ಥ್ಯ ಕಾಂಗ್ರೆಸ್ಸಿನವರಲ್ಲಿಲ್ಲವೆ? ಕೋಮುವಾರು ಒಪ್ಪಂದ ಆಗಲಿ ಆಗದಿರಲಿ—ನಾನು ಈ ಸಲಹೆಯನ್ನು ಮಾಡಬಯಸುತ್ತೇನೆ. ಯಾವ ಪಕ್ಷದವರಾಗಲಿ ಈ ಒಪ್ಪಂದವನ್ನು ಬಲಪ್ರಯೋಗಮಾಡಿ ಸಾಧಿಸಲಾಗದು. ಹಾಗೆ ಒಪ್ಪಂದವಾದರೆ ಅದಕ್ಕೆ ಬೆಲೆಯೇ ಇರಲಾರದು. ಏಕೆಂದರೆ ಅಂತಹ ಒಪ್ಪಂದ ಜನರ ಸಮ್ಮತಿಯನ್ನು ಒಳಗೊಂಡಿರುವುದಿಲ್ಲ. ಅಷ್ಟೇ ಅಲ್ಲ, ಒಂದು ಒಪ್ಪಂದವಾದಮೇಲೆಯೂ ಕೋಮುವಾರು ಗಲಭೆಗಳು ಆಗಲೇ ಆರವೆಂದು ನಾವು ನಿರೀಕ್ಷಿಸಲಿಕ್ಕಿಲ್ಲ.

ಈಗ ಇಂತಹ ಶಾಂತಿಸೇನೆಯ ಸದಸ್ಯನಿಗೆ ಯಾವ ಬಗೆಯ ಯೋಗ್ಯತೆ ಇರಬೇಕೆಂದು ನೋಡೋಣ:

(೧) ಆತನಿಗೆ ಅಥವಾ ಆಕೆಗೆ ಅಹಿಂಸೆಯಲ್ಲಿ ಜೀವಂತ ವಿಶ್ವಾಸ ಇರಬೇಕು. ಭಗವಂತನಲ್ಲಿ ಜೀವಂತ ನಂಬಿಕೆ ಇಲ್ಲದೆ ಇದು ಸಾಧ್ಯವಿಲ್ಲ. ದೇವರ ಶಕ್ತಿ, ದೇವರ ಕೃಪೆ ಇಲ್ಲದೆ ಅಹಿಂಸಾವ್ರತಿ ಏನನ್ನು ಮಾಡಲೂ ಸಾಧ್ಯವಿಲ್ಲ. ಈ ಭಗವದನುಗ್ರಹವಿಲ್ಲದಿದ್ದರೆ ಕೋಪ, ಭಯ, ದ್ವೇಷ ಇವು

ಗಳನ್ನು ತೂರಿದು ಪ್ರಾಣವನ್ನು ಬಿಡುವ ಧೈರ್ಯ ಅವನಲ್ಲಿರಲಾರದು. ಈ ಧೈರ್ಯ ಬರಬೇಕಾದರೆ ದೇವರು ಎಲ್ಲರ ಹೃದಯದಲ್ಲಿಯೂ ಇದಾನೆಂದೂ ದೇವರ ಸಮ್ಮುಖದಲ್ಲಿ ಯಾವ ಭಯಕ್ಕೂ ಕಾರಣವಿಲ್ಲವೆಂದೂ ಅವನಲ್ಲಿ ಶ್ರದ್ಧೆ ಇರಬೇಕು. ದೇವರು ಸರ್ವವ್ಯಾಪಿ—ಅಂದಮೇಲೆ ಶತ್ರುಗಳು, ಗೂಂಡಾಗಳು—ಇವರ ಪ್ರಾಣವೂ ನಮ್ಮ ಆದರಕ್ಕೆ ಪಾತ್ರ. ಮಾನವನು ತನ್ನ ನಿಜಸ್ವಭಾವವನ್ನು ಮರೆತು ತನ್ನ ಪಶುವೃತ್ತಿಗೆ ಎಡೆಕೊಟ್ಟಾಗ ಅದನ್ನು ನಿಗ್ರಹಿಸುವ ವಿಧಾನವೇ ಈ ಅಹಿಂಸಾತ್ಮಕ ರೀತಿಯಲ್ಲಿ ನಾವು ಮಧ್ಯಸ್ಥಿಕೆ ಮಾಡಲು ಹೋಗುವುದರ ಅರ್ಥ.

(೨) ಈ ಶಾಂತಿಸಂದೇಶವಾಹಕ ಪ್ರಪಂಚದ ಎಲ್ಲ ಮತಧರ್ಮಗಳ ವಿಚಾರದಲ್ಲಿಯೂ ಸಮಾನ ಆದರವುಳ್ಳವನಾಗಿರಬೇಕು. ಉದಾಹರಣೆಗೆ, ಅವನು ಹಿಂದುವಾಗಿದ್ದರೆ—ಭಾರತದೇಶದಲ್ಲಿರುವ ಇತರ ಧರ್ಮಗಳನ್ನೂ ಅವನು ಗೌರವಿಸಬೇಕು. ಆದುದರಿಂದ ಈ ಎಲ್ಲ ಧರ್ಮಗಳ ಸ್ಥೂಲ ಪರಿಚಯ ಅವನಿಗಿರಬೇಕು.

(೩) ಸಾಮಾನ್ಯವಾಗಿ ಈ ಕಾರ್ಯವನ್ನು ಆಯಾ ಸ್ಥಳದವರು ತಮ್ಮ ಪ್ರದೇಶದಲ್ಲಿ ಮಾತ್ರ ಮಾಡಲು ಸಾಧ್ಯ.

(೪) ಈ ಕಾರ್ಯವನ್ನು ಒಬ್ಬರಾಗಿಯೂ, ಗುಂಪಾಗಿಯೂ ಕೈಗೊಳ್ಳಬಹುದು. ಆದುದರಿಂದ ಜೊತೆಗಾರರಿಗಾಗಿ ಕಾಯಬೇಕಾಗಿಲ್ಲ. ಆದರೆ ಆ ಸ್ಥಳದಲ್ಲಿರುವವರನ್ನು ಸೇರಿಸಿಕೊಂಡು ಒಂದು ಸಣ್ಣ ಗುಂಪನ್ನು ಮಾಡಿಕೊಳ್ಳುವುದು ಸಹಜ.

(೫) ಈ ಶಾಂತಿಸೈನಿಕನು ತನ್ನ ಸೇವೆಯ ಮೂಲಕ ತನ್ನ ಸ್ಥಳದವರೊಂದಿಗೆ ಸಂಪರ್ಕವನ್ನು ಬೆಳೆಸಿಕೊಳ್ಳುವನು; ಒಂದು ಗೋಷ್ಠಿಯನ್ನು ಮಾಡಿಕೊಳ್ಳುವನು. ಆದುದರಿಂದ ಅಕಸ್ಮಾತ್ತಾಗಿ ಏನಾದರೂ ದುರ್ಘಟನೆ ಅಲ್ಲಿ ಒದಗಿದಾಗ ಅವನ ಮಧ್ಯಸ್ಥಿಕೆ ಒಬ್ಬ ಬೇಡವಾದ ಅಪರಿಚಿತನ ಮಧ್ಯಸ್ಥಿಕೆ ಆಗಲಾರದು. ಅವನ ಬಗೆಗೆ ಯಾರೂ ಶಂಕೆಯನ್ನು ತಾಳಲಾರರು.

(೬) ಈ ಶಾಂತಿಸೈನಿಕನ ಶೀಲ, ನಡತೆ ಶುದ್ಧವೂ ನಿರ್ದುಷ್ಟವೂ ಆಗಿರಬೇಕೆಂದು ಬೇರೆ ಹೇಳಬೇಕಾಗಿಲ್ಲ. ಕಟ್ಟುನಿಟ್ಟಾದ ನಿಷ್ಪಾಕ್ಷಿಕತೆಗೆ ಆತ ಹೆಸರಾಗಿರಬೇಕು.

(೭) ಮುಂದೆ ಬರಲಿರುವ ಗಲಭೆಗಳ ಮುನ್ಸೂಚನೆ ಸಾಮಾನ್ಯವಾಗಿ ಸಿಗುತ್ತದೆ. ಹೀಗೆ ಸೂಚನೆ ಇದ್ದಾಗ ಶಾಂತಿಸೈನಿಕ ಗಲಭೆ ಆರಂಭವಾಗುವವರೆಗೂ ಕಾಯದೆ, ಅದಕ್ಕೆ ಪೂರ್ವದಲ್ಲಿ ಅದನ್ನು ನಿಲ್ಲಿಸುವ ಪ್ರಯತ್ನಗಳನ್ನು ಮಾಡುವನು.

(೮) ಈ ಆಂದೋಲನವು ವ್ಯಾಪಿಸಿದರೆ ಇದಕ್ಕಾಗಿ ತಮ್ಮ ಎಲ್ಲ ವೇಳೆಯನ್ನೂ ಕೊಡುವ ಕಾರ್ಯಕರ್ತರು ಬರಬಹುದು. ಈ ರೀತಿಯ ಎಲ್ಲ ವೇಳೆಯನ್ನೂ ಕೊಡುವ ಕಾರ್ಯಕರ್ತರು ಇರಲೇಬೇಕೆಂಬ ಅಗತ್ಯವೇನೂ ಇಲ್ಲ. ಸಾಧ್ಯವಾದಷ್ಟು ಸಂಖ್ಯೆಯಲ್ಲಿ ಒಳ್ಳೆಯ ಜನ—ಹೆಂಗಸರು, ಗಂಡಸರು—ಇದರಲ್ಲಿ ಭಾಗವಹಿಸಬೇಕೆಂಬುದೇ ಅಭಿಪ್ರಾಯ. ನಾನಾ ಉದ್ಯೋಗಗಳಲ್ಲಿ ತೊಡಗಿರುವ ಸ್ವಯಂಸೇವಕರು ಬೇಕು. ಇತರರೊಂದಿಗೆ ತಮ್ಮ ಸಂಪರ್ಕವನ್ನು ಬೆಳೆಸಿಕೊಳ್ಳಲು ಅವರಿಗೆ ಬಿಡುವಿರಬೇಕು. ಶಾಂತಿಸೈನಿಕನಿಗಿರಬೇಕಾದ ಗುಣಗಳು ಅವರಲ್ಲಿರಬೇಕು.

(೯) ಅವರಿಗೆ ಒಂದು ನಿರ್ದಿಷ್ಟ ಸಮವಸ್ತ್ರವಿರಬೇಕು. ಕಾಲಕ್ರಮದಲ್ಲಿ ಅವರ ಪೋಷಾಕಿನಿಂದಲೇ ಅವರನ್ನು ಗುರುತಿಸುವಂತಾಗಬೇಕು.

ಇವೆಲ್ಲವೂ ಸ್ಥೂಲವಾದ ಸಲಹೆಗಳು. ಪ್ರತಿಯೊಂದು ಸ್ಥಳದಲ್ಲಿಯೂ ಇದರ ಯೋಜನೆಯನ್ನು ಅವರವರು ಮಾಡಿಕೊಳ್ಳಬೇಕು.

ನಾನು ಈ ಶಾಂತಿಸೇನೆಯ ಸ್ಥಾಪನೆಯ ವಿಷಯದಲ್ಲಿ ಹೆಚ್ಚು ನೆರವಾಗುವೆನೆಂದಾಗಲಿ, ಅದರ ಚಟುವಟಿಕೆಗಳಲ್ಲಿ ಭಾಗವಹಿಸುವೆನೆಂದಾಗಲಿ ಯಾರೂ ನಿರೀಕ್ಷಿಸಬಾರದು. ಮುಂದೆ ಯಾರಿಗೂ ನಿರಾಶೆಯಾಗಬಾರದೆಂದು ಈ ಮಾತನ್ನು ಈಗಲೇ ಹೇಳುತ್ತಿದೇನೆ. ನನಗೆ ಈ ಕೆಲಸಕ್ಕೆ ಬೇಕಾಗುವ ಆರೋಗ್ಯ, ಚಟುವಟಿಕೆ, ಕಾಲ—ಇವು ಇಲ್ಲ. ನಾನು ಕೈಗೊಂಡಿರುವ ಕೆಲಸಗಳನ್ನು ಚೆನ್ನಾಗಿ ನಿರ್ವಹಿಸಿದರೆ ಸಾಕಾಗಿದೆ. ನಾನು ಸಲಹೆಗಳನ್ನು ಕೊಡಬಹುದು, ಮಾರ್ಗ ತೋರಿಸಬಹುದು—ಈ ಪತ್ರಿಕೆಯಲ್ಲಿ ಲೇಖನಗಳ ಮೂಲಕ

—ಪತ್ರಗಳ ಮೂಲಕ ಇಷ್ಟನ್ನು ಮಾಡಬಹುದು. ಆದುದರಿಂದ ಈ ಯೋಜನೆ ಸರಿಯಾಗಿದೆಯೆಂದು ಮೆಚ್ಚುವವರೂ ಶಕ್ತಿ ಇರುವವರೂ ಮುಂದೆ ಬಂದು ಇದರ ಕೆಲಸವನ್ನು ಮಾಡಲಿ. ಇಂತಹ ಶಾಂತಿಸೇನೆಯಿಂದ ಬಹಳ ಸೇವೆ ಸಲ್ಲಬಹುದಾಗಿದೆ. ಇದನ್ನು ಕಾರ್ಯಗತ ಮಾಡುವುದು ಸಾಧ್ಯ. ಇಷ್ಟು ನಾನು ಹೇಳಬಲ್ಲೆ. (ಹರಿಜನ, ೧೮–೬–೧೯೩೮)

## ಅತ್ಯಂತ ಪ್ರಬಲ ಪ್ರಶ್ನೆ

ಡಾ|| ಕಾಲಿದಾಸ ನಾಗರು ಆಗಾಗ್ಗೆ ಪಾಶ್ಚಾತ್ಯ ದೇಶಗಳಿಗೆ ಆ ದೇಶದವರ ಆಹ್ವಾನದ ಮೇಲೆ ಹೋಗಿ ಸಾಂಸ್ಕೃತಿಕ ನಿಯೋಗಗಳಲ್ಲಿ ಭಾಗವಹಿಸುತ್ತಾರೆ. ಅವರು ಇಷ್ಟರಲ್ಲಿಯೇ ಆಸ್ಟ್ರೇಲಿಯಕ್ಕೆ ಹೋಗುವವರಿದಾರೆ. ಕಲ್ಕತ್ತೆಗೆ ಪ್ರಯಾಣ ಮಾಡುತ್ತಾ ದಾರಿಯಲ್ಲಿ ಇಲ್ಲಿ ಇಳಿದರು. 'ನಾನು ಹೋದೆಡೆಯಲ್ಲೆಲ್ಲ, ಶಾಂತಿ ಪ್ರದೇಶವೆಂದು ಅನ್ವರ್ಥವಲ್ಲದ ಹೆಸರನ್ನಿಟ್ಟಿರುದ ದೇಶಗಳಲ್ಲಿಯೂ ಅಹಿಂಸೆಯೇ ಎಲ್ಲಕ್ಕೂ ಪ್ರಬಲವಾದ ಪ್ರಶ್ನೆಯಾಗಿದೆ. ಈವರೆಗೂ ಹಿಂಸಾತ್ಮಕ ಅಸ್ತ್ರಗಳನ್ನೇ ಅವರು ನಂಬಿದ್ದರು. ಈಗ ಅವರಲ್ಲಿ ಅದರ ಬಗ್ಗೆ ಶಂಕೆ ಉಂಟಾಗಿದೆ. ಈ ಶಂಕೆ ಹುಟ್ಟಿರುವುದು ದೊಡ್ಡ ವಿಷಯ. ಆದರೆ ಅವರು ಒಂದು ಪ್ರಶ್ನೆಯನ್ನು ಕೇಳುತ್ತಾರೆ. 'ಬೌದ್ಧಮತದ ಪ್ರಸಾರದಿಂದ ಜನರು ನಿರ್ವೀರ್ಯರಾಗಲಿಲ್ಲವೆ? ಆದರೆ ಅಹಿಂಸೆಯ ಶಕ್ತಿ ಏನೇ ಇರಲಿ, ನಮ್ಮನ್ನು ರಕ್ಷಿಸಿಕೊಳ್ಳಲು ಅದರಿಂದ ಸಾಧ್ಯವಾದೀತೆ?'

'ನಾನು ಈ ಪ್ರಶ್ನೆಗಳಿಗೆ ಉತ್ತರ ಹೇಳಬೇಕೆನ್ನುವಿರಾ ಅಥವಾ ಇವಕ್ಕೆ ನೀವೇ ಉತ್ತರ ಕೊಟ್ಟಿರುವಿರಾ?' ಎಂದು ಗಾಂಧೀಜೀ ಕೇಳಿದರು.

'ನಾನು ನನ್ನದೇ ಆದ ರೀತಿಯ ಐತಿಹಾಸಿಕ ದೃಷ್ಟಿಯಿಂದ ಉತ್ತರ ಕೊಟ್ಟಿರುವೆನು. ಆದರೆ ನಿಮ್ಮ ಉತ್ತರವನ್ನು ನಾನು ಬಯಸುತ್ತೇನೆ. ಏಕೆಂದರೆ ಈ ವಿಷಯದಲ್ಲಿ ನಿಮ್ಮದು ಅಧಿಕಾರವಾಣಿ. ಬಾಹ್ಯದಲ್ಲಿ ಯುದ್ಧಗಳೂ, ಮತಸಂಬಂಧವಾದ ಕದನಗಳೂ ಆಗಿದ್ದರೂ ಆಂತರಿಕವಾಗಿ ನಾವು ಇತಿಹಾಸವನ್ನು ವಿಮರ್ಶೆ ಮಾಡಿದರೆ ಅಹಿಂಸೆಯ ಗುಪ್ತಗಾಮಿನಿ ಹರಿಯುತ್ತಿರುವುದನ್ನು ನಾವು ಕಾಣಬಹುದೆಂದು ನಾನು ಹೇಳುತ್ತ ಬಂದಿದೇನೆ. ಇದನ್ನು

ಅವರು ಅರಿಯುವಂತೆ ಪ್ರಯತ್ನಿಸಿದೇನೆ. ಆದರೆ ಮತ್ತೆ ಆ ದೇಶಗಳಿಗೆ ಹೋದಾಗ ನಿಮ್ಮ ಉತ್ತರವನ್ನು ಕೊಂಡೊಯ್ಯಬಹುದು.'

'ಒಳ್ಳೆಯದು' ಅಂದರು ಗಾಂಧೀಜೀ ಸ್ವಲ್ಪ ಹೊತ್ತು ಸುಮ್ಮನಿದ್ದು. 'ಈ ಪ್ರಶ್ನೆಗೆ ಉತ್ತರವನ್ನು ಭಾರತದೇಶ ತನ್ನ ಪ್ರಯೋಗದಿಂದ ಕೊಡುತ್ತಿದೆ. ಚೀಣಾ ಮತ್ತು ಜಪಾನಿನ ಉದಾಹರಣೆಗಳಿಂದ ಪ್ರಯೋಜನವಿಲ್ಲ. ಈ ಪ್ರಶ್ನೆಗೆ ಉತ್ತರ ಬರಬೇಕಾದರೆ ಅದು ಭಾರತದಿಂದ ಮಾತ್ರ ಬರಲು ಸಾಧ್ಯ. ಇಲ್ಲಿನ ಅನುಭವ ಉತ್ತೇಜಕವಾಗಿದೆ. ಪಾಶ್ಚಾತ್ಯ ದೇಶಗಳಲ್ಲಿಯೂ ಕೇವಲ ತರ್ಕಸರಣಿಯಿಂದ ಬೌದ್ಧಿಕವಾಗಿ ಹಿಂಸಾಮಾರ್ಗವು ನಿರರ್ಥಕ ಎಂದು ತೀರ್ಮಾನಕ್ಕೆ ಬಂದಿದಾರೆ. ಅಹಿಂಸಾಪ್ರಯೋಗಕ್ಕೆ ಒಂದು ಅವಕಾಶವನ್ನು ಕೊಟ್ಟು ನೋಡುವುದು ಒಳ್ಳೆಯದಲ್ಲವೆ ಎಂದು ಕೇಳುತ್ತಿದಾರೆ. 'ಚೀಣಾ ದೇಶದ ಸಮಸ್ಯೆಗೆ ಗಾಂಧೀಮಾರ್ಗ' ಎಂಬ ಲೇಖನವನ್ನು ಡಾ॥ ಸ್ಟಾನ್ಲಿ ಜೋನ್ಸ್ ಅವರು ಬರೆದಿದಾರೆ. ಅದರ ಪ್ರತಿಯೊಂದನ್ನು ನನಗೆ ಕಳುಹಿಸಿ ಕೊಟ್ಟಿದಾರೆ. ಅದರಲ್ಲಿ ಚೀಣಾ ದೇಶದವರು ಅನುಸರಿಸಬಹುದಾದ ವಿವಿಧ ವಾದ ಅಸಹಕಾರ ಮಾರ್ಗಗಳನ್ನು ಕುರಿತು ವಿಶದವಾಗಿ ಚರ್ಚಿಸಿದಾರೆ. ಅಸಹಕಾರದಲ್ಲಿ ಹಿಂದೆ ಒಮ್ಮೆ ಡಾ॥ ಜೋನ್ಸ್ ಅವರಿಗೆ ನಂಬಿಕೆ ಇರಲಿಲ್ಲ. ಇಂದು ಅವರೇ ಇದೇ ಶಾಂತಿಯುತವಾದ ಪರಿಹಾರವೆಂದು ಗಂಭೀರವಾದ ಸರಣಿಯಲ್ಲಿ ಚರ್ಚಿಸಲು ತೊಡಗಿದಾರೆ. ಶಾಂತಿಯನ್ನು ಪ್ರಚಾರಮಾಡಲು ನಾನು ಯೂರೋಪಿಗೆ ಹೋಗಬೇಕೆಂದು ಒತ್ತಾಯ ಮಾಡುತ್ತಿದಾರೆ. ಆದರೆ ನಾನು ದೀಕ್ಷಾಬದ್ಧವಾಗಿ ಭಾರತದಲ್ಲಿ ಕೈಕೊಂಡಿರುವ ಕಾರ್ಯ ಪೂರ್ತಿಯಾಗದೆ ಇರುವವರೆಗೂ ಶಾಂತಿಪ್ರಚಾರಕ್ಕೆ ಪಾಶ್ಚಾತ್ಯ ದೇಶಗಳಿಗೆ ಹೋಗುವುದು ನಿರರ್ಥಕ. ಭಾರತದೇಶದಲ್ಲಿ ಅಹಿಂಸಾಪ್ರಯೋಗ ಮುಂದುವರೆದಿದೆ. ಆದರೆ ಹೊರಗಿನವರಿಗೆ ಇದರಿಂದ ಉಪಯೋಗವಿಲ್ಲ—ಅದರಲ್ಲಿ ದೋಷಾನ್ವೇಷಣೆಯ ದೃಷ್ಟಿಯಿಂದ ನೋಡುವವರಿಗೆ ಪ್ರಯೋಜನವೇ ಇಲ್ಲ.'

'ನೀವು ಹೇಳುವುದು ಬಹಳ ನಿಜ, ಮಹಾತ್ಮಾಜೀ.'

ಈ ಪ್ರಶ್ನೆಗೆ ಉತ್ತರವನ್ನು ನಮ್ಮ ದೇಶ ಕೊಡುತ್ತಿದೆ. ನಮ್ಮ ದೇಶ ಎಷ್ಟು ದೊಡ್ಡದೋ ಅಷ್ಟೇ ಪ್ರಮಾಣದಲ್ಲಿ ಅಹಿಂಸಾಪ್ರಯೋಗವೂ ಆದ ಪಕ್ಷಕ್ಕೆ ಭಾರತದ ಪ್ರಯೋಗ ಬಹಳ ಪರಿಣಾಮಕಾರಿಯಾಗುವುದು. ಏಕೆಂದರೆ

ಬೌದ್ಧಿಕವಾಗಿಯಾದರೂ ಪಾಶ್ಚಾತ್ಯ ದೇಶದ ಮೇಧಾವಿಗಳು ಅಹಿಂಸೆಗೂ ಅಸಹಕಾರಕ್ಕೂ ಕೊಡುತ್ತಿರುವ ಮನ್ನಣೆ ಏನೋ ದೊಡ್ಡವರು ಸಣ್ಣವರಿಗೆ ಅನುಗ್ರಹ ಮಾಡುವ ದೃಷ್ಟಿಯಿಂದ ಆದಂತಿದೆ.'

'ಆತ್ಮಕ್ಕೆ ಸಂಬಂಧಿಸಿದ ವಿಷಯ ಬುದ್ಧಿಶಕ್ತಿಗೆ ನಿಲುಕುವುದು ಎಂದೂ ಸಾಧ್ಯವಿಲ್ಲ' ಎಂದರು ಗಾಂಧೀಜೀ. 'ದೇವರ ವಿಷಯದಲ್ಲಿ ನಂಬಿಕೆಯನ್ನು ಬುದ್ಧಿ-ತರ್ಕಗಳ ಮೂಲಕ ಒದಗಿಸಲು ಸಾಧ್ಯವಾದೀತೆ? ಇದು ಸಾಧ್ಯವಿಲ್ಲ. ಇದು ಹೃದಯದ ವಿಷಯ. ನಮ್ಮ ನಂಬಿಕೆಯನ್ನು ಅನುಭವದ ಮೂಲಕ ಜ್ಞಾನವನ್ನಾಗಿ ಮಾರ್ಪಡಿಸಿಕೊಳ್ಳಬಹುದು. ಇದು ಹೃದಯದ ಮೂಲಕ ಬರಬೇಕೇ ಹೊರತು ಬುದ್ಧಿಯ ಮೂಲಕವಲ್ಲ. ನಂಬಿಕೆ-ಶ್ರದ್ಧೆ—ಈ ವಿಚಾರಗಳಲ್ಲಿ ಬುದ್ಧಿಶಕ್ತಿ ಒಂದು ಅಡ್ಡಿಯಾಗಿ ಪರಿಣಮಿಸುತ್ತದೆ.

(ಹರಿಜನ, ೧೮-೬-೧೯೩೮)

# ಪ್ರಪಂಚದ ಬಿಕ್ಕಟ್ಟೂ ಅಹಿಂಸೆಯೂ

## ಪ್ರಖ್ಯಾತ ಅತಿಥಿಗಳು

ಮದರಾಸ್ ಸಮೀಪವಿರುವ ತಾಂಬರಂನಲ್ಲಿ ಒಂದು ಅಂತರರಾಷ್ಟ್ರೀಯ ಮಿಷನರಿ ಸಮ್ಮೇಳನ ನಡೆಯಿತು. ಅದಕ್ಕೆ ಅನೇಕ ಪ್ರಖ್ಯಾತ ಅತಿಥಿಗಳು ಬಂದಿದ್ದರು. ಅವರಲ್ಲಿ ಅನೇಕರು ಮೊದಲೇ ಗಾಂಧೀಜೀಗೆ ಬರೆದುಕೊಂಡು ಸೇವಾಗ್ರಾಮದ ಅವರ ಹಳ್ಳಿವಾಸಸ್ಥಾನದಲ್ಲಿ ಭೇಟಿಮಾಡಿದರು. ಸಮ್ಮೇಳನ ನಡೆಯುವುದಕ್ಕೆ ಪೂರ್ವದಲ್ಲಿಯೇ ಗಾಂಧೀಜಿಯೊಡನೆ ಅವರು ವಿಚಾರ ವಿನಿಮಯ ಮಾಡಬೇಕೆಂದು ಬಯಸಿದರು. ಇವರ ಪೈಕಿ ರೆವರೆಂಡ್ ವಿಲಿಯಂ ಪೇಟನ್ ಎನ್ನುವವರೊಬ್ಬರು. ಇವರು ಉತ್ತರ ಅಮೆರಿಕದ ಅಂತರರಾಷ್ಟ್ರೀಯ ಮಿಷನರಿ ಸಂಸ್ಥೆಗಳ ಕಾರ್ಯದರ್ಶಿ ಹಾಗೂ ಪ್ರಭಾವಶಾಲಿಗಳಾದ ಚರ್ಚ್ ಮುಖಂಡರು. ಮತ್ತೊಬ್ಬರು ಡಾ|| ಇ. ಸ್ಮಿತ್ ಎನ್ನುವವರು. ಲಂಡನ್ನಿನ ಬ್ರಿಟಿಷ್ ಮತ್ತು ಫಾರಿನ್ ಬೈಬಲ್ ಸೊಸೈಟಿಗೆ ಸೇರಿದವರು. ಇವರು ಧರ್ಮ ಪ್ರಚಾರದ ಕಾರ್ಯ ಮಾತ್ರವಲ್ಲದೆ, ಆಂಥ್ರೋಪಾಲಜಿ (ಮಾನವಶಾಸ್ತ್ರ) ಶಾಸ್ತ್ರದಲ್ಲಿ ನಿಷ್ಣಾತ ಪಂಡಿತರು. ಮೂರನೆಯವರು ಡಾ|| ಜಾನ್ ಮಾಟ್ ಎನ್ನು

ವವರು. ಇವರನ್ನು ರೆವೆರೆಂಡ್ ಜೆ. ಝಡ್. ಹಾಡ್ಜ್‌ರವರು ಅತ್ಯುತ್ತಮ ಶ್ರೇಣಿಗೆ ಸೇರಿದ ಮಹಾನುಭಾವರೆಂದು ಪ್ರಶಂಸಿಸಿದಾರೆ. ಗಾಂಧೀಜಿಯವರೊಂದಿಗೆ ಇವರು ನಡೆಸಿದ ಮಾತುಕತೆಗಳನ್ನು ಈ ಮೊದಲೇ ಈ ಪತ್ರಿಕೆಯಲ್ಲಿ ಮಹಾದೇವ ದೇಸಾಯಿಯವರು ವರದಿಮಾಡಿದಾರೆ.

## ಅವರ ಚಿಂತೆ

'ಈಗ ಪ್ರಪಂಚದಲ್ಲಿ ಕಾಣುವ ಭಯಂಕರ ರೂಪದ ದ್ವೇಷದಿಂದಲೂ ಹಿಂಸಾಕೃತ್ಯಗಳಿಂದಲೂ ಮಾನವಕೋಟಿ ಪಾರಾಗುವುದು ಹೇಗೆ?'—ಇದೇ ಅವರ ಪ್ರಬಲ ಚಿಂತೆ. ಹಿಂದೆ ಎಂದೂ ಪಶುಬಲದ ಭೀಕರವಾದ ನಗ್ನ ತಾಂಡವವನ್ನು ನಾಗರಿಕ ಪ್ರಪಂಚ ನೋಡಿದ್ದಿಲ್ಲ ಎಂದೂ, ಇದರ ಪರಿಹಾರ ಮಾಡಲು ಡಾ|| ಮಾಟ್ ಹೇಳಿದಂತೆ ದೌರ್ಬಲ್ಯದ ಅಪಮಾನವನ್ನು ಈ ಬಗೆಯಲ್ಲಿ ಲೋಕ ಅನುಭವಿಸಿದ್ದಿಲ್ಲ. ಹಿಂದೆ ರೂಕ್ಷಾವರ್ತನೆ ಆಗಾಗ್ಗೆ ತಲೆದೋರಿದ್ದುಂಟು. ಹಿಂದಿನ ಕಾಲದಲ್ಲಿ ಟಾಮರ್‌ಲೇನ್ ಅಥವಾ ಆಟಿಲಾ ಮತ್ತು ಅವನ ಹೂಣ ಅನುಯಾಯಿಗಳು ಪ್ರಚಂಡ ಬಿರುಗಾಳಿಯಂತೆದ್ದು ರಕ್ತದ ಕಾಲುವೆಗಳನ್ನು ಹರಿಸಿದ್ದುಂಟು. ಅದೇ ಬಗೆಯ ಭೀಕರ ಪ್ರಸಂಗವೇ ಇಂದು ನಮ್ಮ ಕಣ್ಣೆದುರಿಗಿದೆ. ಆದರೆ ಆಗಿನ ಕಾಲದಲ್ಲಿ ಈ ವಿಪತ್ತನ್ನು ತಡೆಗಟ್ಟಲು ಆತ್ಮಶಕ್ತಿಯೆಂಬ ಶಸ್ತ್ರವನ್ನು ಪಾಶ್ಚಾತ್ಯ ರಾಷ್ಟ್ರಗಳು ಕಂಡುಹಿಡಿದಿರಲಿಲ್ಲ. ಇದರ ಆವಿಷ್ಕರಣ ಅನಂತರವೇ ಆದುದು. ಇದರಲ್ಲಿ ಅತ್ಯಂತ ವಿಷಾದಕರ ಅಂಶ ಏನೆಂದರೆ ಈ ರಾಷ್ಟ್ರಗಳು ಏಸುಕ್ರಿಸ್ತ ಎರಡು ಸಾವಿರ ವರ್ಷಕ್ಕೆ ಹಿಂದೆ ಮಾಡಿದ ಉಪದೇಶವನ್ನು ಪಡೆದಿದ್ದರೂ ಇದನ್ನು ಕಾರ್ಯರೂಪಕ್ಕೆ ತರುವ ತೀವ್ರವಾದ ರೀತಿಯಲ್ಲಿ ಪ್ರಯೋಗವನ್ನು ನಡೆಸಿಲ್ಲ. ಇದರ ಪರಿಣಾಮವಾಗಿ ಈಗ ಒಂದು ವಿಪತ್ತು ನಮ್ಮ ಮುಂದಿರುವಾಗ ಇದನ್ನೆದುರಿಸಲು ಅಸಹಾಯರಾಗಿದೇವೆ. ಆದುದರಿಂದ ಇಂದು ಈ ದೇಶಗಳಲ್ಲಿರುವ ಮುಖ್ಯಸ್ಥರೂ, ಮೇಧಾವಿಗಳೂ ಈಗಿನ ಸಮಸ್ಯೆಗಳನ್ನು ಪರಿಹಾರ ಮಾಡಲು ಏಸುವಿನ ಸಂದೇಶವನ್ನು ಹೇಗೆ ಅಳವಡಿಸಿಕೊಳ್ಳಬೇಕೆಂದು—ಅದರ ಪ್ರಯೋಗ ಇಂದು ಹೇಗೆ ಆಗಬೇಕೆಂದು ಯೋಚನೆ ಮಾಡುತ್ತಿದಾರೆ. ಅವರಿಗೆ ಈ ಪ್ರೇರಣೆ ಉಂಟಾಗಿದೆ.

ಆದುದರಿಂದ ಭಾರತದೇಶದಲ್ಲಿ ನಡೆಯುತ್ತಿರುವ ಅಹಿಂಸಾತ್ಮಕ ಆಂದೋಲನ ಪ್ರಪಂಚಕ್ಕೇ ಒಂದು ಬೆಳಕನ್ನು ಬೀರುವ ಸಂದರ್ಭ ಒದಗಿದೆ. ಪ್ರಪಂಚದ ಪರಿಸ್ಥಿತಿ ಇದಕ್ಕೆ ತೀರ ವಿರುದ್ಧವಾಗಿರುವುದೇ ಇದಕ್ಕೆ ಕಾರಣ. ಆದುದರಿಂದ ಗಾಂಧೀಜಿಯನ್ನು ಭೇಟಿಮಾಡಲು ಬಂದ ಮಿತ್ರರು ಅವರ ಅಹಿಂಸಾತ್ಮಕ ಆಂದೋಲನದಲ್ಲಿ ಅಂತರ್ಗತವಾಗಿರುವ ಅರ್ಥವನ್ನೂ ಶಕ್ತಿಯನ್ನೂ ಅರಿಯಲು ಕಾತರರಾಗಿದ್ದುದು ಸಹಜವೇ ಆಗಿದೆ. ಗಾಂಧೀಜಿಯವರ ನಂಬಿಕೆ ಮತ್ತು ಶ್ರದ್ಧೆಯ ವಿಷಯದಲ್ಲಿ, ಪ್ರಾರ್ಥನೆ–ಉಪವಾಸ–ಮೌನ ಮುಂತಾದ ವಿಷಯಗಳಲ್ಲಿ, ಅಂತರರಾಷ್ಟ್ರೀಯ ಘರ್ಷಣೆಗಳಲ್ಲಿ, ದಾಳಿಗಳ ಸಂದರ್ಭಗಳಲ್ಲಿ ಗಾಂಧೀಜಿಯ ಅಹಿಂಸಾತ್ಮಕ ಪ್ರತಿಭಟನೆ ಹೇಗೆ ಪ್ರಯೋಗಮಾಡಲ್ಪಡಬೇಕೆಂಬ ವಿಷಯದಲ್ಲಿ ಗಾಂಧೀಜಿಯವರಿಗೆ ಅನೇಕ ಮಾರ್ಮಿಕವಾದ ಪ್ರಶ್ನೆಗಳನ್ನು ಹಾಕಿದರು. ಕೊನೆಯಲ್ಲಿ ತಮ್ಮ ಧರ್ಮಪ್ರಚಾರಕಾರ್ಯ (ಇದರ ಪ್ರತಿನಿಧಿಗಳಾಗಿ ಅವರು ಬಂದದ್ದು) ಭಾರತದೇಶದ ಆಂದೋಲನದೊಂದಿಗೆ ಹೇಗೆ ಹೊಂದಿಸಿ—ತಮ್ಮೆಲ್ಲರ ಗುರಿಸಾಧನೆ ಮಾಡಬಹುದೆಂದು ಕೇಳಿದರು.

ಈ ಕೊನೆಯ ಪ್ರಶ್ನೆಯನ್ನು ವಿಶದವಾಗಿ ಡಾ|| ಮಾಟ್ ಅವರೊಂದಿಗೆ ಆದ ಸಂಭಾಷಣೆಯಲ್ಲಿ ಚರ್ಚಿಸಲಾಗಿದೆ. ಆದುದರಿಂದ ಅದನ್ನು ಇಲ್ಲಿ ಬಿಡಬಹುದು. ಉಳಿದ ಪ್ರಶ್ನೆಗಳಿಗೆ ಗಾಂಧೀಜೀ ಕೊಟ್ಟ ಉತ್ತರಗಳನ್ನು ನಾನಿಲ್ಲಿ ಸಂಕ್ಷೇಪವಾಗಿ ಸೂಚಿಸುತ್ತೇನೆ. ಅವಶ್ಯವಿದ್ದಾಗ ಅನಂತರ ಅವರು ಆಡಿದ ಮಾತುಗಳಿಂದಲೂ ಕೆಲವು ಭಾಗವನ್ನು ಸೇರಿಸಿಕೊಂಡು ಅವರ ಅಭಿಪ್ರಾಯ ಮತ್ತಷ್ಟು ಸ್ಪಷ್ಟವಾಗುವಂತೆ ಉಲ್ಲೇಖಿಸಿದೇನೆ.

## ಉದ್ದೇಶ್ಯದ ಪ್ರಶ್ನೆ

ಒಬ್ಬರು ಒಂದು ಮೂಲಭೂತವಾದ ಪ್ರಶ್ನೆಯನ್ನು ಕೇಳಿದರು : ' ಜೀವನದಲ್ಲಿ ತಮ್ಮ ಉದ್ದೇಶ್ಯವೇನು ? ನಿಮ್ಮ ಎಲ್ಲ ಕಾರ್ಯಗಳಿಗೂ ಪ್ರೇರಣೆಯನ್ನು ಕೊಡುವುದು ಯಾವುದೊ ಅದು—ಧಾರ್ಮಿಕವೇ, ಸಾಮಾಜಿಕವೆ ಅಥವಾ ರಾಜಕೀಯವೆ ? '

'ಶುದ್ಧವಾಗಿ ಧಾರ್ಮಿಕ' ಎಂದು ಗಾಂಧೀಜೀ ಉತ್ತರವನ್ನಿತ್ತರು. 'ದಿವಂಗತ ಮಾಂಟೆಗೂ ಅವರು ಇದೇ ಪ್ರಶ್ನೆ ನನಗೆ ಹಾಕಿದರು. ಆಗ ಒಂದು ರಾಜಕೀಯ ನಿಯೋಗದಲ್ಲಿ ನಾನು ಸೇರಿಕೊಂಡಿದ್ದೆ. 'ನೀವು ಸಮಾಜ ಸುಧಾರಕರು—ಈ ಗುಂಪಿನಲ್ಲಿ ಎಲ್ಲಿ ಸೇರಿಕೊಂಡಿರಿ?' ಎಂದು ಚಕಿತರಾಗಿ ನನ್ನನ್ನು ಕೇಳಿದರು. ನನ್ನ ಸಾಮಾಜಿಕ ಚಟುವಟಿಕೆಗಳ ಇದೊಂದು ವಿಸ್ತರಣ ಮಾತ್ರವೆಂದು ನಾನು ಉತ್ತರ ಕೊಟ್ಟೆ. ಮಾನವ ವರ್ಗದೊಂದಿಗೆ ಪೂರ್ಣ ವಾಗಿ ಏಕೀಭವಿಸದಿದ್ದರೆ, ನನ್ನ ಧಾರ್ಮಿಕ ಜೀವನ ನಡೆಯಲಾರದು. ಹೀಗಿರಲು ನಾನು ರಾಜಕೀಯದಲ್ಲಿಯೂ ಭಾಗವಹಿಸಲೇಬೇಕು. ಮಾನವನ ಚಟುವಟಿಕೆಗಳೆಲ್ಲವೂ—ಒಂದು ಕೊನೆಯಿಂದ ಮತ್ತೊಂದು ಕೊನೆಯವರೆಗೂ—ಇಂದು ಅವಿಭಾಜ್ಯವಾದ ಏಕಸೂತ್ರದಲ್ಲಿ ಪೋಣಿಸಲ್ಪಟ್ಟಿವೆ. ಸಾಮಾಜಿಕ, ಆರ್ಥಿಕ, ರಾಜಕೀಯ, ಶುದ್ಧಧಾರ್ಮಿಕವೆಂದು ಪ್ರತ್ಯೇಕಿಸಿ ಪರಸ್ಪರ ಸಂಬಂಧ ವಿಲ್ಲದೆ ಮಾಡುವುದಕ್ಕಾಗುವುದಿಲ್ಲ. ಮಾನವನ ಚಟುವಟಿಕೆಯನ್ನುಳಿದು ಯಾವ ಧರ್ಮವನ್ನೂ ನಾನು ಕಾಣೆ. ಎಲ್ಲ ಕಾರ್ಯಗಳಿಗೂ ಅದೇ ನೈತಿಕ ತಳಹದಿಯನ್ನು ಒದಗಿಸುತ್ತದೆ. ಇದಿಲ್ಲವಾದರೆ ದೊಡ್ಡ ಲೋಪವೇ ಆಗುವುದು. ಜೀವನವೇ ಒಂದು ನಿರರ್ಥಕವಾದ ಗೊಂದಲವಾಗುವುದು.'

ಮತ್ತೊಂದು ಪ್ರಶ್ನೆಯನ್ನು ಕೇಳಿದರು: 'ಜನರ ಮೇಲೆ ನಿಮ್ಮ ಪ್ರಭಾವ ಅಪಾರವಾಗಿರುವುದು. ನಿಮಗೆ ಪ್ರೇರಣೆ ನೀಡುವುದು ಯಾವುದು: ತಾತ್ತ್ವಿಕ ಗುರಿಯ ಮೇಲಿನ ಪ್ರೇಮವೇ ಅಥವಾ ಜನರ ಮೇಲಿನ ಪ್ರೇಮವೆ?'

ನಿಶ್ಶಂಕೆಯಿಂದ ಗಾಂಧೀಜೀ ಉತ್ತರವಿತ್ತರು: 'ಜನರ ಮೇಲಿನ ಪ್ರೇಮ. ಜನರಲ್ಲದೆ—ಕೇವಲ ತಾತ್ತ್ವಿಕ ಗುರಿ ನಿರ್ಜೀವ ವಸ್ತು. ಜನರಲ್ಲಿ ನನಗಿದ್ದ ಪ್ರೇಮದ ದೆಸೆಯಿಂದ ನನ್ನ ಎಳೆಯ ವಯಸ್ಸಿನಲ್ಲಿಯೇ ಅಸ್ಪೃಶ್ಯತೆ ಸಮಸ್ಯೆಯ ಪರಿಹಾರ ಮಾಡಬೇಕೆಂಬ ಆಕಾಂಕ್ಷೆ ನನಗೆ ಬಂತು. 'ಈ ಹುಡುಗನನ್ನು ನೀನು ಮುಟ್ಟಬಾರದು. ಅವನು ಅಸ್ಪೃಶ್ಯ' ಎಂದು ನನ್ನ ತಾಯಿ ಹೇಳಿದರು. 'ಏಕೆ ಮುಟ್ಟಬಾರದು?' ಎಂದು ಮರುಪ್ರಶ್ನೆ ಹಾಕಿದೆ. ಅಂದಿನಿಂದ ನನ್ನ ಬಂಡಾಯ ಪ್ರಾರಂಭವಾಯಿತು.'

## ರಾಜಕೀಯಕ್ಕೆ ಬಹಿಷ್ಕಾರವಿಲ್ಲ

'ಈಸಾಯಿಗಳಾದ ನಾವೂ ನಿಮ್ಮ ಮೇಲ್ಪಂಕ್ತಿಯನ್ನು ಅನುಸರಿಸೋಣವೆ? ನಮ್ಮ ಧಾರ್ಮಿಕ ಉದ್ದೇಶ್ಯದ ಸಾಧನೆಗೆ ನಾವೂ ರಾಜಕೀಯದಲ್ಲಿ ಧುಮ್ಮಿಕ್ಕೋಣವೇ?'

'ಈ ದೇಶಕ್ಕೆ ಅನೇಕ ಕಡೆಗಳಿಂದ ಜನರು ಬರುವರು. ಈ ದೇಶದ ರಾಜಕೀಯದೊಂದಿಗೆ ನಮಗೇನು ಸಂಬಂಧವಿಲ್ಲವೆಂದು ಅವರು ಹೇಳಲಾಗದು. ಜನರೊಂದಿಗೆ ತಮಗಿರುವ ಸಹಾನುಭೂತಿಯನ್ನು ಒತ್ತಟ್ಟಿಗಿಟ್ಟು ಅವರು ಸರಕಾರದೊಂದಿಗೆ ವ್ಯವಹರಿಸಿದರೆ ಅವರ ನಿಷ್ಠೆಗೆ ಅದು ವಿರೋಧವಾಗುವುದು. ಸರಕಾರದವರು ಜನರಿಗೆ ಯಾವುದೋ ಒಂದು ಅನ್ಯಾಯವನ್ನು ಮಾಡುತ್ತಾರೆ ಎಂದು ಭಾವಿಸೋಣ. ಅದನ್ನು ನಿಲ್ಲಿಸಲು ಮಿಷನರಿಗಳು ಒಂದು ಬೆರಳನ್ನೂ ಎತ್ತಬಾರದೆಂದು ಹೇಳಿದ ಪಕ್ಷಕ್ಕೆ—ಕಟ್ಟಕಡೆಗೆ ಅವರು ಈ ದೇಶವನ್ನು ಬಿಟ್ಟು ಹೋಗಬೇಕು. ಏಕೆಂದರೆ ಈ ಅನ್ಯಾಯವನ್ನು ತಡೆಗಟ್ಟಲು ಅವರಿಂದ ಆಗಲಿಲ್ಲ ಎಂಬ ಕಾರಣದಿಂದ—ತಮ್ಮ ಅತೃಪ್ತಿಯನ್ನು ಸೂಚಿಸುವುದಕ್ಕಾಗಿ. ಒಬ್ಬ ಮಿಷನರಿಯು ಸೇವೆಗಾಗಿ ಮುಂದೆ ಬಂದನೆಂದರೆ ಆತನಿಗೆ ಅನೇಕ ಅವಕಾಶಗಳು ಬರುವುವು: ಇಂದು ಆರ್ಥಿಕ ಕ್ಷೇತ್ರದಲ್ಲಿರಬಹುದು, ನಾಳೆ ಸಾಮಾಜಿಕ ಕ್ಷೇತ್ರದಲ್ಲಿ, ಮತ್ತೊಮ್ಮೆ ರಾಜಕೀಯ ಕ್ಷೇತ್ರದಲ್ಲಿ. 'ನಾನಿದನ್ನು ಮಾಡುವೆನು. ಬೇರೆ ಯಾವ ಗೋಜಿಗೂ ಹೋಗಲಾರೆ, ಎಂದು ಹೇಳುವುದಕ್ಕೆ ಸಾಧ್ಯವಿಲ್ಲ. ನಾನು ದಕ್ಷಿಣ ಆಫ್ರಿಕಕ್ಕೆ ಹೋದಾಗ ನನಗೆ ಆ ದೇಶ ಏನೂ ಗೊತ್ತಿರಲಿಲ್ಲ. ನನ್ನ ಕಕ್ಷಿಗಾರನ ಹೊಣೆ ಮಾತ್ರ ನನಗಿತ್ತು. ಆದರೂ ಅಲ್ಲಿ ತಲಪಿದ ಏಳು ದಿನಗಳೊಳಗಾಗಿ ವರ್ಣಿಸಲಸಾಧ್ಯವಾದ ಒಂದು ಸನ್ನಿವೇಶವನ್ನು ಎದುರಿಸಬೇಕಾಯಿತು.'

## ಅಹಿಂಸೆ—ಪರಮಧರ್ಮ

'ನಾವು ಪಾಶ್ಚಾತ್ಯ ಜನರು ಶಾಂತಿಸ್ಥಾಪನೆಗಾಗಿ ಯುದ್ಧದಲ್ಲಿ ಪಾಲುಗೊಳ್ಳಲಾರೆವೆಂದು ಒಂದು ಉದ್ಯಮವನ್ನು ಮಾಡುತ್ತಿರುವೆವು. ಅದು ಅಷ್ಟು ಯಶಸ್ವಿಯಾಗಲಿಲ್ಲ. ನಿಮ್ಮ ಅಹಿಂಸಾ ಮಾರ್ಗಕ್ಕೂ ನಮ್ಮ ಯುದ್ಧಪ್ರತಿ

ಭಟನೆಯ ನಿಲುವಿಗೂ ಏನಾದರೂ ಸಂಬಂಧವಿದೆಯೆ ?' ಎಂದು ಗಾಂಧೀಜಿ ಯನ್ನು ಪ್ರಶ್ನಿಸಿದರು. ಧರ್ಮಬೋಧಕರಾದ ಮಿಷನರಿಗಳು ಕೇವಲ ಲೌಕಿಕ ಪ್ರಪಂಚಕ್ಕೆ ಸೇರಿದ ಗಾಂಧೀಜಿಯನ್ನು ನೈತಿಕಮಾರ್ಗವು ನಾಸ್ತಿಕತೆಯನ್ನು ಹೇಗೆ ಜಯಿಸಬಲ್ಲದೆಂದು ಪ್ರಶ್ನಿಸಿದ್ದು ಸೋಜಿಗವಾಗಿತ್ತು.

'ಅಹಿಂಸೆ ಎಂದರೆ ತಟಸ್ಥವಾಗಿರುವುದೆಂದು ನಾನು ಅಭಿಪ್ರಾಯಪಡು ವುದಿಲ್ಲ' ಎಂದು ಗಾಂಧೀಜೀ ಉತ್ತರವಿತ್ತರು. 'ನನ್ನ ಅರ್ಥದ ಪ್ರಕಾರ ಅಹಿಂಸೆಯೇ ಪ್ರಪಂಚದಲ್ಲಿರುವ ಇತರ ಎಲ್ಲ ಶಕ್ತಿಗಳಿಗಿಂತಲೂ ಅತಿ ಪರಿಣಾಮ ಕಾರಿಯಾದುದು. ಆದುದರಿಂದ ನಾಸ್ತಿಕತೆಯನ್ನೇ ಆಗಲಿ ಮತ್ತೆ ಯಾವುದನ್ನೇ ಆಗಲಿ ಎದುರಿಸುವ ಉಪಾಯ ಅದರಲ್ಲಿದ್ದಿದ್ದರೆ ನಾನು ಕಲ್ಪಿಸಿಕೊಂಡಿರುವಷ್ಟು ಪ್ರಬಲವಾದ ಶಕ್ತಿ ಅಹಿಂಸೆ ಆಗಲಾರದು. ಅಥವಾ ಮತ್ತೊಂದು ರೀತಿಯಲ್ಲಿ ಹೇಳುವುದಾದರೆ ನೀವೇನಾದರೂ ಸಮಸ್ಯೆಗಳನ್ನೂ ಒಗಟುಗಳನ್ನೂ ತಂದು ಅವಕ್ಕೆ ಪರಿಹಾರವನ್ನು ನನ್ನನ್ನು ಕೇಳಿ, ನಾನು ಸೂಕ್ತ ಉತ್ತರವನ್ನು ಕೊಡ ಲಾರದವನಾದರೆ ನನ್ನ ಅಹಿಂಸೆಯಲ್ಲಿ ಏನೋ ಲೋಪವಿರಬೇಕು. ಅಹಿಂಸೆಯೇ ಪರಮಧರ್ಮ. ಈ ಅರ್ಧ ಶತಮಾನದ ನನ್ನ ಅನುಭವದಿಂದ ನಾನಿದನ್ನು ಹೇಳಬಲ್ಲೆ : ನಾನು ಅಸಹಾಯನೆಂದು ಯಾವ ಸಂದರ್ಭದಲ್ಲಿಯೂ ಹೇಳುವಂತೆ ಆಗಿಲ್ಲ—ಅಹಿಂಸೆಯ ಪ್ರಯೋಗದ ಮೂಲಕ ಉಪಾಯವನ್ನು ಕಂಡುಹಿಡಿಯ ಲಾಗಲಿಲ್ಲವೆಂದೂ ಆಗಿಲ್ಲ.'

## ಯಹೂದ್ಯರು ಮತ್ತು ಅಹಿಂಸೆ

ನಾನು ಯಹೂದ್ಯರ ಸಮಸ್ಯೆಯನ್ನು ಕುರಿತು ಬರೆದಿದೇನೆ. ಅದನ್ನು ತೆಗೆದುಕೊಳ್ಳಿ. ಅಹಿಂಸಾಮಾರ್ಗವನ್ನು ಅನುಸರಿಸುವುದಾರೆ ಯಾವ ಯಹೂದ್ಯನೂ ತಾನು ಅಸಹಾಯನೆಂದು ಭಾವಿಸಬೇಕಾಗಿಲ್ಲ. ಯಹೂದ್ಯರು ಹಿಂಸಾಮಾರ್ಗವನ್ನವಲಂಬಿಸಿದರೆಂಬ ಅರ್ಥ ನನ್ನ ಲೇಖನದಿಂದ ಸೂಚಿತ ವಾಗುತ್ತೆಂದು ಒಬ್ಬ ಮಿತ್ರರು ಆಕ್ಷೇಪಿಸಿ ಪತ್ರ ಬರೆದಿದಾರೆ. ನಿಜ, ಸ್ವತಃ ಯಹೂದ್ಯರು ಹಿಂಸಾಕೃತ್ಯಗಳನ್ನು ಮಾಡಲಿಲ್ಲ; ಆದರೆ ಪ್ರಪಂಚವೆಲ್ಲ ಜರ್ಮನರನ್ನು ಶಪಿಸುವಂತೆ ಅವರು ಮಾಡಿದರು. ನಮ್ಮ ಪರವಾಗಿ ಅಮೆರಿಕ

ಮತ್ತು ಇಂಗ್ಲೆಂಡಿನವರು ಜರ್ಮನಿಯ ಮೇಲೆ ಹೋರಾಡಬೇಕೆಂದರು. ನಾನು ನನ್ನ ಶತ್ರುವಿಗೆ ಏಟನ್ನು ಕೊಟ್ಟರೆ ಅದೇನೋ ಹಿಂಸೆಯೇ ಆಯಿತು. ಆದರೆ ನಿಜವಾಗಿಯೂ ನಾನು ಅಹಿಂಸೆಯನ್ನು ಪಾಲಿಸಬೇಕಾದರೆ ನನ್ನ ಶತ್ರು ನನ್ನನ್ನು ಹೊಡೆದಾಗಲೂ ಅವನನ್ನು ನಾನು ಪ್ರೀತಿಸಬೇಕು—ಅವನಿಗಾಗಿ ಪ್ರಾರ್ಥಿಸಬೇಕು. ಈ ಬಗೆಯ ಅಹಿಂಸಾವರ್ತನೆ ಯಹೂದ್ಯರಲ್ಲಿರಲಿಲ್ಲ. ಇದ್ದಿದ್ದರೆ ದಬ್ಬಾಳಿಕೆಗೆ ಅವರು ಗುರಿಯಾಗುತ್ತಿದ್ದಾಗಲೂ 'ನಾವು ಕಷ್ಟವನ್ನನು ಭವಿಸುವೆವು; ಅವರಿಗೆ ಜ್ಞಾನವಿಲ್ಲ—ಆದರೆ ಅವರು ಬಯಸುವ ರೀತಿಯಲ್ಲಿ ನಾವು ಸಂಕಟಕ್ಕೆ ಗುರಿಯಾಗಲಾರೆವು' ಎಂದು ಒಬ್ಬ ಯಹೂದ್ಯನಾದರೂ ಈ ರೀತಿಯಲ್ಲಿ ವರ್ತಿಸಿದ್ದರೆ ಅವನು ತನ್ನ ಆತ್ಮಗೌರವವನ್ನು ಕಾಪಾಡಿಕೊಳ್ಳುತ್ತಿದ್ದ —ಮೇಲ್ಪಂಕ್ತಿಯನ್ನು ಕೊಡುತ್ತಿದ್ದ. ಯಹೂದ್ಯ ಪ್ರಪಂಚವೇ ಆ ದಾರಿಯನ್ನು ಹಿಡಿಯುತ್ತಿತ್ತು. ಯಹೂದ್ಯರಿಗೂ ಇಡೀ ಪ್ರಪಂಚಕ್ಕೂ ಒಂದು ದೊಡ್ಡ ಕುಲಧನ ಸಿಕ್ಕಿದಂತೆ ಆಗುತ್ತಿತ್ತು.

## ಚೀಣಾದೇಶದ ಅಗ್ನಿಪರೀಕ್ಷೆ

'ಚೀಣಾದ ವಿಚಾರವೇನೆಂದು ನೀವು ಪ್ರಶ್ನಿಸಬಹುದು. ಚೀಣಾ ದೇಶದವರಿಗೆ ಪರರಾಷ್ಟ್ರಗಳ ಮೇಲೆ ಲೋಭವಿಲ್ಲ. ಅವರಿಗೆ ಭೂಮಿದಾಹವಿಲ್ಲ. ಇತರರ ಮೇಲೆ ದಾಳಿ ನಡೆಸುವ ಶಕ್ತಿ ಚೀಣಾಕ್ಕೆ ಇಲ್ಲದೆ ಇರಬಹುದು. ಚೀಣಾ ದೇಶದ ಶಾಂತಸ್ವಭಾವವೆಂದು ತೋರಿಕೊಳ್ಳುವುದು ಅದರ ಆಲಸ್ಯ ಸ್ವಭಾವವಿರ ಬಹುದು. ಏನೇ ಇರಲಿ, ಚೀಣಾದೇಶದ ವರ್ತನೆ ಕ್ರಿಯಾತ್ಮಕವಾದ ಅಹಿಂಸೆ ಯಲ್ಲ. ಜಪಾನಿನವರು ದಾಳಿಮಾಡಿದಾಗ ಚೀಣಾದೇಶದವರು ಶಸ್ತ್ರಸಜ್ಜಿತ ರಾಗಿ ಎದುರಿಸಿದರು. ಅಂದಮೇಲೆ ಅಹಿಂಸಾತ್ಮಕ ಪ್ರತಿಭಟನೆಯ ಉದ್ದೇಶ್ಯ ಅವರಲ್ಲಿಲ್ಲ. ತಮ್ಮ ಆತ್ಮರಕ್ಷಣೆ ಮಾಡಿಕೊಳ್ಳುತ್ತಿರುವುದು ಸರಿಯೆ—ಆದರೂ ಇದಕ್ಕೂ ಅಹಿಂಸಾವರ್ತನೆಗೂ ಸಂಬಂಧವಿಲ್ಲ. ಆದುದರಿಂದ ಅವರ ಅಹಿಂಸೆ ಯನ್ನು ಪರೀಕ್ಷಿಸುವ ಕಾಲ ಒದಗಿದಾಗ, ಅವರು ತೇರ್ಗಡೆಯಾಗಲಿಲ್ಲ. ಇದು ಚೀಣಾದೇಶದ ದೂಷಣೆ ಅಲ್ಲ. ಅವರು ಜಯಶೀಲರಾಗಲೆಂದೇ ನಾನು ಹಾರೈಸುತ್ತೇನೆ. ಈಗ ಸಾಮಾನ್ಯವಾಗಿ ರೂಢಿಯಲ್ಲಿರುವ ಅಭಿಪ್ರಾಯದ

ಪ್ರಕಾರ—ಬೆಲೆ ಕಟ್ಟುವ ರೀತಿಯಲ್ಲಿ—ಚೀಣಾದೇಶದ ವರ್ತನೆ ಕೇವಲ ನಿರ್ದುಷ್ಟವಾದುದು. ಆದರೆ ಅಹಿಂಸೆಯ ದೃಷ್ಟಿಯಿಂದ ವಿಚಾರಮಾಡಿದರೆ ಜಪಾನಿನಷ್ಟೇ ಸುಸಂಸ್ಕೃತವಾದ ದೇಶ, ಜಪಾನೀಯರ ದಾಳಿಯನ್ನು ಜಪಾನೀಯರ ಧೋರಣೆಯನ್ನೇ ಅನುಸರಿಸಿ ಹಿಮ್ಮೆಟ್ಟಿಸುವುದು ೪೦ ಕೋಟಿ ಪ್ರಜೆಗಳುಳ್ಳ ಚೀಣಾದೇಶಕ್ಕೆ ಯೋಗ್ಯವಾದ ಆಚರಣೆಯಲ್ಲ. ನನ್ನ ಕಲ್ಪನೆಯಂತೆ ಚೀಣಾದೇಶದವರಲ್ಲಿ ಅಹಿಂಸಾಗುಣ ಇದ್ದ ಪಕ್ಷಕ್ಕೆ, ಜಪಾನೀಯರಲ್ಲಿರುವ ವಿಧ್ವಂಸಕ ಅಸ್ತ್ರಗಳಿಗೆ ಏನೂ ಕೆಲಸ ಉಳಿದಿರಲಾರದು. ಚೀಣಾದೇಶದವರು ಜಪಾನೀಯರಿಗೆ ಈ ರೀತಿ ಹೇಳುತ್ತಿದ್ದರು: 'ನಿಮ್ಮ ಅಸ್ತ್ರಗಳನ್ನು ತೆಗೆದುಕೊಂಡು ಬನ್ನಿ—ನಮ್ಮಲ್ಲಿ ೨೦ ಕೋಟಿ ಜನರನ್ನು ನಿಮಗೆ ಅರ್ಪಿಸುತ್ತೇವೆ. ಆದರೆ ಉಳಿದ ೨೦ ಕೋಟಿ ಜನರು ನಿಮಗೆ ಶರಣುಹೋಗಲಾರರು.' ಹೀಗೆ ಚೀಣಾದೇಶ ಮಾಡಿದ್ದರೆ ಜಪಾನದೇಶ ಚೀಣಾದೇಶದ ಗುಲಾಮನಾಗುತ್ತಿತ್ತು. ಇದನ್ನು ಪುಷ್ಟೀಕರಿಸಲು ಷೆಲ್ಲಿ ಕವಿಯ ಕೆಲವು ಪದ್ಯಗಳನ್ನು ಹೇಳಿದರು.

## ವಿಧ್ವಂಸಕ ಯಾಂತ್ರಿಕ ಯುದ್ಧ—ಅಹಿಂಸೆ

ಗಾಂಧೀಜೀ ಹೇಳಿದರು: 'ಒಂದು ಆಕ್ಷೇಪಣೆಯನ್ನು ಎತ್ತಿದಾರೆ. ಯುಹೂದ್ಯರ ವಿಷಯದಲ್ಲಿ ಅಹಿಂಸೆಯಿಂದ ಪರಿಣಾಮವುಂಟಾದೀತು—ಏಕೆಂದರೆ ಹಿಂಸೆ ಮಾಡುವವರೊಂದಿಗೆ ಅವರ ಪ್ರತ್ಯಕ್ಷ ಸಂಪರ್ಕವಿದೆ. ಆದರೆ ಚೀಣಾದೇಶದಲ್ಲಿ ಜಪಾನೀಯರು ಬಹಳ ದೂರ ಹೋಗಬಲ್ಲ ತಮ್ಮ ಅಸ್ತ್ರಗಳನ್ನೂ ವಿಮಾನಗಳನ್ನೂ ತರುವರು. ವಿಮಾನದಿಂದ ಭೂಮಿಯ ಮೇಲಿನ ಜನರನ್ನು ಕೊಲ್ಲುವವನು ಯಾರು ಸತ್ತರು, ಎಷ್ಟು ಜನರು ಸತ್ತರು ಎನ್ನುವುದನ್ನು ತಿಳಿದಿರಲಿಕ್ಕಿಲ್ಲ. ಹೀಗೆ ಪರಸ್ಪರ ಸಂಪರ್ಕವೇ ಇಲ್ಲದಿದ್ದಾಗ ಈ ಮಾರಕ ಅಸ್ತ್ರಗಳನ್ನು ಅಹಿಂಸೆ ಹೇಗೆ ಎದುರಿಸಲು ಸಾಧ್ಯ? ಇದಕ್ಕೆ ಉತ್ತರ ಏನೆಂದರೆ: ಈ ಮಾರಕ ಅಸ್ತ್ರವನ್ನು ಒಬ್ಬ ಮನುಷ್ಯನು ತನ್ನ ಕೈಯಿಂದ ಪ್ರಯೋಗಮಾಡುವನು. ಆ ಕೈಗೆ ಅವನ ಹೃದಯ ಪ್ರೇರಣೆ ಕೊಡುವುದು. ಶಸ್ತ್ರಗಳನ್ನು ಸುರಿಸಿ ಭೀತಿ ಉಂಟುಮಾಡುವುದರಿಂದ—ಇದನ್ನು ಹೆಚ್ಚು ಪ್ರಮಾಣದಲ್ಲಿ ಮಾಡಿದಷ್ಟೂ ಹೆರರನ್ನು ತಮ್ಮ ಅಧೀನರನ್ನಾಗಿ ಮಾಡಿಕೊಳ್ಳುವ

ಘೋರಣೆ ಈ ಎಲ್ಲ ವ್ಯಾಪಾರದ ಹಿನ್ನೆಲೆಯಾಗಿದೆ. ಆದರೆ ಜನರು ಹಾಗೆ ಅಧೀನರಾಗಲು ಸಿದ್ಧವಾಗಿಲ್ಲ. ತಮ್ಮ ಶತ್ರುಗಳ ಮಾರಕ ಅಸ್ತ್ರಗಳಿಗೆ ಪ್ರತಿಯಾಗಿ ತಾವು ಯಾವ ಅಸ್ತ್ರಪ್ರಯೋಗವನ್ನೂ ಮಾಡಲಾರರು ಎಂಬುದು ಖಚಿತವಾದರೆ ಕ್ರೌರ್ಯವನ್ನು ಮಾಡುವವರು ಈ ಕ್ರೌರ್ಯವನ್ನು ಮುಂದುವರಿಸಿ ಪ್ರಯೋಜನವಿಲ್ಲವೆಂದು ಅರಿತುಕೊಳ್ಳುವರು. ಕ್ರೂರಿಗೆ ಸಾಕಷ್ಟು ಆಹಾರ ಒದಗಿಸಿದಮೇಲೆ ಹೊಟ್ಟೆಯುಬ್ಬರದಿಂದ ಮತ್ತಷ್ಟನ್ನು ಇಚ್ಛಿಸಲಾರನು. ಪ್ರಪಂಚದಲ್ಲಿರುವ ಇಲಿಗಳೆಲ್ಲ ಒಂದು ಸಮ್ಮೇಳನ ಮಾಡಿ ಇನ್ನುಮುಂದೆ ಬೆಕ್ಕುಗಳಿಗೆ ಹೆದರಲಾರೆವು—ಅವುಗಳ ಬಾಯಿಗೇ ಹೋಗೋಣ ಎಂದು ತೀರ್ಮಾನಿಸಿದರೆ ಇಲಿಗಳೆಲ್ಲ ಬದುಕುವುವು. ಒಂದು ಬೆಕ್ಕು ಇಲಿಯೊಂದಿಗೆ ಆಟವಾಡಿದುದನ್ನು ನಾನು ಪ್ರತ್ಯಕ್ಷ ನೋಡಿದೇನೆ. ಅದು ಇಲಿಯನ್ನು ತಕ್ಷಣ ಕೊಲ್ಲಲಿಲ್ಲ—ತನ್ನ ದವಡೆಯಲ್ಲಿ ಹಿಡಿದುಕೊಂಡಿತು—ಆಮೇಲೆ ಬಿಟ್ಟಿತು; ಇಲಿ ಓಡುವುದಕ್ಕೆ ಹೋದರೆ ಮತ್ತೆ ಅದನ್ನು ಹಿಡಿದುಕೊಂಡಿತು. ಕೊನೆಗೆ ಕೇವಲ ಭೀತಿಯ ದೆಸೆಯಿಂದ ಇಲಿ ಸತ್ತುಹೋಯಿತು. ಆ ಇಲಿ ಓಡಲು ಪ್ರಯತ್ನಮಾಡದಿದ್ದರೆ ಬೆಕ್ಕಿಗೆ ಯಾವ ಆಟವೂ ಸಿಗುತ್ತಿರಲಿಲ್ಲ. ನಾನು ಅಹಿಂಸೆಯ ಪಾಠವನ್ನು ಕಲಿತದ್ದು ನನ್ನ ಹೆಂಡತಿಯಿಂದ—ಅವಳನ್ನು ನನ್ನ ಇಷ್ಟಕ್ಕೆ ಬಗ್ಗಿಸಲು ಪ್ರಯತ್ನಿಸಿದಾಗ. ಅವಳು ಪಟ್ಟಾಗಿ ನನ್ನ ಇಷ್ಟಕ್ಕೆ ಒಡಂಬಡದೆ ಪ್ರತಿಭಟಿಸಿದಳು. ಆದರೆ ನನ್ನ ತಿಳಿಗೇಡಿತನದಿಂದ ಅವಳಿಗೆ ಆದ ಯಾತನೆಯನ್ನು ಶಾಂತತೆಯಿಂದ ಸಹಿಸಿಕೊಂಡಳು. ಇದರ ಪರಿಣಾಮವಾಗಿ ನನ್ನ ವರ್ತನೆಯ ಬಗ್ಗೆ ನನಗೇ ನಾಚಿಕೆಯಾಯಿತು. ನಾನು ಅವಳ ಮೇಲೆ ಅಧಿಕಾರ ಮಾಡುತ್ತಿರುವೆನಲ್ಲಾ ಎಂದು ಪಶ್ಚಾತ್ತಾಪವಾಯಿತು. ಕೊನೆಗೆ ಅಹಿಂಸೆಯ ವಿಷಯದಲ್ಲಿ ಅವಳೇ ನನ್ನ ಗುರುವಾದಳು. ನಾನು ದಕ್ಷಿಣ ಆಫ್ರಿಕದಲ್ಲಿ ನಡೆಸಿದ ಆಂದೋಲನ—ಅವಳು ವೈಯಕ್ತಿಕವಾಗಿ, ಇಷ್ಟವಿಲ್ಲದೆ ಆಚರಿಸಿದ ಸತ್ಯಾಗ್ರಹದ ವಿಸ್ತೃತ ಪ್ರಯೋಗ—ಅಷ್ಟೆ!

# ಸರ್ವಾಧಿಕಾರದ ವಿಷಯ

ಒಬ್ಬ ಮಿತ್ರರು ಆಕ್ಷೇಪಿಸಿದರು: 'ನೀವು ಹಿಟ್ಲರ್ ಮತ್ತು ಮುಸೊಲನಿ ಇವರನ್ನು ಕಾಣರಿ. ನೈತಿಕಕ್ಷೇತ್ರದಲ್ಲಿ—ಅವರ ಕಡೆಯಿಂದ ಯಾವ ಅನುಕೂಲ ವಾದ ಪ್ರತಿಕ್ರಿಯೆಯನ್ನೂ ನಿರೀಕ್ಷಿಸಲಿಕ್ಕಿಲ್ಲ—ಆ ಹಂತದಲ್ಲಿ ಅವರದು ಜಡ ಸ್ವಭಾವ. ಅವರಲ್ಲಿ ಮನಸ್ಸಾಕ್ಷಿಯೆಂಬುದಿಲ್ಲ—ಪ್ರಪಂಚದ ಅಭಿಪ್ರಾಯಕ್ಕೆ ಅವರು ಕಿವಿಗೊಡುವುದೂ ಇಲ್ಲ. ಇಂತಹವರೆದುರಿಗೆ, ನಿಮ್ಮ ಸಲಹೆಯಂತೆ, ಒಂದು ಉದಾಹರಣೆಯನ್ನು ತೆಗೆದುಕೊಂಡರೆ, ಜೆಕ್ಕರು (Czechs) ಅಹಿಂಸಾ ರೀತಿಯಲ್ಲಿ ಪ್ರತಿಭಟನೆಯನ್ನು ಮಾಡಿದರೆ ಬಲಿಯಾಗಿಬಿಡುವರು. ಅಹಿಂಸಾ ಮಾರ್ಗ ಮಾನವನಲ್ಲಿರುವ ನೀತಿಬುದ್ಧಿಯನ್ನು ಪ್ರಚೋದಿಸುವ ಮಾರ್ಗ. ಆದರೆ ಈ ನಿರಂಕುಶ ಸರ್ವಾಧಿಕಾರಿಗಳಲ್ಲಿ ಆ ನೈತಿಕ ಪ್ರಜ್ಞೆಯೇ ಶೂನ್ಯ. ಇಂತಹವರೆದುರಿಗೆ ಅಹಿಂಸೆ ಹೇಗೆ ಕೆಲಸ ಮಾಡೀತು?'

ಗಾಂಧೀಜೀ ಉತ್ತರವಿತ್ತರು: 'ಮುಸೊಲನಿ ಮತ್ತು ಹಿಟ್ಲರ್—ಇಂತಹ ಸರ್ವಾಧಿಕಾರಿಗಳಿಗೆ ವಿಮೋಚನೆಯೇ ಇಲ್ಲವೆಂದು ನಿಮ್ಮ ವಾದದಿಂದ ಅರ್ಥವಾಗುತ್ತದೆ. ಆದರೆ ಅಹಿಂಸೆಯಲ್ಲಿ ಶ್ರದ್ಧೆ ಉಳ್ಳವರು—ಮಾನವಸ್ವಭಾವ ಮೂಲತಃ ಒಂದೇ—ಅದು ಪ್ರೇಮಕ್ಕೆ ಒಲಿಯಲೇಬೇಕು ಎಂಬ ಸಿದ್ಧಾಂತದ ಮೇಲೆ ಕೆಲಸ ಮಾಡುತ್ತಾರೆ. ಈವರೆಗೂ ಅವರು ಹಿಂಸೆಯನ್ನು ಎದುರಿಸುತ್ತಿದ್ದರು, ಅದಕ್ಕೆ ಪ್ರತಿಕ್ರಿಯೆ ಮಾಡುತ್ತಿದ್ದರು; ಆದರೆ ಸುವ್ಯವಸ್ಥಿತವಾದ ಅಹಿಂಸಾತ್ಮಕ ಪ್ರತಿಭಟನೆ ಅವರ ಅನುಭವಕ್ಕೆ ಇನ್ನೂ ಬಂದಿಲ್ಲ. ಆದುದರಿಂದ ಇಂತಹುದನ್ನು ಎದುರಿಸಬೇಕಾದರೆ ಇದರ ಮಹಚ್ಛಕ್ತಿಯನ್ನು ಅವರು ಕಾಣುವ ಸಂಭವವಿದೆ. ಅಷ್ಟೇ ಅಲ್ಲ, ಕಂಡೇ ಕಾಣುವರು. ತಾವು ಪ್ರಯೋಗಮಾಡ ಬಹುದಾದ ಹಿಂಸೆಯ ಪ್ರದರ್ಶನಕ್ಕಿಂತಲೂ ಇದು ಎಷ್ಟೋ ಮೇಲೆಂದು ಅವರಿಗೆ ಗೋಚರವಾಗುವುದು. ಜೆಕ್ಕರಿಗೆ ನಾನು ಸೂಚಿಸಿರುವ ಅಹಿಂಸಾತ್ಮಕ ವಿಧಾನದಲ್ಲಿ ಯಶಸ್ವಿಯಾಗಲು ಸರ್ವಾಧಿಕಾರಿಗಳ ಸೌಹಾರ್ದವನ್ನು ಅವರು ಪಡೆಯುವ ಅಗತ್ಯವಿಲ್ಲ. ಏಕೆಂದರೆ ಅಹಿಂಸಾತ್ಮಕ ಪ್ರತಿಭಟನೆಯನ್ನು ಕೈಗೊಳ್ಳುವವನು ದೇವರ ನಿತ್ಯಾನುಗ್ರಹವನ್ನು ಮಾತ್ರ ಅಪೇಕ್ಷಿಸುತ್ತಾನೆ—ಇದೇ ಅವನನ್ನು ಎಲ್ಲ ಕಷ್ಟಗಳಿಂದಲೂ ಪಾರುಮಾಡುತ್ತದೆ. ಅವನ ಶ್ರದ್ಧೆ ಅವನನ್ನು ಅಜೇಯನನ್ನಾಗಿಸುತ್ತದೆ.

ಇದಕ್ಕೆ ತತ್‌ಕ್ಷಣ ಉತ್ತರ ಕೊಡುತ್ತ ಆ ಮಿತ್ರರು ಹೇಳಿದರು : 'ಆದರೆ ಈ ಸರ್ವಾಧಿಕಾರಿಗಳು ಬುದ್ಧಿವಂತರು. ಅವರು ಬಲಪ್ರಯೋಗ ಮಾಡುವುದಿಲ್ಲ. ತಮಗೆ ಬೇಕಾದುದನ್ನು ಕಸಿದುಕೊಳ್ಳುವರು. ಇಂತಹ ಸಂದರ್ಭದಲ್ಲಿ ಅಹಿಂಸಾತ್ಮಕ ಪ್ರತಿಭಟನೆಯಿಂದ ಏನು ಪ್ರಯೋಜನ ?'

ಗಾಂಧೀಜೀ ಉತ್ತರವಿತ್ತರು : 'ಉದಾಹರಣೆಗೆ, ಅವರು ಬಂದು ಗಣಿಗಳನ್ನೂ ಕೈಗಾರಿಕೆಯ ಕಾರಖಾನೆಗಳನ್ನೂ ಜೆಕ್ಕರಿಗೆ ಸೇರಿದ ಇತರ ಸಂಪದ್ಭರಿತ ಪ್ರದೇಶಗಳನ್ನೂ ಆಕ್ರಮಿಸಿದರೆಂದು ಭಾವಿಸೋಣ. ಅದರಿಂದ ಈ ಕೆಳಗೆ ಕಂಡ ಪರಿಣಾಮಗಳಾಗುವುವು :

(೧) ಜೆಕ್ಕರು ಅವಿಧೇಯರಾಗಿದ್ದರೆಂದು ಅವರನ್ನು ನಾಶಗೊಳಿಸಬಹುದು. ಹೀಗಾದರೆ ಇದೇ ಜೆಕ್ಕರಿಗೆ ಪ್ರಚಂಡವಾದ ಜಯವಾಗುವುದು. ಅಂದಿನಿಂದ ಜರ್ಮನಿಯ ಪತನವು ಪ್ರಾರಂಭವಾಗುವುದು.

(೨) ದಾಳಿಕಾರರ ಬಲಪ್ರಯೋಗವನ್ನು ಕಂಡು ಜೆಕ್ಕರು ಭೀತಿಯಿಂದ ಧೈರ್ಯಗೆಡಬಹುದು. ಎಲ್ಲ ಹೋರಾಟಗಳಲ್ಲಿಯೂ ಇದು ಆಗುವ ಘಟನೆಯೇ ಆದರೆ ಹೀಗೆ ಧೈರ್ಯಗೆಟ್ಟರೆ ಇದು ಅಹಿಂಸೆಯ ಕಾರಣದಿಂದಲ್ಲ—ಸಾಕಷ್ಟು ಅಹಿಂಸೆ ಇಲ್ಲದ ಕಾರಣದಿಂದ.

(೩) ಈ ಆಕ್ರಮಿಸಿದ ಪ್ರದೇಶಗಳಲ್ಲಿ ಜರ್ಮನಿಯವರು ತಮ್ಮಲ್ಲಿ ಹೆಚ್ಚಾಗಿ ಇರುವ ಜನರನ್ನು ವಲಸೆಗೆ ಕಳುಹಿಸಬಹುದು. ಇದನ್ನೂ ಹಿಂಸೆಯ ಮೂಲಕ ಪ್ರತಿಭಟಿಸಿ ನಿಲ್ಲಿಸಲು ಸಾಧ್ಯವಿಲ್ಲ. ಅಲ್ಲದೆ ಹಿಂಸಾತ್ಮಕ ಪ್ರತಿಭಟನೆಯೇ ಸಾಧ್ಯವಿಲ್ಲವೆಂದು ನಾವು ಮೊದಲೇ ಒಪ್ಪಿಕೊಂಡಿದೇವೆ. ಆದುದರಿಂದ ಅಹಿಂಸಾತ್ಮಕ ಪ್ರತಿಭಟನೆಯೊಂದೇ ಎಲ್ಲ ಸಂದರ್ಭಗಳಲ್ಲಿಯೂ ಉತ್ತಮವಾದ ಮಾರ್ಗವೆಂದು ಸಿದ್ಧವಾಗುತ್ತದೆ.

'ಹಿಟ್ಲರ್ ಮತ್ತು ಮುಸೋಲಿನಿ ಪ್ರಪಂಚದ ಅಭಿಪ್ರಾಯವನ್ನು ಅಷ್ಟು ದುರ್ಲಕ್ಷ್ಯ ಮಾಡುವರೆಂದು ನನಗೆ ತೋರುವುದಿಲ್ಲ. ಆದರೆ ಇಂದು ಈ ಸರ್ವಾಧಿಕಾರಿಗಳು ಹೀಗೆ ದುರ್ಲಕ್ಷ್ಯಮಾಡಲು ಒಂದು ಕಾರಣ—ಈ ದೊಡ್ಡ ರಾಷ್ಟ್ರಗಳ ಹಿಂದಿನ ಚರಿತ್ರೆಯೇ ಶುದ್ಧವಾಗಿಲ್ಲ ಮತ್ತು ಈ ರಾಷ್ಟ್ರಗಳಿಂದ

ಬಹಳ ಅನ್ಯಾಯವನ್ನು ಅನುಭವಿಸಿದಾರೆ—ಅದು ಮನಸ್ಸನ್ನು ಕೊರೆಯುತ್ತಲೇ ಇದೆ. ಒಬ್ಬ ಇಂಗ್ಲೀಷ್ ದೊಡ್ಡ ಮನುಷ್ಯ ಕೆಲವು ದಿನಸಗಳ ಹಿಂದೆ ನನ್ನೊಡನೆ ಮಾತನಾಡುತ್ತ ಇಂದಿನ ನಾಟ್ಸಿ ಜರ್ಮನಿ ಇಂಗ್ಲೆಂಡಿನ ಪಾಪದ ಪ್ರತೀಕ ಎಂದೂ, ವರ್ಸೇಲ್ಸ್‌ನಲ್ಲಿ ಆದ ಒಪ್ಪಂದವೇ ಹಿಟ್ಲರನ್ನು ನಿರ್ಮಾಣಮಾಡಿತೆಂದೂ ಹೇಳಿದರು.'

ಮಿತ್ರರು: ನಾನು ಈಸಾಯಿ ಆಗಿ ಅಂತರರಾಷ್ಟ್ರೀಯ ಶಾಂತಿಸ್ಥಾಪನೆಗಾಗಿ ಏನು ಮಾಡಲು ಸಾಧ್ಯ? ಈ ಅಂತರರಾಷ್ಟ್ರೀಯ ಅನಾಯಕತ್ವವನ್ನು ಕೊನೆಗಾಣಿಸಿ ಶಾಂತಿಸ್ಥಾಪನೆಗೆ ಅಹಿಂಸಾಮಾರ್ಗ ಪರಿಣಾಮಕಾರಿಯಾಗುವಂತೆ ಮಾಡುವುದು ಹೇಗೆ? ಅಧೀನರಾಷ್ಟ್ರಗಳ ಮಾತಿರಲಿ, ಪ್ರಬಲ ರಾಷ್ಟ್ರಗಳು ತಮ್ಮ ಯುದ್ಧದ ಸಿದ್ಧತೆಗಳ ವಿಸರ್ಜನೆ ಮಾಡುವಂತೆ ನಾವು ಯಾವ ಕಾರ್ಯ ಮಾಡಲು ಸಾಧ್ಯ?

ಗಾಂಧೀಜೀ: ನೀವು ಈಸಾಯಿಗಳಾಗಿ, ನಿಮ್ಮ ಸರ್ವಸ್ವವನ್ನೂ ಕಳೆದುಕೊಳ್ಳುವ ಸಂಭವವಿದ್ದರೂ ಅಹಿಂಸಾತ್ಮಕ ಕಾರ್‍ಯವನ್ನು ಕೈಗೊಂಡು ಅದನ್ನು ಬಹಳ ಪರಿಣಾಮಕಾರಿಯಾಗಿ ಮಾಡಬಹುದು. ಪ್ರಬಲ ರಾಷ್ಟ್ರಗಳು ಧೈರ್ಯವನ್ನು ತಂದುಕೊಂಡು ಶಸ್ತ್ರಸನ್ಯಾಸ ಕೈಗೊಳ್ಳುವವರೆಗೂ ಶಾಂತಿಸ್ಥಾಪನೆ ಆಗಲಾರದು. ಈಚಿಗೆ ನಡೆದ ಘಟನೆಗಳು ಪ್ರಬಲ ರಾಷ್ಟ್ರಗಳಲ್ಲಿ ಈ ನಂಬಿಕೆ ಒತ್ತಾಯಪೂರ್ವಕವಾಗಿ ಬರುವಂತೆ ಮಾಡಿವೆ. ನನಗೆ ಪೂರ್ಣ ನಂಬಿಕೆ ಇದೆ. ಐವತ್ತು ವರ್ಷಗಳಿಂದ ಅಹಿಂಸಾಮಾರ್ಗದಲ್ಲಿ ಪ್ರಯೋಗಗಳನ್ನು ನಡೆಸಿದುದರ ಫಲವಾಗಿ ಆ ನಂಬಿಕೆ ಮತ್ತಷ್ಟು ಪ್ರಕಾಶಮಾನವಾಗಿದೆ. ಅದೇನೆಂದರೆ: ಮಾನವಕೋಟಿಯ ರಕ್ಷಣೆಗೆ ಅಹಿಂಸೆಯೇ ಮಾರ್ಗ. ನಾನು ಬೈಬಲನ್ನು ಅರ್ಥ ಮಾಡಿಕೊಂಡಿರುವ ರೀತಿಯಲ್ಲಿ ಅಹಿಂಸೆಯೇ ಬೈಬಲ್ಲಿನ ಮುಖ್ಯ ಉಪದೇಶ.

(ಹರಿಜನ, ೨೪-೧೨-೧೯೩೮)

## ಅಹಿಂಸೆ ಪರಿಣಾಮಕಾರಿಯಾಗದೇ?

ಯಹೂದ್ಯರು ಎರಡು ಸಾವಿರ ವರ್ಷಗಳು ಅಹಿಂಸಾವಲಂಬಿಗಳೆಂಬ ಅಭಿಪ್ರಾಯಕ್ಕೆ ಮಾಡಿದ ಆಕ್ಷೇಪಣೆಗೆ ನಾನು ಕೊಟ್ಟ ಸಮಾಧಾನವನ್ನು

ಪ್ರಸ್ತಾಪಿಸುತ್ತ ಸ್ಟೇಟ್ಸ್‌ಮನ್ ಪತ್ರಿಕೆ ಸಂಪಾದಕೀಯ ಲೇಖನದಲ್ಲಿ ಈ ರೀತಿ ಬರೆದಿದೆ :

ಪಾಸ್ಟರ್ ನೀಮೋಲ್ಲರ್ ಹೆಸರೂ, ಲೂಥರನ್ ಚರ್ಚ್ ಅನುಭವಿಸಿದ ಕಷ್ಟಗಳೂ ಪ್ರಪಂಚಕ್ಕೆ ತಿಳಿದಿವೆ. ಇಲ್ಲಿ ಅನೇಕ ಪಾದ್ರಿಗಳೂ, ಈಸಾಯಿ ಜನರೂ ವಿಚಾರಣೆಮಾಡುವ ನ್ಯಾಯಾಸ್ಥಾನಗಳ ಮುಂದೆ ಧೈರ್ಯವಾಗಿ ವರ್ತಿಸಿದರು. ಹಿಂಸೆಯನ್ನೂ ಕಿರುಕುಳಗಳನ್ನೂ ಸಹಿಸಿದರು. ತಾವು ಸತ್ಯವೆಂದು ನಂಬಿದುದಕ್ಕೆ ತಮ್ಮ ಅಚಲವಾದ ಶ್ರದ್ಧೆಯನ್ನು ಉದಾತ್ತ ರೀತಿಯಲ್ಲಿ ತೋರಿಸಿ ಅದನ್ನು ಎತ್ತಿಹಿಡಿದರು. ಹೀಗಾದರೂ ಜರ್ಮನಿಯಲ್ಲಿ ಏನಾದರೂ ಹೃದಯ ಪರಿವರ್ತನೆಯಾಗಿದೆಯೇ ? ಏಸುವಿನ ಶಾಂತಿಸಂದೇಶಕ್ಕೆ ವಿರುದ್ಧವಾಗಿದೆ ಎಂದು ನಾಟ್ಸಿ ಸೈನ್ಯಖಾತೆಯ ದಬ್ಬಾಳಿಕೆಯನ್ನು ಧಿಕ್ಕರಿಸಿದ ಬೈಬಲ್ ಸರ್ಚರ್ಸ್ ಲೀಗ್ (ಬೈಬಲನ್ನು ಅರಸುವವರ ಸಂಸ್ಥೆ) ಜನರು ಕಾರಾಗೃಹದಲ್ಲಿ ಕೊಳೆಯುತ್ತಿದಾರೆ. ಐದು ವರ್ಷಗಳಿಂದ ಬಂದಿಗಳಾಗಿದಾರೆ. ಎಷ್ಟು ಜರ್ಮನರಿಗೆ ಈ ವಿಷಯ ಗೊತ್ತಿದೆ ? ಗೊತ್ತಿದ್ದರೂ ಏನು ಮಾಡುತ್ತಿದಾರೆ ?

ಅಹಿಂಸೆ—ಅದು ದುರ್ಬಲರದಾಗಲಿ, ಬಲಿಷ್ಠರದಾಗಲಿ—ಕೇವಲ ಒಂದು ವೈಯಕ್ತಿಕ ಸಾಧನೆಯ ತತ್ತ್ವ—ಸಾಮೂಹಿಕ ತತ್ತ್ವವಲ್ಲ. ಎಲ್ಲೋ ಕೆಲವು ವಿಶೇಷ ಸಂದರ್ಭಗಳಲ್ಲಿ ಇದಕ್ಕೆ ಅಪವಾದವಿರಬಹುದು. ಮಾನವನ ಉದ್ಧಾರ ಅವನವನಿಗೇ ಬಿಟ್ಟರೆ ಒಳ್ಳೆಯದು. ರಾಜಕಾರಣಿಗಳು ಕೆಲವು ದೊಡ್ಡ ಉದ್ದೇಶ್ಯಗಳು, ನಂಬಿಕೆಗಳು, ಅಲ್ಪಸಂಖ್ಯಾತರು—ಈ ವಿಷಯಗಳ ಚಿಂತೆ ಹಚ್ಚಿಕೊಳ್ಳುತ್ತಾರೆ. ಹಿಟ್ಲರ್ ತನ್ನ ಬಹುದಕ್ಷರಾದ ಸೈನ್ಯದವರು ತೋರಿಸುವ ಶೌರ್ಯಕ್ಕಿಂತಲೂ ಮಹೋನ್ನತವಾದ ಶೌರ್ಯದ ಮುಂದೆ (ಅಂದರೆ ಅಹಿಂಸೆಯ ಮುಂದೆ) ಮಣಿಯುವನೆಂದು ಗಾಂಧೀಜೀ ಹೇಳುತ್ತಾರೆ. ಹೀಗಿದ್ದರೆ ಹೆರ್ ವಾನ್ ಆಸೀಟ್‌ಸ್ಕಿ ಅಂತಹ ಪ್ರಭೃತಿಗಳಿಗೆ ಹಿಟ್ಲರ್ ತಮ್ಮ ಗೌರವಕಾಣಿಕೆಯನ್ನು ಸಲ್ಲಿಸುತ್ತಿದ್ದರು. ಆದರೆ ನಾಟ್ಸಿ ಜನರು ಶೌರ್ಯವೆಂದರೆ ಅರ್ಥ ಮಾಡಿರುವುದು—ತನ್ನ ಅನುಯಾಯಿಗಳು ತೋರುವ ಗುಣಕ್ಕೆ ಮಾತ್ರ. ಇಲ್ಲವಾದರೆ ಅದು ಯಹೂದ್ಯ–ಮಾರ್ಕ್ಸಿಸ್ಟ್ ಪ್ರಚೋದಿತ ಉದ್ದಂಡತನವೆನ್ನುತ್ತಾರೆ. ಪ್ರಬಲವಾದ ರಾಷ್ಟ್ರಗಳು ಇದಕ್ಕೆ ಯಾವುದನ್ನೂ ಮಾಡಲು ಅಶಕ್ತವಾಗಿರುವುದರಿಂದ ಗಾಂಧೀಜಿಯವರು ತಮ್ಮ ಅಹಿಂಸಾ ಉಪಾಯವನ್ನು

ಮುಂದೆ ಒಡ್ಡುತ್ತಾರೆ. ಈ ಅಶಕ್ತತೆಗಾಗಿ ನಾವು ವಿಷಾದಿಸುತ್ತೇವೆ. ಇದು ಸರಿಹೋಗಬೇಕೆಂದು ಬಯಸುತ್ತೇವೆ. ಗಾಂಧೀಜಿಯವರ ಸಹಾನುಭೂತಿ ಯಹೂದ್ಯರಿಗೆ ಸಾಂತ್ವನವನ್ನು ಒದಗಿಸಬಹುದು. ಆದರೆ ಅವರನ್ನು ಬಿಡುಗಡೆ ಮಾಡಲಾರದು. ಅಹಿಂಸೆಗೆ ಏಸು ಉತ್ತಮೋತ್ತಮ ನಿದರ್ಶನ. ತಾನು ಸಂಕಟ ದಲ್ಲಿ ನರಳಿ ಮರಣಹೊಂದಿದನು. ಲೌಕಿಕವ್ಯವಹಾರಗಳಲ್ಲಿ, ಪ್ರಾಪಂಚಿಕ ಜೀವನದಲ್ಲಿ—ಅಹಿಂಸೆ ಯಾವ ಕೆಲಸಕ್ಕೂ ಬರಲಾರದೆಂದು ಏಸುವಿನ ಮರಣ ದಿಂದ ಸಿದ್ಧವಾಗಿದೆ.'

ಪಾಸ್ಟರ್ ನೀಮೋಲ್ಲರ್ ಮತ್ತು ಇತರರು ಅನುಭವಿಸಿದ ಕಷ್ಟಗಳು ವ್ಯರ್ಥವಾಯಿತೆಂದು ನಾನು ಎಣಿಸುವುದಿಲ್ಲ. ತಮ್ಮ ಆತ್ಮಗೌರವಕ್ಕೆ ಯಾವ ಚ್ಯುತಿಯೂ ಬಾರದಂತೆ ಅವರು ಉಳಿಸಿಕೊಂಡರು. ಎಂತಹ ಸಂಕಟ ಬಂದರೂ ತಮ್ಮ ದೃಢನಂಬಿಕೆಯನ್ನು ಅವರು ಬಿಟ್ಟುಕೊಡಲಿಲ್ಲ. ಇದರಿಂದ ಹಿಟ್ಲರನ ಎದೆ ಕರಗಲಿಲ್ಲವೆಂದರೆ, ಆತನದು ಕಲ್ಲಿಗಿಂತ ಕಠಿಣಹೃದಯವೆಂದು ಅರ್ಥ. ಆದರೆ ಎಂತಹ ಲೋಹವಾದರೂ ಸಾಕಷ್ಟು ಉಷ್ಣಕ್ಕೆ ಕರಗಲೇಬೇಕು. ಹಿಂಸೆಯೇ ಅಹಿಂಸೆಯ ಕಾವಿನಿಂದ ಎಂತಹ ಕಲ್ಲೆದೆಯನ್ನಾದರೂ ಕರಗಿಸ ಬಹುದು. ಅಹಿಂಸೆ ಇಂತಹ ತಾಪವನ್ನುಂಟುಮಾಡುವುದರಲ್ಲಿ ಯಾವ ಮಿತಿಯೂ ಇಲ್ಲ.

ವಿವಿಧ ಶಕ್ತಿಗಳ ಪರಿಣಾಮವಾಗಿ ಅವು ಪರಸ್ಪರ ವಿರೋಧವಾಗಿಯೂ ಇರಬಹುದು—ಒಂದು ಕಾರ್ಯ ಸಂಭವಿಸುತ್ತದೆ; ಶಕ್ತಿ ವ್ಯರ್ಥವಾಗುವುದಿಲ್ಲ. ಹೀಗೆಂದು ಭೌತಶಾಸ್ತ್ರದಿಂದ ನಾವು ಕಲಿಯುತ್ತೇವೆ. ಮಾನವನ ಕ್ರಿಯೆಗಳಿಗೂ ಇದು ಅನ್ವಯಿಸುತ್ತದೆ. ಭೌತಪ್ರಪಂಚದಲ್ಲಿ ಈ ಶಕ್ತಿಗಳ ಗತಿಯನ್ನು ನಾವು ಅಳೆಯಬಹುದು; ಅವುಗಳ ಪರಿಣಾಮವನ್ನು ಲೆಕ್ಕಾಚಾರಮಾಡಿ ಹೇಳ ಬಹುದು; ಇಷ್ಟೇ ವ್ಯತ್ಯಾಸ: ಮಾನವನ ಕ್ರಿಯೆಗಳಾದರೊ ಇಂತಹ ಲೆಕ್ಕಾ ಚಾರಕ್ಕೆ ಸಿಗುವುದಿಲ್ಲ. ಆದರೆ ಇವು ಅರ್ಥವಾಗದ ಮಾತ್ರಕ್ಕೇ ಇಂತಹ ಶಕ್ತಿಗಳೇ ಇಲ್ಲವೆಂದು ನಾವು ಹೇಳಬಾರದು. ಈ ಅಜ್ಞಾನವಿರುವುದರಿಂದಲೇ ನಮ್ಮ ಶ್ರದ್ಧೆ ಮತ್ತಷ್ಟು ಬಲಗೊಳ್ಳಬೇಕು. ಅಹಿಂಸೆಯೇ ಪ್ರಪಂಚದಲ್ಲಿ ಎಲ್ಲಕ್ಕೂ ಮಿಗಿಲಾದ ಶಕ್ತಿ. ಅದರ ವ್ಯಾಪಾರ ನಮ್ಮ ಹಿಡಿತಕ್ಕೆ ಸಿಕ್ಕುವುದಿಲ್ಲ. ಆದುದರಿಂದಲೇ ಇದರ ಪ್ರಯೋಗದಲ್ಲಿ ನಾವು ಪೂರ್ಣ ನಂಬಿಕೆಯಿಂದ ಮುಂದು

ವರಿಯಬೇಕು. ದೇವರ ವಿಷಯದಲ್ಲಿ ನಾವು ನಂಬಿಕೆಯನ್ನು ಇಡುವಂತೆ, ಅಹಿಂಸೆಯ ವಿಷಯದಲ್ಲಿಯೂ ನಾವು ನಂಬಿಕೆಯನ್ನಿಡಬೇಕು.

ಹಿಟ್ಲರನೂ ಸಹ ಮನುಷ್ಯಮಾತ್ರ—ಆತನೂ ಇತರ ಮಾನವರಂತೆ ಆಯುಷ್ಯದ ಮಿತಿಯುಳ್ಳವನು. ಆತನ ಜನರ ಬೆಂಬಲವಿಲ್ಲದೆ ಆತನ ಶಕ್ತಿ ಏನೂ ಮಾಡಲಾರದು. ಆತನೇ ಉಂಟುಮಾಡಿದ ದಂಡನೆಗಳಿಂದ ಜನರು ಅನುಭವಿಸುವ ಯಾತನೆಯನ್ನು ಕಂಡು ಅನುಕಂಪ ತಾಳಲಾರನೆಂದು ನಾನು ನಂಬುವುದಿಲ್ಲ. ಜರ್ಮನ್ ರಾಷ್ಟ್ರದಲ್ಲಿರುವವರೆಲ್ಲರೂ ಕಲ್ಲೆದೆಯ ಜನ, ಇತರ ರಾಷ್ಟ್ರಗಳ ಜನರಲ್ಲಿರುವ ದಯಾಪರತೆ ಅವರಲ್ಲಿ ಇಲ್ಲವೇ ಇಲ್ಲವೆಂದು ನಾನು ನಂಬಲಾರೆ. ಹಿಟ್ಲರ್ ತನ್ನ ಮಾರ್ಗವನ್ನು ಬದಲಾಯಿಸದಿದ್ದರೆ ಈ ಜನರೇ ಇಷ್ಟು ಗೌರವಕ್ಕೆ ಪಾತ್ರನಾದವನ ಮೇಲೆಯೂ ಎಂದಾದರೊಂದು ದಿನ ಏಳುವರು. ಹೀಗಾಗುವ ಪಕ್ಷಕ್ಕೆ ಹಿಟ್ಲರ್ ಬದಲಾಯಿಸಿದರೂ ಸರಿ, ಜನರು ಅವನನ್ನು ಎದುರಿಸಿದರೂ ಸರಿ—ಪಾಸ್ಟರ್ ಹಾಗೂ ಆತನ ಸಂಗಾತಿಗಳು ಅನುಭವಿಸಿದ ಸಂಕಟಗಳು ಅದಕ್ಕೆ ಹೇತುವಾಗಿರುವುವು.

ಶಸ್ತ್ರಸಹಿತ ಹೋರಾಟ ಜರ್ಮನಿಯ ಶಸ್ತ್ರಬಲಕ್ಕೆ ಕೇಡು ತಂದೀತು. ಜರ್ಮನರ ಹೃದಯವನ್ನು ಅದು ಬದಲಿಸದು. ಕಳೆದ ಯುದ್ಧದಲ್ಲಿ ನಡೆದಂತೆ ವಿಜಯಿಗಳ ಮೇಲೆ ಸೇಡು ತೀರಿಸಿಕೊಳ್ಳಲು ಒಬ್ಬ ಹಿಟ್ಲರನನ್ನು ಮಾತ್ರ ಅದು ಸೃಷ್ಟಿಸಿತು. ಎಂಥ ಸೇಡು ಅದು! ಮೊದಲು ರೈಲುಮಾರ್ಗವನ್ನು ಹಾಕಬೇಕಾದರೆ ಒಂದು ದೊಡ್ಡ ಹಳ್ಳವನ್ನು ಮುಚ್ಚಬೇಕಾಗಿತ್ತು. 'ಇದು ಸಾಧ್ಯವೆ?' ಎಂದು ಕೆಲಸಗಾರರು ಕೇಳಿದ್ದಕ್ಕೆ ಸ್ಟೀಫನ್‌ಸನ್ ಅವರನ್ನು ಹುರಿದುಂಬಿಸಿ, 'ಅಧೈರ್ಯಗೊಳ್ಳಬೇಡಿ, ನಿಮ್ಮ ನಂಬಿಕೆಯನ್ನು ದೃಢಮಾಡಿಕೊಂಡು ಹಳ್ಳವನ್ನು ಮುಚ್ಚುತ್ತ ಹೋಗಿ' ಎಂದನಂತೆ. ಅದೇ ಮಾತನ್ನೇ ನಾನೂ ಹೇಳಬೇಕಾಗಿದೆ. ಆ ಹಳ್ಳ ಆಳವಾದರೂ ಅದಕ್ಕೆ ತಳವಿತ್ತು; ಅದನ್ನು ಮುಚ್ಚಲೇಬೇಕಾಗಿತ್ತು. ಅಂತೆಯೇ ಹಿಟ್ಲರನ ಮನಸ್ಸು ಅಥವಾ ಜರ್ಮನರ ಮನಸ್ಸು ಕರಗಲಿಲ್ಲವೆಂದು ನಾನು ನಿರಾಶನಾಗುವುದಿಲ್ಲ. ಇನ್ನೂ ಹೆಚ್ಚು ಕಷ್ಟವನ್ನು ಅನುಭವಿಸುತ್ತ ಹೋಗಬೇಕು. ಆಗ ಮನ ಕರಗುವುದು ನಮಗೆ ಗೋಚರವಾಗುವುದು. ಪಾಸ್ಟರ್ ಯಶೋವಂತರಾದರು. ಅವರ ಕೀರ್ತಿ ಬೆಳಗುತ್ತಲಿದೆ. ಹಿಟ್ಲರನ ದರ್ಪವನ್ನು ಎದುರಿಸಿ ಧೈರ್ಯದಿಂದ ಒಬ್ಬ

ಯಹೂದ್ಯನು ಇಂತಹ ಕೀರ್ತಿಯನ್ನು ಗಳಿಸಬಹುದು. ಎಲ್ಲ ಯಹೂದ್ಯರ ವಿಮುಕ್ತಿಯ ದಾರಿಯನ್ನೂ ತೋರಬಹುದು.

## ಅಹಿಂಸಕ ಸ್ವಯಂಸೇವಕರ ದಳ

ಕೆಲದಿನಗಳ ಹಿಂದೆ ನಾನು ಸೂಚಿಸಿದ್ದಂತೆ ಶಾಂತಿದಳಗಳನ್ನು ಸ್ಥಾಪಿಸುವ ಪ್ರಯತ್ನ ಆರಂಭವಾಯಿತು. ಆದರೆ ಅದು ಮುಂದುವರಿಯಲಿಲ್ಲ. ಇಂತಹ ದಳದಲ್ಲಿ ಬಹಳ ಸಂಖ್ಯೆಯಲ್ಲಿ ಜನರು ಸೇರುವುದನ್ನು ನಾವು ನಿರೀಕ್ಷಿಸಲಾಗದು. ಇದು ಸಹಜವೆ. ಸಾಮಾನ್ಯವಾಗಿ ಹಿಂಸಾಪ್ರಯೋಗಕ್ಕೆ ಅವಕಾಶ ಕೊಡುವ ಸ್ವಯಂಸೇವಕರ ದೊಡ್ಡ ಗುಂಪನ್ನು ದಕ್ಷತೆಯಿಂದ ನಡೆಯಿಸಬೇಕಾದರೆ— ಶಿಸ್ತಿನ ಭಂಗವಾದಾಗ ಹಿಂಸೆಯ ಪ್ರಯೋಗ ಮಾಡಲು ಅವಕಾಶವಿರುತ್ತದೆ. ಇಂತಹ ಸಂಸ್ಥೆಗಳಲ್ಲಿ ವ್ಯಕ್ತಿಯ ಶೀಲ, ಗುಣ ಇವಕ್ಕೆ ಅಷ್ಟು ಗಮನ ಕೊಡು ವುದಿಲ್ಲ. ದೇಹದಾರ್ಢ್ಯವೇ ಮುಖ್ಯ ಯೋಗ್ಯತಾಲಕ್ಷಣವಾಗಿರುತ್ತದೆ. ಇದಕ್ಕೆ ನೇರ ವಿರೋಧವಾಗಿ ಅಹಿಂಸಾತ್ಮಕ ದಳಗಳಲ್ಲಿ ಶೀಲ ಅಥವಾ ಆತ್ಮಬಲ— ಇದಕ್ಕೇ ಮೊದಲನೆಯ ಸ್ಥಾನ; ದೈಹಿಕ ಶಕ್ತಿ ಗೌಣವೆಂದು ಪರಿಗಣಿಸ ಬೇಕಾಗುತ್ತದೆ. ಇಂತಹ ಜನರು ಬಹುಸಂಖ್ಯೆಯಲ್ಲಿ ಸಿಗುವುದು ಕಷ್ಟ. ಆದುದರಿಂದ ಅವು ಸಮರ್ಪಕ ಕೆಲಸ ಮಾಡಬೇಕಾದರೆ ಈ ಶಾಂತಿದಳಗಳು ಸಣ್ಣದಾಗಿರಬೇಕು. ಇವು ಎಲ್ಲ ಕಡೆಗಳಲ್ಲಿಯೂ ಹರಡಿರಬೇಕು. ಪ್ರತಿಯೊಂದು ಹಳ್ಳಿಯಲ್ಲಿಯೂ, ನಗರದ ಮೊಹಲ್ಲದಲ್ಲಿಯೂ ಒಂದು ದಳವಿರಬೇಕು. ಅದರ ಸದಸ್ಯರು ಒಬ್ಬರನ್ನೊಬ್ಬರು ಚೆನ್ನಾಗಿ ತಿಳಿದವರಾಗಿರಬೇಕು. ಒಂದೊಂದು ಗುಂಪೂ ತನ್ನ ನಾಯಕನನ್ನು ಆರಿಸಿಕೊಳ್ಳಬೇಕು. ಎಲ್ಲ ಸದಸ್ಯರಿಗೂ ಸಮಾನ ಸ್ಥಾನವಿರಬೇಕು. ಆದರೆ ಎಲ್ಲರೂ ಸಮಾನ ಕಾರ್ಯವನ್ನೇ ಮಾಡುತ್ತಿದ್ದರೂ ಒಬ್ಬ ನಾಯಕನಿರಬೇಕು, ಅವನ ಮಾತನ್ನೇ ಎಲ್ಲರೂ ಕೇಳಬೇಕು. ಇಲ್ಲವಾದರೆ ಕೆಲಸ ಸುಸೂತ್ರವಾಗಿ ಆಗಲಾರದು. ಎರಡು–ಮೂರು ಗುಂಪುಗಳಿದ್ದರೆ ನಾಯಕರು ಕಲೆತು ಸಮಾಲೋಚನೆ ಮಾಡಿ, ಒಂದು ಸಾಮಾನ್ಯ ಕಾರ್ಯ ಕ್ರಮವನ್ನು ನಿರ್ಧರಿಸಿಕೊಳ್ಳಬೇಕು. ಇದೇ ಜಯದ ದಾರಿ.

ಈ ಬಗೆಯ ಶಾಂತಿದಳಗಳು ಸ್ಥಾಪಿತವಾದರೆ ಅವು ಸುಲಭವಾಗಿ ಗಲಭೆಗಳನ್ನು ನಿಲ್ಲಿಸಬಹುದು. ಗರಡಿಮನೆಗಳಲ್ಲಿ ಕೊಡುವ ವ್ಯಾಯಾಮದ ತರಪೇತಿನಷ್ಟು ಇವರಿಗೆ ಕೊಡಬೇಕಾಗಿಲ್ಲ. ಆದರೆ ಸ್ವಲ್ಪ ಪ್ರಮಾಣದ ವ್ಯಾಯಾಮ ಶಿಕ್ಷಣ ಇರಬೇಕು. ಆದರೆ ಒಂದು ಗುಣ ಸಾಮಾನ್ಯವಾಗಿ ಎಲ್ಲರಲ್ಲಿಯೂ ಇರಬೇಕು. ಅದೇನೆಂದರೆ ನಿಶ್ಚಲವಾದ ದೈವಭಕ್ತಿ. ಭಗವಂತನೇ ನಮ್ಮ ಸಖನು, ಅವನೇ ಕರ್ತಾರ. ಅವನಲ್ಲಿ ನಂಬಿಕೆ ಇಲ್ಲದಿದ್ದರೆ ಈ ಶಾಂತಿದಳಗಳು ನಿರ್ಜೀವವಾಗುವುವು. ಆ ದೇವರನ್ನು ಯಾವ ಹೆಸರಿನಿಂದ ಬೇಕಾದರೆ ಕರೆಯಬಹುದು. ಆದರೆ ಆತನ ಶಕ್ತಿಯಿಂದಲೇ ಎಲ್ಲ ಕೆಲಸಗಳೂ ಆಗುತ್ತಿವೆ ಎಂದು ನಂಬಬೇಕು. ಇಂತಹ ದಳಕ್ಕೆ ಸೇರಿದವನು ಅವಶ್ಯವಿದ್ದಾಗ ತನ್ನ ಪ್ರಾಣವನ್ನು ಅರ್ಪಿಸಲೂ ಸಿದ್ಧನಾಗುವನು. ಆದರೆ ಮೃತ್ಯುವನ್ನು ಗೆದ್ದು ಅಮರನಾಗುವನು.

ಯಾರ ಜೀವನದಲ್ಲಿ ಈ ರೀತಿಯ ನಂಬಿಕೆಯೂ ಸತ್ತ್ವವೂ ಕಳಕಳಿಸುತ್ತಿರುವುದೊ ಅಂತಹವನ ಮನಸ್ಸು ನಿರ್ಮಲವಾಗಿ ಎಂತಹ ಪರಿಸ್ಥಿತಿಯಲ್ಲಿಯೂ ಗೊಂದಲಕ್ಕೆ ಗುರಿಯಾಗದು. ಹೇಗೆ ವರ್ತಿಸಬೇಕೆಂದು ಆತನಿಗೆ ಸ್ವಯಂ ಸ್ಫೂರ್ತಿಯಿಂದ ಹೊಳೆಯುವುದು.

ನಾನು ಮೇಲೆ ಇಷ್ಟು ವಿವರಣೆ ಕೊಟ್ಟಿದ್ದರೂ ನನ್ನ ಸ್ವಂತ ಅನುಭವದಿಂದ ಆಯ್ದ ಕೆಲವು ನಿಯಮಗಳನ್ನು ಕೊಡುತ್ತೇನೆ :

(೧) ಸ್ವಯಂಸೇವಕನು ಯಾವ ಆಯುಧಗಳನ್ನೂ ಹೊತ್ತಿರಬಾರದು.

(೨) ಒಂದು ದಳಕ್ಕೆ ಸೇರಿದವರನ್ನು ಗುರುತಿಸುವಂತೆ—ಸಮವಸ್ತ್ರವೋ, ಲಾಂಛನವೊ—ಇರಬೇಕು.

(೩) ಪ್ರತಿಯೊಬ್ಬ ಸ್ವಯಂಸೇವಕನ ಹತ್ತಿರ ಪ್ರಥಮ ಚಿಕಿತ್ಸೆ ಮಾಡುವುದರ ಸಲುವಾಗಿ ಬ್ಯಾಂಡೇಜ್ ಬಟ್ಟೆಗಳೂ, ಕತ್ತರಿ, ಸೂಜಿ, ದಾರ, ಶಸ್ತ್ರ ಚಿಕಿತ್ಸೆಗೆ ಬೇಕಾದ ಕತ್ತಿ ಮುಂತಾದ ಸಾಮಗ್ರಿಗಳಿರಬೇಕು.

(೪) ಗಾಯಗೊಂಡವರನ್ನು ಹೇಗೆ ಸಾಗಿಸಿಕೊಂಡೊಯ್ಯಬೇಕೆಂದು ಸ್ವಯಂ ಸೇವಕನಿಗೆ ತಿಳಿದಿರಬೇಕು.

(೫) ಬೆಂಕಿಯನ್ನು ಆರಿಸುವ ವಿಧಾನವು ತಿಳಿದಿರಬೇಕು. ಬೆಂಕಿ ಬಿದ್ದ ಪ್ರದೇಶದಲ್ಲಿ ಸುರಕ್ಷಿತ ಪ್ರವೇಶಮಾಡಿ ಹಿಂತಿರುಗುವುದು ತಿಳಿದಿರಬೇಕು. ಎತ್ತರವಾದ ಕಟ್ಟಡಗಳನ್ನು ಹತ್ತಿ, ಅಲ್ಲಿರುವವರನ್ನು ರಕ್ಷಿಸಿ, ಅಲ್ಲಿನವ ರನ್ನು ಹೊತ್ತುಕೊಂಡೊ ಅಥವಾ ತಾನು ಮಾತ್ರವಾದರೊ ಇಳಿದುಬರು ವುದಕ್ಕೆ ತಿಳಿದಿರಬೇಕು.

(೬) ತಾನಿರುವ ಪ್ರದೇಶದಲ್ಲಿ ಪ್ರತಿಯೊಬ್ಬರೊಂದಿಗೂ ಪರಿಚಿತನಾಗಿರಬೇಕು. ಹೀಗೆ ಪರಿಚಯವಿರುವುದೇ ಒಂದು ಸೇವೆ.

(೭) ರಾಮನಾಮ ಜಪವನ್ನು ನಿರಂತರ ಮಾಡುತ್ತಿರಬೇಕು; ಅದರಲ್ಲಿ ನಂಬಿಕೆ ಇರುವವರಿಗೆ ಮಾಡುವಂತೆ ಹೇಳಬೇಕು.

ದೇವರು ಇರುವನು—ನಮ್ಮ ಪ್ರಾರ್ಥನೆ ಇಲ್ಲದೆಯೇ ನಮಗೆ ಸಹಾಯ ಮಾಡುವನೆಂದು ಅನೇಕರು ಭಾವಿಸುವುದುಂಟು. ಇದು ಸೋಮಾರಿತನ ದಿಂದಲೋ ಕೆಟ್ಟ ಚಾಳಿಯಿಂದಲೋ ಬಂದಿರುವ ಭಾವನೆ. ಹಾಗಾದರೆ ದೇವರ ನಾಮಸ್ಮರಣೆ ಮಾಡುವುದೇತಕ್ಕೆ? ದೇವರಿರುವ ಪಕ್ಷಕ್ಕೆ, ನಾವು ನಂಬಲಿ ನಂಬದಿರಲಿ, ಅವನು ಇದ್ದೇ ಇರುವನು. ಆದರೆ ಕೇವಲ ನಂಬಿಕೆಗಿಂತ ಅವನ ಸಾಕ್ಷಾತ್ಕಾರ ಬಹಳ ದೊಡ್ಡ ವಿಷಯ. ಇದು ಸತತ ಅಭ್ಯಾಸದಿಂದಲೇ ಸಾಧ್ಯ. ಎಲ್ಲ ಶಾಸ್ತ್ರಕ್ಕೂ ಇದು ಅನ್ವಯಿಸುವ ಮಾತು. ಅಂದಮೇಲೆ ವಿದ್ಯೆಗಳಲ್ಲಿ ವಿದ್ಯೆಯಾದ ಅಧ್ಯಾತ್ಮಕ್ಕೆ ಹೆಚ್ಚಾಗಿ ಅನ್ವಯಿಸುವುದು.

ಅನೇಕರು ದೇವರ ಹೆಸರನ್ನು ಪಾಠವಾಗಿ ಉಚ್ಚರಿಸಿ ಅದರಿಂದ ಫಲವನ್ನು ನಿರೀಕ್ಷಿಸುವರು. ಆದರೆ ನಿಜವಾಗಿ ದೇವರನ್ನು ಅರಸುವವನು ಈ ಗಿಣಿಪಾಠದ ಅಜ್ಞಾನವನ್ನು ಹೋಗಲಾಡಿಸುವಂತಹ, ಇತರರಲ್ಲಿ ಇದರ ಬಗ್ಗೆ ಶ್ರದ್ಧೆಯನ್ನು ಪ್ರೇರಿಸುವಂತಹ ಚೇತನಮಯವಾದ ಶ್ರದ್ಧೆಯಿಂದ ನಾಮೋಚ್ಚಾರಣೆ ಮಾಡಬೇಕು. (ಹರಿಜನ, ೫-೫-೧೯೪೬)

ಅಹಿಂಸೆ ಕೇವಲ ವೈಯಕ್ತಿಕ ಗುಣ ಮಾತ್ರವಲ್ಲವೆಂದು ನನ್ನ ಧಾರಣೆ. ಅದು ಸಾಮಾಜಿಕ ಗುಣ. ಇತರ ಸಾಮಾಜಿಕ ಗುಣಗಳಂತೆಯೇ ಅದನ್ನು ಬೆಳೆಸಬೇಕು. ಜನರು ತಮ್ಮ ಪರಸ್ಪರ ವ್ಯವಹಾರಗಳಲ್ಲಿ ಅಹಿಂಸೆಯ ಆಧಾರ ವನ್ನೇ ಇಟ್ಟುಕೊಂಡಿರುವರಲ್ಲವೆ? ಇದನ್ನೇ ಇಡೀ ರಾಷ್ಟ್ರಕ್ಕೂ, ಅಂತರ ರಾಷ್ಟ್ರೀಯ ವ್ಯವಹಾರಕ್ಕೂ ವಿಸ್ತರಿಸಬೇಕೆಂದು ನಾನು ಕೇಳುತ್ತಿದ್ದೇನೆ, ಅಷ್ಟೆ.

ಸ್ಟೇಟ್ಸ್‌ಮನ್ ಪತ್ರಿಕೆಯಲ್ಲಿ ಏಸುವಿನ ಮರಣ ಅಹಿಂಸೆಯ ನಿರರ್ಥಕತೆ ಯನ್ನು ಖಚಿತವಾಗಿ, ಸಿದ್ಧಾಂತ ರೀತಿಯಲ್ಲಿ ಸಿದ್ಧಮಾಡಿಕೊಟ್ಟಿತು ಎಂದು ಒಬ್ಬರು ಬರೆದಿರುವರು. ಇದನ್ನು ನಾನು ನಿರೀಕ್ಷಿಸಿರಲಿಲ್ಲ. ನಾನು ಆ ಮತಾವಲಂಬಿಯಲ್ಲದಿದ್ದರೂ ನನ್ನ ಅಚಲವಾದ ಶ್ರದ್ಧೆಗೆ ಏಸುವಿನ ಬಲಿದಾನ ಸ್ಫೂರ್ತಿ ಒದಗಿಸಿದೆ. ನನ್ನ ಎಲ್ಲ ಲೌಕಿಕ ವ್ಯವಹಾರಗಳನ್ನೂ ನಾನು ಈ ಶ್ರದ್ಧೆಯಿಂದ ಮಾಡುತ್ತಿದ್ದೇನೆ. ನೂರಾರು ಮಂದಿ ಈಸಾಯಿಗಳು ಇದೇ ಶ್ರದ್ಧೆಯಿಂದ ಪ್ರೇರಿತರಾಗಿದ್ದಾರೆಂದು ನಾನು ಬಲ್ಲೆ. ನಮ್ಮ ಜೀವನವನ್ನು ಪ್ರೇಮದ ನಿಯಮಗಳನುಸಾರ ನಡೆಸಲು ಕಲಿಯದಿದ್ದರೆ ಏಸುವಿನ ಬದುಕು, ಮರಣ ವ್ಯರ್ಥವೇ. (ಹರಿಜನ, ೭-೧-೧೯೩೯)

## ಅಹಿಂಸೆ—ಗೀತೆಯ ಉಪದೇಶ

ಡಾ॥ ಕಗಾವಾ ಅವರು ಪ್ರಪಂಚದ ಧರ್ಮಗಳನ್ನು ಕುರಿತು ಅಧ್ಯಯನ ಮಾಡಿದವರು. ಗಾಂಧೀಜಿಯ ಉಪದೇಶ ಭಗವದ್ಗೀತೆಯೊಂದಿಗೆ ಹೇಗೆ ಹೊಂದಿಕೊಳ್ಳುತ್ತಿದೆಯೆಂದು ತಿಳಿಯಲಪೇಕ್ಷಿಸಿದರು. ಇದನ್ನು ಸ್ವಲ್ಪ ಕಾಲದಲ್ಲಿ ಚರ್ಚಿಸುವುದು ಕಷ್ಟವೆಂದು ಗಾಂಧೀಜೀ ಹೇಳಿದರು. ತಮ್ಮ 'ಅನಾಸಕ್ತಿ ಯೋಗ'ವೆಂಬ ವ್ಯಾಖ್ಯಾನಕ್ಕೆ ಬರೆದಿರುವ ಪೀಠಿಕೆಯನ್ನು ಓದಿ ಹೇಳುವುದಾಗಿ ತಿಳಿಸಿದರು. ಏಕೆಂದರೆ ಈ ಪ್ರಶ್ನೆಗೆ ಉತ್ತರ ಅದರಲ್ಲಿ ದೊರೆಯುವುದು. ಇದು ಬರೆದಿರುವ ಮಾತು; ತಮ್ಮ ಅನುಭವದ ಸಾರ—ಈ ರೀತಿ ಅರ್ಥ ಮಾಡಿರುವುದರಲ್ಲಿ ಯಾವ ವಿಷಯವನ್ನೂ ಪ್ರಯಾಸಪಟ್ಟು ಹಿಗ್ಗಿಸಿರುವಂತೆ ತಮಗೆ ತೋರಲಿಲ್ಲ. (ಮ.ದೇ.)

**ಡಾ|| ಕೆಗಾವಾ :** ನೀವು ಭಗವದ್ಗೀತೆಯನ್ನು ನಿತ್ಯಪಾರಾಯಣಕ್ಕೆ ಇಟ್ಟುಕೊಂಡಿರುವಿರೆಂದು ನಾನು ಕೇಳಿದೆ.

**ಗಾಂಧೀಜೀ :** ಗೀತೆಯನ್ನು ಪೂರ್ತಿಯಾಗಿ ಪ್ರತಿ ವಾರದಲ್ಲಿಯೂ ಓದಿ ಮುಗಿಸುತ್ತೇವೆ.

**ಡಾ|| ಕೆಗಾವಾ :** ಆದರೆ ಗೀತೆಯ ಕೊನೆಯಲ್ಲಿ ಶ್ರೀಕೃಷ್ಣನು ಹಿಂಸೆಯನ್ನು ಆಚರಿಸೆಂದು ಸಲಹೆ ಮಾಡುವನಲ್ಲ ?

**ಗಾಂಧೀಜೀ :** ನನಗೆ ಹಾಗೆ ತೋರುವುದಿಲ್ಲ. ನಾನೂ ಯುದ್ಧ ಮಾಡುತ್ತಿದೇನೆ. ಆದರೆ ನಾನು ಹಿಂಸೆಯನ್ನು ಉಪಯೋಗಿಸಿದೆನಾದರೆ ನನ್ನ ಹೋರಾಟ ಪರಿಣಾಮಕಾರಿಯಾಗಲಾರದು. ಎರಡನೆಯ ಅಧ್ಯಾಯದಲ್ಲಿ ಸಮತ್ವಬುದ್ಧಿಯನ್ನು ಹೊಂದಿರುವ ಸ್ಥಿತಪ್ರಜ್ಞನ ಲಕ್ಷಣಗಳನ್ನು ಶ್ರೀಕೃಷ್ಣನು ವರ್ಣಿಸುತ್ತಾನೆ. ಗೀತೆಯ ಉಪದೇಶ ಅಲ್ಲಿ ಅಡಕವಾಗಿದೆ. ಹತ್ತೊಂಬತ್ತು ಶ್ಲೋಕಗಳಲ್ಲಿ ಈ ಸಮತ್ವವನ್ನು ಹೇಗೆ ಪಡೆಯಬಹುದೆಂದು ಶ್ರೀಕೃಷ್ಣನು ಹೇಳುತ್ತಾನೆ. ಕಾಮಗಳೆಲ್ಲವನ್ನೂ ಗೆದ್ದಮೇಲೆಯೇ ಈ ಸ್ಥಿತಿಯನ್ನು ಪಡೆಯಬಹುದೆನ್ನುತ್ತಾನೆ. ಕಾಮವನ್ನು ಗೆದ್ದಮೇಲೆ ಸೋದರರನ್ನು ಕೊಲ್ಲಲು ಸಾಧ್ಯವಿಲ್ಲ. ರಾಗದ್ವೇಷಗಳನ್ನು ಬಿಟ್ಟವನು, ಸುಖದುಃಖಗಳಿಗೆ ಉದಾಸೀನನಾದವನು, ಸಾಮಾನ್ಯ ಮನುಷ್ಯರನ್ನು ತೊಂದರೆಗೊಳಿಸುವ ಉದ್ವೇಗಗಳನ್ನು ಗೆದ್ದವನು ಸೋದರರನ್ನು ಹೇಗೆ ಕೊಲ್ಲಲು ಸಾಧ್ಯ ? ಇದೆಲ್ಲವೂ ಅನುಪಮ ಸೌಂದರ್ಯದಿಂದ ಕೂಡಿದ ಭಾಷೆಯಲ್ಲಿ ವರ್ಣಿಸಲಾಗಿದೆ. ಶ್ರೀಕೃಷ್ಣನು ವರ್ಣಿಸಿರುವ ಯುದ್ಧ ಆಧ್ಯಾತ್ಮಿಕ ಯುದ್ಧವೆಂದು ಈ ಶ್ಲೋಕಗಳಿಂದ ವೇದ್ಯವಾಗುವುದು.

**ಡಾ|| ಕೆಗಾವಾ :** ಆದರೆ ಸಾಮಾನ್ಯ ಜನರು ಇಲ್ಲಿ ವರ್ಣಿಸಿರುವುದು ನಿಜವಾದ ಯುದ್ಧವೆಂದೇ ತಿಳಿಯುವರು.

**ಗಾಂಧೀಜೀ :** ಅದರ ಸಂದರ್ಭವನ್ನು ಗಮನದಲ್ಲಿಟ್ಟುಕೊಂಡು ಈ ಪ್ರಕರಣವನ್ನು ಸಮಗ್ರದೃಷ್ಟಿಯಿಂದ ವಿಚಾರಮಾಡಬೇಕು. ಆರಂಭದಲ್ಲಿ ಯುದ್ಧದ ಮಾತಿದೆಯೇ ಹೊರತು—ಆಮೇಲೆ ಬರುವುದಿಲ್ಲ. ಉಳಿದುದೆಲ್ಲ **ಆಧ್ಯಾತ್ಮಿಕ ಪ್ರವಚನ.**

**ಡಾ|| ಕಗಾವಾ :** ಬೇರೆ ಯಾರಾದರೂ ನಿಮ್ಮಂತೆ ಅರ್ಥಮಾಡಿರುವರೆ ?

**ಗಾಂಧೀಜೀ :** ಉಂಟು. ಯುದ್ಧವೇನೋ ಇದೆ; ಆದರೆ ಅದು ಆಂತರಿಕ ಯುದ್ಧ. ನಮ್ಮೊಳಗಿರುವ ಶಿಷ್ಟ ಮತ್ತು ದುಷ್ಟವಿಚಾರಗಳೇ ಪಾಂಡವ ಮತ್ತು ಕೌರವರು. ಮಾನವನ ಹೃದಯದಲ್ಲಿ ದೈವತ್ವಕ್ಕೂ ರಾಕ್ಷಸತ್ವಕ್ಕೂ, ಮಾನವತ್ವಕ್ಕೂ ಪಶುತ್ವಕ್ಕೂ ನಡೆಯುತ್ತಿರುವ ಹೋರಾಟವೇ ಈ ಯುದ್ಧ. ಈ ಅರ್ಥಕ್ಕೆ ಗ್ರಂಥದಲ್ಲಿಯೇ ಪುಷ್ಟಿ ಸಿಗುತ್ತದೆ; ಮಹಾಭಾರತದಲ್ಲಿಯೂ ಸಿಗುತ್ತದೆ. ಗೀತೆ ಮಹಾಭಾರತದ ಒಂದು ಸಣ್ಣ ಭಾಗ ಮಾತ್ರ. ಎರಡು ಮನೆತನಗಳ ಮಧ್ಯೆ ನಡೆದ ಯುದ್ಧವಲ್ಲ ಇದು; ಆದರೆ ಇದು ಮಾನವನ ಇತಿಹಾಸ—ಮಾನವನಲ್ಲಿ ಆಗುವ ಆಧ್ಯಾತ್ಮಿಕ ಘರ್ಷಣೆಯ ಇತಿಹಾಸ. ನಾನು ಈ ಅರ್ಥವನ್ನು ಮಾಡಲು ಉತ್ತಮ ಕಾರಣಗಳಿವೆ.

**ಡಾ|| ಕಗಾವಾ :** ಅದಕ್ಕಾಗಿಯೇ ಇದು ನಿಮ್ಮ ಅರ್ಥವೆಂದು ನಾನು ಹೇಳುವುದು.

**ಗಾಂಧೀಜೀ :** ಅದು ಮುಖ್ಯವಲ್ಲ. ಅರ್ಥ ತರ್ಕಬದ್ಧವಾಗಿದೆಯೇ ಇಲ್ಲವೆ ? ಇದು ಮನಸ್ಸಿಗೆ ಒಪ್ಪುತ್ತದೆಯೇ ?—ಇಷ್ಟೇ ಪ್ರಶ್ನೆ. ಹಾಗಿರುವುದಾದರೆ ಅದು ನನ್ನ ಅರ್ಥವಾಗಿರಬಹುದು—ಯಾರ ಅರ್ಥವಾಗಿಯಾದರೂ ಇರಬಹುದು—ಅದು ಮುಖ್ಯವಲ್ಲ. ಸಾಧುವಾಗಿಲ್ಲದ ಪಕ್ಷಕ್ಕೆ ಆ ಅರ್ಥವನ್ನು ನಾನು ಮಾಡಿದ್ದರೆ ತಾನೆ ಏನಾದೀತು ?

**ಡಾ|| ಕಗಾವಾ :** ಅರ್ಜುನನ ಅಭಿಪ್ರಾಯಗಳು ಅದ್ಭುತವಾಗಿವೆ ಎಂದು ನನ್ನ ಮನಸ್ಸಿಗೆ ತೋರುತ್ತದೆ. ಶ್ರೀಕೃಷ್ಣನು ಅವನಿಗಾಗಿ ಯಾವುದೋ ಒಂದು ನೆಪವನ್ನು ಕಂಡುಹಿಡಿದನು. ಕ್ರೈಸ್ತ ಧರ್ಮ ಹುಟ್ಟುವುದಕ್ಕೆ ಪೂರ್ವದಲ್ಲಿ ಇದು ಸಹಜವಾಗಿತ್ತು, ಆವಶ್ಯಕವಾಗಿತ್ತು.

**ಗಾಂಧೀಜೀ :** ಹಾಗಲ್ಲ. ಐತಿಹಾಸಿಕ ದೃಷ್ಟಿಯಿಂದಲೂ ನೀವು ಹೇಳುವ ಅರ್ಥ ತಪ್ಪಾದೀತು. ಏಕೆಂದರೆ ಬುದ್ಧನು ಕ್ರೈಸ್ತ ಧರ್ಮ ಹುಟ್ಟುವುದಕ್ಕೆ ಬಹು ಪೂರ್ವದಲ್ಲಿದ್ದನು. ಬುದ್ಧನು ಅಹಿಂಸೆಯನ್ನು ಬೋಧಿಸಿದನು.

**ಡಾ|| ಕಗಾವಾ :** ಆದರೆ ಶ್ರೀಕೃಷ್ಣನ ಅಭಿಪ್ರಾಯಗಳಿಗಿಂತಲೂ **ಅರ್ಜುನನದೇ ಉತ್ತಮವೆಂದು ನನಗೆ ತೋರುವುದು.**

**ಗಾಂಧೀಜೀ :** ಹಾಗಾದರೆ ನಿಮ್ಮ ಅಭಿಪ್ರಾಯದಲ್ಲಿ ಶಿಷ್ಯನೇ ಗುರುವಿಗಿಂತಲೂ ಉತ್ತಮ ?

**ಡಾ|| ಕೆಗಾವಾ :** ನಿಮ್ಮ ಅಹಿಂಸಾ ಸಿದ್ಧಾಂತಕ್ಕೆ ನಾನು ಮನ್ನಣೆ ಕೊಡುತ್ತೇನೆ. ನೀವು ಹೇಳುವ ಅರ್ಥವನ್ನು ನೆನಪಿನಲ್ಲಿಟ್ಟುಕೊಂಡು ಮತ್ತೆ ಗೀತೆಯನ್ನು ಓದುತ್ತೇನೆ. (ಹರಿಜನ, ೨೧-೧-೧೯೩೯)

## ಗೀತೆಯ ಮುಖ್ಯ ಉಪದೇಶ

'ಗೀತೆಯ ಮುಖ್ಯ ಉಪದೇಶ ನಿಸ್ಸ್ವಾರ್ಥಕರ್ಮವೆ, ಅಹಿಂಸೆಯೇ ?'

'ಮುಖ್ಯ ಉಪದೇಶ ಅನಾಸಕ್ತಿ. ನಿಸ್ಸ್ವಾರ್ಥಕರ್ಮ ಎನ್ನುವ ವಿಚಾರದಲ್ಲಿ ನನಗೆ ಸ್ವಲ್ಪವೂ ಶಂಕೆ ಇಲ್ಲ. ನನ್ನ ಸಣ್ಣ ಭಾಷಾಂತರಕ್ಕೆ ಅದೇ ಹೆಸರನ್ನೇ ಇಟ್ಟಿದೇನೆ—'ಅನಾಸಕ್ತಿಯೋಗ'ವೆಂದು. ಅನಾಸಕ್ತಿ ಅಹಿಂಸೆಯನ್ನೂ ಮೀರಿರುತ್ತದೆ. ಈ ನಿಸ್ಸ್ವಾರ್ಥತೆಯನ್ನು ಪಡೆಯಬೇಕಾದರೆ ಸಾಧಕ ಅಹಿಂಸೆಯನ್ನು ಅಭ್ಯಾಸಮಾಡಿಯೇ ಇರಬೇಕು. ಅಹಿಂಸೆ ಒಂದು ಅಗತ್ಯವಾದ ಸಾಧನೆ. ಇದು ಅನಾಸಕ್ತಿಯಲ್ಲಿ ಅಡಕವಾಗಿದೆ. ಅನಾಸಕ್ತಿಯನ್ನು ದಾಟಿ ಅದು ಹೋಗುವುದಿಲ್ಲ.

'ಹಾಗಾದರೆ ಗೀತೆ ಹಿಂಸೆ-ಅಹಿಂಸೆ ಎರಡನ್ನೂ ಬೋಧಿಸುತ್ತದೆಯೇ ?'

'ನಾನು ಗೀತೆಗೆ ಹಾಗೆ ಅರ್ಥಮಾಡುವುದಿಲ್ಲ. ಗ್ರಂಥಕರ್ತ ಅಹಿಂಸೆಯನ್ನು ಬೋಧಿಸಲು ಇದನ್ನು ಬರೆಯದೆ ಇದ್ದಿರಬಹುದು. ಆದರೆ ಕಾವ್ಯದ ವಾಕ್ಯದಿಂದ ವ್ಯಾಖ್ಯಾಕಾರರು ಅನೇಕ ಅರ್ಥಗಳನ್ನು ಮಾಡುವಂತೆ, ನಾನೂ ಹಾಗೆಯೇ, ಗೀತೆ ಅನಾಸಕ್ತಿಯನ್ನು ಬೋಧಿಸಿದರೂ ಅಹಿಂಸೆಯನ್ನೂ ಬೋಧಿಸುವುದೆಂದು ಹೇಳುವೆನು. ನಾವು ದೇಹಧಾರಿಗಳಾಗಿ ಈ ಭೂಮಿಯ ಮೇಲೆ ವಾಸಮಾಡುವವರೆಗೂ ಅಹಿಂಸೆಯನ್ನು ಅಭ್ಯಾಸಮಾಡಬೇಕು. ಇದಾದಮೇಲೆ ಪರಲೋಕದಲ್ಲಿ ಹಿಂಸೆಯೂ ಇಲ್ಲ, ಅಹಿಂಸೆಯೂ ಇಲ್ಲ.'

'ಆದರೆ ಶ್ರೀಕೃಷ್ಣನು ಅಹಿಂಸಾಮಾರ್ಗವನ್ನೇ ಪ್ರತಿಭಟಿಸಿರುವನಲ್ಲ ?' ಎಂದರು ಬಾಳಾಸಾಹೇಬ್ ಖೇರ್. 'ಏಕೆಂದರೆ ಅರ್ಜುನನು, 'ನಾನು ನನ್ನ

ಶತ್ರುಗಳನ್ನು ಶಸ್ತ್ರಗಳಿಲ್ಲದೆ ಎದುರಿಸುವುದೇ ಮೇಲು. ಅವರು ನನ್ನನ್ನು ಕೊಂದರೂ ಚಿಂತೆಯಿಲ್ಲ, ಅವರ ಮೇಲೆ ಅಸ್ತ್ರಗಳನ್ನು ಪ್ರಯೋಗಮಾಡಿ, ಏಟಿಗೆ ಏಟು ಕೊಡುವುದಕ್ಕಿಂತಲೂ ಸಾಯುವುದೇ ಉತ್ತಮ ' ಎನ್ನುತ್ತಾನೆ. ಅದಕ್ಕೆ ಶ್ರೀಕೃಷ್ಣನು ' ಏಟಿಗೆ ಏಟು ಕೊಡು ' ಎನ್ನುತ್ತಾನೆ.'

' ನೀವು ಹೇಳುವುದನ್ನು ನಾನು ಒಪ್ಪುವುದಿಲ್ಲ ' ಎಂದರು ಗಾಂಧೀಜೀ. ' ಅರ್ಜುನನ ಮಾತು ಪಾಂಡಿತ್ಯದ ಸೋಗು—ನಿಜವಾದ ಜ್ಞಾನವಲ್ಲ. ' ನಿನ್ನೆಯವರೆಗೂ ನಿನ್ನ ಬಂಧುಜನರೊಂದಿಗೆ ಯುದ್ಧಮಾಡಿರುವೆ, ಮಹಾ ಅಸ್ತ್ರಗಳನ್ನು ಪ್ರಯೋಗ ಮಾಡಿರುವೆ, ಯಾವ ಅನುಕಂಪವನ್ನೂ ತೋರಿಸಿರಲಿಲ್ಲ. ಇಂದಿಗೂ ನಿನ್ನ ಶತ್ರುಗಳು ಸ್ವಜನರಾಗಿಲ್ಲದೆ ಅಪರಿಚಿತ ಜನರಾಗಿದ್ದ ಪಕ್ಷಕ್ಕೆ ನೀನು ಯುದ್ಧಮಾಡುವೆ ' ಎಂದು ಶ್ರೀಕೃಷ್ಣನ ಅಭಿಪ್ರಾಯ. ಅರ್ಜುನನ ಮುಂದೆ ಇದ್ದ ಪ್ರಶ್ನೆ ಹಿಂಸೆ–ಅಹಿಂಸೆಯದಲ್ಲ—ತನ್ನ ಸ್ವಜನರನ್ನು ಕೊಲ್ಲುವುದೇ ?—ಎಂದು.' (ಹರಿಜನ, ೧–೯–೧೯೪೦)

———



‘ ಜಂಜಡದ ನಡುವೆ ಶಾಂತಿ, ಕತ್ತಲಲ್ಲಿ ಬೆಳಕು, ನಿರಾಶೆಯಲ್ಲಿ ಆಶಾಕಿರಣ ’
ಮಹಾನಿರೀಕ್ಷಕನಂತೆ ಮಹಾತ್ಮಾ—

(ಟೆಂಡುಲ್‌ಕರರ ‘ ಮಹಾತ್ಮಾ ’ ಗ್ರಂಥದಿಂದ)

## ಅಧ್ಯಾಯ – ೧೦

# ಸಂಕಟದಲ್ಲಿರುವ ಜಗತ್ತು



ಕಳೆಯುತ್ತಿರುವ ವರುಷದ ಕೊನೆಯ ದಿನ, ಮತ್ತು ನೂತನ ವರುಷದ ಮೊದಲ ದಿನವೂ, ಸೇವಾಗ್ರಾಮಕ್ಕೆ ಒಂದು ಅಪೂರ್ವಕೂಟವನ್ನು ಕರೆತಂದಿತು. ತಾಂಬರಂ ಸಮ್ಮೇಳನಕ್ಕಾಗಿ ಬಂದಿದ್ದ ನಾನಾ ರಾಷ್ಟ್ರಗಳ ಪ್ರತಿನಿಧಿಗಳು ಅವರು. ಜೊಹಾನ್ಸ್‌ಬರ್ಗ್‌ನ ರೆವರೆಂಡ್ ಎಸ್. ಎಸ್. ಟೇಮ್, ದಕ್ಷಿಣ ರೊಡೇಸಿಯದ ಕ್ವೆಂಡ್ ಕ್ರಿಸ್ತಧರ್ಮಪ್ರಚಾರಮಂಡಲಿಯ ಮಿಶನ್ ರೆವರೆಂಡ್ ಥಾಮ್‌ಸನ್ ಡಿ. ಸಂಕಂಗೆ, ಪ್ರತಿನಿಧಿಯ ಅಧಿಕಾರದಲ್ಲಿ ಭಾರತಕ್ಕೆ ಪ್ರಥಮ ಭೇಟಿಕೊಟ್ಟ ನೀಗ್ರೋ ಸ್ತ್ರೀ ಮಿಸ್ ಮಿನಾ ಸೊಗಾ ಇವರು ಇದ್ದರು. ಜತೆಗೆ ಟೋಕಿಯೋ ದಿಂದ ಬಂದಿದ್ದ ಜಪಾನ್ ಪ್ರತಿನಿಧಿ ಎಂ. ಎಸ್. ಮುರಾ ಸಹ ಇದ್ದರು. ಚೀಣಾದಿಂದ ಚೀಣೀ ರಾಷ್ಟ್ರೀಯ ಸರ್ಕಾರದ ನ್ಯಾಯಾಂಗ ಸಂಸ್ಥೆಯ ಮತ್ತು ಚೀಣಾದ ಸಮನ್ವಯ ಸಂಸ್ಥೆಯ ಹಿಂದಲ ಅಧ್ಯಕ್ಷರೂ ಆದ (ಲೆಜಿಸ್ಲೆಟೀವ್ ಯೂನ್) ಸದಸ್ಯರಾದ ರೆವರೆಂಡ್ ಟಿಮೋತಿ ಟಿಂಗ್‌ಪ್ಯಾಂಗ್ ಮತ್ತು ಶಾಂಘೈನ ರಾಷ್ಟ್ರೀಯ ಕ್ರಿಸ್ತ ಯುವಕ ಸಂಘದ ಮುದ್ರಣ ಮತ್ತು ಪತ್ರಿಕೆಗಳ ಮುಖ್ಯ ಸಂಪಾದಕರಾದ ಟಿ. ಟಿ. ಯು ಇದ್ದರು. ಕೊನೆಯದಾಗಿ ಕಾನ್‌ಫ್ಯುಂಷೆ (Confucius) ಮತ್ತು ಗ್ರಾಮಪುನರುದ್ಧಾರದ ಮೇಲೆ ಅನೇಕ ಕೃತಿಗಳನ್ನು ರಚಿಸಿರುವ ಲೇಖಕರೂ ದಾರ್ಶನಿಕರೂ ಆದ ಪಿ. ಸಿ. ಸು ಇದ್ದರು. ಒಂದು ಕಾಲದಲ್ಲಿ ಷಾಂಘೈ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿದ್ದ ಇವರು ಈಗ ಚೀಣಾದಲ್ಲಿ ಆಶ್ರಮಗಳ ಶಾಖೋಪಶಾಖೆಗಳನ್ನು ನಿರ್ಮಿಸುವುದರಲ್ಲಿ ತೊಡಗಿದಾರೆ. ಈ ಆಶ್ರಮಗಳ ವಿದ್ವಾಂಸರು 'ಶಾಂತಿಯನ್ನು ಕಳೆದುಕೊಳ್ಳದೆ ದುಡಿಯಬೇಕು' ಎಂಬ ಧ್ಯೇಯವನ್ನು ತಮ್ಮ ಮುಂದೆ ಇಟ್ಟುಕೊಂಡು, ಗುಡಿಸುವುದು ಸ್ವಚ್ಛಮಾಡುವುದು ಮುಂತಾದ ಕೀಳು ಕೆಲಸ ಎನ್ನಿಸಿಕೊಳ್ಳುವ ಕೈಗೆ ಬಂದ ಕಸಬುಗಳನ್ನೆಲ್ಲ ತಾವೇ ಮಾಡುತ್ತಾರೆ.

ಧರ್ಮನಿಷ್ಠ ಕ್ರಿಸ್ತರಾಗಿದ್ದ ಅವರ ಪೈಕಿ ಅನೇಕರು ಶಾಂತಿಯ ಕಡೆಗೆ ಪೂರ್ಣ ನಿಲುವನ್ನು ಹೊಂದಿದ್ದರು ಮತ್ತು ಚೀಣಾದ ಪ್ರತಿನಿಧಿಗಳೂ ನೀಗ್ರೋ ಜನಾಂಗದ ಪ್ರತಿನಿಧಿಗಳೂ ಕ್ರಮವಾಗಿ ಜಪಾನ್ ಮತ್ತು ಬಿಳಿಯ ಜನಾಂಗಗಳ ಸೈನ್ಯಶಕ್ತಿಯ ಉಕ್ಕಿನ ಹಿಮ್ಮಡಿಯ ದಬ್ಬಾಳಿಕೆಯನ್ನು ಅನುಭವಿಸಿದ್ದುದರಿಂದ ಸೈನ್ಯಶಕ್ತಿಯನ್ನು ಎದುರಿಸುವುದರಲ್ಲಿ ಅಹಿಂಸೆಯ ಮಾರ್ಗ ಹೇಗೆ ಆಯುಧ ವಾಗಬಹುದು ಎಂಬುದರಲ್ಲಿ ಅವರಿಗೆ ಆಳವಾದ ಆಸಕ್ತಿಯಿದ್ದಿತು. ಚೀಣಾದ ಪ್ರತಿನಿಧಿ ಆಗತಾನೇ ಯುದ್ಧರಂಗದಿಂದ ಬಂದಿದ್ದರು. ಆಧುನಿಕ ಯುದ್ಧದ ಎಲ್ಲ ನಗ್ನಕ್ರೌರ್ಯದ ಅನುಭವವೂ ಅವರಿಗೆ ಉಂಟಾಗಿದ್ದಿತು. ಅವರು ಬಹಳ ಸಂದಿಗ್ಧವಾದ ಪರಿಸ್ಥಿತಿಯಲ್ಲಿ ಸಿಕ್ಕಿಕೊಂಡಿದ್ದರು.

ಒಂದು ಕಡೆ ದೇಶಪ್ರೇಮದಿಂದ ಮಾಡಬೇಕಾಗಿದ್ದ ಯುದ್ಧದ ಭಯಂಕರ ಪರಿಣಾಮ, ಮತ್ತೊಂದು ಕಡೆ ನಿಷ್ಕಾರಣವಾಗಿ ತಮ್ಮ ಸ್ವಾತಂತ್ರ್ಯದ ಮೇಲೆ ನಡೆದಿರುವ ಮುತ್ತಿಗೆ—ಈ ಎರಡು ಭಾವನೆಗಳ ನಡುವೆ ಸಿಕ್ಕಿಕೊಂಡ ಅವರು ತಮ್ಮ ಆಧ್ಯಾತ್ಮಿಕ ಮನಃಕ್ಲೇಶವನ್ನು ಗಾಂಧೀಜಿಯವರ ಮುಂದೆ ತೋಡಿ ಕೊಂಡರು. ಮತ್ತು ಗಾಂಧೀಜಿಯವರು ಅಹಿಂಸೆಯ ಗುರು ಪ್ರವರ್ತನಾಚಾರ್ಯ ಎಂಬ ದೃಷ್ಟಿಯಿಂದ ತಮ್ಮ ಅಹಿಂಸೆಯನ್ನೂ ಪರಿಣಾಮಕಾರಿಯಾಗಿ ಮಾಡುವ ಮಾರ್ಗವನ್ನು ತಮಗೆ ತೋರಿಸಬೇಕೆಂದು ಗಾಂಧೀಜಿಯವರನ್ನು ಕೇಳಿ ಕೊಂಡರು.

## ರೆವರೆಂಡ್ ಲ್ಯೂರವರ ಸಮಸ್ಯೆ

ಗಾಂಧೀಜಿಯವರನ್ನು ಮೊದಲ ದಿನ ಬೇರೆಯಾಗಿಯೇ ಸಂಧಿಸಿದ ರೆವರೆಂಡ್ ಲ್ಯೂರವರು ಚೀಣಾಕ್ಕೆ ಭಾರತದಿಂದ ವೈದ್ಯಸಹಾಯವನ್ನು ಕಳುಹಿಸಿ ದುದಕ್ಕಾಗಿ ತಮ್ಮ ವಂದನೆಯನ್ನರ್ಪಿಸುತ್ತಾ ಹೀಗೆ ಹೇಳಿದರು :

' ಅದು ಚೀಣದ ವಿಷಯದಲ್ಲಿ ಭಾರತದ ಸಹಾನುಭೂತಿ ಮತ್ತು ಸದ್ಭಾವನೆ ಎಂದು ನಾವು ಮೆಚ್ಚುತ್ತೇವೆ. ಚೀಣದ ಹೋರಾಟ ಬರಿಯ ಚೀಣಕ್ಕೆ ಮಾತ್ರವೇ ಅಲ್ಲ; ಇದು ಪೂರ್ಣ ಏಷಿಯಾ ಖಂಡಕ್ಕೆ. ಇದು ಜಪಾನ್‌ಗಾಗಿ ಸಹ. ಜಪಾನರು ನಮ್ಮನ್ನು ಗಲಾಟೆಗಳಲ್ಲಿ ಸೋಲಿಸಿದುದರಿಂದ ತಾವು ಅಜೇಯರೆಂದು

ಭಾವಿಸುತ್ತಾರೆ. ಆದರೆ ನಮಗೆ ಗೊತ್ತು. ಜಪಾನ್ ಪ್ರಜೆಗಳು ಈಗಲೂ ಆ ದುರಾಕ್ರಮಣಯುದ್ಧಕ್ಕಾಗಿ ಹೆಚ್ಚಿಗೆ ತೆರಿಗೆ ಮುಂತಾದ ರೂಪದಲ್ಲಿ ದೊಡ್ಡ ದಂಡವನ್ನು ತೆರುತ್ತಿದಾರೆ.'

## ಸಂಸ್ಕೃತಿ ನಾಶ

'ನಮ್ಮ ಆಸ್ತಿ–ಮನೆ–ಮಠ ಮುಂತಾದ ಪ್ರಾಪಂಚಿಕ ವಸ್ತುಗಳು ನಾಶವಾಗುವುದಕ್ಕಾಗಿ ನಾವು ಹೆದರುವುದಿಲ್ಲ. ಅದೂ ವಿಷಾದಕರವೇ ಹೌದು. ಆದರೆ ನಮ್ಮ ಸಂಸ್ಕೃತಿಯ ನಾಶಕ್ಕಾಗಿ ಬೆದರುತ್ತೇವೆ. ಷಾಂಘೈ ಮೇಲೆ ಬಿದ್ದ ಮೊದಲನೆಯ ಬಾಂಬು, ಒಂದು ಪುಸ್ತಕ ಭಂಡಾರವನ್ನು ತಾಕಿತು. ಅನೇಕ ಕಲಾಶಾಲೆಗಳು ನೆಲಸಮವಾಗಿವೆ; ಪ್ರಾಧ್ಯಾಪಕರು ಕೊಲ್ಲಲ್ಪಟ್ಟಿದಾರೆ. ನವೀನ ವಿದ್ಯಾಭ್ಯಾಸ ಅವ್ಯವಸ್ಥಿತವಾಗಿ ದೇಶದ ಅಭುಕ್ತ ಮೂಲೆಯಲ್ಲಿ ಹೋಗಿ ಆಶ್ರಯ ಪಡೆಯಬೇಕಾಗಿದೆ.'

ಅವರು ಮುಂದುವರಿಸಿ ಹೀಗೆ ಹೇಳಿದರು: 'ನಮಗೆ ಅವರು ಉಂಟುಮಾಡಿರುವ ನೈತಿಕಹಾನಿ ಇನ್ನೂ ಹೆಚ್ಚು ಕೆಡಕಾಗಿದೆ. ಕಳೆದ ಇಪ್ಪತ್ತು ವರುಷಗಳಿಂದ ಚೀಣೀಯರು ಸರ್ವಸಾಹಸದಿಂದ ಎದುರಿಸಿ ಹೋರಾಡುತ್ತಿರುವ ಅಫೀಮಿನ ದುಷ್ಟ ಚಟವನ್ನು ಮತ್ತೆ ಬಲಾತ್ಕರಿಸಲು ಜಪಾನರು ಹೇಗೆ ವ್ಯವಸ್ಥಿತವಾದ ಪ್ರಯತ್ನ ಮಾಡುತ್ತಿರುವರೆಂಬುದರ ಘೋರವಾದ ವಿವರಣೆಯನ್ನು ಅವರು ಕೊಟ್ಟರು. ಜಪಾನರು ಪೀಕಿಂಗ್‌ನ್ನು ಆಕ್ರಮಿಸಿಕೊಂಡ ಕೂಡಲೇ ಅಲ್ಲಿ ಐವತ್ತು ವ್ಯಭಿಚಾರಗೃಹಗಳನ್ನು ಸ್ಥಾಪಿಸಿ ಕೊರಿಯ ಹುಡುಗಿಯರನ್ನು ಅಲ್ಲಿ ತಂದು ತುಂಬಿದರು. ದೇಶವನ್ನು ಆಕ್ರಮಿಸಿರುವ ಸೈನ್ಯ ಎಲ್ಲೆಲ್ಲೂ ಬಲಾತ್ಕಾರದಿಂದ ಸ್ತ್ರೀಯರ ಮಾನಭಂಗ ಮಾಡುತ್ತಿದೆ. ಈ ಸಂಖ್ಯೆಯ ಅಂದಾಜು ಪೀಕಿಂಗ್ ಒಂದಕ್ಕೇ ಎಂಟು ಸಾವಿರದಿಂದ ಇಪ್ಪತ್ತು ಸಾವಿರದವರೆಗೆ. ಜಪಾನರ ಅಧಿಕಾರದಲ್ಲಿ ಷಾಂಘೈನಲ್ಲಿ ತೆರೆದಿರುವ ವ್ಯಭಿಚಾರಗೃಹ ಮತ್ತು ಮಾದಕವಸ್ತು ಅಂಗಡಿಗಳ ತೆರಿಗೆ—ಒಂದು ತಿಂಗಳಿಗೆ ಎರಡೂವರೆ ಕೋಟಿ ಡಾಲರ್‌ಗಳಿಗೆ ಏರಿದೆ. ದೇಶದ ನೈತಿಕ ಧೈರ್ಯ ಪೂರ್ಣವಾಗಿ ನಾಶವಾಗಿದೆ. ಪೂರಾ ರಾಷ್ಟ್ರವೂ ಒಮ್ಮೆ ಅಫೀಮಿನ ಗುಲಾಮವಾಗಿಬಿಟ್ಟರೆ

ಈ ದೇಶಕ್ಕೆ ಮೋಕ್ಷವಿಲ್ಲ. ಹತ್ತು-ಹದಿನೈದು ವರುಷಗಳನಂತರ ನಾವು ಯುದ್ಧದಲ್ಲಿ ಜಯಶೀಲರಾಗುವೆವೆಂದು ಭಾವಿಸೋಣ. ಪ್ರಾಪಂಚಿಕ ಆಸ್ತಿಗಳನ್ನು ನಾವು ಮತ್ತೆ ಕೂಡಿಸಿಕೊಳ್ಳಬಹುದು. ಆದರೆ ನಮ್ಮ ಯುವಕ ಜನಾಂಗವನ್ನು ಹೇಗೆ ವಿಮೋಚನೆ ಮಾಡಬಲ್ಲೆವು!

'ನಮಗೆ ನಿಮ್ಮ ಸಂದೇಶ ಬೇಕು. ನಿಮ್ಮ ಆತ್ಮಕಥೆಯನ್ನು ನಾವು ಚೀಣೀ ಭಾಷೆಗೆ ಪರಿವರ್ತಿಸಿಕೊಂಡಿದೇವೆ. ಆತ್ಮದ ಮಾರ್ಗದಲ್ಲಿ ನಮ್ಮನ್ನು ನಡೆಸಲು ನಿಮ್ಮ ಕಡೆ ನೋಡುತ್ತಿದೇವೆ.'

## ಬಾಂಬು ಸಂಸ್ಕೃತಿಯನ್ನು ನಾಶಮಾಡಲಾರದು

ಗಾಂಧೀಜೀ ಹೀಗೆ ಪ್ರತ್ಯುತ್ತರವಿತ್ತರು: 'ಒಮ್ಮೆ ಶಾಂತಿನಿಕೇತನದ ಚೀಣೀ ಮಿತ್ರರೊಬ್ಬರು ಚೀಣಾಕ್ಕೆ ಒಂದು ಸಂದೇಶವನ್ನು ಕೊಡಬೇಕೆಂದು ನನ್ನನ್ನು ಕೇಳಿದರು. ನಾನು 'ನನ್ನನ್ನು ಕ್ಷಮಿಸಿ' ಎಂದು ಹೇಳಿದೆ. ಅದಕ್ಕೆ ಕಾರಣಗಳನ್ನೂ ಅವರಿಗೆ ಹೇಳಿದೆ. ಚೀಣೀಯರ ಹೋರಾಟದಲ್ಲಿ ನನಗೆ ಸಹಾನುಭೂತಿಯಿದೆ ಎಂದಷ್ಟೇ ನಾನು ಹೇಳಿಬಿಟ್ಟರೆ ನಾನು ಕೊಡುವ ಆ ಸಂದೇಶಕ್ಕೆ ಹೆಚ್ಚು ಬೆಲೆಯಿಲ್ಲ. 'ನಿಮ್ಮ ಮೋಕ್ಷ ಅಹಿಂಸಾಪ್ರಯೋಗತಂತ್ರದಲ್ಲಿ ಮಾತ್ರ ಇದೆ' ಎಂದು ಚೀಣೀಯರಿಗೆ ಹೇಳಲು ನನಗೆ ಪ್ರೀತಿ. ಆದರೆ ಜೀವನ-ಮರಣಗಳ ಹೋರಾಟದಲ್ಲಿ ತೊಡಗಿರುವ ಒಂದು ಜನತೆಗೆ ಆ ಹೋರಾಟದಿಂದ ಹೊರಗಿರುವ ನಾನು 'ಈ ಮಾರ್ಗವಲ್ಲ, ಆದರೆ ಆ ಮಾರ್ಗ' ಎಂದು ಹೇಳುವುದು ಸರಿಯಲ್ಲ. ಹೊಸ ಮಾರ್ಗವನ್ನು ಅನುಸರಿಸಲು ಅವರಿಗೆ ಸಾಧ್ಯವಾಗುವುದಿಲ್ಲ. ಹಳೆಯ ಮಾರ್ಗದಲ್ಲಿ ನಡೆಸುತ್ತಿರುವ ಕಾರ್ಯ ಅವ್ಯವಸ್ಥಿತವಾಗುತ್ತದೆ. ನಾನು ಅದರಲ್ಲಿ ಪ್ರವೇಶಿಸುವುದರಿಂದ ಅವರ ಧೈರ್ಯ ನಾಶವಾಗಿ ಅವರ ಮನಸ್ಸು ಗೊಂದಲದಲ್ಲಿ ಬೀಳುವುದು.

'ಆದರೆ ಹೋರಾಟದಲ್ಲಿ ತೊಡಗಿರುವ ಚೀಣೀಯರಿಗೆ ಕೊಡಲು ನನ್ನಲ್ಲಿ ಸಂದೇಶವಿಲ್ಲದಿದ್ದರೂ ನನ್ನ ಅಭಿಪ್ರಾಯಗಳನ್ನು ನಿಮ್ಮ ಮುಂದೆ ಇಡಲು ನಾನು ಹಿಂಜರಿಯುವುದಿಲ್ಲ. ಸಾಂಸ್ಕೃತಿಕವಾಗಿ ನಾಶವಾಗಿದೇವೆಂದು ನೀವು ಹೇಳಿದಾಗ, ಹಾಗೆಂದರೇನೆಂದು ನಿಮ್ಮನ್ನು ನಾನು ಕೇಳುವುದರಲ್ಲಿದ್ದೆ.

ಚೀಣೀಯರ ಸಂಸ್ಕೃತಿ ಇಟ್ಟಿಗೆ-ಗಾರೆಗಳಲ್ಲಿಯಾಗಲೀ ನುಸಿ ತಿನ್ನುವ ಸಂಪುಟಗಳಲ್ಲಿಯಾಗಲೀ ಇದೆ ಎಂದು ಕೇಳಲು ನನಗೆ ದುಃಖವಾಗುತ್ತದೆ. ಒಂದು ದೇಶದ ಸಂಸ್ಕೃತಿ ಉಳಿದಿರುವುದು ಆ ದೇಶದ ಜನರ ಹೃದಯದಲ್ಲಿ, ಆ ಜನರ ಆತ್ಮದಲ್ಲಿ. ಚೀಣೀ ಸಂಸ್ಕೃತಿ ಎಷ್ಟರಮಟ್ಟಿಗೆ ಆ ಜನರ ಹೃದಯ-ಮನಸ್ಸು-ಬಾಳಿನ ಭಾಗವಾಗಿದೆಯೋ, ಅಷ್ಟರಮಟ್ಟಿಗೆ ಮಾತ್ರ ಅದು ಚೀಣೀ ಸಂಸ್ಕೃತಿ. ಚೀಣೀ ಸಂಸ್ಕೃತಿ, ನೀತಿ ನಾಶವಾಗುವ ಭಯವಿದೆಯೆಂದು ನೀವು ಹೇಳುವುದರಿಂದ, ಸುಧಾರಣಾ ಚಳುವಳಿ ಮೇಲೆ ಮೇಲೆ ನಡೆದಿದೆಯೆಂದೂ, ಆಳವಾಗಿ ಪ್ರವೇಶಿಸಿಲ್ಲವೆಂದೂ ಅರ್ಥವಾಗುತ್ತದೆ. ಜೂಜು ಜನರ ಹೃದಯವನ್ನು ಬಿಟ್ಟು ಹೋಗಿಲ್ಲ; ಸಮಾಜದ ನೀತಿಯ ಆದರ್ಶದಿಂದ ಅಲ್ಲ ಅದು ಕಡಮೆಯಾಗಿದ್ದುದು, ಆದರೆ ಕಾನೂನು-ಶಿಕ್ಷೆಯಿಂದ. ಹೃದಯ ಜೂಜಾಡುತ್ತಲೇ ಇತ್ತು. ತಾನು ಮಾಡುತ್ತಿರುವ ಮತ್ತು ಮಾಡಿರುವ ಕಾರ್ಯಕ್ಕೆ ಜಪಾನು ಖಂಡನೀಯ. ಆದರೆ ಈಗ ಜಪಾನು ತೋಳದಂತೆ—ಕುರಿಯನ್ನು ಬೇಗ ಮುಗಿಸುವುದೇ ಅದರ ಗುರಿ. ತೋಳನನ್ನು ಬೈಯುವುದರಿಂದ ಕುರಿಗೆ ಸಹಾಯವಾಗುವುದಿಲ್ಲ. ತೋಳನ ಕೈಗೆ ಬೀಳದಿರುವುದನ್ನು ಕುರಿ ಕಲಿಯಬೇಕು.

'ನಿಮ್ಮಲ್ಲಿ ಕೇವಲ ಕೆಲವರಾದರೂ ಅಹಿಂಸೆಯನ್ನು ಅನುಸರಿಸಿದರೆ, ನೀವು ಚೀಣೀಯರ ಸಂಸ್ಕೃತಿ ಮತ್ತು ನೀತಿಯ ಸಜೀವ ಸ್ತಂಭಗಳಾಗುವಿರಿ. ಅನಂತರ ಯುದ್ಧದಲ್ಲಿ ಚೀಣಾ ಸೋತರೂ ಕೊನೆಯಲ್ಲಿ ಚೀಣಾಕ್ಕೆ ಒಳ್ಳೆಯದಾಗುವುದು. ಏಕೆಂದರೆ ಅದಕ್ಕೆ ಮುಂದಿನ ಭರವಸೆ ಮತ್ತು ಬಿಡುಗಡೆಯ ಒಂದು ಸಂದೇಶ ಜತೆಯಲ್ಲಿಯೇ ದೊರೆತಂತಾಗುವುದು. ಇಷ್ಟವಿಲ್ಲದವರ ಗಂಟಲಿನಲ್ಲಿ ಬಂದೂಕದ ಸಹಾಯದಿಂದ ಮಾದಕದ್ರವ್ಯಗಳನ್ನು ಜಪಾನು ಸುರಿಯುವುದು ಸಾಧ್ಯವಿಲ್ಲ. ಅದು ಆಕರ್ಷಣೆಗಳನ್ನು ಮಾತ್ರ ಸೃಷ್ಟಿಸಬಲ್ಲುದು. ಜಪಾನರ ಬಲವನ್ನು, ಬಲದಿಂದ ಎದುರಿಸುವುದರಿಂದ ಈ ಆಕರ್ಷಣೆಗಳನ್ನು ಜಯಿಸುವುದನ್ನು ಜನರಿಗೆ ನೀವು ಕಲಿಸಲಾರಿರಿ. ಬಲದಿಂದ ಯಾವುದಾದರೂ ಸಾಧ್ಯವಾಗಲೀ ಅಥವಾ ಬಿಡಲಿ, ಆದರೆ ಅದಂತೂ ಚೀಣೀಯರ ನೀತಿಯನ್ನೂ ಸಂಸ್ಕೃತಿಯನ್ನೂ ರಕ್ಷಿಸಲಾರದು.

'ನನ್ನ ಮಾತುಗಳ ಸತ್ಯ ನಿಮಗೆ ಮನದಟ್ಟಾದರೆ ನೀವು ಚೀಣಾಕ್ಕೆ ಸಜೀವ ಸಂದೇಶವಾಗುವಿರಿ. ಆಗ ನೀವು ಚೀಣೀಯರಿಗೆ ಹೀಗೆ ಹೇಳಬಹುದು:

'ಜಪಾನು ಎಷ್ಟೇ ನಮ್ಮ ಆಸ್ತಿ, ಪ್ರಾಪಂಚಿಕ ವಸ್ತುಗಳನ್ನು ನಾಶಮಾಡಿದರೂ ಅದು ಚೀಣೀಯರ ಸಾಂಸ್ಕೃತಿಕ ನಾಶವನ್ನು ಸಾಧಿಸಲಾರದು. ಜಪಾನು ಸೃಷ್ಟಿಸುವ ಎಲ್ಲ ಆಕರ್ಷಣೆಗಳನ್ನೂ ಎದುರಿಸಲು ನಮ್ಮ ಜನರಿಗೆ ಆವಶ್ಯಕ ಶಿಕ್ಷಣ ಕೊಡಬೇಕು. ಸ್ಮಾರಕಸ್ತಂಭಗಳೂ ಪಟ್ಟಣಗಳೂ ನೆಲಸಮವಾಗ ಬಹುದು. ಅವು ಕ್ಷಣಿಕ, ತಾತ್ಕಾಲಿಕ. ಕಾಲ ಎಂದಿದ್ದರೂ ಒಂದು ದಿನ ಅವನ್ನು ನುಂಗುವುದು. ಜಪಾನರು ಅವನ್ನು ನಾಶಮಾಡಿದರೆ, ಕಾಲನ ಬಾಯಿನ ಒಂದು ತುತ್ತನ್ನು ತೆಗೆದುಕೊಂಡಂತೆ ಆಯಿತು, ಅಷ್ಟೆ. ಜಪಾನರು ನಮ್ಮ ಆತ್ಮವನ್ನು ಭ್ರಷ್ಟಗೊಳಿಸಲಾರರು. ಚೀಣೀಯರ ಆತ್ಮ ನಾಶವಾಗುವು ದಾದರೆ ಅದು ಜಪಾನರಿಂದಲ್ಲ.'

## ಜಪಾನಿನ ಬಹಿಷ್ಕಾರ

ಜಪಾನಿನ ಆರ್ಥಿಕ ಪತನ ಮಾತ್ರ ಚೀಣಾವನ್ನು ಉಳಿಸಬಲ್ಲುದು ಎಂಬುದು ಚೀಣೀ ಮಿತ್ರರ ಅಭಿಪ್ರಾಯವಾಗಿತ್ತು. ಭಾರತದಲ್ಲಿ ಜಪಾನ್ ವಸ್ತುಗಳಿಗೆ ಬಹಿಷ್ಕಾರ ಹಾಕುವುದರ ಸಾಧ್ಯಾಸಾಧ್ಯತೆಗಳನ್ನು ತಿಳಿಯಲು ಅವರು ಇಚ್ಛಿಸಿದರು.

ಗಾಂಧೀಜೀ ಪ್ರತ್ಯುತ್ತರವಿತ್ತರು: 'ಆಶಾದಾಯಕ ಎಂದು ಹೇಳಬಹು ದಾಗಿದ್ದರೆ ಎಷ್ಟು ಚೆನ್ನಾಗಿತ್ತು. ನಮ್ಮ ಸಹಾನುಭೂತಿ ನಿಮಗೆ ಇದೆ. ಆದರೆ ಅದು ನಮ್ಮ ಹೃದಯದ ಆಳದಲ್ಲಿ ನಿಮಗಾಗಿ ತಳಮಳವನ್ನೆಬ್ಬಿಸಿಲ್ಲ. ಹಾಗೆ ಇದ್ದಿದ್ದರೆ ಜಪಾನರ ಎಲ್ಲ ವಸ್ತುಗಳನ್ನೂ—ಮುಖ್ಯವಾಗಿ ಜಪಾನರ ಅರಿವೆ ಗಳನ್ನು—ನಾವು ಬಹಿಷ್ಕರಿಸಿರಬೇಕಾಗಿದ್ದಿತು. ಜಪಾನ್ ನಿಮ್ಮನ್ನು ಮಾತ್ರ ಜಯಿಸುತ್ತಿಲ್ಲ, ಅದು ತನ್ನ ಅಗ್ಗವಾದ ನಾಜೂಕಾದ ಯಂತ್ರದಿಂದ ತಯಾ ರಾದ ವಸ್ತುಗಳಿಂದ ನಮ್ಮನ್ನೂ ಜಯಿಸಲು ಪ್ರಯತ್ನ ಮಾಡುತ್ತಿದೆ. ನಿಮ್ಮಲ್ಲಿಗೆ ವೈದ್ಯಕೀಯ ನಿಯೋಗವನ್ನು ಕಳುಹಿಸಿದುದು ನಿಮ್ಮಲ್ಲಿ ನಮಗೆ ವಿಶೇಷವಾಗಿ ಇರುವ ಸ್ನೇಹ–ಸೌಹಾರ್ದಗಳ ಗುರುತು. ನಾವು ಇನ್ನೂ ಹೆಚ್ಚಾಗಿ ಮಾಡ ಬಹುದಲ್ಲ ಎಂಬುದನ್ನು ಯೋಚಿಸಿದರೆ, ಇದರಿಂದ ನನಗೆ ಅಷ್ಟು ತೃಪ್ತಿಯುಂಟಾ ಗುವುದಿಲ್ಲ. ನಾವೂ ನಿಮ್ಮಂತೆಯೇ ಒಂದು ದೊಡ್ಡ ರಾಷ್ಟ್ರ. ನಾವು ಜಪಾನ

ರಿಗೆ, ‘ ನಿಮ್ಮ ಒಂದು ಗಜ ಕ್ಯಾಲಿಕೋವನ್ನೂ ಆಮದುಮಾಡಿಕೊಳ್ಳುವುದಿಲ್ಲ. ನಿಮಗೆ ನಮ್ಮ ಹತ್ತಿಯನ್ನೂ—ಸ್ವಲ್ಪವನ್ನೂ—ರಫ್ತು ಮಾಡಿಕೊಡುವುದಿಲ್ಲ’ ಎಂದು ಹೇಳಿದರೆ, ಜಪಾನ್ ತನ್ನ ದುರಾಕ್ರಮಣವನ್ನು ಮುಂದುವರಿಸುವುದಕ್ಕೆ ಮುಂಚೆ ದೀರ್ಘವಾಗಿ ಮತ್ತೆ ಮತ್ತೆ ಆಲೋಚನೆ ಮಾಡುವುದು.’

## ಅಹಿಂಸೆಯ ಪ್ರಯೋಗತಂತ್ರ

ಇದೇ ಮಾತು ಅನಂತರ ಆ ಪಂಗಡದ ಎಲ್ಲ ಸದಸ್ಯರೊಂದಿಗೆ ಚರ್ಚೆಯಲ್ಲಿ ಮುಂದುವರಿಯಿತು. ಚೀಣಾದ ಪ್ರತಿನಿಧಿಗಳು ಸೂಕ್ಷ್ಮವಾದ ಪ್ರಶ್ನೆಗಳನ್ನು ಹಾಕಿದರು. ಅಹಿಂಸೆಯ ‘ ಮುಖ ಮತ್ತು ಆತ್ಮ ’ವನ್ನು ಸೂಕ್ಷ್ಮವಾಗಿ ವಿವರವಾಗಿ ಅಧ್ಯಯನ ಮಾಡುವ ಕಾತರತೆ ಅವರಲ್ಲಿತ್ತು. ಒಬ್ಬರು ಹೀಗೆ ಕೇಳಿದರು : ‘ ವ್ಯಕ್ತಿಗಳು ತಮ್ಮ ಜೀವಿತದಲ್ಲಿಯೂ ಇತರರೊಂದಿಗೂ ಅಹಿಂಸೆಯನ್ನು ಮೊದಲು ಅನುಸರಿಸಬೇಕಾದುದು ಆವಶ್ಯಕವಲ್ಲವೆ ? ’ ಉದಾಹರಣೆಗಾಗಿ, ಅವರು ‘ ಅಹಿಂಸೆ ಜೀವನದ ಧರ್ಮ ಎಂಬುದು ನನಗೆ ಮನದಟ್ಟಾದರೂ ಅನೇಕ ವರ್ಷ ನಾನು ಅದನ್ನು ಇತರರಿಗೆ ಅವರ ಬಾಹ್ಯವ್ಯವಹಾರದಲ್ಲಿ ಅನುಸರಿಸುವಂತೆ ಬೋಧಿಸಲು ಹಿಂದೆಗೆದೆ. ನನ್ನ ವಿರೋಧವಾಗಿ ಬಂದ ಆಕ್ಷೇಪಣೆ ಮತ್ತು ಟೀಕೆಗಳಿಗೆ ಉತ್ತರಗಳನ್ನೂ ಸಮಾಧಾನ-ಪ್ರತ್ಯಾಕ್ಷೇಪಣೆಗಳನ್ನೂ ಹೇಳಬಾರದೆಂದು ಮೊದಲು ನಿರ್ಣಯಿಸಿಕೊಂಡೆ. ಹೀಗೆ ಏಳು ವರ್ಷ ಮಾಡಿದ ಬಳಿಕ ನನ್ನ ಶಿಷ್ಯರಿಗೆ ನನ್ನ ಅನುಭವಗಳ ಒಂದು ವರದಿ ಕೊಟ್ಟೆ. ಆಚರಣೆಯಲ್ಲಿ ನನ್ನ ಕ್ರಮ ಯಾವಾಗಲೂ ಜಯಶಾಲಿಯಾಗಿದೆ ಎಂದು ಹೇಳಲಾರೆ. ಆದುದರಿಂದ ನನಗೇ ನಾನು ಹೀಗೆ ಹೇಳಿಕೊಳ್ಳುತ್ತೇನೆ : ‘ ಸಾವಧಾನ. ಮತ್ತೆ ಪ್ರಯೋಗಮಾಡೋಣ ’ ’ ಎಂದು ಹೇಳಿದರು.

ಗಾಂಧೀಜೀ ಹೀಗೆ ಉತ್ತರವಿತ್ತರು : ‘ ಹಾಗಲ್ಲದೆ ಬೇರೆ ಯೋಚಿಸುವುದು ಭ್ರಾಂತಿಯಾದೀತು. ಯಾವ ಒಬ್ಬನೂ ಇತರರೊಂದಿಗೆ ತನ್ನ ಸ್ವಂತ ವ್ಯವಹಾರದಲ್ಲಿ ಅಹಿಂಸೆಯನ್ನು ಬಳಸದೆ ಇತರ ದೊಡ್ಡ ವಿಷಯದಲ್ಲಿ ಬಳಸುವೆನೆಂದು ನೆಚ್ಚಿದರೆ ಅದು ದೊಡ್ಡ ತಪ್ಪು ಭಾವನೆ. ಔದಾರ್ಯ ಹೇಗೋ ಹಾಗೆ ಅಹಿಂಸೆಯೂ ತನ್ನ ಮನೆಯಲ್ಲಿ ಪ್ರಾರಂಭವಾಗಬೇಕು. ಆದರೆ ಅಹಿಂಸೆ

ಯಲ್ಲಿ ವ್ಯಕ್ತಿಗೆ ತಯಾರಿಯನ್ನು ಕೊಡುವುದು ಆವಶ್ಯಕವಾದಂತೆ, ಅದಕ್ಕಿಂತ ಹೆಚ್ಚಾಗಿ ರಾಷ್ಟ್ರಕ್ಕೂ ತಯಾರಿಯನ್ನು ಕೊಡುವುದು ಆವಶ್ಯಕ. ಒಬ್ಬ ತನ್ನ ಸ್ವಂತ ಆವರಣದಲ್ಲಿ ಅಹಿಂಸಾವಾದಿಯೂ, ಹೊರಗಡೆ ಹಿಂಸಾವಾದಿಯೂ ಆಗಿರುವುದು ಸಾಧ್ಯವಿಲ್ಲ. ಆಗ ಅವನು ತನ್ನ ಸ್ವಂತ ಆವರಣದಲ್ಲಿಯೂ ನಿಜವಾಗಿ ಅಹಿಂಸಾದಿಯಲ್ಲ. ಆ ಅಹಿಂಸೆ ಅನೇಕ ವೇಳೆ ಬರಿಯ ತೋರಿಕೆ ಅಥವಾ ವೇಷ. ಪ್ರತಿಭಟನೆ ಎದುರಾದಾಗಲೇ—ಉದಾಹರಣೆಗೆ, ಕಳ್ಳ ಅಥವಾ ಕೊಲೆಗಾರ ನಮ್ಮನ್ನು ಎದುರಿಸಿದಾಗ ನಮ್ಮ ಅಹಿಂಸೆಯ ಪರೀಕ್ಷೆ ನಡೆಯುತ್ತದೆ. ನೀವು ಕಳ್ಳನನ್ನು ಅವನು ಉಪಯೋಗಿಸುವಂತಹ ಆಯುಧ ದಿಂದಲೇ ಎದುರಿಸಲು ಪ್ರಯತ್ನಿಸುತ್ತೀರಿ ಅಥವಾ ಪ್ರಯತ್ನಿಸಬೇಕು. ಇಲ್ಲದೆ ಇದ್ದರೆ ನಿಮ್ಮ ಪ್ರೇಮದಿಂದ ಅವನನ್ನು ನಿರಾಯುಧನನ್ನಾಗಿ ಮಾಡಬೇಕು. ಯೋಗ್ಯರೊಂದಿಗೆ ಬಾಳುತ್ತಿರುವಾಗ ನಿಮ್ಮ ನಡತೆ ಅಹಿಂಸೆ ಎಂದು ಹೇಳುವು ದಕ್ಕಾಗುವುದಿಲ್ಲ. ಪರಸ್ಪರ ಸಹನೆ ಅಹಿಂಸೆಯಲ್ಲ. ಆದುದರಿಂದ ಅಹಿಂಸೆ ಜೀವನದ ಧರ್ಮ ಎಂಬ ನಂಬಿಕೆ ನಿಮಗೆ ಉಂಟಾದ ಕೂಡಲೇ ನಿಮ್ಮ ವಿಷಯ ದಲ್ಲಿ ಹಿಂಸೆಯ ಮನೋಭಾವವಿರುವವರಲ್ಲಿ ನೀವು ಅಹಿಂಸೆಯನ್ನು ಆಚರಿಸ ಬೇಕು. ಈ ಧರ್ಮ ವ್ಯಕ್ತಿಗಳಿಗೆ ಅನ್ವಯಿಸುವಂತೆ ರಾಷ್ಟ್ರಗಳಿಗೂ ಅನ್ವಯಿಸ ಬೇಕು. ಇದಕ್ಕೆ ತರಬೇತು ನಿಸ್ಸಂದೇಹವಾಗಿ ಆವಶ್ಯಕ. ಪ್ರಾರಂಭ ಯಾವಾ ಗಲೂ ಚಿಕ್ಕದಾಗಿಯೇ ಇರುತ್ತದೆ. ಆದರೆ ದೃಢವಾದ ನಂಬಿಕೆ ಇದ್ದರೆ ಉಳಿದದ್ದು ತಾನಾಗಿಯೇ ಹಿಂಬಾಲಿಸುವುದು.

ಮತ್ತೊಂದು ಪ್ರಶ್ನೆ ಹೀಗೆ ಇತ್ತು: 'ಅಹಿಂಸೆಯ ಅನುಸರಣೆಯಲ್ಲಿ ತಾನು ಹುತಾತ್ಮ ಎಂಬ ಭಾವನೆ ಅಥವಾ ಅಹಂಕಾರ ಪ್ರವೇಶಮಾಡುವ ಅಪಾಯ ಇದೆಯಲ್ಲವೆ?'

ಗಾಂಧೀಜೀ ಹೇಳಿದರು: 'ಆ ಹೆಮ್ಮೆ ಅಥವಾ ಅಹಂಕಾರ ಉಂಟಾದಲ್ಲಿ ಅವನಲ್ಲಿ ಅಹಿಂಸೆ ಇಲ್ಲ. ವಿನಯವಿಲ್ಲದೆ ಅಹಿಂಸೆ ಸಾಧ್ಯವಿಲ್ಲ. ನನ್ನ ಅನುಭವ ಹೀಗೆ: ನಾನು ಯಾವಾಗ ಅಹಿಂಸೆಯಲ್ಲಿ ನಡೆದರೂ ನನ್ನನ್ನು ಆ ಮಾರ್ಗಕ್ಕೆ ಕರೆದುಕೊಂಡುಹೋದುದೂ, ಅಲ್ಲಿ ಕೈಹಿಡಿದು ನಡೆಸುತ್ತಿರುವುದೂ ಕಣ್ಣಿಗೆ ಕಾಣದ ಒಂದು ಉನ್ನತ ಶಕ್ತಿಯ ಪ್ರೇರಣೆ. ಮೊದಲ ಸಲ ಸೆರೆಮನೆಗೆ

ಹೋದಾಗ ಅಲ್ಲಿನ ಸಂಭವಗಳನ್ನು ನೆನೆದು ನಾನು ನಡುಗಿದೆ. ಸೆರೆಮನೆಯ ಜೀವನವನ್ನು ಕುರಿತು ನಾನು ಭಯಂಕರ ಸಂಗತಿಗಳನ್ನು ಕೇಳಿದ್ದೆ. ಆದರೆ ನನಗೆ ಭಗವಂತನ ರಕ್ಷಣೆಯಲ್ಲಿ ನಂಬಿಕೆ ಇತ್ತು. ಭಗವಂತನಲ್ಲಿ ಪ್ರಾರ್ಥನೆಯ ಮನೋಭಾವದಿಂದ ಸೆರೆಮನೆಗೆ ಹೋದವರು ಜಯಶೀಲರಾಗಿ ಹಿಂದಿರುಗುವುದೂ, ತಮ್ಮ ಸ್ವಂತ ಶಕ್ತಿಯಲ್ಲಿ ನಂಬಿ ಹೋದವರು ಅಪಜಯ ಹೊಂದುವುದೂ ನಮ್ಮ ಅನುಭವವಾಗಿತ್ತು. ದೇವರು ನಿಮಗೆ ಶಕ್ತಿಯನ್ನು ಕೊಡುತ್ತಿದಾನೆ ಎಂದು ನೀವು ಹೇಳಿಕೊಂಡಾಗ, ನಿಮ್ಮಲ್ಲಿಯೇ ನಿಮಗೆ ಕನಿಕರವುಂಟಾಗಲೂ ಅವಕಾಶವಿಲ್ಲ. ನೀನು ಮಾಡಿದ ಕಾರ್ಯವನ್ನು ಇತರರು ಒಪ್ಪಬೇಕೆಂದು, ಗುರುತಿಸಬೇಕೆಂದು ನೀನು ಬಯಸಿದಾಗ ಮಾತ್ರ ನಿನಗೆ ನಿನ್ನಲ್ಲಿ ಕನಿಕರ ಉಂಟಾಗುತ್ತದೆ. ಆದರೆ ಇಲ್ಲಿ ಒಪ್ಪಿಗೆಯ ಪ್ರಶ್ನೆ ಏಳುವುದೇ ಇಲ್ಲ.'

## ಹೋರಾಡುವುದೇ ಬಿಡುವುದೆ ?

ಮತ್ತೊಬ್ಬ ಮಿತ್ರರು ತಮ್ಮ ಸಮಸ್ಯೆಯನ್ನು ಹೀಗೆ ಹೇಳಿದರು : ' ನನಗೆ ಅಹಿಂಸೆಯಲ್ಲಿ ಒಳ್ಳೆಯ ನಂಬಿಕೆ. ಎಂಟು ವರುಷಗಳ ಹಿಂದೆ ನಾನು ನಿಮ್ಮ ಸತ್ಯಶೋಧನೆಯನ್ನು ಓದಿದೆ. ಕೂಡಲೇ ಅದರಲ್ಲಿ ನೀವು ಪ್ರತಿಪಾದಿಸುವ ಜೀವನಕ್ರಮಕ್ಕೆ ಪರಿವರ್ತಿತನಾದೆ. ಅನಂತರ ಬಹು ಸ್ವಲ್ಪ ಕಾಲದೊಳಗೆ ಪುಸ್ತಕವನ್ನು ನಾನು ಚೀಣೀ ಭಾಷೆಗೆ ಭಾಷಾಂತರಿಸಿದೆ. ಅನಂತರ ಜಪಾನರ ಆಕ್ರಮಣ ನಡೆಯಿತು. ಅಹಿಂಸೆಯಲ್ಲಿ ನನ್ನ ನಂಬಿಕೆಗೆ ಅದು ಕಠಿಣವಾದ ಪರೀಕ್ಷೆಯಾಯಿತು. ನಾನು ಇಕ್ಕಟ್ಟಿನಲ್ಲಿ ಸಿಕ್ಕಿಕೊಂಡೆ. ನಮ್ಮ ಜನ ಯಾವಾಗಲೂ ಯುದ್ಧಮನೋಭಾವವುಳ್ಳವರಾಗಿರಲಿಲ್ಲ. ಆದರೆ ಈಗ ಆಕ್ರಮಣವನ್ನು ಎದುರಿಸಲು ಬಲಪ್ರಯೋಗವೊಂದೇ ಸರಿಯಾದ ಮಾರ್ಗವೆಂದು ಅವರು ನಂಬಿದ್ದರು. ಅಂತಹವರಿಗೆ ಅಹಿಂಸೆಯನ್ನು ಬೋಧಿಸುವುದು ಸರಿಯಲ್ಲವೆಂದು ನಾನು ಭಾವಿಸಿದೆ. ಶಕ್ತಿಯಿಂದ ಎದುರಿಸುವುದು ಅವರಿಗೆ ತಿಳಿದಿದ್ದ ಅತ್ಯುತ್ತಮ ಮಾರ್ಗ. ಮನುಷ್ಯತ್ವವನ್ನು ಕಳೆದುಕೊಳ್ಳುವುದಕ್ಕಿಂತ, ನೀವೇ ಹೇಳುವಂತೆ, ಸಾವಿರ ಸಲ ಬಲಪ್ರಯೋಗ ಮಾಡುವುದನ್ನು ನಾನು ಅಂಗೀಕರಿಸಬಯಸಿದೆ. ಹಾಗಲ್ಲದೆ ನಾನು ಸಹಾನುಭೂತಿಯ ಮನೋಭಾವವನ್ನು ಹೊಂದಿ, ಅಂತಹ

ಪರಿಸ್ಥಿತಿಯಲ್ಲಿ ಉಪಕಾರಕಾರ್ಯವನ್ನು ಮಾಡಲು ಪ್ರಯತ್ನಿಸಿದೆನೆನ್ನೋಣ. ಆಗ ನಮಗೆ ತಿಳಿದಿರುವ ಅತ್ಯುತ್ತಮವಾದ ಯಾವುದಕ್ಕೋ ವಿರೋಧವಾಗಿ ನಾನು ನೀತಿ ಮತ್ತು ಕಾರ್ಯಬಲವನ್ನು ಕೊಡುತ್ತಿರುವೆನೆಂದು ನನಗೆ ಗೊತ್ತಾಗುತ್ತಿದ್ದಿತು. ಈ ಸಂದಿಗ್ಧ ಪರಿಸ್ಥಿತಿಯಿಂದ ಬಿಡುಗಡೆ ಕಾಣುವುದಿಲ್ಲ. ಯಾಕೆ ಎಂದರೆ ನಾನು ಏನೂ ಮಾಡದೆ ಸುಮ್ಮನೆ ಶೂನ್ಯದಲ್ಲಿರಲು ಸಾಧ್ಯವಿಲ್ಲ. ಏನನ್ನಾದರೂ ಮಾಡಿದರೆ ಅದು ಹಾಗಾಗುತ್ತದೆ, ಇಲ್ಲವೆ ಹೀಗಾಗುತ್ತದೆ. ನನ್ನ ಸ್ವಂತ ಸಂಪರ್ಕಗಳಲ್ಲಿ, ಪೂರ್ಣವಾಗಿ ಅಲ್ಲದಿದ್ದರೂ, ನಾನು ನಿಸ್ಸಂಕೋಚವಾಗಿ ಅಹಿಂಸೆಯನ್ನು ನಂಬಬಲ್ಲೆ. ಆದರೆ ಅಹಿಂಸಾಮಾರ್ಗದ ಹೆಸರನ್ನೂ ಕೂಡ ಕೇಳಿರದ ನಮ್ಮ ದೇಶದ ಬಹುಭಾಗ ಜನರ ಜತೆ, ಒಂದು ರಾಷ್ಟ್ರೀಯ ಪರಿಸ್ಥಿತಿಯನ್ನು ಎದುರಿಸಬೇಕಾದಾಗ ನನಗೆ ಅಹಿಂಸೆಯಲ್ಲಿ ಅದೇ ವಿಧವಾದ ನಂಬಿಕೆ ಬರಲಾರದು.'

## ಅಹಿಂಸೆಗೆ ಸಮನಾದುದು

'ನಿಮ್ಮದು ಬಹಳ ಕಠಿಣವಾದ ಪರಿಸ್ಥಿತಿ' ಎಂದು ಗಾಂಧೀಜೀ ಪ್ರತ್ಯುತ್ತರವಿತ್ತರು: 'ಅಂತಹ ಕಷ್ಟಗಳು ನನ್ನನ್ನೂ ಕೆಲವು ಬಾರಿ ಎದುರಿಸಿವೆ. ನಾನು ರೋಗಿಗಳ ಉಪಚಾರಕ್ಕಾಗಿ ಒಂದು ವಾಹನದಳವನ್ನು ಸ್ಥಾಪಿಸಿ ಬೋಅರ್ ಯುದ್ಧದಲ್ಲಿ ಬ್ರಿಟಿಷರ ಪರ ಭಾಗವಹಿಸಿದೆ. ಜುಲೂ ದಂಗೆ ಎಂದು ಕರೆಯಲ್ಪಡುವ ಸಂದರ್ಭದಲ್ಲಿಯೂ ನಾನು ಅದೇ ರೀತಿ ಮಾಡಿದೆ. ಮೂರನೇ ಬಾರಿ, ಪ್ರಥಮ ಮಹಾಯುದ್ಧದ ಸಂದರ್ಭದಲ್ಲಿ. ಆಗ ನನಗೆ ಅಹಿಂಸೆಯಲ್ಲಿ ನಂಬಿಕೆ ಇತ್ತು. ನನ್ನ ಉದ್ದೇಶ್ಯ ಪೂರ್ಣವಾಗಿ ಅಹಿಂಸೆಯೇ ಆಗಿತ್ತು. ತೋರಿಕೆಗೆ ಪೂರ್ವಾಪರವಿರುದ್ಧವಾಗಿದ್ದ ಆ ನಡತೆ ನನಗೆ ಬಲವನ್ನು ಕೊಟ್ಟಿತು. ನನ್ನ ಈ ಉದಾಹರಣೆ ಇತರರಿಗೆ ಅನುಸರಿಸಲು ಮೇಲುಪಂಕ್ತಿಯಾಗಿ ಉಪಯೋಗವಾಗಲಾರದು. ಆ ಮೂರು ಸಂದರ್ಭಗಳಲ್ಲಿಯೂ ನನ್ನ ನಡತೆಯನ್ನು ಕುರಿತು ಪರ್ಯಾಲೋಚಿಸಿದರೆ ನನಗೆ ಪಶ್ಚಾತ್ತಾಪವಿಲ್ಲ. ಈ ಅನುಭವಗಳಿಂದ ನನ್ನ ಶಕ್ತಿಯಲ್ಲಿ ಕುಂದು ಆಗಲಿಲ್ಲವೆಂಬುದೂ ನನಗೆ ಗೊತ್ತು. ನನಗೆ ಒಪ್ಪಿಸಲ್ಪಟ್ಟಿದ್ದ ಕಾರ್ಯ, ಅದರಲ್ಲಿಯೂ ಜುಲೂ ದಂಗೆಯಲ್ಲಿ ಕೇವಲ

ಕರುಣೆಯ ಕಾರ್ಯ; ಗಾಯಗೊಂಡ ಜುಲೂಗಳನ್ನು ಉಪಚರಿಸಿ ಜೀವಿಸು ವಂತೆ ಮಾಡುವ ಗೌರವಯೋಗ ನಮ್ಮದಾಗಿತ್ತು. ನಮ್ಮ ಸೇವೆ ಇಲ್ಲದಿದ್ದರೆ ಅವರಲ್ಲಿ ಕೆಲವರು ಮರಣಹೊಂದುತ್ತಿದ್ದರೆಂದು ಸೂಚಿಸುವುದು ಯೋಗ್ಯ. ನಾನು ಅಪರೋಕ್ಷವಾಗಿಯಾದರೂ ಸಹ, ಭಾಗವಹಿಸಿದ್ದು ನ್ಯಾಯ ಎಂದು ಹೇಳುವುದಕ್ಕಾಗಿ ಅಲ್ಲ ನಾನು ಈ ಅನುಭವವನ್ನು ವಿವರಿಸುವುದು. ಆ ಅನು ಭವದಿಂದ ನಾನು ಹೆಚ್ಚು ಅಹಿಂಸಾಯುತನಾಗಿ ಉನ್ನತವಾದ ಜುಲೂ ಜನತೆ ಯಲ್ಲಿ ಹೆಚ್ಚು ಪ್ರೇಮವೈಭವದಿಂದ ಹೊರಬಂದೆನೆಂಬುದಕ್ಕಾಗಿ ಇದನ್ನು ನಾನು ಹೇಳುತ್ತಿರುವುದು. ಕಪ್ಪು ಬಣ್ಣದ ಜನರ ಮೇಲೆ ಬಿಳಿಯವರ ಯುದ್ಧದ ಕ್ರೌರ್ಯವೇನೆಂಬುದರ ದರ್ಶನ ನನಗೆ ಇದರಿಂದ ಉಂಟಾಯಿತು.

'ನನ್ನ ಅನುಭವದಿಂದ ನೀವು ಕಲಿಯಬೇಕಾದ ಪಾಠ ಇದು. ನೀವು (ಅಹಿಂಸಾವಾದಿಗಳು) ಬಹು ಅಲ್ಪಸಂಖ್ಯಾತರಾದುದರಿಂದ ನಿಮ್ಮ ಜನರ ಹೃದಯಪರಿವರ್ತನೆಯಾದ ಹೊರತು ಅವರು ಆಯುಧಗಳನ್ನು ವಿಸರ್ಜಿಸ ಬೇಕೆಂದು ನೀವು ಕೇಳಬಾರದು. ಆಯುಧಗಳನ್ನು ವಿಸರ್ಜಿಸುವುದರಿಂದ ತಾವು ಹೆಚ್ಚು ಧೀರರೂ ಧೈರ್ಯಶಾಲಿಗಳೂ ಆಗುವೆವೆಂದು ಅವರು ಭಾವಿಸದಿದ್ದಲ್ಲಿ, ಅವರಿಂದ ಆಯುಧವಿಸರ್ಜನೆ ಕೇಳಬಾರದು. ಜನರನ್ನು ಯುದ್ಧವಿಮುಖ ರನ್ನಾಗಿ ಮಾಡಲು ನೀವು ಪ್ರಯತ್ನಿಸದಿದ್ದರೂ, ನಿಮ್ಮ ವ್ಯಕ್ತಿಜೀವನದಲ್ಲಿ ನೀವು ಪೂರ್ಣ ಅಹಿಂಸೆಯನ್ನು ಆಚರಿಸಬೇಕು. ನೀವು ಯುದ್ಧದಲ್ಲಿ ಭಾಗಿಯಾಗ ಕೂಡದು. ಜಪಾನರಲ್ಲಿ ನಿಮಗೆ ನಿಜವಾಗಿ ಪ್ರೀತಿ ಇದೆಯೆ? ಅವರು ನಿಮಗೆ ಮಾಡುತ್ತಿರುವ ಈ ಎಲ್ಲ ಕೇಡಿಗಾಗಿ ನಿಮಗೆ ಅವರಲ್ಲಿ ಸ್ವಲ್ಪವಾದರೂ ಅಸಮಾ ಧಾನವಾಗಿಲ್ಲವೆ? ಎಂಬುದನ್ನು ಕುರಿತು ನಿಮ್ಮ ಹೃದಯವನ್ನು ಪರೀಕ್ಷಿಸಿಕೊಳ್ಳಿ. ಅವರ ಸದ್ಗುಣಗಳನ್ನು ಮಾತ್ರ ಜ್ಞಾಪಿಸಿಕೊಂಡು ಅವರನ್ನು ನೀವು ಪ್ರೀತಿಸಿದರೆ ಸಾಲದು. ಅವರ ಎಲ್ಲ ದುಷ್ಕಾರ್ಯಗಳನ್ನು ನೋಡಿಯೂ, ನೀವು ಅವರನ್ನು ಪ್ರೀತಿಸಲು ಶಕ್ತರಾಗಬೇಕು. ಜಪಾನರ ವಿಷಯದಲ್ಲಿ ನಿಮಗೆ ಈ ಬಗೆಯ ಪ್ರೇಮವಿದ್ದರೆ, ಅಹಿಂಸೆಯ ಗುರುತಾದ ಆ ಉನ್ನತ ಧೈರ್ಯವನ್ನು ನಿಮ್ಮ ನಡತೆಯಲ್ಲಿ ನೀವು ತೋರಿಸಲು ಪ್ರಾರಂಭಿಸುವಿರಿ. ಅದನ್ನು ನಿಮ್ಮ ಚೀಣೀ ಮಿತ್ರರು ಸಹ ಕಾಣುವರು. ಜಪಾನರನ್ನು ನೀವು 'ಪ್ರೀತಿ'ಸುವುದೆಂದರೆ ಅವರ ಆಯುಧಗಳಿಗೆ ಜಯವನ್ನು ಕೋರುವುದಲ್ಲ. ಹಾಗೆಯೇ ನೀವು ಚೀಣರ

ಆಯುಧಗಳಿಗೂ ಜಯವನ್ನು ಕೋರಲಾಗದು. ಎರಡು ಪಕ್ಷದವರೂ ಹಿಂಸಾ ಆಯುಧಗಳನ್ನು ಉಪಯೋಗಿಸುತ್ತಿರುವಾಗ ಯಾವ ಪಕ್ಷ ಜಯಿಸಲು ಅರ್ಹವಾದುದೆಂದು ನಿರ್ಣಯಿಸುವುದು ಕಷ್ಟ. ಆದುದರಿಂದ ನ್ಯಾಯಕ್ಕೆ ಜಯವಾಗಲಿ ಎಂದು ಮಾತ್ರ ನೀವು ಪ್ರಾರ್ಥಿಸಬೇಕು. ಹಿಂಸೆಯಲ್ಲಿ ತೊಡಗದೆ ನೀವು ದೂರವಾಗಿದ್ದರೂ, ಅಪಾಯದಿಂದ ವಿಮುಖರಾಗಬಾರದು. ನಿಮ್ಮ ಜೀವದ ಹಂಗನ್ನೇ ತೊರೆದು ನೀವು ಶತ್ರುಗಳನ್ನೂ ಮಿತ್ರರನ್ನೂ ಸಮನಾಗಿ ಸೇವಿಸಬೇಕು. ಸಾಂಕ್ರಾಮಿಕ ರೋಗ ತಲೆದೋರಿದರೆ ಅಥವಾ ಎಲ್ಲಿಯಾದರೂ ಬೆಂಕಿಬಿದ್ದು ಅದರೊಂದಿಗೆ ಹೋರಾಡಬೇಕಾಗಿ ಬಂದರೆ ನೀವು ಉತ್ಸಾಹದಿಂದ ನುಗ್ಗಿ ನಿಮ್ಮ ಅದ್ವಿತೀಯವಾದ ಧೈರ್ಯ ಮತ್ತು ಅಹಿಂಸಾ ಸಾಹಸದಿಂದ ಎಲ್ಲರಿಗೂ ಮೇಲು ಪಂಕ್ತಿಯಾಗಬೇಕು. ಆದರೆ ನೀವು ದೇವರ ಶಾಪ ಜಪಾನರಿಗೆ ತಟ್ಟಲೆಂದು ಬಯಸಬಾರದು. ಆಕಸ್ಮಿಕವಾಗಿ ಜಪಾನೀ ಸಿಪಾಯಿಗಳಾಗಲೀ ವಿಮಾನ ಪಡೆಯವರಾಗಲೀ ಚೀಣರ ಕೈಗೆ ಸಿಲುಕಿ ಉದ್ರೇಕಗೊಂಡ ಚೀಣರಿಂದ ಚಿತ್ರಹಿಂಸೆಯನ್ನೂ ಅಪಾಯವನ್ನೂ ಹೊಂದುವ ಸಂದರ್ಭದಲ್ಲಿ, ನೀವು ಅವರ ರಕ್ಷಣೆಗಾಗಿ ನಿಮ್ಮ ಚೀಣಾದವರನ್ನೇ ಬೇಡಬೇಕು. ಅವಶ್ಯಕವಾದರೆ ನಿಮ್ಮ ಪ್ರಾಣವನ್ನು ಕೊಟ್ಟು ಅವರ ಪ್ರಾಣವನ್ನು ಉಳಿಸಬೇಕು. ಶ್ರೀಮತಿ ಎಮಿಲಿ ಹಾಬ್‌ಹೌಸ್‌ಳ ಕಥೆ ನಿಮಗೆ ಗೊತ್ತು. ಆಕೆ ಇಂಗ್ಲೀಷ್ ಸ್ತ್ರೀ ಆದರೂ ಧೈರ್ಯವಾಗಿ ಬೋಅರ್ ಜನರ ಸೈನ್ಯಶಿಬಿರಕ್ಕೆ ಹೋದಳು. ಧೈರ್ಯಹೀನರಾಗ ಬೇಡಿ ಎಂದು ಬೋಅರ್‌ರಿಗೆ ಬೋಧಿಸಿದಳು. ಅವರು ಬೋಅರರ ಮನಸ್ಸನ್ನು ಹಾಗೆ ಕಲ್ಲುಮಾಡದಿದ್ದಿದ್ದರೆ ಯುದ್ಧದ ದಾರಿ ಬೇರೆಯಾದರೂ ಆಗುತ್ತಿದ್ದಿತು ಎಂದು ಹೇಳುತ್ತಾರೆ. ತಮ್ಮವರನ್ನು (ಇಂಗ್ಲೀಷ್) ಕಂಡರೆ ಆಕೆಗೆ ಬಹಳ ಕೋಪವಿತ್ತು. ಅವರ ಪರವಾಗಿ ಅವಳು ಒಂದಾದರೂ ಒಳ್ಳೆಯ ಮಾತನ್ನು ಹೇಳಲಿಲ್ಲ. ಅವಳ ಅಹಿಂಸೆಯನ್ನು ದೋಷಯುಕ್ತವಾಗಿ ಮಾಡಿದ ಆಕೆಯ ಈ ಅಳತೆಮೀರಿದ ಕ್ರೋಧವನ್ನು ನೀವು ಅನುಕರಿಸಬೇಕಾದುದಿಲ್ಲ. ಆದರೆ ತನ್ನ ದೇಶದವರ ಅನ್ಯಾಯ–ಅಕಾರ್ಯಗಳನ್ನು ತೆಗಳಿದ ಅವಳ 'ಶತ್ರು'ಪ್ರೇಮವನ್ನು ನೀವು ಅನುಕರಿಸಬೇಕು. ನಿಮ್ಮ ಈ ಉದಾಹರಣೆ ಚೀಣರ ಮೇಲೆ ಒಳ್ಳೇ ಪರಿಣಾಮಕಾರಿಯಾಗುತ್ತದೆ. ಇದರಿಂದ ಕೆಲವು ಜಪಾನರಿಗಾದರೂ ನಾಚಿಕೆಯಾಗಿ ಅವರೇ ತಮ್ಮವರಲ್ಲಿ ನಿಮ್ಮ ಸಂದೇಶವನ್ನು ಪ್ರಚಾರಮಾಡಬಹುದು.

'ಪ್ರಾಯಶಃ ನೀವು ಇದು ಬಹಳ ನಿಧಾನವಾದ ಕ್ರಮ ಎನ್ನುತ್ತೀರಿ. ಪ್ರಾಯಶಃ ಈಗಿನ ಪ್ರತಿಕೂಲಸ್ಥಿತಿಗೆ ಈ ಪ್ರಾರಂಭ ನಿಧಾನವೇ. ಆದರೆ ನೀವು ಮುಂದುವರಿದಂತೆಲ್ಲ ಅದು ಎಣಿಸಲಾಗದ ರೀತಿಯಲ್ಲಿ ವೇಗವನ್ನೂ ರಭಸವನ್ನೂ ಹೊಂದುವುದು. ನಾನು ಅದಮ್ಯ ಆಶಾವಾದಿ. ವ್ಯಕ್ತಿಗೆ ಅಹಿಂಸೆಯನ್ನು ಬೆಳೆಸಿಕೊಳ್ಳಲು ಅನಂತವಾದ ಸಾಧ್ಯತೆ ಇದೆ ಎಂಬ ನಂಬಿಕೆಯ ಮೇಲೆಯೇ ನನ್ನ ಈ ಆಶಾವಾದಿತ್ವ ನಿಂತಿರುವುದು. ನಿಮ್ಮಲ್ಲಿ ನೀವು ಅದನ್ನು ಹೆಚ್ಚುಹೆಚ್ಚಾಗಿ ಬೆಳೆಸಿಕೊಂಡಷ್ಟೂ ಅದು ಹೆಚ್ಚು ಸರ್ವವ್ಯಾಪಿಯಾಗುತ್ತದೆ. ಕೊನೆಗೆ ಅದು ನಿಮ್ಮ ನೆರೆಹೊರೆಯನ್ನೆಲ್ಲ ಆಕ್ರಮಿಸಿಕೊಂಡು ಜಗತ್ತಿನಲ್ಲೆಲ್ಲ ಹರಡುತ್ತದೆ.'

**ಪ್ರಶ್ನೆ:** ಅಹಿಂಸೆಯಲ್ಲಿ ನಂಬಿಕೆಯುಳ್ಳ ನಾನು ಅನೇಕ ವೇಳೆ ಬೇರೆ ಬೇರೆ ಉದ್ದೇಶ್ಯಗಳಿಂದ ಪ್ರೇರಿತನಾಗುವುದು ನನಗೆ ಗೊತ್ತಾಗಿದೆ. ಯುದ್ಧದ ದಂಡನಾಯಕನಿಗೆ ಹಾಗೆಯೇ ಮಿಶ್ರ ಉದ್ದೇಶ್ಯಗಳಿರುತ್ತವೆ. ಶತ್ರುವಿಗಾಗಿ ನಿಮ್ಮ ಹೃದಯದಲ್ಲಿ ಪ್ರೀತಿಯಿಟ್ಟುಕೊಂಡು ಕಾದುವುದು ಸಾಧ್ಯವಿಲ್ಲವೆ? ಪ್ರೇಮದಿಂದಲೇ, ಗುಂಡನ್ನು ಹಾರಿಸಲಾಗದೆ?

**ಗಾಂಧೀಜೀ:** ನಮ್ಮಲ್ಲಿ ಅನೇಕ ವೇಳೆ ಮಿಶ್ರ ಉದ್ದೇಶ್ಯಗಳಿರುತ್ತವೆ. ಆದರೆ ಅದು ಅಹಿಂಸೆಯಾಗಲಾರದು. ಹಿಂಸೆಯಲ್ಲಿ ದರ್ಜೆಗಳು ಇರಬಹುದು. ಅಹಿಂಸೆಯಲ್ಲಿ ಅದು ಸಾಧ್ಯವಿಲ್ಲ. ನೀವು ಹೇಳುವಂತೆ ಪ್ರೇಮದಿಂದ ಗುಂಡನ್ನು ಹೊಡೆಯುವುದು ಎಂಬುದು ಸಾಧ್ಯವಿಲ್ಲ.

## ಅಹಿಂಸೆಯನ್ನು ವ್ಯವಸ್ಥೆಗೊಳಿಸಬಹುದೆ?

ಗಾಂಧೀಜಿಯವರ ಮುಂದೆ, ಕೊನೆಯಲ್ಲಿ ತಮ್ಮ ಪ್ರಶ್ನೆಯನ್ನು ಮಂಡಿಸಿದವರು ಪಿ. ಸಿ. ಸೆನ್. ಇವರು ೧೯೩೦ರಿಂದ ಗಾಂಧೀಜಿಯವರನ್ನು ಬಂದು ಕಾಣಬೇಕೆಂದು ಬರೆಯುತ್ತಿದ್ದರು. ಯಾವ ವರುಷ ಚೀಣಾದ ಮೇಲೆ ತನ್ನ ಇಪ್ಪತ್ತೊಂದು ನಿರ್ಬಂಧಗಳನ್ನು ಹೇರಲು ಜಪಾನ್ ತಗಾದೆ ಮಾಡಿತೋ ಅದೇ ವರುಷ ಸ್ನಾತಕರಾದವರು ಇವರು. ಆ ಕಾಲದಲ್ಲಿ ಇವರು ಶುದ್ಧ ಸ್ವರಾಷ್ಟ್ರವಾದಿ ಆಗಿದ್ದರು. ಮೂರು ವರುಷಗಳ ಕಾಲ ವಿದ್ಯಾರ್ಥಿಗಳೊಂದಿಗೆ ಸಮನ್ವಯ

ಕಾರ್ಯದಲ್ಲಿ ದುಡಿದಮೇಲೆ ಆತನ ಅಭಿಪ್ರಾಯ ಬದಲಾಯಿಸಿತು. ಜಪಾನ್ ಜನರೇ ಬೇರೆ, ಜಪಾನ್ ಯುದ್ಧಯಂತ್ರವೇ ಬೇರೆ ಎಂಬುದು ಅವನಿಗೆ ಹೊಳೆಯತೊಡಗಿತು. ಅಂತರರಾಷ್ಟ್ರೀಯ ಉದಾರಭಾವನೆಯವರೆಲ್ಲ ಒಂದಾಗ ಬೇಕೆಂಬ ನಂಬಿಕೆ ಅವನಿಗೆ ಉಂಟಾಯಿತು. ಆತ ಗಾಂಧೀಜೀಗೆ ಹೀಗೆ ಹೇಳಿದ : ' ನಾನು ಪ್ರಾಮಾಣಿಕನಾಗಿ ಹೇಳಬಲ್ಲೆ. ನನಗೆ ಜಪಾನರಲ್ಲಿ ದ್ವೇಷ ಭಾವನೆ ಇಲ್ಲ. ಆದರೆ ಅವರ ಯುದ್ಧಕ್ರಮ ಒಂದು ಕೆಡಕು. ಇದನ್ನು ಕೊನೆ ಗಾಣಿಸಲು ಬೇಕಾಗಿರುವುದು ಶಿಕ್ಷಣ ಮಾತ್ರ ಎಂದು ನಾನು ಭಾವಿಸಿದ್ದೆ. ಹೇಗಾದರೂ ತಾಂಬರಂನಲ್ಲಿ ಎರಡು ರಾಷ್ಟ್ರಗಳಿಗೂ ಪರಸ್ಪರ ಸೌಹಾರ್ದ ಮತ್ತು ಶಾಂತಿಯ ಆಧಾರದಮೇಲೆ ಒಂದು ಅಂತರರಾಷ್ಟ್ರೀಯ ಬಾಂಧವ್ಯ ಏರ್ಪಡುವು ದೆಂದು ನಾನು ನೆಚ್ಚಿದ್ದೆ. ಆದರೆ ನನ್ನ ನಂಬಿಕೆ ಬರಿ ಭ್ರಾಂತಿಯಾಯಿತು. ಕೂಡಲೇ ಸಾಧ್ಯವಾಗುವುದು ಅತ್ಯಲ್ಪ ಎಂದು ನನಗೆ ಗೊತ್ತಾಯಿತು.' ಆತ ಶಾಂತಿಯ ಕಾರ್ಯವನ್ನು ನಡೆಸಲು ಒಂದು ಶಾಂತಿಸ್ಥಾಪಕರ ತಂಡವನ್ನು ಸ್ಥಾಪಿ ಸಲು ಸಹ ಪ್ರಯತ್ನಿಸಿದ್ದನು. ಆದರೆ ದೇಶದ ಸಂದಿಗ್ಧ ಪರಿಸ್ಥಿತಿಗೆ ಎದುರಾಗಿ ಅವರು ಪೂರ್ಣ ನಿರ್ಬಲರಾಗಿದ್ದರು. ಯುದ್ಧವನ್ನು ಯಾವ ರೀತಿಯಲ್ಲಿಯೂ ತಡೆಯಲು ಅವರು ಶಕ್ತರಾಗಿರಲಿಲ್ಲ. ಆತ ಹೀಗೆ ಮುಗಿಸಿದರು : ' ನಮ್ಮ ಕಷ್ಟ ಇದು. ನಮಗೆ ನಿಜವಾಗಿ ಅಹಿಂಸೆಯಲ್ಲಿ ನಂಬಿಕೆ ಇದ್ದರೂ, ಅದನ್ನು ಪರಿಣಾಮಕಾರಿಯಾಗಿ ಮಾಡುವ ಮಾರ್ಗ ನಮಗೆ ಇನ್ನೂ ಸಿಕ್ಕಿಲ್ಲ.'

ಗಾಂಧೀಜೀ ಹೀಗೆ ಹೇಳಿದರು : ' ಅದೊಂದು ಕಷ್ಟವಾಗಬೇಕೆ ? ತನ್ನ ಕಾಲದ ಒಂದು ಕೇಡನ್ನು ಕಂಡು ಅದು ತನಗಿಂತ ಪ್ರಬಲವಾಗಿ ತನ್ನನ್ನೇ ಅಡಗಿಸುವುದೆಂದು ತಿಳಿದಾಗ ವ್ಯಕ್ತಿ ಸ್ಫೂರ್ತಿಗಾಗಿ ತನ್ನ ಹೃದಯವನ್ನೇ ಆಳವಾಗಿ ಹೊಗುತ್ತಾನೆ. ಅದು ಅಲ್ಲಿ ದೊರೆತ ಕೂಡಲೇ ಇತರರ ಮುಂದೆ ಅದನ್ನು ಇಡುತ್ತಾನೆ. ಸಭೆಗಳನ್ನೂ ಗುಂಪು-ಕೂಟಗಳನ್ನೂ ಮಾಡುವುದು ಸರಿ. ಅವುಗಳಿಂದ ಸ್ವಲ್ಪ ಸಹಾಯವಾಗುತ್ತದೆ. ಆದರೆ ಬಹಳ ಸ್ವಲ್ಪ. ಅವು ವಾಸ್ತುಶಿಲ್ಪ, ಕಟ್ಟಡಕ್ಕಾಗಿ ಕಟ್ಟುವ ಸಾರುವೆಯಂತೆ, ತಾತ್ಕಾಲಿಕ ಸಂವಿಧಾನ. ನಿಜವಾಗಿ ಬೇಕಾದದ್ದು ಅಡಗಿಸಲಾಗದ ಅದಮ್ಯವಾದ ಶ್ರದ್ಧೆ ಅಥವಾ ನಂಬಿಕೆ.

' ಶ್ರದ್ಧೆಯನ್ನು ಬೆಳೆಸಿಕೊಳ್ಳಬಹುದು. ಅದನ್ನು ಬೆಳೆಸುವ ಮಾರ್ಗ ಅದು ಕಾರ್ಯಮಾಡುವ ಕ್ರಮ, ಹಿಂಸಾಮಾರ್ಗದಿಂದ ಬೇರೆಯಾದುದು.

ಪ್ರಾರ್ಥನೆಯಿಂದ ಹಿಂಸೆಯನ್ನು ಬೆಳೆಸಿಕೊಳ್ಳುವುದು ಸಾಧ್ಯವಿಲ್ಲ. ಆದರೆ ಶ್ರದ್ಧೆಯನ್ನು ಪ್ರಾರ್ಥನೆಯಿಲ್ಲದೆ ಬೆಳೆಸುವುದು ಸಾಧ್ಯವಿಲ್ಲ.

'ನಮಗೆ ದೇವರಲ್ಲಿ ಸಜೀವವಾದ ನಂಬಿಕೆ ಇದ್ದಲ್ಲಿ ಮಾತ್ರ ಅಹಿಂಸೆ ಜಯಿಸುತ್ತದೆ. ಬುದ್ಧ, ಏಸು, ಮಹಮ್ಮದ್ ಇವರೆಲ್ಲ ತಮ್ಮ ತಮ್ಮ ಮಾರ್ಗದಲ್ಲಿ ಶಾಂತಿಯ ಯೋಧರಾಗಿದ್ದರು. ಈ ಸದ್ಗುರುಗಳು ಬಿಟ್ಟುಹೋಗಿರುವ ಆಸ್ತಿಯನ್ನು ನಾವು ಇನ್ನೂ ಹೆಚ್ಚು ಉಜ್ವಲಗೊಳಿಸಬೇಕಾಗಿದೆ. ತನ್ನ ಯೋಜನೆಗಳನ್ನು ನಡೆಸುವ ಮತ್ತು ತನ್ನ ಉಪಕರಣಗಳನ್ನು ಆರಿಸಿಕೊಳ್ಳುವ ದೇವರ ಮಾರ್ಗ ಅದ್ಭುತವಾದದ್ದು. ಗವಿಯಲ್ಲಿ ಸಿಕ್ಕಿಕೊಂಡ ಮಹಮ್ಮದ್ ಮತ್ತು ಅಬುಬಾಕರ್, ಗವಿಯ ಬಾಗಿಲಿನಲ್ಲಿ ಜೇಡ ಬಲೆ ಬೀಸಿದ್ದುದನ್ನು ನೋಡಿ, ತಮ್ಮ ಹಿಂಸ್ರಕರ ಕೈಯಿಂದ ಪಾರಾದರು. ನಿಮಗೆ ತಿಳಿದಿರಲಿ: ಜಗದ್ಗುರುಗಳೆಲ್ಲ ಪ್ರಾರಂಭಿಸಿದುದು ಶೂನ್ಯದಿಂದ ಅಥವಾ ಬರಿಗೈಯಲ್ಲಿ.'

ಗಾಂಧೀಜಿಯ ಪ್ರಶ್ನಕ ಇದರಿಂದ ತೃಪ್ತರಾದಂತೆ ತೋರಿತು. ಆದರೆ ಅವರಿಗೆ ಮತ್ತೊಂದು ಸಂಶಯವಿತ್ತು. ಆತ ಹೀಗೆ ಕೇಳಿದ: 'ಏಸುವಿನ ಮನಸ್ಸುಳ್ಳ ವ್ಯಕ್ತಿಗಳು ನಮ್ಮಲ್ಲಿ ಅಲ್ಲಲ್ಲಿ ಇದಾರೆ. ಆದರೆ ಅವರು ಒಗ್ಗಟ್ಟಾಗಿ ಇಲ್ಲದುದರಿಂದಲೂ ಅವರಲ್ಲಿ ವ್ಯವಸ್ಥೆ ಇಲ್ಲದುದರಿಂದಲೂ ಅವರ ಮಾತು ಬರಿಯ ಅರಣ್ಯರೋದನವಾಗಿದೆ. ನನ್ನ ಮನಸ್ಸಿನಲ್ಲಿ ಏಳುವ ಪ್ರಶ್ನೆ ಇದು: 'ಪ್ರೇಮವನ್ನು ಸಂಘಟನೆಗೊಳಿಸಬಹುದೆ?' ಎಂಬುದು.'

**ಗಾಂಧೀಜೀ:** ಸಾಂಪ್ರದಾಯಿಕ ರೀತಿಯಲ್ಲಿ ಸಂಘಟನೆ ಸಾಧ್ಯವಿಲ್ಲದೆ ಇರಬಹುದು. ಆದರೆ ಒಗ್ಗಟ್ಟಿನ ಅಹಿಂಸಾಕ್ರಮಕ್ಕೆ ಯಾವ ತಡೆಯೂ ಇಲ್ಲ. ನಾನು ಅನೇಕ ಪ್ರಯೋಗಗಳ ಮೂಲಕ ಅದು ಸಾಧ್ಯವೆಂದು ತೋರಿಸಲು ಪ್ರಯತ್ನಿಸುತ್ತಿದೇನೆ. ಅದಕ್ಕೆ ಅದರ ಪ್ರಯೋಗತಂತ್ರವೇ ಇದೆ.

ಕೊನೆಯಲ್ಲಿ ಮಿತ್ರರು 'ಚೀಣಾ ಯುದ್ಧವನ್ನು ಗೆದ್ದರೆ ಆಗ ಜಪಾನಿಗಿಂತ ಅದರ ಸ್ಥಿತಿ ಉತ್ತಮವಾಗುತ್ತದೆಯೋ ಅಥವಾ ಅಧಮವಾಗುತ್ತದೆಯೋ?' ಎಂದು ಕೇಳಿದರು.

ಗಾಂಧೀಜೀ ಹೀಗೆ ಪ್ರತ್ಯುತ್ತರವಿತ್ತರು: 'ಚೀಣಾ ಜಪಾನರ ಮಾರ್ಗವನ್ನೇ ಅನುಸರಿಸಿ ಗೆದ್ದರೆ, ಜಪಾನರನ್ನು ಅವರ ಆಟದಲ್ಲಿಯೇ ಅದು ನಿರ್ನಾಮ

ಗೊಳಿಸುವುದು. ಆದರೆ ಚೀಣಾದ ಜಯ ಜಗತ್ತಿಗೆ ಹೊಸ ಭರವಸೆ ಆಗುವುದಿಲ್ಲ. ಆಗ ಚೀಣಾ, ಜಪಾನಿನ ಅನೇಕ ಅಂಶಗಳ ಮತ್ತೊಂದು ಆವೃತ್ತಿಯಾಗುತ್ತದೆ. ಆದರೆ ಚೀಣಾ ಜಯಿಸಲಿ ಸೋಲಲಿ, ನಿಮ್ಮ ಕಾರ್ಯದ ಮಾರ್ಗ ಸ್ಪಷ್ಟವಾಗಿದೆ. ಚೀಣಾ ಯುದ್ಧಭೂಮಿಯಲ್ಲಿ ಸೋತರೆ, ನಿಮ್ಮ ಅಹಿಂಸೆ ಅಜೇಯವಾಗಿ ಉಳಿದು ತನ್ನ ಕಾರ್ಯವನ್ನು ಮಾಡಿದಂತಾಗುವುದು. ಚೀಣಾ ಜಯಶಾಲಿಯಾದರೆ, ಜಪಾನಿನ ಮಾರ್ಗವನ್ನು ಅನುಸರಿಸಿದಂತೆ ಅದನ್ನು ತಡೆಯುವ ಯತ್ನದಲ್ಲಿ ನೀವು ಹುತ್ಮಾರಾಗುವಿರಿ.' (ಹರಿಜನ, ೨೮–೧–೧೯೩೯)

## ಆಫ್ರಿಕಕ್ಕೆ ಒಂದು ಕಾರ್ಯಕ್ರಮ

ವರ್ಧಾದಲ್ಲಿ ಗಾಂಧೀಜಿಯವರೊಂದಿಗೆ ಜೊಹಾನ್ಸ್‌ಬರ್ಗ್ ಡಿ. ಆರ್. ಮಿಶನ್‌ನ ರೆವರೆಂಡ್ ಎಸ್. ಎಸ್. ಟೇಮ್ ನಡೆಸಿದ ಒಂದು ಸಂವಾದದ ವಿಷಯ : ದಕ್ಷಿಣ ಆಫ್ರಿಕದ ನೀಗ್ರೋಗಳ ಉದ್ಧಾರಕ್ಕಾಗಿ ಮುಂದಿನ ಕಾರ್ಯಕ್ರಮ. ರೆವರೆಂಡ್ ಟೇಮ್ ನೀಗ್ರೋ ಮತ್ತು ಆಫ್ರಿಕದ ಕಾಂಗ್ರೆಸ್‌ನ ಸದಸ್ಯರು. ಆತ ತಮ್ಮ ಜನರ ಸಾಮಾಜಿಕ ಸೇವೆಯಲ್ಲಿ ತೊಡಗಿದಾರೆ. ದಕ್ಷಿಣ ಆಫ್ರಿಕದಲ್ಲಿ ಎಪ್ಪತ್ತೈದು ಸಾವಿರ ಭಾರತೀಯರು, ಇಪ್ಪತ್ತು ಲಕ್ಷ ಬಿಳಿಯರು ಇದಾರೆ. ನೀಗ್ರೋಗಳು ಒಂದು ಕೋಟಿ ಇದಾರೆ. ಜಗತ್ತಿನ ಇತರ ತುಳಿಯಲ್ಪಟ್ಟ ಮತ್ತು ಬಣ್ಣದ ಜನಾಂಗಗಳಂತೆ ದಕ್ಷಿಣ ಆಫ್ರಿಕದ ನೀಗ್ರೋ ಜನಾಂಗ ಸಹ ತಾವು, ತಮ್ಮ ಬುಡಕಟ್ಟು ಎಂಬ ಭಾವನೆಯನ್ನು ಬೆಳೆಸಿಕೊಳ್ಳುತ್ತಿದಾರೆ. ಇಟಲಿ ಅಬಿಸೀನಿಯಾವನ್ನು ದುರಾಕ್ರಮಣ ಮಾಡಿದುದರಿಂದ ಈ ಭಾವನೆ ಅವರಲ್ಲಿ ಇನ್ನೂ ಹೆಚ್ಚು ಉದ್ರೇಕಗೊಂಡಿದೆ. ಬಿಳಿಯವರ ನಾಗರಿಕತೆಯ ಸಂಪರ್ಕದಿಂದ ನೀಗ್ರೋಗಳಿಗೇನೂ ಒಳ್ಳೆಯದಾಗಿಲ್ಲ. ಕ್ರಿಸ್ತ ಪಾದ್ರಿ ಅವನ ಹತ್ತಿರ ಬೈಬಲ್‌ನೊಂದಿಗೆ ಹೋದನು. ಆದರೆ ಏಸು ಪರ್ವತದ ಮೇಲೆ ಮಾಡಿದ ಉಪದೇಶದ ಪರಿಣಾಮ, ಬಿಳಿಯವರು ನೀಗ್ರೋಗಳೊಂದಿಗೆ ವ್ಯವಹರಿಸುವುದರಲ್ಲಿ ಕಾಣಲಿಲ್ಲ. ಆದರೆ ಬಿಳಿಯವರ ಜತೆ ಬಂದ ಕುಡಿತದ ಅಭ್ಯಾಸ, ಅದರ ಅನುಯಾಯಿ ರೋಗಗಳು ಆಫ್ರಿಕನ್ನರ ಹಳ್ಳಿಗಳಲ್ಲಿ ಕಾಡು ಕಿಚ್ಚಿನಂತೆ ಹಬ್ಬಿ ಅನಾಹುತವನ್ನು ಎಬ್ಬಿಸಿವೆ. ತೀವ್ರವಾದ ಅನುಭವದಿಂದ,

ಹಿಂಸಾಮಾರ್ಗದಿಂದ ಪ್ರತಿಭಟಿಸುವುದು ಪೂರ್ಣ ವಿಫಲ ಎಂಬುದು ಅವರಿಗೆ ಮನದಟ್ಟಾಗಿದೆ. ಅವರಲ್ಲಿ ಉಂಟಾಗಿರುವ ಈ ಜಾಗೃತಿಯ ಮನೋಭಾವದಿಂದ ಅವರ ನಿರಾಶೆ ಇನ್ನೂ ಹೆಚ್ಚಾಗಿದೆ. 'ನಾವು ಒಂದು ಕಲ್ಲುಗೋಡೆಯನ್ನು ಎದುರಿಸುವಂತಿದೆ. ವಿಧಿಯೋಪಾದಿಯಲ್ಲಿ ಕ್ರೂರಿಯೂ ದಯಾರಹಿತವೂ ಆದ ಒಂದು ಶಕ್ತಿ ನಮ್ಮನ್ನು ಅರೆದುಹಾಕಿದೆ. ನಮಗೆ ಯಾವುದರ ಒತ್ತಾಸೆಯೂ ಇಲ್ಲ. ನಮ್ಮ ಸರ್ವನಾಶವಾದಂತೆ ತೋರುತ್ತಿದೆ.' ಹೀಗೆ ಹತ್ತು ವರುಷಗಳ ಕೆಳಗೆ ಗಾಂಧೀಜಿಯವರನ್ನು ಸಾಬರಮತಿಯಲ್ಲಿ ನೋಡಿದ್ದ ಒಬ್ಬ ನೀಗ್ರೋ ಮಿತ್ರರು ಕೊರಗಿದ್ದರು. ಅಲ್ಲಿಂದ ಈಚೆಗೆ, ಕಾಂಗ್ರೆಸ್‌ನ ಅಹಿಂಸಾ ಜಯದಿಂದ ನೀಗ್ರೋ ಮುಖಂಡರಿಗೆ ಹೊಸ ಆಶಾಕಿರಣವುಂಟಾಗಿದೆ. ಈ ಜಯದ ರಹಸ್ಯವನ್ನು ರೆವರೆಂಡ್ ಟೀವ್ ತಿಳಿಯಲು ಉತ್ಸುಕರಾಗಿದ್ದರು. ಅವರು ಗಾಂಧೀಜಿಯವರನ್ನು ಹೀಗೆ ಕೇಳಿದರು: 'ನಮ್ಮವರು ತಮ್ಮ ಕಾಂಗ್ರೆಸ್ಸನ್ನು ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನಂತೆ ಜಯಶಾಲಿಯಾಗಿ ಮಾಡುವುದು ಹೇಗೆ?'

ಗಾಂಧೀಜೀ ಪ್ರತ್ಯುತ್ತರವಿತ್ತರು: 'ಕಾಂಗ್ರೆಸ್ ಜಯಶಾಲಿಯಾಗಲು ಕಾರಣ, ಅದನ್ನು ಸ್ಥಾಪಿಸಿದವರು ಅಂದಿನವರ ಪೈಕಿಯಲ್ಲೆಲ್ಲ ಅತ್ಯಂತ ನಿಸ್ಸ್ವಾರ್ಥಿಗಳೂ ಮತ್ತು ಸುಸಂಸ್ಕೃತರೂ ಆಗಿದ್ದುದು. ಅವರು ತಾವೇ ಪ್ರಜೆಗಳ ಪ್ರತಿನಿಧಿಗಳಾದರು. ತಮ್ಮ ತ್ಯಾಗ-ಸೇವೆಗಳಿಂದ ಜನತೆಯ ಹೃದಯದೇವತೆಗಳಾದರು. ಅವರು ಪ್ರಜೆಗಳಿಂದ ಬಂದ ಪ್ರಜೆಗಳ ಮುಖಂಡರಾಗಿದ್ದರು.' ಪ್ರಜಾಸಂಸ್ಥೆಯಾದ ಕಾಂಗ್ರೆಸ್‌ನ ಬೆಳವಣಿಗೆಯನ್ನೂ ಸೇವೆಯನ್ನೂ ಸ್ವಲ್ಪ ವಿವರವಾಗಿಯೇ ವಿವರಿಸಿದನಂತರ ಗಾಂಧೀಜೀ ಹೀಗೆ ಹೇಳಿದರು: 'ನನಗೆ ತಿಳಿದಿರುವಂತೆ, ಬಡವರಾಗಿ ಕೆಲಸ ಮಾಡಿಕೊಂಡು ತೃಪ್ತಿಯಿಂದ ಬಾಳುವ ಆಫ್ರಿಕನ್ ಕೆಲಸಗಾರರ ಗುಂಪು ನಿಮ್ಮಲ್ಲಿ ಇಲ್ಲ. ವಿದ್ಯಾವಂತರ ಪೈಕಿ ಆ ಪೂರ್ಣ ಸ್ವಾರ್ಥತ್ಯಾಗ ಇಲ್ಲ. ಮತ್ತು ನಿಮ್ಮ ಅನೇಕ ಮುಖಂಡರು ಕ್ರೈಸ್ತರಾದರೂ ಅಧಿಕ ಸಂಖ್ಯೆಯ ಪ್ರಜೆಗಳಾದ ಬಂಟರೂ ಜುಲೂಗಳೂ ಕ್ರಿಸ್ತರಲ್ಲ. ನೀವು ಯೂರೋಪಿಯನ್ನರ ಉಡುಪು ಪದ್ಧತಿಗಳನ್ನನುಸರಿಸಿ ನಿಮ್ಮ ಜನರಿಗೇ ಹೊಸಬರಾದಿರಿ. ರಾಜಕೀಯವಾಗಿ ಇದರಿಂದ ಪ್ರತಿಕೂಲ. ಇದರಿಂದ ಜನರ ಹೃದಯವನ್ನು ಮುಟ್ಟುವುದಕ್ಕೆ ನಿಮಗೆ ಕಷ್ಟವಾಗುತ್ತದೆ. ನೀವು ಬಂಟುಗಳಾಗಲು ಅಥವಾ ಅವರಂತೆ ಬರಿಯ ತುಂಡು ಪಂಚೆ ಉಟ್ಟುಕೊಂಡು

ತಿರುಗಾಡಲು ನಾಚಿಕೆಪಡಬಾರದು. ಜುಲೂ ಆಗಲೀ ಬಂಟು ಆಗಲಿ ಹೃಷ್ಟ ಪುಷ್ಟವಾದ ದೇಹವುಳ್ಳವ. ತನ್ನ ದೇಹವನ್ನು ತೋರಿಸಲು ಅವನು ನಾಚಿಕೆ ಪಡಬೇಕಾದುದಿಲ್ಲ. ಅವನು ನಿಮ್ಮಂತೆ ಉಡುಪು ಧರಿಸಬೇಕಾದುದಿಲ್ಲ. ನೀವು ಮತ್ತೆ ಆಫ್ರಿಕನ್ನರಾಗಬೇಕು.'

## ಶ್ವೇತೇತರ ಒಮ್ಮುಖ ವಿರೋಧ

ಈಚೆಗೆ ದಕ್ಷಿಣ ಆಫ್ರಿಕದಲ್ಲಿ ಇಂಡೋ-ಆಫ್ರಿಕನ್ ಶ್ವೇತೇತರ ಒಮ್ಮುಖ ವಿರೋಧ ಪಕ್ಷದ ಮಾತು ಎದ್ದಿದೆ. ರೆವರೆಂಡ್ ಟೇಮ್ ಅವರು 'ಇದರ ವಿಷಯದಲ್ಲಿ ನಿಮ್ಮ ಅಭಿಪ್ರಾಯವೇನು?' ಎಂದು ಗಾಂಧೀಜಿಯವರನ್ನು ಕೇಳಿದರು. ಗಾಂಧೀಜೀ ಹೀಗೆ ಹೇಳಿದರು: 'ಹಾಗೆ ಮಾಡುವುದು ತಪ್ಪು. ನೀವು ಒಟ್ಟಾಗಿ ಸೇರಿಸುವುದು ದೌರ್ಬಲ್ಯವನ್ನು—ಶಕ್ತಿಯನ್ನಲ್ಲ. ನಿಮ್ಮ ನಿಮ್ಮ ಕಾಲಮೇಲೆ ನಿಲ್ಲುವುದರಿಂದ ನೀವು ಒಬ್ಬರಿಗೊಬ್ಬರು ಹೆಚ್ಚು ಸಹಾಯ ಮಾಡಬಹುದು. ಎರಡು ಪ್ರಶ್ನೆಗಳೂ ಬೇರೆ ಬೇರೆ. ಭಾರತೀಯರ ಸಂಖ್ಯೆ ಅತ್ಯಲ್ಪ. ಅವರು ಬಿಳಿಯವರಿಗೆ ಎಂದಿಗೂ ವಿಪತ್ಕಾರಕರಾಗರು. ಆದರೆ ನೀವು ನಾಡಿನ ಮಕ್ಕಳು. ನಿಮ್ಮ ಆಸ್ತಿಯು ಅಪಹಾರವಾಗುತ್ತಿದೆ. ನೀವು ಅದನ್ನು ಪ್ರತಿಭಟಿಸಲೇಬೇಕು. ನಿಮ್ಮ ಪ್ರಶ್ನೆ ಎಷ್ಟೋ ಹೆಚ್ಚು ಮಹತ್ವದ್ದು. ಅದನ್ನು ಭಾರತೀಯರ ಪ್ರಶ್ನೆಯೊಂದಿಗೆ ಸೇರಿಸುವುದು ಸರಿಯಲ್ಲ. ಇದು ಎರಡು ಜನಾಂಗದವರೂ ಅತ್ಯಂತ ಸ್ನೇಹದಿಂದಿರುವುದನ್ನು ತೊಂದರೆಗೊಳಿಸು ವುದಿಲ್ಲ. ಭಾರತೀಯರು ನಿಮ್ಮೊಂದಿಗೆ ಅನೇಕ ಮಾರ್ಗಗಳಲ್ಲಿ ಸಹಕರಿಸ ಬಹುದು. ಅವರು ನಿಮ್ಮ ನ್ಯಾಯವಾದ ಆಕಾಂಕ್ಷೆಗಳನ್ನು ಎದುರಿಸಬಾರದು. ಅಥವಾ ನಿಮಗೆ ಅನ್ಯಾಯವಾದರೂ ತಮಗೆ ರಿಯಾಯಿತಿಗಳೂ ಸೌಲಭ್ಯಗಳೂ ದೊರೆಯಲೆಂದು ನಿಮ್ಮನ್ನು ಕಾಡುಮನುಷ್ಯರೆಂದೂ ತಾವು ಮಾತ್ರ ಸುಸಂಸ್ಕೃತ ರೆಂದೂ ಹೇಳಿಕೊಳ್ಳಬಾರದು.'

**ರೆವರೆಂಡ್ ಟೇಮ್ :** ಈ ಎರಡು ಜನಾಂಗಗಳಿಗೂ ಯಾವ ಬಗೆಯ **ಸಂಬಂಧವಿರಬೇಕೆಂಬುದು ನಿಮ್ಮ ಇಚ್ಛೆ ?**

**ಗಾಂಧೀಜೀ :** ಸಾಧ್ಯವಾದಷ್ಟು ನಿಕಟಸಂಬಂಧ. ನಾನು ಭಾರತೀಯರೂ ಆಫ್ರಿಕನ್ನರೂ ಒಂದೇ ಎಂದು ಹೇಳಿದರೂ ಅವರಿಬ್ಬರಲ್ಲಿಯೂ ಇರುವ ವ್ಯತ್ಯಾಸವನ್ನು ನಾನು ಪರಿಗಣಿಸುವುದಿಲ್ಲವೆಂದಲ್ಲ. ಮನುಷ್ಯಸಮಾಜದ ಬೇರೆ ಬೇರೆ ಜನಾಂಗಗಳು ವೃಕ್ಷದ ಬೇರೆ ಬೇರೆ ಶಾಖೆಗಳಂತೆ. ಒಮ್ಮೆ ನಾವು ಎಲ್ಲಕ್ಕೂ ಪೋಷಕವಾದ ಆ ಮೂಲವನ್ನು ಅರಿತುಕೊಂಡರೆ, ಮಾನವ ಸಮಾಜದ ಮೂಲಭೂತ ಐಕ್ಯತೆ ನಮಗೆ ಗೊತ್ತಾಗುವುದು. ಆಗ ದ್ವೇಷಕ್ಕೂ ಅನಾರೋಗ್ಯಕರವಾದ ಪೈಪೋಟಿಗೂ ಅವಕಾಶವಿರುವುದಿಲ್ಲ.

**ರೆವರೆಂಡ್ ಟೇಮ್ :** ನಮ್ಮ ಬಿಡುಗಡೆಯ ಸಾಧನವಾಗಿ ನಾವು ಹಿಂಸೆಯನ್ನು ಆರಿಸಬೇಕೆ ? ಅಹಿಂಸೆಯನ್ನೇ ?

**ಗಾಂಧೀಜೀ :** ಅವಶ್ಯವಾಗಿ ಅಹಿಂಸೆಯನ್ನು. ಆದರೆ ನಿಮಗೆ ಅದರಲ್ಲಿ ಸಜೀವ ನಂಬಿಕೆ ಇರಬೇಕು. ನಿಮ್ಮ ಸುತ್ತ ಗಾಢಾಂಧಕಾರ ಕವಿದರೂ ನೀವು ಭರವಸೆ ಕಳೆದುಕೊಳ್ಳಬಾರದು. ಅಹಿಂಸೆಯನ್ನು ನಂಬುವವನು, ಸಜೀವ ದೇವರನ್ನು ನಂಬಿದವನಂತೆ. ಅವನು ಸೋಲನ್ನು ಎಂದಿಗೂ ಅಂಗೀಕರಿಸುವುದಿಲ್ಲ. ಆದುದರಿಂದ ನನ್ನ ಸಲಹೆ—ಯಾವಾಗಲೂ ಅಹಿಂಸೆ; ಆದರೆ ಧೀರರ ಅಹಿಂಸೆಯೇ ಹೊರತು ಹೇಡಿಗಳ ಅಹಿಂಸೆಯಲ್ಲ.

**ರೆವರೆಂಡ್ ಟೇಮ್ :** ನಿಮ್ಮ ಉದಾಹರಣೆ ನಮ್ಮ ಮೇಲೆ ಬಹಳ ಪ್ರಭಾವ ಬೀರಿದೆ. ನಮ್ಮ ನಾಯಕರಾಗುವ ಒಬ್ಬರು-ಇಬ್ಬರು ಯುವಕರನ್ನು ನಿಮ್ಮಲ್ಲಿಗೆ ತಯಾರಿಗಾಗಿ ಕಳುಹಿಸುವುದು ಸಾಧ್ಯವೇ ಎಂದು ನಾವು ಯೋಚಿಸುತ್ತಿದೇವೆ.

**ಗಾಂಧೀಜೀ :** ಇದು ಒಳ್ಳೆಯ ವಿವೇಕಯುತವಾದ ಯೋಚನೆ.

**ರೆವರೆಂಡ್ ಟೇಮ್ :** ಕ್ರಿಸ್ತಧರ್ಮವು ಆಫ್ರಿಕಕ್ಕೆ ಮೋಕ್ಷವನ್ನು ತಂದುಕೊಡುವುದೆ ?

**ಗಾಂಧೀಜೀ :** ಇಂದಿನ ಕ್ರಿಸ್ತಧರ್ಮ, ಅದರ ಆಚರಣೆ ಇವುಗಳಿಂದ ನಿಮ್ಮವರಿಗೆ ಮೋಕ್ಷ ದೊರಕಲಾರದು. ಇಂದು ಕ್ರೈಸ್ತರೆನ್ನಿಸಿಕೊಳ್ಳುವವರಿಗೆ ಏಸುವಿನ ನಿಜವಾದ ಸಂದೇಶ ಗೊತ್ತಿಲ್ಲವೆಂದು ನನ್ನ ನಂಬಿಕೆ. ಜುಲೂ

ದಂಗೆಯಲ್ಲಿ, ಜುಲೂಗಳ ಮೇಲೆ ನಡೆದ ಕೆಲವು ಯುದ್ಧದ ಭಯಂಕರ ಅತ್ಯಾಚಾರಗಳನ್ನು ನೋಡಿದೆ. ಅವರ ಮುಖಂಡ ಬಂಬಟ್, ತೆರಿಗೆ ಕೊಡಲು ತಿರಸ್ಕರಿಸಿದುದರಿಂದ, ಆ ಜನಾಂಗವೇ ಕಷ್ಟವನ್ನು ಅನುಭವಿಸಬೇಕಾಯಿತು. ನಾನು ರೋಗಿಗಳನ್ನು ಉಪಚರಿಸುವ ಒಂದು ಪಡೆಗೆ ಯಜಮಾನನಾಗಿದ್ದೆ. ಚಡಿ ಏಟು ತಿಂದು, ಬೆನ್ನಿನ ಉಪಚಾರಕ್ಕೆ ನಮ್ಮಲ್ಲಿ ಬರುತ್ತಿದ್ದ ಜುಲೂಗಳನ್ನು ನಾನು ಎಂದಿಗೂ ಮರೆಯಲಾರೆ. ಬಿಳಿಯ ನರ್ಸ್ (ಉಪಚಾರಕರು) ಅವರನ್ನು ಉಪಚರಿಸಲು ತಿರಸ್ಕರಿಸಿದ್ದರು. ಆದರೆ ಈ ಕ್ರೌರ್ಯವನ್ನೆಲ್ಲ ನಡೆಸುತ್ತಿದ್ದವರು ಕ್ರಿಸ್ತರೆನ್ನಿಸಿಕೊಂಡವರು. ಅವರಿಗೆ ಹೆಚ್ಚು ' ವಿದ್ಯೆ ' ಇತ್ತು. ಜುಲೂಗಳಿಗಿಂತ ಅವರು ಉತ್ತಮವಾದ ಉಡುಪನ್ನು ಧರಿಸುತ್ತಿದ್ದರು. ಆದರೆ ನೀತಿಯಲ್ಲಿ ಅವರು ಜುಲೂಗಳಿಗಿಂತ ಉತ್ತಮರಾಗಿರಲಿಲ್ಲ.

**ರೆವರೆಂಡ್ ಟೇಮ್ :** ನಮ್ಮಲ್ಲಿ ನಾಯಕ ಆಗಾಗ ಬಂದಾಗ, ಸ್ವಲ್ಪ ಕಾಲದೊಳಗೆ ಹಾಗೇ ತಣ್ಣಗಾಗುತ್ತಾನೆ. ಅವನಿಗೆ ಹಣದ ಆಸೆ ಹಿಡಿಯುತ್ತದೆ. ಅಥವಾ ಅವನು ಕುಡಿತಕ್ಕೆ ಬಲಿಯಾಗುತ್ತಾನೆ. ಅಥವಾ ಮತ್ತಾವುದೋ ದುರ್ಗುಣ. ಅಂತೂ ಅವನು ನಮಗೆ ಇಲ್ಲವಾಗುತ್ತಾನೆ. ಇದನ್ನು ನಾವು ಹೇಗೆ ತಿದ್ದಿಕೊಳ್ಳುವುದು ?

**ಗಾಂಧೀಜೀ :** ಈ ಸಮಸ್ಯೆ ನಿಮಗೆ ಮಾತ್ರವೇ ವಿಶಿಷ್ಟವಾದುದಲ್ಲ. ನಿಮಗೆ ದೊರಕಿರುವ ನಾಯಕತ್ವ ಪರಿಣಾಮಕಾರಿಯಾಗಿಲ್ಲ. ಕಾರಣ ಆ ನಾಯಕರು ಜನಸಾಮಾನ್ಯರಿಂದ ಬಂದವರಲ್ಲ. ನೀವು ಜನಸಾಮಾನ್ಯರಿಗೆ ಸೇರಿದವರಾದರೆ ಅವರಂತೆ ಬದುಕಿ, ಬಾಳಿ, ಅವರಂತೆ ಯೋಚಿಸಿ. ಆಗ ಅವರು ನಿಮ್ಮೊಂದಿಗೆ ಒಂದಾಗುವರು. ನಾನು ನಿಮ್ಮ ಜಾಗದಲ್ಲಿದ್ದಿದ್ದರೆ, ಒಬ್ಬ ಆಫ್ರಿಕ ಜನಾಂಗದವನೂ ತನ್ನ ಉಡುಪನ್ನು ಬದಲಾಯಿಸಿ ವಿಚಿತ್ರವಾಗಿ ಕಾಣಬೇಕೆಂದು ಹೇಳುತ್ತಿರಲಿಲ್ಲ. ಹಾಗೆ ಮಾಡುವುದು ಅವನ ನೀತಿಯ ಮಟ್ಟವನ್ನು ಒಂದು ಅಂಗುಲವೂ ಹೆಚ್ಚಿಸುವುದಿಲ್ಲ.

# ಗಾಂಧೀಜಿಯ ಕನಸು

ಗಾಂಧೀಜೀ ದಕ್ಷಿಣ ಆಫ್ರಿಕದಲ್ಲಿರುವ ಭಾರತೀಯ ಜನಾಂಗಕ್ಕೆ ಕಳುಹಿಸುವ ಸಂದೇಶ ಏನಾದರೂ ಇರುವುದೇ ಎಂಬುದನ್ನು ತಿಳಿಯಲು ರೆವರೆಂಡ್ ಟೀಮ್ ಬಯಸಿದರು. ಆದರೆ ಗಾಂಧೀಜೀ ಕಳುಹಿಸುವ ಸಂದೇಶ ಯಾವುದೂ ಆಗ ಇರಲಿಲ್ಲ. ಆದರೆ ಕೆಲವು ದಿನಗಳ ಬಳಿಕ ದಕ್ಷಿಣ ಆಫ್ರಿಕದಲ್ಲಿ ಜನಿಸಿದ ಭಾರತೀಯ ಬಾಲಕರ ತಂಡ ಬಾರಡೋಲಿಗೆ ಬಂದಾಗ ಅಂತಹ ಸಂದರ್ಭ ಒದಗಿತು. ಅವರು ಭಾರತದಲ್ಲಿ ವೈದ್ಯಕೀಯ ಶಿಕ್ಷಣವನ್ನು ಪಡೆಯಲು ಬಂದವರಾಗಿದ್ದು ಭಾರತದಲ್ಲಿಯ ವೈದ್ಯಶಿಕ್ಷಣ ವಿದ್ಯಾಶಾಲೆಗಳಲ್ಲಿ ಪ್ರವೇಶ ದೊರಕಲು ಗಾಂಧೀಜಿಯ ಸಹಾಯವನ್ನು ಕೇಳಲು ಬಂದಿದ್ದರು. ಅವರಲ್ಲಿ ಕೆಲವರ ಪೋಷಕರೂ ಬಂಧುಗಳೂ ಗಾಂಧೀಜೀಗೆ ದಕ್ಷಿಣ ಆಫ್ರಿಕದಲ್ಲಿ ಕಕ್ಷಿಗಾರರಾಗಿ ಪರಿಚಿತರಾಗಿದ್ದರು. ಈ ಯುವಕರು ದಕ್ಷಿಣ ಆಫ್ರಿಕದಲ್ಲಿ ಶ್ವೇತೇತರರ ಒಮ್ಮುಖ ವಿರೋಧವನ್ನು ಕುರಿತು ಸಹ ಚರ್ಚಿಸಿದರು.

ಗಾಂಧೀಜಿಯನ್ನು ಅವರು ಹೀಗೆ ಕೇಳಿದರು: 'ದಕ್ಷಿಣ ಆಫ್ರಿಕದಲ್ಲಿ ಜನಿಸಿರುವ ನಾವು, ನಾವು ಹೋಗಿ ನೆಲೆಸಿರುವ ದೇಶದಲ್ಲಿ ನಮ್ಮ ಭಾರತೀಯ ಸಂಸ್ಕೃತಿಯನ್ನು ಉಳಿಸಿಕೊಳ್ಳಲು ಏನು ಮಾಡಬೇಕು? ಇಂಗ್ಲೀಷ್ ಅಲ್ಲದೆ ಮತ್ತಾವ ಭಾಷೆಗಳನ್ನು ನಾವು ಕಲಿಯಬೇಕೆಂದು ನೀವು ಹೇಳುತ್ತೀರಿ?'

ಇಂಗ್ಲೀಷಿಗೆ ಪ್ರಥಮ ಸ್ಥಾನವನ್ನು ಕೊಟ್ಟುದಕ್ಕೆ ಅವರನ್ನು ಸ್ವಲ್ಪ ಆಕ್ಷೇಪಿಸಿ ಗಾಂಧೀಜೀ ಉತ್ತರ ಕೊಟ್ಟರು. ಸಂಸ್ಕೃತದ ಮೂಲದ ಮತ್ತು ಅರಬ್ಬೀ ಅಥವಾ ಪರ್ಶಿಯನ್ ಮೂಲದ ಎಲ್ಲ ಪದಗಳೂ ಉಳ್ಳ ಮತ್ತು ಸಾಮಾನ್ಯ ಮನುಷ್ಯನಿಗೆ ಸಹ ಅರ್ಥವಾಗುವ ಹಿಂದೂಸ್ತಾನಿಯನ್ನು ಅವರು ಕಲಿಯಬೇಕೆಂದು ಗಾಂಧೀಜೀ ಅವರಿಗೆ ಸಲಹೆ ಇತ್ತರು. 'ಹಿಂದೂಗಳು ಸಂಸ್ಕೃತವನ್ನೂ ಮುಸಲ್ಮಾನರು ಅರಬ್ಬಿಯನ್ನೂ ತಿರಸ್ಕರಿಸಿ ಎಂದಿಗೂ ಬಾಳಲಾರರು. ಧರ್ಮಗ್ರಂಥಗಳ ಪ್ರವೇಶಕ್ಕೆ ಈ ಭಾಷೆಗಳ ವ್ಯಾಸಂಗ ಅವರಿಗೆ ಆವಶ್ಯಕವಾಗಿರುವುದರಿಂದ ಮಾತ್ರವೇ ಅಲ್ಲ. ಜಗತ್ತಿನಲ್ಲಿ ಹುಟ್ಟಿದ ಕಾವ್ಯಗಳ ಪೈಕಿ ಈ ಎರಡು ಭಾಷೆಗಳಲ್ಲಿ ಮಹೋನ್ನತವಾದ ಕವಿತೆ ಅಡಗಿದೆ. ಎಲ್ಲಕ್ಕಿಂತ ಹೆಚ್ಚಾಗಿ ನೀವು, ಭಾರತೀಯ ಸಂಸ್ಕೃತಿಯ ಲಕ್ಷಣವಾದ ಸರಳತೆ ಮತ್ತು

ಆಧ್ಯಾತ್ಮಿಕತೆಯನ್ನು ಮುಖ್ಯವಾಗಿ, ಜಾಗರೂಕತೆಯಿಂದ ಉಳಿಸಿಕೊಳ್ಳ ಬೇಕು.'

ಅವರು ಕೇಳಿದ ಮತ್ತೊಂದು ಪ್ರಶ್ನೆ: 'ದಕ್ಷಿಣ ಆಫ್ರಿಕದಲ್ಲಿ ತಮ್ಮ ಹಕ್ಕುಗಳಿಗೆ ಹೋರಾಟವನ್ನು ಸತ್ಯಾಗ್ರಹದ ಮೂಲಕ ನಡೆಸಬೇಕೆ? ಅಥವಾ ವಿಧಿವತ್ತಾದ ರಾಜಕೀಯ ಮಾರ್ಗದಿಂದಲೇ?'

'ದಕ್ಷಿಣ ಆಫ್ರಿಕದ ಭಾರತೀಯರಲ್ಲಿ ಸತ್ತ್ವವಿದ್ದರೆ ಅವರು ಸತ್ಯಾಗ್ರಹ ನಡೆಸಲಿ ಎಂದು ಹೇಳುತ್ತೇನೆ. ಅವರು ನಿಶ್ಚಯವಾಗಿ ಜಯಿಸುತ್ತಾರೆ. ದಕ್ಷಿಣ ಆಫ್ರಿಕದಲ್ಲಿ ಜನಿಸಿದ ಭಾರತೀಯ ಯುವಕರ ಪೈಕಿ ಒಬ್ಬ, ಅಲ್ಲಿ ನೆಲೆಸಿ ರುವ ಭಾರತೀಯರ ಹಕ್ಕುಗಳಿಗಾಗಿ ನಿಂತು, ಆ ಹಕ್ಕುಗಳ ಸ್ಥಾಪನೆಯನ್ನು ತನ್ನ ಜೀವಿತದ ಧ್ಯೇಯವಾಗಿ ಮಾಡಿಕೊಳ್ಳುವ ದಿನವನ್ನು, ನಾನು ನಿರೀಕ್ಷಿಸು ತ್ತಿದೇನೆ. ಅವನು ಅತ್ಯಂತ ಶುದ್ಧ, ಸುಸಂಸ್ಕೃತ, ಸತ್ಯವಂತ, ಗಾಂಭೀರ್ಯವಂತ ನಾಗಿ ವಿರೋಧವನ್ನೆಲ್ಲ ಶಮನಗೊಳಿಸುವನು. ಆಗ ಬಿಳಿಯರು 'ಎಲ್ಲ ಭಾರತೀಯರೂ ಇವನಂತೆ ಇದ್ದರೆ ಅವರಿಗೆ ನಮ್ಮೊಂದಿಗೆ ಸಮಾನ ಸ್ಥಾನವನ್ನು ಕೊಡಲು ನಮಗೆ ಆಕ್ಷೇಪಣೆ ಇಲ್ಲ' ಎನ್ನುವರು. ಆದರೆ ಅವನು ಹೀಗೆ ಪ್ರತ್ಯುತ್ತರ ಕೊಡುವನು: 'ನಿಮ್ಮ ಸಮಾನನೆಂದು ನೀವು ಪರಿಗಣಿಸಲು ಸಿದ್ಧ ವಾಗಿರುವ ಭಾರತೀಯರ ಪ್ರತಿನಿಧಿ ಒಬ್ಬ ಇದ್ದರೆ ಸಾಲದು. ನನ್ನಂತೆ ಇತರ ಭಾರತೀಯರೂ ಆಗಬಲ್ಲರು. ಆದರೆ ಅವರನ್ನು ಹೆಸರಿಟ್ಟು ಕರೆದು ಅವರಿಗೆ ಅನೇಕ ವಿಧವಾದ ಅಸೌಕರ್ಯಗಳನ್ನು ಉಂಟುಮಾಡುವ ಬದಲು, ಶಿಕ್ಷಣ ಮತ್ತು ಇತರ ವಿಷಯಗಳಲ್ಲಿ ಅವರಿಗೂ 'ಎಲ್ಲಿ ನೋಡೋಣ' ಎಂಬ ಅವಕಾಶವನ್ನು ನೀವು ಕೊಟ್ಟರೆ ಮಾತ್ರ. ಈಗ ಆ ಅವಕಾಶಗಳೆಲ್ಲ ಇವರಿಗೆ ಇಲ್ಲ'—ಇರಲಿ. ಅಂತಹವನು ಬಂದಾಗ ಆತನು ನನ್ನಿಂದ ಏನನ್ನೂ ಹೇಳಿಸಿಕೊಳ್ಳಬೇಕಾಗುವು ದಿಲ್ಲ. ಅವನು ತನ್ನ ಪ್ರತಿಭೆಯಿಂದಲೇ ತನ್ನ ಉದ್ದೇಶ್ಯವನ್ನು ಸಾಧಿಸಿಕೊಳ್ಳು ವನು' ಎಂದರು ಗಾಂಧೀಜೀ. (ಹರಿಜನ, ೧೮-೨-೧೯೩೯)

## ಅಹಿಂಸೆ ಹೇಗೆ ಕೆಲಸಮಾಡುವುದು ?

ಇತ್ತೀಚಿನ ' ಹರಿಜನ ' ಸಂಚಿಕೆಗಳನ್ನು ಓದುವುದರಲ್ಲಿಯೂ ಯುರೋಪಿನ ಬಿಕ್ಕಟ್ಟು ಮತ್ತು ಗಡಿನಾಡನ್ನು ಕುರಿತ ನಿಮ್ಮ ಅಭಿಪ್ರಾಯಗಳಲ್ಲೂ ನಾನು ತುಂಬ ಶ್ರದ್ಧೆಹೊಂದಿದೇನೆ. ಆದರೆ ಈ ಅಹಿಂಸೆಯ ಸಮಸ್ಯೆಯ ಒಂದು ಮುಖವನ್ನು ಕುರಿತು ನಿಮ್ಮೊಂದಿಗೆ, ಸೇವಾಗ್ರಾಮದಲ್ಲಿ ಕಾಲಾವಕಾಶ ಸಿಕ್ಕಿದ್ದರೆ ಚರ್ಚಿಸಬೇಕೆಂದು ನನ್ನ ಇಷ್ಟವಿತ್ತು. ನೀವು ಆ ವಿಷಯವನ್ನು ಕುರಿತು ಇಲ್ಲವೇ ಇಲ್ಲವೆನ್ನುವಷ್ಟು ಅಪರೂಪವಾಗಿ ಪ್ರಸ್ತಾಪಿಸಿದೀರಿ. ಇಂದು ಅಖಿಲ ಜಗತ್ತನ್ನೂ ನಡುಗಿಸುತ್ತಿರುವ ಹಿಂಸೆಗೆ, ನೀವು ವಿಕಾಸಗೊಳಿಸಿರುವ ಅಹಿಂಸಾತ್ಮಕ ಅಸಹಕಾರ ಪರಿಹಾರವೆಂದು ಹೇಳುತ್ತೀರಿ. ಅಂತಹ ಮನೋಭಾವದಿಂದಲೂ ಕಾರ್ಯದಿಂದಲೂ ಉಂಟಾಗುವ ಅಪಾರವಾದ ಪರಿಣಾಮದಲ್ಲಿ ಸಂದೇಹವೇ ಇಲ್ಲ. ಆದರೆ ಸರ್ವರಲ್ಲಿಯೂ—ಶತ್ರುಗಳಲ್ಲಿಯೂ ಮಿತ್ರರಲ್ಲಿಯೂ—ನಿಸ್ವಾರ್ಥ ಪ್ರೇಮವುಳ್ಳ ಈ ಅಹಿಂಸಾಮನೋಧರ್ಮ ಜಯಶಾಲಿಯಾಗಬೇಕಾದರೆ, ಅದು ಉದಾರವಾದ ಪ್ರಜಾತಂತ್ರದ ವಿಧ್ಯುಕ್ತ ಸರಕಾರದ ಕ್ರಮದಲ್ಲಿ ವ್ಯಕ್ತವಾಗುವುದು ಆವಶ್ಯಕವಲ್ಲವೆ ? ಕಾನೂನು ಮತ್ತು ಸರಕಾರ ಇಲ್ಲದೆ ಸಮಾಜ ಬಾಳಲಾರದು. ಜಗತ್ತಿನ ರಾಷ್ಟ್ರಗಳು ವಿಧ್ಯುಕ್ತವಾದ ಸರಕಾರ ಪದ್ಧತಿಯನ್ನು ಅನುಸರಿಸಿದಲ್ಲದೆ, ಅವುಗಳಲ್ಲಿಯ ಅರಾಜಕತ್ವ ನಾಶವಾಗಿ ಅವಕ್ಕೆ ಒಗ್ಗಟ್ಟೂ ಕಾನೂನೂ ಅಂತರರಾಷ್ಟ್ರೀಯ ಶಾಂತಿಯೂ ಉಂಟಾಗುವುದಿಲ್ಲ. ಜನರ ಹೃದಯದಲ್ಲಿ ಭಗವಂತನ ಕಾನೂನು ಯಾವತ್ತೋ ಬರೆಯಲ್ಪಟ್ಟಾಗ, ಜನರೆಲ್ಲ ಆ ಭಗವಂತನ ಇಚ್ಛೆಯೇ ಆಗಿ ಬಾಳುವ ಒಂದು ದಿನ ಬರುವುದರಲ್ಲಿ ಸಂದೇಹವಿಲ್ಲ. ಆಗ ಮನುಷ್ಯನಿರ್ಮಿತ ಕಾನೂನು ಬೇಡ. ಸರಕಾರವೂ ಬೇಡ. ಆದರೆ ಅದು ಕೊನೆ. ಈ ದೈವಿಕ ಗುರಿಯ ಕಡೆಗೆ ಗಮನದ ಹೆಜ್ಜೆ—ಮೊದಲು ಜನಾಂಗಗಳೂ ಧರ್ಮಗಳೂ ರಾಷ್ಟ್ರಗಳೂ ಒಂದು ಸರಕಾರದ ಕೆಳಗೆ ಬರಲು ಒಪ್ಪಬೇಕು. ಅದರ ಮೂಲಕ ನಾವೆಲ್ಲ ಒಂದು, ಒಂದರ ಸದಸ್ಯರು; ನಮ್ಮನ್ನು ಆಳುವ ಕಾನೂನುಗಳು ಸಾರ್ವಜನಿಕವಾಗಿ ಚರ್ಚೆಯಾಗಿ ಬಹುಮತದ ಒಪ್ಪಿಗೆಯಿಂದ ಅಂಗೀಕೃತವಾಗಬೇಕು. ಸ್ವಂತ ಇಚ್ಛೆಯಿಂದ ಆ ಕಾನೂನುಗಳಂತೆ ನಡೆಯದಿದ್ದಲ್ಲಿ ಇತರರ ಮೇಲುಪಂಕ್ತಿ—

ಎಲ್ಲ ಒಡಂಬಡಿಕೆ ವ್ಯರ್ಥವಾದಾಗ—ಯುದ್ಧದಿಂದಲ್ಲ—ಪೋಲೀಸ್ ಸಹಾಯ ದಿಂದ ಕಾನೂನುಗಳನ್ನು ಜಾರಿಪಡಿಸೋಣ—ಇಂತಹ ಏರ್ಪಾಡಿಗೆ ಒಪ್ಪ ಬೇಕು. ಸಾರ್ವಭೌಮ ರಾಷ್ಟ್ರಗಳ ನಡುವೆ, ರಚನಾತ್ಮಕ ಅಹಿಂಸಾಮನೋ ಭಾವದಿಂದ ಒಂದು ಬಗೆಯ ಸಂಯುಕ್ತರಾಷ್ಟ್ರಸ್ಥಾಪನೆಗೆ ದಾರಿಯಾಗಬೇಕು. ಯೂರೋಪಿನ ಸಮಸ್ಯೆಗೆ ಒಂದೇ ಮಾರ್ಗ: ಅದರ ಇಪ್ಪತ್ತೈದು ರಾಷ್ಟ್ರಗಳನ್ನೂ ಒಂದೇ ಪ್ರಜಾಪ್ರಭುತ್ವದ ಸಂವಿಧಾನದ ಕೆಳಗೆ ಸಂಯುಕ್ತರಾಷ್ಟ್ರವಾಗಿ ಸೃಷ್ಟಿ ಸುವುದು. ಅದರಿಂದ ಸ್ಥಾಪನೆಯಾದ ಸರಕಾರ ಯೂರೋಪನ್ನೆಲ್ಲ ಒಂದಾಗಿ ಭಾವಿಸಿ—ಪರಸ್ಪರ ಕಲಹವಾಡುವ ಬೇರೆ ಬೇರೆ ರಾಷ್ಟ್ರಗಳೆಂದಲ್ಲ—ಅದರ ರಕ್ಷಣೆ ಮಾಡಿಕೊಳ್ಳುವುದು, ಅದಕ್ಕೆ ಬೇಕಾದ ಕಾನೂನುಗಳನ್ನು ಮಾಡಿಕೊಳ್ಳು ವುದು. ಆದರೂ ಇಪ್ಪತ್ತೈದು ರಾಷ್ಟ್ರಗಳೂ ಸ್ವಯಂಪೂರ್ಣ ಭಾಗಗಳೇ ಆಗಿರುವುವು. ಇದೇ ರೀತಿ ಭಾರತದ ಸಮಸ್ಯೆಗೆ ಒಂದೇ ಪರಿಹಾರ: ಬ್ರಿಟಿಷ್ ಆಳ್ವಿಕೆ ಅಲ್ಲಿ ಕೊನೆಯಾಗಿ ಪ್ರಜಾಪ್ರಭುತ್ವಸಂವಿಧಾನದ ಸರಕಾರದ ಸ್ಥಾಪನೆ. ಯೂರೋಪು ಮತ್ತು ಭಾರತಕ್ಕೆ ಯಾವುದು ಅನ್ವಯಿಸುತ್ತದೆಯೋ ಅದೇ ಕೊನೆಗೆ ಅಖಿಲ ಜಗತ್ತಿಗೂ ಅನ್ವಯಿಸುತ್ತದೆ. ಯುದ್ಧವನ್ನು ನಿಲ್ಲಿಸಲು ಇದೇ ಕೊನೆಯ ಮಾರ್ಗ.

' ಜಗತ್ತಿನ ರಾಷ್ಟ್ರಗಳು ಸಂಯುಕ್ತ ಪ್ರಜಾಪ್ರಭುತ್ವ ಸರಕಾರ ಪದ್ಧತಿ ಯನ್ನು ಒಪ್ಪುವಂತೆ ಅವರ ಮನಸ್ಸನ್ನೂ ಹೃದಯವನ್ನೂ ಪರಿವರ್ತಿಸಲು ಅಹಿಂಸಾ ಅಸಹಕಾರವೇ ಅತ್ಯುತ್ತಮ ಮಾರ್ಗ ಅಥವಾ ಅದೊಂದೇ ಮಾರ್ಗ. ಆದರೆ ಸಂಯುಕ್ತ ಪ್ರಜಾಪ್ರಭುತ್ವಪದ್ಧತಿ ಸಾಧ್ಯವಿಲ್ಲದೆ ಈ ಜಯ ಸಾಧ್ಯವಿಲ್ಲ. ನನಗೆ ಒಂದು ವಿಷಯ ಯಾವಾಗಲೂ ಕುತೂಹಲವನ್ನೂ ಆಶ್ಚರ್ಯವನ್ನೂ ಸಹ ಉಂಟುಮಾಡುತ್ತಿದೆ. ಅಹಿಂಸಾತ್ಮಕ ಅಸಹಕಾರವೊಂದೇ ಸಾಕು ಎಂದು ನೀವು ಭಾವಿಸಿರುವಂತೆ ತೋರುತ್ತದೆ. ಜನರನ್ನೂ ಜನಾಂಗಗಳನ್ನೂ ಧರ್ಮ ಗಳನ್ನೂ ರಾಷ್ಟ್ರಗಳನ್ನೂ ಒಂದುಗೂಡಿಸುವುದು ಅದರ ಗುರಿಯೆಂದು ನೀವು ಎಂದಿಗೂ ಹೇಳಿಯೇ ಇಲ್ಲ. ಹೀಗೆ ಒಂದುಗೂಡುವುದು ಆಧ್ಯಾತ್ಮಿಕ ಹೃದಯ ಪರಿವರ್ತನೆಯಿಂದಲೇ ಹೊರತು ಬಲಪ್ರಯೋಗ, ಹಿಂಸೆ ಅಥವಾ ಕುಯುಕ್ತಿ ಯಿಂದಲ್ಲ ಎಂಬುದಂತೂ ನಿಶ್ಚಯ.

' ಭಾರತದ ರಾಜ್ಯಸಂವಿಧಾನಸಮರ್ಥನೆಗೆ ಇದನ್ನು ಒಂದು ಅಪ್ರತ್ಯಕ್ಷ

ವಾದವಾಗಿ ನಾನು ಬರೆಯುತ್ತಿಲ್ಲ. ಆ ಪ್ರಶ್ನೆಗೂ ಇದರ ಸಂಬಂಧವಿದೆ ಎಂಬುದು ನಿಶ್ಚಯ. 'ಭಾರತ ಸರಕಾರ ನಿಬಂಧನೆ' (ಗವರ್ನಮೆಂಟ್ ಆಫ್ ಇಂಡಿಯಾ ಆಕ್ಟ್) ಭಾರತಕ್ಕೆ ಪ್ರಜಾಪ್ರಭುತ್ವ ಸಂಯುಕ್ತ ರಾಜ್ಯಾಂಗ ವ್ಯವಸ್ಥೆಯ ಬಹಳ ಅಸಮರ್ಪಕವಾದ ಪ್ರಯೋಗ. ಅದು ಕಾರ್ಯಕಾರಿಯಾಗಬೇಕಾದರೆ, ಅವಶ್ಯ ವಾಗಿ ಬೇಗ ಬೆಳೆದು ರೂಪುಗೊಳ್ಳಬೇಕು. ಅದರ ಪರವಾಗಿ ನಾನು ಒತ್ತಿ ಹೇಳುತ್ತಿರುವ ವಾದ ಇದು: ಇಂದಿನ ಪರಿಸ್ಥಿತಿಯಲ್ಲಿ ಕಾರ್ಯಕಾರಿಯಾಗಬಲ್ಲ, ಪ್ರಾಂತಗಳ, ಆಶ್ರಿತ ಸಂಸ್ಥಾನಗಳ ಮುಸಲ್ಮಾನ–ಹಿಂದೂ ಎಲ್ಲರ ಅಭಿಪ್ರಾಯ ವನ್ನೂ ಪ್ರತಿನಿಧಿಸುವ ಮಧ್ಯಮಾರ್ಗ ಇದೊಂದೇ. ಇದರಲ್ಲಿ ನಾವು ಸಾಧಾರಣ ವಾಗಿ ಅಂಗೀಕರಿಸಿರುವುದಕ್ಕಿಂತ ಬಹುಪಾಲು ಹೆಚ್ಚಾಗಿ ಪ್ರಜಾಪ್ರಭುತ್ವದ ಬೀಜಗಳಿವೆ. ನಿಮ್ಮ ಧರ್ಮಬೋಧೆ ಜನರಿಗೆ ಇದನ್ನು ಬೋಧಿಸಿದರೆ ಅದು ಸುಲಭವಾಗಿಯೂ ಬೇಗನೆಯೂ ವಿಕಾಸಗೊಳ್ಳುವುದು. ಈಗ ರಾಜಕೀಯ ಸಂವಿಧಾನದ ಪ್ರಶ್ನೆಯ ಮೇಲೆ ನಿಮ್ಮ ಅಭಿಪ್ರಾಯವನ್ನು ಕೇಳುವುದು ಅಷ್ಟಾಗಿ ನನ್ನ ಉದ್ದೇಶ್ಯವಲ್ಲ. ಈ ಪತ್ರದ ಪ್ರಾರಂಭ ಭಾಗದಲ್ಲಿ ಸೂಚಿಸಿರುವ ಇನ್ನೂ ಹೆಚ್ಚು ವಿಶಾಲವಾದ ಪ್ರಶ್ನೆಗೆ ನಿಮ್ಮ ಉತ್ತರವನ್ನು ಕೇಳುತ್ತೇನೆ.'

ಲಾರ್ಡ್ ಲೋಥಿಯನ್ ಹೀಗೆ ಬರೆಯುತ್ತಾರೆ: ಕಾಗದ ಬಂದುದು ಜನವರಿಯ ಪ್ರಾರಂಭದಲ್ಲಿ. ಆದರೆ ತುರ್ತು ಕಾರ್ಯಗಳಿಂದ, ಕಾಗದದಲ್ಲಿ ಎತ್ತಿದ್ದ ಮುಖ್ಯ ಪ್ರಶ್ನೆಗೆ ಈವರೆಗೆ ಕೈಹಾಕಲು ಆಗಲಿಲ್ಲ.

ಪ್ರಯತ್ನಪೂರ್ವಕವಾಗಿ ಅಹಿಂಸೆಯ ತಳಹದಿಯ ಮೇಲೆ ಬೆಳೆದ ಸಮಾಜದಲ್ಲಿ ಸರಕಾರದ ಸ್ವರೂಪವೇನು ಎಂಬುದನ್ನು ನಾನು ಉದ್ದೇಶ್ಯ ಪೂರ್ವಕವಾಗಿಯೇ ಚರ್ಚಿಸದೆ ಬಿಟ್ಟಿದೇನೆ. ಗುರುತ್ವಾಕರ್ಷಣಶಕ್ತಿಯಿಂದ ಭೂಮಿ ಹೇಗೆ ತನ್ನ ಸ್ಥಳದಲ್ಲಿ ಇದೆಯೋ ಹಾಗೆ ಮನುಷ್ಯಸಮಾಜವೆಲ್ಲ ಬರೀ ಅಹಿಂಸೆಯಿಂದ ಬಂಧಿತವಾಗಿ ನಿಂತಿದೆ. ಆದರೆ ಗುರುತ್ವಾಕರ್ಷಣಶಕ್ತಿಯ ನಿಯಮವನ್ನು ಕಂಡುಹಿಡಿದಮೇಲೆ ನಮ್ಮ ಪೂರ್ವಿಕರಿಗೆ ತಿಳಿಯದಿದ್ದ ಅನೇಕ ಫಲಗಳು ನಮಗೆ ದೊರೆತವು. ಅದೇ ರೀತಿ ಉದ್ದೇಶ್ಯಪೂರ್ವಕವಾಗಿ ಹಿಂಸೆಯ ನಿಯಮದಂತೆ ಸಮಾಜ ರಚಿತವಾದರೆ, ಆ ಸಮಾಜದ ಸ್ವರೂಪ ಇಂದಿನ ಸಮಾಜದಿಂದ ಮುಖ್ಯ ವಿಷಯಗಳಲ್ಲಿಯೇ ಬೇರೆಯಾಗಿರುತ್ತದೆ. ಆದರೆ

ಪೂರ್ಣವಾಗಿ ಅಹಿಂಸೆಯ ಮೇಲೆಯೇ ರಚಿತವಾಗಿರುವ ಸರಕಾರ ಹೇಗೆ ಇರುವುದೆಂಬುದನ್ನು ಪೂರ್ವಭಾವಿಯಾಗಿ ನಾನು ಈಗಲೇ ಹೇಳಲಾರೆ.

ಇಂದು ನಡೆಯುತ್ತಿರುವುದು ಏನು ಎಂದರೆ ಅಹಿಂಸಾಧರ್ಮದ ಪೂರ್ಣ ಅಲಕ್ಷ್ಯ ಮತ್ತು ಹಿಂಸೆಯೇ ಶಾಶ್ವತ ಧರ್ಮವೋ ಎಂಬಂತೆ ಅದರ ಸಿಂಹಾಸನ ಸ್ಥಾಪನೆ. ಆದುದರಿಂದ ನಾವು ಇಂಗ್ಲೆಂಡ್–ಅಮೆರಿಕ–ಫ್ರಾನ್ಸ್‌ಗಳಲ್ಲಿ ನೋಡುತ್ತಿರುವ ಪ್ರಜಾಪ್ರಭುತ್ವ ಬರಿಯ ಹೆಸರಿನ ಪ್ರಜಾಪ್ರಭುತ್ವ. ನಾಜೀ ಜರ್ಮನಿ, ಫೇಸಿಸ್ಟ್ ಇಟಲಿ ಅಥವಾ ಸೋವಿಯಟ್ ರಷ್ಯಗಳಿಗಿಂತ ಕಡಮೆಯಾಗಿ ಇವು ಹಿಂಸೆಯ ಮೇಲೆ ಅವಲಂಬಿಸಿಲ್ಲ. ಇರುವ ವ್ಯತ್ಯಾಸ ಇಷ್ಟೇ: ಕೊನೆಯ ಈ ಮೂರರಲ್ಲಿ ಹಿಂಸೆ, ಮೊದಲಿನ ಮೂರು ಪ್ರಜಾಪ್ರಭುತ್ವದಲ್ಲಿರುವುದಕ್ಕಿಂತ ಹೆಚ್ಚು ವ್ಯವಸ್ಥಿತವಾಗಿ ಸಂಸ್ಥಾಪಿತವಾಗಿದೆ. ಆದರೂ ಯುದ್ಧದ ಆಯುಧಗಳ ವಿಷಯದಲ್ಲಿ ಒಂದನ್ನೊಂದು ಮೀರಿಸುವ ಹುಚ್ಚು ಸ್ಪರ್ಧೆ ನಮಗೆ ಕಾಣುತ್ತಿದೆ. ಹೋರಾಟ ಒಂದು ದಿನ ಉಂಟಾಗುವುದು ಅನಿವಾರ್ಯ. ಆಗ ಪ್ರಜಾಪ್ರಭುತ್ವಗಳಿಗೆ ಜಯವುಂಟಾಗುವುದು. ಏಕೆಂದರೆ ಆ ದೇಶಗಳಲ್ಲಿರುವ ಜನರು ತಮ್ಮ ಮಾತು ಆಳ್ವಿಕೆಯಲ್ಲಿ ನಡೆಯುವುದೆಂಬ ನಂಬಿಕೆಯಿಂದ ಸರಕಾರಕ್ಕೆ ಬೆಂಬಲ ಗೀಯುವರು. ಆದರೆ ಹಿಂಸೆಯ ಮೂರು ರಾಷ್ಟ್ರಗಳಲ್ಲಿ (ಇಟಲಿ–ಜರ್ಮನಿ–ರಷ್ಯ) ದೇಶದ ಜನರೇ ತಮ್ಮ ಸರ್ವಾಧಿಕಾರಿಗಳಿಗೆ ಎದುರಾಗಿ ದಂಗೆ ಏಳಬಹುದು.

ರಾಷ್ಟ್ರೀಯವಾಗಿ ಅಹಿಂಸೆಯನ್ನು ಒಪ್ಪದೆ, ಪ್ರಜಾಪ್ರಭುತ್ವಶಾಸನಾನುಸಾರವಾದ ಸರಕಾರ ಎಂಬುದು ಇಲ್ಲವೆಂಬುದು ನನ್ನ ಅಭಿಪ್ರಾಯ. ಆದುದರಿಂದ ಅಹಿಂಸೆ ನಮ್ಮ ಬಾಳಿನ—ವೈಯಕ್ತಿಕ, ಸಾಮಾಜಿಕ, ರಾಜಕೀಯ, ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ—ಧರ್ಮವೆಂದು ಅದರ ಪ್ರಚಾರಕ್ಕೆ ನನ್ನ ಶಕ್ತಿಗಳನ್ನೆಲ್ಲ ನಾನು ವಿನಿಯೋಗಿಸುತ್ತೇನೆ. ಮುಸಕುಮುಸಕಾಗಿಯಾದರೂ ನನಗೆ ಬೆಳಕು ಕಾಣುತ್ತಿದೆ ಎಂದು ಭಾವನೆ. ನಾನು ಬಹಳ ಎಚ್ಚರಿಕೆಯಿಂದ ಬರೆಯುತ್ತಿದೇನೆ. ಏಕೆಂದರೆ ಅಹಿಂಸಾಧರ್ಮ ಪೂರ್ಣವಾಗಿ ನನಗೆ ತಿಳಿದಿದೆ ಎಂದು ನಾನು ಹೇಳಿಕೊಳ್ಳುವುದಿಲ್ಲ. ನನ್ನ ಪ್ರಯೋಗಗಳ ಜಯ ನನಗೆ ತಿಳಿದಿರುವಂತೆ ನನ್ನ ಅಪಜಯವೂ ನನಗೆ ತಿಳಿದಿದೆ. ಆದರೆ ಜಯಗಳು ನನ್ನಲ್ಲಿ ಶಾಶ್ವತ ನಂಬಿಕೆಯನ್ನು ತುಂಬಲು ಸಾಕಾಗಿವೆ.

ಮಾರ್ಗದ ವಿಷಯದಲ್ಲಿ ನಾವು ಎಚ್ಚರಿಕೆಯಾಗಿದ್ದರೆ ಗುರಿ ತನ್ನ ಎಚ್ಚರಿಕೆ

ಯನ್ನು ತಾನು ವಹಿಸುವುದೆಂದು ನಾನು ಅನೇಕ ವೇಳೆ ಹೇಳಿದೇನೆ. ಅಹಿಂಸೆಯೇ ಮಾರ್ಗ. ಪ್ರತಿಯೊಂದು ರಾಷ್ಟ್ರದ ಗುರಿಯೂ ಪೂರ್ಣಸ್ವಾತಂತ್ರ್ಯ. ಅಂತರರಾಷ್ಟ್ರೀಯ ಸಂಸ್ಥೆಯಾಗುವುದು, ಅದಕ್ಕೆ ಸೇರಿದ ಎಲ್ಲ ಸಣ್ಣದೊಡ್ಡ ರಾಷ್ಟ್ರಗಳೂ ಪೂರ್ಣವಾಗಿ ಸ್ವತಂತ್ರವಾದಾಗ ಮಾತ್ರ. ಆ ಸ್ವಾತಂತ್ರ್ಯ, ಪ್ರತಿಯೊಂದು ರಾಷ್ಟ್ರವೂ ತಾನು ಜೀರ್ಣಿಸಿಕೊಂಡಿರುವ ಅಹಿಂಸೆಗೆ ಅನುಸಾರ ವಾಗಿರುತ್ತದೆ. ಒಂದು ವಿಷಯ ಖಂಡಿತ: ಅಹಿಂಸೆಯ ಮೇಲೆ ಅವಲಂಬಿ ಸಿರುವ ಸಮಾಜದಲ್ಲಿ, ಅತಿ ಸಣ್ಣ ರಾಷ್ಟ್ರವೂ ತಾನು ಅತಿ ದೊಡ್ಡ ರಾಷ್ಟ್ರದಷ್ಟೇ ಮಹತ್ವದ್ದೆಂದು ಭಾವಿಸುವುದು. ಕಡಮೆ-ಹೆಚ್ಚು ಎಂಬ ಭಾವನೆ ಪೂರ್ಣ ವಾಗಿ ಅಳಿಸಿಹೋಗುವುದು.

ಇಂಡಿಯಾ ಗವರ್ನಮೆಂಟ್ ಆಕ್ಟ್ ಒಂದು ತಾತ್ಕಾಲಿಕ ವ್ಯವಸ್ಥೆ ಯೆಂದೂ, ಈ ರಾಷ್ಟ್ರವೇ ರೂಪಿಸಿಕೊಳ್ಳುವ ಒಂದು ಮಸೂದೆಗೆ ಅದು ಸ್ಥಳ ಕೊಡಬೇಕೆಂಬುದೂ ಇದರಿಂದ ಗೊತ್ತಾಗುತ್ತದೆ. ಪ್ರಾಂತ್ಯಗಳ ಸ್ವಯಂ ಅಧಿಕಾರ ತಕ್ಕಮಟ್ಟಿಗೆ ಕಾರ್ಯಕಾರಿಯಾಗಿದೆ. ಆದರೆ ನನ್ನ ಅನುಭವದಲ್ಲಿ ಅದು ಸುಖವಾಗಿಲ್ಲ. ಜನತೆಯ ಮೇಲೆ ಕಾಂಗ್ರೆಸ್ ಸರಕಾರಗಳು ಎಷ್ಟು ಅಹಿಂಸಾ ಹಿಡಿತವನ್ನು ಇಟ್ಟುಕೊಳ್ಳಬೇಕೆಂದು ನಾನು ನಿರೀಕ್ಷಿಸಿದೆನೋ ಅಷ್ಟು ಹಿಡಿತ ಆ ಸರಕಾರಗಳಿಗೆ ಇಲ್ಲ.

ಸಂಯುಕ್ತ ರಾಜ್ಯಾಂಗವ್ಯವಸ್ಥೆಯನ್ನಂತೂ ನನ್ನಿಂದ ಊಹಿಸಿಕೊಳ್ಳಲೂ ಸಾಧ್ಯವಿಲ್ಲ. ಏಕೆಂದರೆ ಅಸಮಾನರನ್ನು—ಎಷ್ಟೇ ಸಡಿಲವಾಗಿ ಇರಲೊಲ್ಲ ದೇಕೆ—ಇದು ಭಾಗಸ್ಥರನ್ನಾಗಿ ಯೋಜಿಸುತ್ತಿದೆ. ರಾಜ್ಯಗಳು ಎಷ್ಟು ಅಸಮಾನ ವಾಗಿವೆ ಎಂಬುದು ಅತ್ಯಂತ ಕುರೂಪದಲ್ಲಿ ದೃಷ್ಟಾಂತವಾಗುತ್ತಿವೆ. ಇದಕ್ಕೆ ನಾನು ಸಿದ್ಧನಾಗಿರಲಿಲ್ಲ. ಆದುದರಿಂದ ಇಂಡಿಯಾ ಗವರ್ನಮೆಂಟ್ ಮಸೂದೆಗೆ ಅನುಸಾರವಾದ ಸಂಯುಕ್ತ ರಾಜ್ಯಾಂಗವ್ಯವಸ್ಥೆ ಪೂರ್ಣವಾಗಿ ಅಸಂಭವ ಎಂದು ನನ್ನ ಮತ. ಆದುದರಿಂದ ಅಹಿಂಸೆಗೆ ಬಂಧಿತನಾಗಿರುವ ನನಗೆ, ಎಲ್ಲಿಯವರೆಗೆ ಅಹಿಂಸೆ ಬರಿಯ ನೀತಿಯಲ್ಲದೆ ಅಜೇಯವಾದ ಧರ್ಮವೂ ಸಹ ಆಗುವುದಿಲ್ಲವೋ ಅಲ್ಲಿಯವರೆಗೆ, ಪ್ರಜಾತಂತ್ರ ರಾಜ್ಯಾಂಗವ್ಯವಸ್ಥೆ ದೂರದ ಕನಸೇ ಸರಿ. ಹೀಗೆ ಸರ್ವವ್ಯಾಪಿ ಅಹಿಂಸೆಯನ್ನು ಕುರಿತು ನಾನು ಗಳಹು ತ್ತಿದ್ದರೂ, ನನ್ನ ಪ್ರಯೋಗ ಭಾರತದ ಮಟ್ಟಿಗೆ ಮಿತಿಗೊಂಡಿದೆ. ಇದಕ್ಕೆ

ಜಯವಾದರೆ ಜಗತ್ತು ಪ್ರಯತ್ನವಿಲ್ಲದೆ ಇದನ್ನು ಅಂಗೀಕರಿಸುವುದು. ಆದರೆ ಇದು ಬಹು ದೊಡ್ಡ 'ಆದರೆ'. ಈ ವಿರಾಮ ನನ್ನನ್ನು ತಳಮಳಗೊಳಿಸು ವುದಿಲ್ಲ. ಗಾಢಾಂಧಕಾರದ ಮಧ್ಯದಲ್ಲಿಯೂ ನನ್ನ ನಂಬಿಕೆ ಅತ್ಯಂತ ಪ್ರಕಾಶ ಮಾನವಾಗಿದೆ. (ಹರಿಜನ, ೧೧-೨-೧೯೩೯)

## ಶೂರರಾದ ಪೋಲ್ ಜನರಿಗೆ

ಪೋಲ್ ಗಣರಾಜ್ಯದ ಹಿಂದಿನ ಅಧ್ಯಕ್ಷರೂ ಖ್ಯಾತ ನಾಯಕರೂ ವೃದ್ಧರೂ ಆದ ಮಾರ್‌ಗೆಸ್ (ಸ್ವಿಟ್ಸರ್ಲಂಡ್) ಅವರಿಂದ ಗಾಂಧೀಜೀಗೆ ಈ ಕೆಳಗಿನ ತಂತಿ ಬಂದಿತು :

'ಕ್ರೂರವಾದ ಮತ್ತು ಸಾಟಿಯಿಲ್ಲದ ದಬ್ಬಾಳಿಕೆಗೆ ಎದುರಾಗಿ, ಸ್ವತಂತ್ರ ವಾಗಿರುವ ಪವಿತ್ರ ಹಕ್ಕನ್ನು ಕಾಯ್ದುಕೊಳ್ಳಲು ಹೋರಾಡುತ್ತಿರುವ ರಾಷ್ಟ್ರದ ಪರವಾಗಿ, ಜಗತ್ತಿನ ನೀತಿಯ ಅತ್ಯಂತ ದೊಡ್ಡ ಶಕ್ತಿಗಳಲ್ಲಿ ಒಬ್ಬರಾದ ನಿಮ್ಮನ್ನು ಬೇಡುತ್ತೇನೆ. ನಿಮ್ಮ ಜನತೆಯ ಸಹಾನುಭೂತಿಯನ್ನೂ ಸ್ನೇಹ ವನ್ನೂ ಪೋಲೆಂಡಿಗೆ ಗಳಿಸಿಕೊಡಲು. ನಿಮ್ಮ ದೇಶಬಾಂಧವರಲ್ಲಿ ನಿಮ್ಮ ಉತ್ಕೃಷ್ಟ ಪ್ರಭಾವವನ್ನು ಬೀರಿ. ಪೋಲೆಂಡ್ ರಾಷ್ಟ್ರ ತನ್ನ ಸಹಸ್ರಾರು ವರುಷ ಗಳ ಇತಿಹಾಸದಲ್ಲಿ ಶಾಂತಿ–ನ್ಯಾಯ–ಶ್ರದ್ಧೆ ಮುಂತಾದ ಮಾನವಸಮಾಜದ ಅತ್ಯುಚ್ಚ ಧ್ಯೇಯಗಳಿಗಾಗಿ ದುಡಿದಿದೆ. ನಿತ್ಯವೂ ಅಸಂಖ್ಯಾತ ನಿರಪರಾಧಿ ಸ್ತ್ರೀಪುರುಷರ ಕೊಲೆಯಾಗುತ್ತಿರುವ ಈ ಭಯಂಕರ ವೇಳೆಯಲ್ಲಿ, ನಿಮ್ಮ ರಾಷ್ಟ್ರದ ಮಹತ್ ಗುರುವಾದ ನಿಮ್ಮ ಒಂದು ಮಾತು, ಪ್ರತಿ ಪೋಲರ ಹೃದಯವನ್ನೂ ಆಳವಾಗಿ ಸ್ಪರ್ಶಿಸುವುದು.'

ಅದಕ್ಕೆ ಗಾಂಧೀಜೀ ಹೀಗೆ ಪ್ರತ್ಯುತ್ತರವಿತ್ತರು :

'ಪೋಲ್ ಜನತೆ ತಮ್ಮ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳಲು ತೊಡ ಗಿರುವ ಈ ಅಸಮಾನ ಹೋರಾಟದಲ್ಲಿ, ನನ್ನ ಹೃದಯ ಪೋಲೆಂಡ್ ಜನತೆಯ ಕಡೆಗೆ ಇದ್ದೇ ಇದೆ. ಆದರೆ ಈಗ ನನ್ನ ಮಾತಿಗೆ ತೂಕವಿಲ್ಲ ಎಂಬುದನ್ನು ನಾನು ವಿಷಾದದಿಂದ ನೆನೆಯುತ್ತೇನೆ. ಯೂರೋಪಿನಲ್ಲಿ ಈಗ ನಡೆಯು ತ್ತಿರುವ ಈ ಹುಚ್ಚುವಿನಾಶವನ್ನು ತಡೆಯಲು ನನಗೆ ಶಕ್ತಿಯಿದ್ದಿದ್ದರೆ!

ಸ್ವಾತಂತ್ರ್ಯವನ್ನು ಕಳೆದುಕೊಂಡು, ಜಗತ್ತಿನ ಅತ್ಯಂತ ಪ್ರಬಲವಾದ ಸಾಮ್ರಾಜ್ಯವಾದಿ ರಾಷ್ಟ್ರದ ಹಿಡಿತದಿಂದ ಕಳಚಿಕೊಳ್ಳಲು ಹೋರಾಡುತ್ತಿರುವ ದೇಶಕ್ಕೆ ಸೇರಿದವನು ನಾನು. ಕಳೆದುಹೋದ ಸ್ವಾತಂತ್ರ್ಯವನ್ನು ಮತ್ತೆ ಸಂಪಾದಿಸಲು ಈ ದೇಶ, ಅದ್ವಿತೀಯವಾದ ಅಹಿಂಸಾಮಾರ್ಗವನ್ನು ಅವಲಂಬಿಸಿದೆ. ಈ ಮಾರ್ಗ ಕೆಲವು ಮಟ್ಟಿಗೆ ಪರಿಣಾಮಕಾರಿಯಾಗಿದ್ದರೂ, ಗುರಿ ಇನ್ನೂ ದೂರದಲ್ಲಿರುವಂತೆ ತೋರುತ್ತಿದೆ. ಆದುದರಿಂದ, ಯೋಚಿಸಿದರೇ ಮೈನಡುಗುವ ಹಿಂಸೆಗಳನ್ನು ಅನುಭವಿಸುತ್ತಿರುವ ಧೀರ ಪೋಲರಿಗೆ ಅವುಗಳನ್ನು ಸಹಿಸುವ ಶಕ್ತಿಯುಂಟಾಗಲಿ ಮತ್ತು ಈ ಭಯಂಕರ ಪರೀಕ್ಷೆ ಕೊನೆಯಾಗಲಿ ಎಂಬ ನನ್ನ ಹೃತ್ಪೂರ್ವಕ ಪ್ರಾರ್ಥನೆಯೇ ನಾನು ಅವರಿಗೆ ಕಳುಹಿಸಬಹುದಾದ ಸಂದೇಶವಾಗಿದೆ. ಅವರ ಹೋರಾಟ ನ್ಯಾಯವಾದುದು. ಅವರಿಗೆ ಜಯ ಖಂಡಿತ. ಏಕೆಂದರೆ ದೇವರು ಎಂದಿಗೂ ನ್ಯಾಯವನ್ನೇ ಎತ್ತಿಹಿಡಿಯುವವನು.'

(ಹರಿಜನ, ೧೬-೯-೧೯೩೯)

## ಪೋಲೆಂಡಿನ ಒಬ್ಬ ಸಹೋದರಿಯ ವೇದನೆ

ಏನಾದರೂ ನಾನು ಈ ರಾತ್ರಿ ಪೋಲೆಂಡ್ ಸೇರುವ ಹಡಗುಪ್ರಯಾಣವನ್ನು ಪ್ರಯತ್ನಿಸುತ್ತೇನೆ—ಇರಾಕ್‌ನ ಬಸ್ರಾ, ಅಲ್ಲಿಂದ ತುರ್ಕಿ ಮತ್ತು ರುಮೇನಿಯ ಮೂಲಕ ಪೋಲೆಂಡ್. ನನ್ನ ಅಂತರ್ವಾಣಿಯನ್ನು ಅಡಗಿಸಲಾರೆ. ಸಾಮಾನ್ಯ ಮನುಷ್ಯದೃಷ್ಟಿಯಿಂದ ಇದು ಹುಚ್ಚು ಎಂದು ತೋರಬಹುದು. ಈಗ ನಾನು ಹೋಗುತ್ತಿರುವುದು ನಮ್ಮ ತಾಯಿಗಾಗಿಯೂ ಅಲ್ಲ. ಯುದ್ಧರಂಗದಲ್ಲಿ ಯಾವ ಗಳಿಗೆಯಲ್ಲಾದರೂ ಪ್ರಾಣ ಕೊಡಲು ನಿಂತಿರುವ ನನ್ನ ಅತಿ ಆಪ್ತಮಿತ್ರರಿಗಾಗಿಯೂ ಅಲ್ಲ—ನಾನು ಹೋಗುತ್ತಿರುವುದು ಪೋಲೆಂಡ್‌ಗಾಗಿಯೇ. ರಾಷ್ಟ್ರಗಳಿಗೂ ಆತ್ಮಗಳಿವೆ ಎಂದು ನಾನು ನಂಬುತ್ತೇನೆ. ನನ್ನ ಮಟ್ಟಿಗೆ ರಾಷ್ಟ್ರಗಳ ಆತ್ಮಗಳು ಬರಿಯ ತತ್ತ್ವಗಳಲ್ಲ, ಎಲ್ಲವೂ ವಾಸ್ತವಾಂಶ. ಪೋಲೆಂಡಿನ ನೆಲವನ್ನು ನಾನು ಮುಟ್ಟಿದರೆ, ನಾನು ಪ್ರೀತಿಸುವವರು ನನಗೆ ದೊರೆಯದಿದ್ದರೂ ನನಗೆ ಸಮಾಧಾನವಾಗುತ್ತದೆ. ರಾಷ್ಟ್ರ ಹುತಾತ್ಮವಾಗುವ ಮಹತ್ ಗಳಿಗೆಯಲ್ಲಿ ಅದರಲ್ಲಿರುವುದು ಅದರ ಆತ್ಮ ಮತ್ತು ದೇಹಗಳೇ.

ಪೋಲೆಂಡ್ ತನ್ನ ರಕ್ತವನ್ನು ಸುರಿಸಿ ಹೋರಾಡುತ್ತಿರುವುದು ಪೋಲೆಂಡಿನ ಹಕ್ಕುಗಳಿಗಾಗಿ ಮಾತ್ರವೇ ಅಲ್ಲ. ಭಾರತವೂ ಸೇರಿ ಎಲ್ಲ ರಾಷ್ಟ್ರಗಳ ನ್ಯಾಯ ಸ್ವಾತಂತ್ರ್ಯರಕ್ಷಣೆಗಾಗಿ, ಎಂದು ನನ್ನ ನಂಬಿಕೆ. ನನ್ನ ಹೃದಯದ ಅಂತ ರಾಳದಲ್ಲಿ 'ನಾನು ಹಿಂದೂ' ಎಂದೇ ನನ್ನ ಭಾವನೆ; ಎಷ್ಟು ಭಾರತೀಯಳೋ ಅಷ್ಟೇ ಪೋಲೆಂಡಿನವಳೂ. ಈ ಎರಡು ಮಾತೃಭೂಮಿಗಳೂ ನನ್ನ ಜೀವನದ ಅಂತ್ಯಕಾಲದವರೆಗೆ ನನ್ನ ಹೃದಯದಲ್ಲಿ ನೆಲಸಿರುತ್ತವೆ. ಆದರೆ ದುಃಖ ದಿಂದಲೂ ನೋವಿನಿಂದಲೂ ರಕ್ತ ಸುರಿಸುತ್ತಿರುವ ಮಾತೆಯ ಅಡಿಗಳನ್ನು, ಈಗ ಹೋಗಿ ಸೇರಲು ಮನುಷ್ಯನಿಂದ ಸಾಧ್ಯವಾದುದನ್ನೆಲ್ಲ ನಾನು ಮಾಡ ದಿದ್ದರೆ ನಾನು ಬದುಕಿರಲಾರೆ. ದಾರಿಯಲ್ಲಿ ನಾನು ನಿಮಗೆ ಬರೆಯುತ್ತೇನೆ; ಆದರೆ ಯುದ್ಧಭೂಮಿಯನ್ನು ತಲಪಿದಮೇಲೆ ಇಲ್ಲ. ಬಾಪೂಜಿ, ಪೋಲೆಂಡಿ ನಲ್ಲಿ ಅನಿರ್ವಚನೀಯ ದುಃಖವನ್ನೂ ನೋವನ್ನೂ ಅನುಭವಿಸುತ್ತಿರುವ ಸಹಸ್ರ ಸಹಸ್ರ ನಿರಪರಾಧಿಗಳಿಗಾಗಿ, ನಿಮ್ಮ ಪ್ರೇಮಪೂರ್ವಕ ಹೃದಯದಿಂದ ಅತ್ಯಂತ ಶ್ರದ್ಧೆಯ ಪ್ರಾರ್ಥನೆ ಮಾಡಿ. ಸಹಾನುಭೂತಿಯೂ ಆಶೀರ್ವಾದವೂ ಕರುಣಾಪೂರಿತ ಆಲೋಚನೆಗಳೂ ಎಲ್ಲರಿಗಿಂತ ಹೆಚ್ಚಾಗಿ ಬೇಕಾಗಿರುವುದು ಅವರಿಗಾಗಿಯೇ.'

ಪೋಲೆಂಡ್ ಸಹೋದರಿಯೊಬ್ಬಳು ಬೊಂಬಾಯಿನಿಂದ ಬರೆದ ಕಾಗದ ಇದು. ಆಕೆ ಕೆಲವು ವರುಷಗಳಿಂದ ನನಗೆ ಗೊತ್ತು. ಅವಳು ಎಷ್ಟರ ಮಟ್ಟಿಗೆ ಪೋಲೆಂಡಿನವಳೋ ಅಷ್ಟರಮಟ್ಟಿಗೇ ಭಾರತೀಯಳೂ ಆಗಿದಾಳೆ. ಮಗನ್ ವಾಡಿಯ ಮಗನ್ ಪ್ರದರ್ಶನಾಲಯದಲ್ಲಿ ಕೆಲಸಮಾಡಲು ಆಕೆ ನಿಶ್ಚಯಿಸಿ ದ್ದಳು. ಆದರೆ ಯುದ್ಧದ ಸುದ್ದಿ ಆಕೆಯನ್ನು ವಿಚಲಿತಗೊಳಿಸಿತು. ಆಕೆಯ ವೃದ್ಧ ತಾಯಿ ಪೋಲೆಂಡಿನಲ್ಲಿದ್ದಾಳೆ. ರಹದಾರಿಯ ತೊಂದರೆಯಿಂದ ಆಕೆ ತಾಯಿಯನ್ನು ಕರೆದುಕೊಂಡು ಬರಲು ಆಗಿರಲಿಲ್ಲ. ಯುದ್ಧ ನಿಜವಾಗಿ ಪ್ರಾರಂಭವಾದಾಗ, ತಾಯಿಯ ವಿಷಯದ ಮಟ್ಟಿಗೆ ಅವಳು ಹಾಗೂ ಹೀಗೂ ಶಾಂತಳಾದಳು. ಆದರೆ ಅವಳ ಸಮೀಪ ಬಂಧುಗಳೂ ಪ್ರೀತಿಪಾತ್ರರೂ ಆದವರು ತಮ್ಮ ತಪ್ಪು ಏನೂ ಇಲ್ಲದಿದ್ದರೂ, ಪ್ರತಿದಿನವೂ ಸಾವಿನ ಅಪಾಯದಲ್ಲಿದ್ದುದರಿಂದ ಅವಳ ಉದ್ರೇಕಗೊಂಡ ಮನಸ್ಸಿಗೆ ಶಾಂತಿ ಇರಲಿಲ್ಲ. ಅವಳಿಗೆ ಅಹಿಂಸೆಯಲ್ಲಿ ಪೂರ್ಣ ನಂಬಿಕೆ. ಆದರೆ ಆ ಅಹಿಂಸೆಯೇ ಅವಳನ್ನು

ಅಶಾಂತಳನ್ನಾಗಿ ಮಾಡಿತು. ತನ್ನ ಮಾತೃಭೂಮಿಯ ಮೇಲೆ ಆಗುತ್ತಿರುವ ಅನ್ಯಾಯಕ್ಕೆ—ಅವಳ ಅಭಿಪ್ರಾಯದಲ್ಲಿ—ಪ್ರತಿಯಾಗಿ ಅವಳ ಪೂರ್ಣ ಹೃದಯವೇ ದಂಗೆ ಎದ್ದಿದೆ. ತನ್ನ ಸ್ವಾತಂತ್ರ್ಯರಕ್ಷಣೆಗಾಗಿ ಮಾತ್ರವೇ ಅಲ್ಲ, ಸ್ವಾತಂತ್ರ್ಯವನ್ನು ಕಳೆದುಕೊಂಡ ಎಲ್ಲ ರಾಷ್ಟ್ರಗಳ ಸ್ವಾತಂತ್ರ್ಯಕ್ಕಾಗಿಯೂ ಕೊನೆಯವರೆಗೆ ಹೋರಾಡುತ್ತಿರುವ ತನ್ನ ಕಲ್ಪನೆಯ ಪೋಲೆಂಡನ್ನು ಹುಡುಕಿಕೊಂಡು ಆಕೆ ಹೊರಟಿದಾಳೆ. ಇದರಲ್ಲಿ ಆಕೆ ಸ್ವಾಭಾವಿಕವಾಗಿ ತನ್ನ ಪ್ರೀತಿಯಲ್ಲಿ ಎರಡನೆಯ ಸ್ಥಾನವನ್ನು ಹೊಂದಿರುವ ಭಾರತವನ್ನೂ ಸೇರಿಸಿದಾಳೆ. ಆಕೆಯ ಕನಸು ನಿಜವಾಗಲಿ. ಪೋಲರಿಗೆ ಅತ್ಯಂತ ಧೈರ್ಯವೂ ಅಷ್ಟೇ ಸ್ವಾರ್ಥತ್ಯಾಗವೂ ಇದ್ದರೆ, ಅದು ಹಿಂಸೆಯಿಂದ ತನ್ನನ್ನು ರಕ್ಷಿಸಿಕೊಂಡುದನ್ನು ಇತಿಹಾಸ ಮರೆಯುವುದು. ಅದರ ಹಿಂಸೆ, ಸ್ವಲ್ಪ ಹೆಚ್ಚುಕಡಮೆ ಅಹಿಂಸೆಯೇ ಎಂದು ಪರಿಗಣಿತವಾಗುವುದು. (ಹರಿಜನ, ೨೩–೯–೧೯೩೯)

## ಒಗಟೆಗಳು

ಪ್ರಸಿದ್ಧರಾದ ಕಾಂಗ್ರೆಸ್ಸಿಗರೊಬ್ಬರು ಹೀಗೆ ಕೇಳುತ್ತಾರೆ :

(೧) ಈ ಯುದ್ಧದ ವಿಷಯದಲ್ಲಿ ಅಹಿಂಸೆಗೆ ಅನುಗುಣವಾಗಿ ನಿಮ್ಮ ಸ್ವಂತ ಮನೋಭಾವ ಏನು ?

(೨) ಹಿಂದಿನ ಯುದ್ಧದ ವಿಷಯದಲ್ಲಿದ್ದಂತೆಯೇ ? ಅಥವಾ ಬೇರೆಯೆ ?

(೩) ಅಹಿಂಸೆಯುಳ್ಳ ನೀವು ಹೇಗೆ ತಾನೇ ಇಂದಿನ ಬಿಕ್ಕಟ್ಟಿನಲ್ಲಿ ಹಿಂಸೆಯ ಮೇಲೆ ಅವಲಂಬಿಸಿರುವ ಕಾಂಗ್ರೆಸ್ಸಿನೊಂದಿಗೆ ಸಹಭಾಗಿಯಾಗಬಲ್ಲಿರಿ ?

(೪) ಈ ಯುದ್ಧವನ್ನು ಎದುರಿಸಲು ಅಥವಾ ತಪ್ಪಿಸಲು, ಅಹಿಂಸೆಯ ಮೇಲೆ ಅವಲಂಬಿಸಿರುವ ನಿಮ್ಮ ಪೂರ್ಣ ಯೋಚನೆಯೇನು ?

ನನ್ನನ್ನು ಅರಿಯುವುದು ಕಷ್ಟ. ನನ್ನಲ್ಲಿ ಪೂರ್ವಾಪರ ವಿರೋಧಗಳಿವೆ ಎಂದೆಲ್ಲ ಬರೆದಿರುವ ಸ್ನೇಹಪರ ಪತ್ರದ ಕೊನೆಯಲ್ಲಿ ಈ ಪ್ರಶ್ನೆಗಳಿವೆ. ಇವು ಎರಡೂ ಹಳೆಯ ಆಕ್ಷೇಪಣೆಗಳೇ. ಕೇಳುವವರ ದೃಷ್ಟಿಯಿಂದ ಪೂರ್ಣವಾಗಿ

ಸರಿ; ನನ್ನ ದೃಷ್ಟಿಯಿಂದ ಪೂರ್ಣವಾಗಿ ತಪ್ಪು. ಆದುದರಿಂದ ನನ್ನ ಆಕ್ಷೇಪಕರೂ ನಾನೂ ಭಿನ್ನಾಭಿಪ್ರಾಯವುಳ್ಳವರಾಗುವ ಒಮ್ಮತಕ್ಕೆ ಬರಬೇಕು. ಆದರೆ ಇಷ್ಟನ್ನು ಮಾತ್ರ ಹೇಳುತ್ತೇನೆ: ಬರೆಯುವಾಗ ನಾನು ಹಿಂದೆ ಏನು ಹೇಳಿದೆ ಎಂಬುದನ್ನು ಕುರಿತು ಎಂದಿಗೂ ಯೋಚಿಸುವುದಿಲ್ಲ. ನನ್ನ ಗುರಿ ಇದು. ಒಂದು ಪ್ರಶ್ನೆಯ ಮೇಲೆ ಹಿಂದೆ ನಾನು ಹೇಳಿದೆ ಎಂಬುದಕ್ಕೆ ಅಂಟಿಕೊಳ್ಳುವುದಲ್ಲ ನನ್ನ ಗುರಿ. ಆದರೆ ಪ್ರಕೃತ ಸಂದರ್ಭದಲ್ಲಿ ನನ್ನ ಮಾತು ನನಗೆ ತೋರಿದ ಸತ್ಯಕ್ಕೆ ಅನುಸಾರವಾಗಿದೆಯೇ ಎಂಬುದು. ಇದರ ಫಲ ನಾನು ಸತ್ಯದಿಂದ ಸತ್ಯಕ್ಕೆ ಬೆಳೆಯುತ್ತಾ ಬಂದಿದ್ದೇನೆ. ನನ್ನ ಜ್ಞಾಪಕಶಕ್ತಿಗೆ ಅನಾವಶ್ಯಕವಾದ ಆಯಾಸವನ್ನು ತಪ್ಪಿಸಿದೇನೆ. ಎಲ್ಲಕ್ಕಿಂತ ಹೆಚ್ಚಾಗಿ, ನಾನು ನನ್ನ ಹಿಂದಿನ ಬರೆಹಗಳನ್ನೂ—ಐವತ್ತು ವರುಷಗಳ ಹಿಂದಿನವುಗಳನ್ನೂ ಕೂಡ—ನನ್ನ ಈಚಿನ ಹೇಳಿಕೆಯೊಂದಿಗೆ ಹೋಲಿಸಿ ನೋಡಿದಾಗ, ಎರಡಕ್ಕೂ ಪೂರ್ವಾಪರವಿರೋಧ ಯಾರಿಗೆ ತೋರುತ್ತದೆಯೋ ಆ ಮಿತ್ರರು, ನನ್ನ ಅತಿ ಈಚಿನ ಹೇಳಿಕೆಗಳು ಕೊಡುವ ಅರ್ಥವನ್ನೇ ತೆಗೆದುಕೊಳ್ಳಲಿ. ಅವರಿಗೆ ಒಪ್ಪಿಗೆಯಾದರೆ ಹಿಂದಿನ ಹೇಳಿಕೆಯ ಅರ್ಥವನ್ನೇ ತೆಗೆದುಕೊಳ್ಳಲಿ. ಆದರೆ ಆರಿಸಿಕೊಳ್ಳುವುದಕ್ಕೆ ಮುಂಚೆ ಈ ಪೂರ್ವಾಪರ ವಿರೋಧವೆಂದು ಕಾಣುವ ಎರಡರ ಮೂಲದಲ್ಲಿಯೂ, ಶಾಶ್ವತವಾದ ಒಂದು ಸ್ಥಿರತೆ ಅಥವಾ ಏಕತೆ ಇಲ್ಲವೇ ಎಂಬುದನ್ನು ಅವರು ಕಾಣಲು ಪ್ರಯತ್ನಿಸಲಿ.

ನನ್ನ ಮಾತು ಅರ್ಥವಾಗುವುದಿಲ್ಲ ಎಂಬ ಆಕ್ಷೇಪಣೆ; ಸಂಬದ್ಧವಾಗಿರುವಾಗ ನನ್ನ ಆಲೋಚನೆಗಳನ್ನು ಮುಚ್ಚಿಡುವುದು ನನ್ನ ಇಚ್ಛೆ ಎಂದಿಗೂ ಅಲ್ಲ ಎಂಬ ನನ್ನ ಭರವಸೆಯನ್ನು ಮಿತ್ರರು ಅಂಗೀಕರಿಸಬೇಕು. ಕೆಲವು ವೇಳೆ ಹಾಗಾಗುವುದು (ಅರ್ಥವಾಗದುದು) ಸಂಕ್ಷೇಪವಾಗಿರಬೇಕೆಂಬ ನನ್ನ ಇಚ್ಛೆಯಿಂದ ಉಂಟಾಗುತ್ತದೆ. ಕೆಲವು ವೇಳೆ ನನ್ನ ಅಭಿಪ್ರಾಯವನ್ನು ಹೇಳುವ ವಿಷಯದಲ್ಲಿ ನನಗಿರುವ ಅಜ್ಞಾನದಿಂದ ಹೀಗೆ ಆಗಬಹುದು.

ಒಂದು ಉದಾಹರಣೆ: ನಮ್ಮಿಬ್ಬರಿಗೂ ನಡುವೆ ಯಾವ ಮುಚ್ಚುಮರೆಯೂ ಇಲ್ಲದ ಮಿತ್ರರೊಬ್ಬರು, ಕೋಪದಲ್ಲಿಯಲ್ಲ, ಸಂಕಟದಲ್ಲಿ ಹೀಗೆ ಬರೆಯುತ್ತಾರೆ:

**'ಭಾರತ ಯುದ್ಧರಂಗವಾಗುವುದು ಅಸಂಭವವಲ್ಲ. ಆಗ ಗಾಂಧೀಜೀ**

ನಮ್ಮ ದೇಶದ ಪ್ರಜೆಗಳು ತಮ್ಮ ಹೃದಯಗಳನ್ನು ತೆರೆದು ಶತ್ರುಗಳ ಕತ್ತಿಗಳಿಗೆ ಒಡ್ಡಬೇಕೆಂದು ಹೇಳುತ್ತಾರೆಯೆ? ಸ್ವಲ್ಪ ಕಾಲದ ಹಿಂದೆ ಅವರು ಹಾಗೆ ಮಾಡುತ್ತಾರೆಂದು ನಾನು ಪ್ರಮಾಣವಾಗಿ ಹೇಳುತ್ತಿದ್ದೆ. ಆದರೆ ಈಗ ನನಗೆ ಆ ಭರವಸೆ ಇಲ್ಲ.

ಈಚಿನ ಲೇಖನಗಳನ್ನು ನಾನು ಬರೆದಿದ್ದರೂ, ಹಿಂದೆ ನಮ್ಮ ದೇಶದವರಿಗೆ ಕೊಟ್ಟ ಅದೇ ಸಲಹೆಯನ್ನೇ ಅಥವಾ ಜೆಕ್ಕರಿಗೂ ಅಬಿಸೀನಿಯದವರಿಗೂ ಕೊಟ್ಟ ಸಲಹೆಯನ್ನೇ ಮತ್ತೆ ಕೊಡುತ್ತೇನೆಂಬ ಭರವಸೆಯನ್ನು ಅವರು ಇಟ್ಟುಕೊಳ್ಳಬಹುದೆಂದು ನಾನು ಒತ್ತಿಹೇಳುತ್ತೇನೆ. ನನ್ನ ಅಹಿಂಸೆ ಇನ್ನೂ ಹೆಚ್ಚು ದೃಢವಾದ ವಸ್ತುವಿನಿಂದ ಕೂಡಿದೆ. ವಿಜ್ಞಾನಿಗಳಿಗೆ ತಿಳಿದಿರುವ ಅತಿ ಗಟ್ಟಿಯಾದ ಲೋಹಗಳಿಗಿಂತ ಅದು ಇನ್ನೂ ಗಟ್ಟಿ. ಆದರೂ ಅದು ತನ್ನ ಹುಟ್ಟುಶಕ್ತಿಗೆ ಇನ್ನೂ ಏರಿಲ್ಲ ಎಂಬುದನ್ನು ನಾನು ವಿಷಾದದಿಂದ ಅರಿತಿದೇನೆ. ಹಾಗಾಗಿದ್ದರೆ, ನಾನು ನಿಸ್ಸಹಾಯನಾಗಿ ನಿತ್ಯ ಸುಮ್ಮನೆ ನೋಡುತ್ತಿರುವ ಅನೇಕ ಸ್ಥಳೀಯ ಹಿಂಸಾಕೃತ್ಯಗಳಿಗೆ ಅಹಿಂಸೆಯನ್ನು ಅನ್ವಯಿಸಲು ದೇವರು ನನಗೆ ದಾರಿಯನ್ನು ತೋರಿಸುತ್ತಿದ್ದನು. ಇದನ್ನು ಹೇಳಿರುವುದು ಅಹಂಕಾರದಿಂದಲ್ಲ, ಪೂರ್ಣ ಅಹಿಂಸೆಯ ಶಕ್ತಿಯ ನಿಶ್ಚಿತಜ್ಞಾನದಿಂದ. ನನ್ನ ದೌರ್ಬಲ್ಯವನ್ನಾಗಲೀ ಅಶಕ್ತಿಯನ್ನಾಗಲಿ ಮುಚ್ಚಿಕೊಳ್ಳುವುದಕ್ಕಾಗಿ ಅಹಿಂಸೆಯ ಶಕ್ತಿಯನ್ನು ಕಡಮೆಯಾಗಿ ಭಾವಿಸಲು ನಾನು ಒಪ್ಪುವುದಿಲ್ಲ.

ಈಗ ಹಿಂದಿನ ಪ್ರಶ್ನೆಗಳಿಗೆ ಉತ್ತರವಾಗಿ ಕೆಲವು ಮಾತುಗಳು :

(೧) ಈ ಯುದ್ಧದ ವಿಷಯದಲ್ಲಿ ನನ್ನ ವ್ಯಕ್ತಿಶಃ ಪ್ರತಿಕ್ರಿಯೆ—ಇದು ಎಂದಿಗಿಂತಲೂ ಹೆಚ್ಚಾದ ಭೀಕರತೆ ಎಂಬುದು. ಆದರೆ ನನ್ನ ಮನಸ್ಸು ಇಂದಿನಷ್ಟು ಹಿಂದೆ ದುಃಖಿಯಾಗಿರಲಿಲ್ಲ. ಆದರೆ ಇದಕ್ಕಿಂತ ಹೆಚ್ಚಿನ ಭೀಕರತೆ, ಹಿಂದಿನ ಯುದ್ಧದಲ್ಲಿ ನಾನು ಸಿಪಾಯಿಗಳನ್ನು ಯುದ್ಧಕ್ಕೆ ಸೇರಿಸಿದ ಹವಾಲದಾರನಾಗದಂತೆ ನನ್ನನ್ನು ತಡೆದಿದೆ. ಆದರೆ ವಿಚಿತ್ರವಾಗಿ ಕಂಡರೂ ನನ್ನ ಸಹಾನುಭೂತಿಯೆಲ್ಲ 'ಮಿತ್ರರಲ್ಲಿಯೇ' ಇದೆ. ಇಚ್ಛೆಯಿರಲಿ, ಇಲ್ಲದಿರಲಿ ಈ ಯುದ್ಧ ಪಾಶ್ಚಾತ್ಯ ಪ್ರಜಾಪ್ರಭುತ್ವಕ್ಕೂ ಹಿಟ್ಲರನ ಪ್ರತೀಕವಾಗಿರುವ ಸರ್ವಾಧಿಕಾರಕ್ಕೂ ವಿರೋಧವಾದ ಯುದ್ಧ

ವಾಗಿ ಪರಿಣಮಿಸುತ್ತಿದೆ. ರಷ್ಯ ವಹಿಸಿರುವ ಭಾಗ ವಿಷಾದಕರವಾದರೂ ಈ ಪ್ರಕೃತಿವಿರೋಧಮಿಲನದಿಂದ ಉದ್ದೇಶ್ಯ ಪಡದಿದ್ದ ಮತ್ತು ಊಹಿಸ ಲಾಗದ ಭವಿಷ್ಯವುಳ್ಳ ಒಂದು ಮಿಲನವುಂಟಾಗುವುದೆಂದು ಆಶಿಸೋಣ. ಮಿತ್ರರಲ್ಲಿ ಅನೀತಿಯುಂಟಾಗದಿದ್ದಲ್ಲಿ—ಆ ಸೂಚನೆ ಸ್ವಲ್ಪವೂ ಇಲ್ಲ— ಈ ಯುದ್ಧ ಎಲ್ಲ ಯುದ್ಧಗಳನ್ನೂ ಕೊನೆಗಾಣಿಸುವ ಯುದ್ಧವಾಗುವುದು. ಕೊನೆಗೆ, ಇಂದು ನಾವು ನೋಡುತ್ತಿರುವ ಇಂತಹ ಭಯಂಕರ ಕ್ರಮದ ಯುದ್ಧವಾದರೂ ನಿಲ್ಲುವುದು. ನನಗೆ ಈ ನಂಬಿಕೆ ಇದೆ; ಭಾರತ ಅಂತಃಕಲಹದಿಂದ ಜರ್ಜರಿತವಾಗಿದ್ದರೂ ಇಷ್ಟವಾದ ಗುರಿಯನ್ನು ಮುಟ್ಟುವುದರಲ್ಲಿಯೂ ಈಗಿರುವುದಕ್ಕಿಂತ ಹೆಚ್ಚು ಪರಿಶುದ್ಧವಾದ ಪ್ರಜಾ ಪ್ರಭುತ್ವವನ್ನು ಪ್ರಚಾರಮಾಡುವುದರಲ್ಲಿಯೂ ತನ್ನ ಪಾತ್ರವನ್ನು ಪರಿಣಾಮಕಾರಿಯಾಗಿ ವಹಿಸುವುದು ಎಂದು. ವರ್ಕಿಂಗ್ ಕಮಿಟಿ ಜಗತ್ತಿನ ರಂಗದಲ್ಲಿ ಅಭಿನಯವಾಗುತ್ತಿರುವ ನಿಜವಾದ ದುಃಖನಾಟಕ ದಲ್ಲಿ ತಾನು ಕೊನೆಯಲ್ಲಿ ಹೇಗೆ ನಡೆಯುತ್ತದೆ ಎಂಬುದರ ಮೇಲೆ ನಿಸ್ಸಂದೇಹವಾಗಿ ಇದು ಅವಲಂಬಿಸಿದೆ. ನಾವು ನಾಟಕದಲ್ಲಿ ಅಭಿನಯ ಕಾರರೂ ಹೌದು, ಪ್ರೇಕ್ಷಕರೂ ಹೌದು. ನನ್ನ ದಾರಿಯನ್ನು ನಾನು ಆರಿಸಿಯಾಯಿತು. ನಾನು ವರ್ಕಿಂಗ್ ಕಮಿಟಿಯ ನನ್ನ ಮಾರ್ಗ ದರ್ಶಕನಾಗಿರಲಿ ಅಥವಾ ಸರಕಾರದ ಮಾರ್ಗದರ್ಶಕನಾಗಿರಲಿ— ಹಾಗೆಂದರೆ ಸರಕಾರಕ್ಕೆ ಕೋಪ ಬೇಡ—ನನ್ನ ಗುರಿ ಕಾಂಗ್ರೆಸ್ಸನ್ನು ಅಥವಾ ಸರಕಾರವನ್ನು ಅಥವಾ ಇಬ್ಬರನ್ನೂ ಉದ್ದೇಶ್ಯಪೂರ್ವಕವಾಗಿ ಅಹಿಂಸಾಮಾರ್ಗದಲ್ಲಿ, ಅತಿನಿಧಾನವಾದ ನಡಗೆಯಲ್ಲಿಯಾದರೂ ಕರೆದು ಕೊಂಡು ಹೋಗುವುದು. ಎರಡು ಕಡೆಯೂ ನಾನು ವೇಗವನ್ನು ಹೆಚ್ಚಿ ಸುವುದು ಸಾಧ್ಯವಿಲ್ಲ ಎಂಬುದು ಸ್ಪಷ್ಟ. ಆ ವೇಳೆಯಲ್ಲಿ ದೇವರು ನನ್ನ ಹೃದಯ ಮತ್ತು ಬುದ್ಧಿಗಳಿಗೆ ದಯಪಾಲಿಸುವ ಶಕ್ತಿಯನ್ನು ಮಾತ್ರ ನಾನು ಉಪಯೋಗಿಸಬಲ್ಲೆ.

(೨) ಎರಡನೆಯ ಪ್ರಶ್ನೆಯನ್ನೂ ಮೊದಲನೆಯ ಪ್ರಶ್ನೆಯ ಉತ್ತರದಲ್ಲಿಯೇ ಮುಗಿಸಿದೇನೆಂದು ಭಾವಿಸುತ್ತೇನೆ.

(೩) ಅಹಿಂಸೆಯಲ್ಲಿ ಹೇಗೆ ಮಟ್ಟಗಳುಂಟೋ ಹಾಗೆ ಹಿಂಸೆಯಲ್ಲಿಯೂ ಇದೆ. ವರ್ಕಿಂಗ್ ಕಮಿಟಿ ಉದ್ದೇಶ್ಯಪೂರ್ವಕವಾಗಿ ಅಹಿಂಸಾನೀತಿಯನ್ನು ಬಿಟ್ಟುಹೋಗಿಲ್ಲ. ಅದು ಅಹಿಂಸೆಯ ನಿಜವಾದ ಅರ್ಥವನ್ನು ಪ್ರಾಮಾಣಿಕತೆಯಿಂದ ಒಪ್ಪಲಾರದೆ ಹೋಯಿತು. ಕಾಂಗ್ರೆಸ್ಸಿನ ಅಸಂಖ್ಯಾತ ಬಹುಮತ, ದೇಶಕ್ಕೆ ಹೊರಗಡೆಯಿಂದ ಅಪಾಯ ಒದಗಿದಾಗ, ದೇಶವನ್ನು ಅಹಿಂಸಾಮಾರ್ಗದಿಂದ ರಕ್ಷಿಸುವುದನ್ನು ಎಂದಿಗೂ ಸ್ಪಷ್ಟವಾಗಿ ಅರ್ಥಮಾಡಿಕೊಂಡಿರಲಿಲ್ಲವೆಂದು ವರ್ಕಿಂಗ್ ಕಮಿಟಿ ಭಾವಿಸಿತು. ಅವರು ಕಲಿತಿದ್ದುದು ಇಷ್ಟು : ಒಟ್ಟಿನಲ್ಲಿ ಬ್ರಿಟಿಷ್ ಸರಕಾರಕ್ಕೆದುರಾಗಿ ಅಹಿಂಸಾ ಹೋರಾಟವನ್ನು ಜಯಪ್ರದವಾಗಿ ನಡೆಸಬಹುದು ಎಂಬುದು. ಇತರ ಕ್ಷೇತ್ರಗಳಲ್ಲಿ ಅಹಿಂಸೆಯ ಪ್ರಯೋಗದಲ್ಲಿ ಕಾಂಗ್ರೆಸ್ಸಿಗರಿಗೆ ತರಪೇತಿ ಆಗಿಲ್ಲ. ಉದಾಹರಣೆಗೆ, ಜಾತೀಯ ಗಲಭೆ ಪೋಕರಿ-ಪಟಿಂಗರು-ಅತ್ಯಾಚಾರಿಗಳನ್ನು ಅಹಿಂಸಾಮಾರ್ಗದಲ್ಲಿ ಜಯಪ್ರದವಾಗಿ ಎದುರಿಸುವ ಸ್ಪಷ್ಟವಾದ ಮಾರ್ಗವನ್ನು ಅವರು ಕಲಿತಿರಲಿಲ್ಲ. ಅನುಭವಜನ್ಯವಾದುದರಿಂದ ಈ ವಾದಕ್ಕೆ ಇದು ಕೊನೆ. ನನ್ನ ಅತ್ಯುತ್ತಮ ಸಹೋದ್ಯೋಗಿಗಳು ವಿಸ್ತೃತ ವ್ಯಾಪ್ತಿಯ ಅಹಿಂಸೆಯನ್ನು ಅನುಸರಿಸಲಾರರೆಂಬ ಕಾರಣಕ್ಕಾಗಿ ಅವರನ್ನು ನಾನು ತಿರಸ್ಕರಿಸಿದರೆ ಅಹಿಂಸಾಧರ್ಮಕ್ಕೆ ನಾನು ಸೇವೆ ಸಲ್ಲಿಸಿದಂತೆ ಆಗುವುದಿಲ್ಲ. ಅಹಿಂಸಾಮಾರ್ಗದಿಂದ ಅವರು ಬೇರೆ ದಾರಿ ಹಿಡಿದಿರುವುದು ತಾತ್ಕಾಲಿಕವೂ ಸಾಧ್ಯವಾದಷ್ಟು ಸಂಕುಚಿತ ಕ್ಷೇತ್ರಕ್ಕೆ ಮಾತ್ರ ಅನ್ವಯಿಸುವುದೂ ಆಗಿರುವುದೆಂದು ನಂಬಿ, ಅವರೊಂದಿಗೇ ನಾನು ಇರುತ್ತೇನೆ.

(೪) ನನ್ನ ಬಳಿ ಸಿದ್ಧವಾದ ಯೋಜನೆ ಇಲ್ಲ. ಇದು ನನಗೂ ಹೊಸ ಕ್ಷೇತ್ರ. ಮಾರ್ಗದ ವಿಷಯದಲ್ಲಿ ಮಾತ್ರ ನನಗೆ ಬೇರೆ ದಾರಿ ಇಲ್ಲ. ನಾನು ವರ್ಕಿಂಗ್ ಕಮಿಟಿ ಸದಸ್ಯರೊಂದಿಗೆ ಸಮಾಲೋಚನೆ ನಡೆಸುತ್ತಿರಲಿ ಅಥವಾ ವೈಸರಾಯರೊಂದಿಗೆ ಸಮಾಲೋಚನೆ ನಡೆಸುತ್ತಿರಲಿ, ಅದು ಯಾವಾಗಲೂ ಪೂರ್ಣ ಅಹಿಂಸಾಮಾರ್ಗ. ಆದುದರಿಂದ ನಾನು ಏನು ಮಾಡುತ್ತಿದೇನೆಯೋ ಅದೇ ಸ್ಪಷ್ಟವಾದ ಯೋಜನೆಯ ಭಾಗ. ನನ್ನ

ಇತರ ಯೋಜನೆಗಳಂತೆ ಇದರಲ್ಲಿಯೂ ದಿನದಿನಕ್ಕೆ ನನಗೆ ಹೆಚ್ಚು ಹೆಚ್ಚಾಗಿ ಸ್ಪಷ್ಟವಾಗುವುದು. ೧೯೨೦ರಲ್ಲಿ ಕಲ್ಕತ್ತ ಎ.ಐ.ಸಿ.ಸಿ. ಸಭೆಯಲ್ಲಿ ಅನುಮೋದಿತವಾದ ಪ್ರಸಿದ್ಧವಾದ ಅಸಹಕಾರ ನಿರ್ಣಯ, ಸಭೆಗೆ ೨೪ ಗಂಟೆಗಳ ಮುಂಚೆ ನನಗೆ ಹೊಳೆಯಿತು. ದಾಂಡೀ ಯಾತ್ರೆಯೂ ಸ್ವಲ್ಪ ಹೆಚ್ಚುಕಡಮೆ ಹಾಗೆಯೇ ಆಯಿತು. ಪ್ರಥಮ ಕಾನೂನುಭಂಗ ಚಳುವಳಿ—ಆಗ ಅದಕ್ಕೆ ಸತ್ಯಾಗ್ರಹವೆಂದು ಹೆಸರು—ಅದರ ತಳಹದಿ ಆಕಸ್ಮಿಕವಾಗಿ ಜೊಹಾನ್ಸ್‌ಬರ್ಗ್‌ನಲ್ಲಿ ೧೯೦೬ರಲ್ಲಿ ಅಂದಿನ ಏಷ್ಯಾ ವಿರೋಧ ಕಾನೂನಿಗೆ ಪ್ರತೀಕಾರವನ್ನು ಕಂಡುಹಿಡಿಯಲು ಸೇರಿದ್ದ ಭಾರತೀಯರ ಸಭೆಯಲ್ಲಿ ಯೋಜಿಸಲ್ಪಟ್ಟಿತು. ನಾನು ಯಾವ ಠರಾವನ್ನೂ ಮನಸ್ಸಿನಲ್ಲಿಟ್ಟುಕೊಳ್ಳದೆ ಆ ಸಭೆಗೆ ಹೋಗಿದ್ದೆ. ಸತ್ಯಾಗ್ರಹ—ಸಭೆಯಲ್ಲಿಯೇ ಹುಟ್ಟಿತು. ಆ ಸೃಷ್ಟಿ ಇನ್ನೂ ಬೆಳೆಯುತ್ತಲೇ ಇದೆ. ಆದರೆ ದೇವರು ನನಗೆ ಪೂರ್ಣ ಶಕ್ತಿಯನ್ನು ಕೊಟ್ಟಿದ್ದನೆಂದು ಭಾವಿಸೋಣ (ಹಾಗೆ ಅವನು ಎಂದಿಗೂ ಮಾಡುವುದಿಲ್ಲ), ನಾನು ಕೂಡಲೇ ಇಂಗ್ಲೀಷಿನವರಿಗೆ 'ಆಯುಧ ಕೆಳಗೆ ಬಿಸುಟು ನಿಮ್ಮ ಅಧೀನರನ್ನೆಲ್ಲ ಬಿಡುಗಡೆ ಮಾಡಿ, ಸಣ್ಣ ಇಂಗ್ಲೆಂಡಿನವರು (Little Islander) ಎಂದು ಕರೆಸಿಕೊಳ್ಳುವುದರಲ್ಲಿ ಹೆಮ್ಮೆಪಡಿ. ಜಗತ್ತಿನ ಎಲ್ಲ ಸರ್ವಾಧಿಕಾರಿಗಳನ್ನೂ, ತಮ್ಮ ಅತ್ಯಂತ ನೀಚತನವನ್ನು ತೋರಿಸಲು ಆಹ್ವಾನಿಸಿ' ಎನ್ನುತ್ತೇನೆ. ಆಗ ಇಂಗ್ಲೀಷರು ಎದುರಿಸದೆ ಸತ್ತು ಅಹಿಂಸೆಯ ಧೀರರೆಂದು ಇತಿಹಾಸಪ್ರಸಿದ್ಧರಾಗುತ್ತಾರೆ. ಇಂಗ್ಲೀಷರು ಹೀಗೆ ದೈವಿಕವಾಗಿ ಹುತಾತ್ಮರಾಗುವುದರಲ್ಲಿ ಸಹಭಾಗಿಗಳಾಗಲು ನಾನು ಭಾರತೀಯರನ್ನೂ ಆಹ್ವಾನಿಸುತ್ತೇನೆ. ತಮ್ಮ ದೇಹಗಳ ರಕ್ತಗಳ ಅಕ್ಷರಗಳಿಂದ—ತಮ್ಮ ಶತ್ರುಗಳ ರಕ್ತದಿಂದಲ್ಲ—ಬರೆದ ಬಿಡಿಸಲಾಗದ ಬಾಂಧವ್ಯ ಆಗುತ್ತದೆ ಅದು. ಆದರೆ ನನಗೆ ಅಂತಹ ಶಕ್ತಿ ಇಲ್ಲ. ಅಹಿಂಸೆ ನಿಧಾನವಾಗಿ ಬೆಳೆಯುವ ಗಿಡ. ಅದು ಕಣ್ಣಿಗೆ ಕಾಣದಂತೆ—ಆದರೆ ಖಂಡಿತವಾಗಿ ಬೆಳೆಯುತ್ತದೆ. ನನ್ನನ್ನು ತಪ್ಪು ತಿಳಿದುಕೊಳ್ಳುವ ಅಪಾಯ ಇದ್ದರೂ 'ಮೌನವಾದ ಅಂತರ್ವಾಣಿಯ' ಅಪ್ಪಣೆಯಂತೆ ನಾನು ನಡೆಯಬೇಕು.

(ಹರಿಜನ, ೩೦–೯–೧೯೩೯)

# ಪರೀಕ್ಷೆ

ವರ್ಕಿಂಗ್ ಕಮಿಟಿಯ ಸದಸ್ಯರೊಂದಿಗೆ ಸಂಭಾಷಣೆಯಲ್ಲಿ, ನಾನು ಒಂದು ವಿಷಯವನ್ನು ಕಂಡುಹಿಡಿದೆ. ಬ್ರಿಟಿಷ್ ಸರ್ಕಾರದೊಂದಿಗೆ ಆ ಅಸ್ತ್ರದಿಂದ ಹೋರಾಡುವುದರ ಆಚೆಗೆ ಅವರ ಅಹಿಂಸೆ ಹೋಗಿರಲಿಲ್ಲ. ಕಳೆದ ಇಪ್ಪತ್ತು ವರುಷಗಳಲ್ಲಿ ಜಗತ್ತಿನ ಅತ್ಯಂತ ಬಲಿಷ್ಠ ಸಾಮ್ರಾಜ್ಯದೊಂದಿಗೆ ಅಹಿಂಸಾಮಾರ್ಗದಲ್ಲಿ ಹೋರಾಡುವುದರ ಸಕಾರಣವಾದ ಫಲವನ್ನು ಅವರು ಗ್ರಹಿಸಿರುವರೆಂಬ ನಂಬಿಕೆಯನ್ನು ನಾನು ಆಸೆಯಿಂದ ಆಲಂಗಿಸಿಕೊಂಡಿದ್ದೆ. ಆದರೆ ಅಹಿಂಸೆಯಂತಹ ಮಹತ್ ಪ್ರಯೋಗಗಳಲ್ಲಿ ಕಲ್ಪನೆಯ ಪ್ರಶ್ನೆಗಳಿಗೆ ಸ್ಥಳವೇ ಇಲ್ಲ. ಸ್ವಾತಂತ್ರ್ಯ ನಿಜವಾಗಿ ದೊರೆತಮೇಲೆ, 'ಅಹಿಂಸೆಯಿಂದ ಈ ದೇಶವನ್ನು ರಕ್ಷಿಸಿಕೊಳ್ಳುವುದಕ್ಕಾಗುತ್ತದೆಯೇ ಎಂಬುದನ್ನು ನಾವು ಅರಿಯುತ್ತೇವೆ' ಎಂದು ನಾನೇ ಪ್ರಶ್ನೆಗಳಿಗೆ ಉತ್ತರ ಹೇಳುತ್ತೇನೆ. ಆದರೆ ಇಂದು ಪ್ರಶ್ನೆ ಇನ್ನೂ ಕಲ್ಪನೆಯಲ್ಲ. ಬ್ರಿಟಿಷರ ಕಡೆಯಿಂದ ಅನುಕೂಲವಾದ ಘೋಷಣೆ ಬರಲಿ ಬಿಡಲಿ, ಭಾರತದ ಮೇಲೆ ಆಕ್ರಮಣ ನಡೆದರೆ, ತನ್ನ ಕಾರ್ಯವಿಧಾನವನ್ನು ಕಾಂಗ್ರೆಸ್ ನಿರ್ಣಯಿಸಿಕೊಳ್ಳಬೇಕಾಗಿದೆ. ಯಾಕೆಂದರೆ ಸರಕಾರದೊಂದಿಗೆ ತೀರ್ಮಾನವಾಗದಿದ್ದರೂ, ಕಾಂಗ್ರೆಸ್ ತನ್ನ ನೀತಿಯನ್ನು ಘೋಷಿಸಿ, ಆಕ್ರಮಣಕಾರರ ಸೈನ್ಯವನ್ನು ತಾನು ಅಹಿಂಸಾಮಾರ್ಗದಿಂದ ಎದುರಿಸುವುದೇ ಅಥವಾ ಹಿಂಸಾಮಾರ್ಗದಿಂದ ಎದುರಿಸುವುದೇ ಎಂಬುದನ್ನು ಹೇಳಬೇಕಾಗಿದೆ.

ತಕ್ಕಮಟ್ಟಿಗೆ ಪೂರ್ಣವಾಗಿ ಚರ್ಚಿಸಿ ವರ್ಕಿಂಗ್ ಕಮಿಟಿಯ ಮನಸ್ಸನ್ನು ನಾನು ತಿಳಿದಿರುವುದರಲ್ಲಿ, ಕಾಂಗ್ರೆಸ್ಸಿಗರು ಸಶಸ್ತ್ರ ದಾಳಿಯನ್ನು ಅಹಿಂಸೆಯಿಂದ ಎದುರಿಸಲು ಸಿದ್ಧರಾಗಿಲ್ಲವೆಂಬುದು ವರ್ಕಿಂಗ್ ಕಮಿಟಿಯ ಅಭಿಪ್ರಾಯ.

ಇದು ನಿಜವಾಗಿ ದುಃಖಕರ. ಶತ್ರುವನ್ನು ಮನೆಯಿಂದ ಹೊರಕ್ಕೆ ಅಟ್ಟಲು ಉಪಯೋಗಿಸಿದ ಅಸ್ತ್ರ, ಹೊರಗೆ ಅವನನ್ನು ನಿಲ್ಲಿಸುವ ಅಸ್ತ್ರಕ್ಕೆ ಸರಿಸಮವಾಗಿರಬೇಕು. ಅಷ್ಟೇ ಅಲ್ಲ. ಹೊರಗಿರುವವನನ್ನು ಅಲ್ಲಿಯೇ ನಿಲ್ಲಿಸುವುದು ಇನ್ನೂ ಹೆಚ್ಚು ಸುಲಭವಾಗಬೇಕು. ಆದರೆ ವಿಷಯ ಇರುವುದು ಹೀಗೆ: ನಮ್ಮ ಹೋರಾಟ ಶೂರರ ಅಹಿಂಸೆಯಾಗಿಲ್ಲ. ಅದು ನಿರ್ಬಲರ

ಸತ್ಯಾಗ್ರಹವಾಗಿದೆ. ಆದುದರಿಂದ ಈ ಮಹತ್ ಸಂದರ್ಭದಲ್ಲಿ ಅಹಿಂಸೆಯ ಯೋಗ್ಯತೆಯಲ್ಲಿ ಅವರ ನಂಬಿಕೆ ಸ್ವಾಭಾವಿಕವಾಗಿ ಅವರ ಹೃದಯಗಳಲ್ಲಿ ಉಂಟಾಗುತ್ತಿಲ್ಲ. ಆದುದರಿಂದ ವರ್ಕಿಂಗ್ ಕಮಿಟಿ ವಿವೇಕವಾಗಿ, 'ಅನಿವಾರ್ಯವಾದ ಮುಂದಿನ ಹೆಜ್ಜೆಗೆ ನಾವು ಸಿದ್ಧರಿಲ್ಲ' ಎಂದರು. ದುಃಖಕರವಾದ ಸಂಗತಿ ಏನೆಂದರೆ, ಭಾರತವನ್ನು ಆಯುಧಗಳಿಂದ ರಕ್ಷಿಸುವುದು ಆವಶ್ಯಕವೆಂದು ನಂಬುವವರ ಜತೆ ಕಾಂಗ್ರೆಸ್ ಸೇರುವುದಾದರೆ, ಕಳೆದ ಇಪ್ಪತ್ತು ವರುಷಗಳಿಂದ ಕಾಂಗ್ರೆಸ್ ಸಶಸ್ತ್ರ ಯುದ್ಧತಯಾರಿಯನ್ನು ಮುಖ್ಯವಾಗಿ ಮಾಡದೆ ಕರ್ತವ್ಯಬಾಹಿರವಾದಂತೆ ಆಗುತ್ತದೆ. ಹೋರಾಟದ ಸೇನಾನಿಯಾದ ನನ್ನನ್ನು ಈ ದುಃಖಪರಿಸ್ಥಿತಿಗೆ ಜವಾಬ್ದಾರನನ್ನಾಗಿ ಇತಿಹಾಸವು ಹಿಡಿಯುವುದೆಂದು ನನ್ನ ಭಯ. ರಾಷ್ಟ್ರವು ಕಲಿಯುತ್ತಿದ್ದುದು ಶಕ್ತರ ಅಹಿಂಸೆಯಲ್ಲ, ದುರ್ಬಲರ ಸಹಿಷ್ಣುತೆ ಎಂಬುದನ್ನು ನಾನು ಅರಿಯಬೇಕಾಗಿತ್ತೆಂದೂ, ಆದುದರಿಂದ ನಾನು ಕಾಂಗ್ರೆಸ್ಸಿನವರಿಗೆ ಸೈನಿಕ ತರಬೇತಿಯನ್ನು ಕೊಡಲು ಅಣಿಮಾಡಬೇಕಾಗಿತ್ತು ಎಂದೂ, ಭವಿಷ್ಯ ಇತಿಹಾಸಕಾರ ಹೇಳುವನು.

ಭಾರತವು ಹೇಗಾದರೂ ನಿಜವಾದ ಅಹಿಂಸೆಯನ್ನು ಕಲಿಯುವುದೆಂಬ ಭ್ರಾಂತನಂಬಿಕೆಯಿಂದ, ನನ್ನ ಸಹೋದ್ಯೋಗಿಗಳಿಗೆ, ಶಸ್ತ್ರಗಳಿಂದ ದೇಶವನ್ನು ರಕ್ಷಿಸಲು ಸಿದ್ಧತೆ ಮಾಡಿಕೊಳ್ಳಿ ಎಂದು ಹೇಳಲು ನನಗೆ ಹೊಳೆಯಲಿಲ್ಲ. ಅದಕ್ಕೆ ಬದಲಾಗಿ ಕತ್ತಿವರಸೆ, ಬಲವಾದ ದೊಣ್ಣೆವರಸೆ ಇವುಗಳ ಪ್ರದರ್ಶನಗಳನ್ನು ನಾನು ಪ್ರೋತ್ಸಾಹಿಸುತ್ತಿರಲಿಲ್ಲ. ಹಿಂದೆ ಹಾಗೆ ನಡೆದುದಕ್ಕೆ ನನಗೆ ಈಗಲೂ ಪಶ್ಚಾತ್ತಾಪವಿಲ್ಲ. ಜಗತ್ತಿನ ಎಲ್ಲ ರಾಷ್ಟ್ರಗಳ ಪೈಕಿ ಅಹಿಂಸೆಯ ಕಲೆಯನ್ನು ಕಲಿಯಬಲ್ಲ ರಾಷ್ಟ್ರ ಭಾರತ ಒಂದೇ. ಈಗಲೂ ಪರೀಕ್ಷೆಗೆ ಗುರಿಪಡಿಸಿದರೆ, ತಮ್ಮ ಹಿಂಸಕರನ್ನು ದ್ವೇಷಿಸದೆ ಸಾಯಲು ಸಿದ್ಧರಾಗಿರುವ ಸಹಸ್ರಾರು ಮಂದಿ ಸ್ತ್ರೀಪುರುಷರು ಇಲ್ಲಿ ದೊರೆಯುವರು ಎಂಬುದು ನನ್ನ ದೃಢವಾದ ನಂಬಿಕೆ. ನಾನು ಜನಸಮೂಹಕ್ಕೆ ಬೋಧಿಸಿದೇನೆ. ಅವರು ಬಹಳ ಕಷ್ಟವನ್ನೂ ಕೊನೆಗೆ ಬಂದೂಕದ ಹೊಡೆತವನ್ನೂ ಅನುಭವಿಸಬೇಕಾಗಬಹುದೆಂದು ಪದೇ ಪದೇ ಹೇಳಿದೇನೆ. ಉಪ್ಪಿನ ಸತ್ಯಾಗ್ರಹದಲ್ಲಿ ಸಹಸ್ರಾರು ಸ್ತ್ರೀಪುರುಷರು, ಯುದ್ಧಭೂಮಿಯಲ್ಲಿ ಯೋಧರು ಅನುಭವಿಸುವಷ್ಟೇ ಕಷ್ಟಗಳನ್ನು ಅನುಭವಿಸಲಿಲ್ಲವೆ? ಭಾರತವು ಆಕ್ರಮಣಕಾರರನ್ನು ಎದುರಿಸ

ಬೇಕಾದರೆ, ಈವರೆಗೆ ಪ್ರಕಟವಾಗಿರುವುದಕ್ಕಿಂತ ಬೇರೆ ಶಕ್ತಿ ಆವಶ್ಯಕವಿಲ್ಲ. ಅದು ಇನ್ನೂ ಅನೇಕ ಪಾಲು ವಿಶಾಲವಾಗಬೇಕಾಗುವುದು, ಅಷ್ಟೆ.

ಒಂದು ವಿಷಯವನ್ನು ಮರೆಯಬಾರದು. ನಿಶ್ಶಸ್ತ್ರ ಭಾರತವನ್ನು ನಾಶ ಮಾಡಲು ವಿಷವಾಯುವಾಗಲೀ ಬಾಂಬಿನ ದಾಳಿಯಾಗಲೀ ಆವಶ್ಯಕವಿಲ್ಲ. 'ಮಾಗಿನಾಟ್ ಲೈನ್' ಇರುವುದರಿಂದ 'ಸಿಗ್‌ಫ್ರಿಡ್ ಲೈನ್'ಗೆ ಆವಶ್ಯಕತೆ ಯುಂಟಾಗಿದೆ; ಅಥವಾ ಸಿಗ್‌ಫ್ರಿಡ್ ಇರುವುದರಿಂದ ಮಾಗಿನಾಟ್. ಇಂದಿನ ಮಾರ್ಗದಿಂದ ಭಾರತವನ್ನು ರಕ್ಷಿಸಬೇಕಾದ ಆವಶ್ಯಕತೆಯುಂಟಾಗಿರುವುದು ಭಾರತ ಇಂಗ್ಲೆಂಡಿನ ಅಂಗವಾಗಿರುವುದರಿಂದ. ಭಾರತೀಯರು ಖಂಡಿತವಾಗಿ 'ಬೇಡ' ಎಂದು ಹೇಳಿ, ಅದರಂತೆ ನಡೆಯುವುದನ್ನು ಕಲಿತರೆ ಅದನ್ನು ಮುಟ್ಟುವ ಧೈರ್ಯ ಯಾರಿಗೂ ಇರುವುದಿಲ್ಲವೆಂದು ನಾನು ಧೈರ್ಯವಾಗಿ ಹೇಳಬಲ್ಲೆ. ನಮ್ಮ ಆರ್ಥಿಕವ್ಯವಸ್ಥೆ, ಆಕ್ರಮಣಕಾರನನ್ನು ಆಕರ್ಷಿಸದ ರೀತಿಯಲ್ಲಿ ಯೋಜಿತವಾಗುವುದು.

ಆದರೆ ಕೆಲವು ಕಾಂಗ್ರೆಸ್ಸಿಗರು ಹೀಗೆ ಹೇಳುತ್ತಾರೆ: 'ಬ್ರಿಟಿಷರದಿರಲಿ; ಭಾರತದಲ್ಲಿ ಅನೇಕ ಯೋಧಜನಾಂಗಗಳಿವೆ. ಅವರೆಲ್ಲ ತಮ್ಮ ನಾಡು ಆದ ಭಾರತದ ರಕ್ಷಣೆಗಾಗಿ ಹೋರಾಡಲು ಬಯಸುವರು' ಇದು ಪೂರ್ಣವಾಗಿ ನಿಜ. ನಾನು ಈಗ ಮಾತನಾಡುತ್ತಿರುವುದು ಬರಿಯ ಕಾಂಗ್ರೆಸ್‌ನವರ ವಿಚಾರದಲ್ಲಿ. ಆಕ್ರಮಣ ನಡೆದ ಸಂಭವದಲ್ಲಿ ಅವರು ಹೇಗೆ ನಡೆಯುತ್ತಾರೆ? ನಾವು ನಮ್ಮ ಅಹಿಂಸೆಗಾಗಿ ಸಾಯಲು ಸಿದ್ಧರಾಗಿಲ್ಲದಿದ್ದಲ್ಲಿ, ಅಖಿಲ ಭಾರತವನ್ನೂ ಎಂದಿಗೂ ನಮ್ಮ ಧರ್ಮಕ್ಕೆ ಒಲಿಸಿಕೊಳ್ಳಲಾರೆವು.

ಇದಕ್ಕೆ ಎದುರಾದ ಮಾರ್ಗ ನನಗೆ ಒಪ್ಪಿಗೆ. ಈಗಲೇ ಸೈನ್ಯದ ಬಹು ಭಾಗ ಉತ್ತರದ ಮುಸಲ್ಮಾನರು, ಸೀಖರು ಮತ್ತು ಗೂರ್ಖ ಯೋಧರಿಂದ ತುಂಬಿದೆ. ದಕ್ಷಿಣದ ಜನರೂ ಕೇಂದ್ರ ಸರ್ಕಾರವೂ ಶಸ್ತ್ರಸಜ್ಜಿತರಾಗಲು ನಿಶ್ಚಯಿಸಿದರೆ, ಅವರ ಪ್ರತಿನಿಧಿ ಎನಿಸಿಕೊಳ್ಳುವ ಕಾಂಗ್ರೆಸ್ಸು, ಮೊದಲನೆಯವ ರೊಂದಿಗೆ ಸ್ಪರ್ಧೆಗೆ ನಿಲ್ಲಬೇಕಾಗುವುದು. ಆಗ ಕಾಂಗ್ರೆಸ್ ಯುದ್ಧಕ್ಕಾಗಿ ಅಧಿಕ ಹಣ ವೆಚ್ಚಮಾಡುವ ಆಯವ್ಯಯದಲ್ಲಿ ಭಾಗಿಯಾಗಬೇಕಾಗುವುದು. ಕಾಂಗ್ರೆಸ್ಸಿನ ಅನುಮತಿಯೇ ಇಲ್ಲದೆ ಇವೆಲ್ಲ ನಡೆಯಬಹುದು. ಕಾಂಗ್ರೆಸ್

ಇದರಲ್ಲಿ ಭಾಗಿಯೇ ಇಲ್ಲವೇ ಎಂಬುದು ಜಗತ್ತಿಗೆ ಮುಖ್ಯ ವಿಷಯ. ಜಗತ್ತು ಭಾರತದಿಂದ ಹೊಸದು, ಅದ್ವಿತೀಯವಾದುದು ಏನನ್ನೋ ನಿರೀಕ್ಷಿಸುತ್ತಿದೆ. ಜಗತ್ತು ಇಂದು ಧರಿಸಿರುವ ಅದೇ ಹಳೆಯ ಸವೆದ ಆಯುಧಗಳನ್ನು ಕಾಂಗ್ರೆಸ್ ಧರಿಸಿದರೆ, ಕಾಂಗ್ರೆಸ್ ಹತ್ತುರ ಜತೆ ಹನ್ನೊಂದು ಆಗುವುದು. ಕಾಂಗ್ರೆಸ್ಸಿಗೆ ಕೀರ್ತಿ ಬಂದಿರುವುದು ಅದು ಅಹಿಂಸೆಯನ್ನು ಅತ್ಯುತ್ತಮವಾದ ರಾಜಕೀಯ ಆಯುಧವಾಗಿ ಪ್ರತಿನಿಧಿಸಿರುವುದರಿಂದ. ಕಾಂಗ್ರೆಸ್ ಮಿತ್ರರಿಗೆ ಅಹಿಂಸೆಯ ಪ್ರತಿನಿಧಿಯಾಗಿ ಸಹಾಯಕವಾದರೆ, ಅದರಿಂದ ಯುದ್ಧದ ಅಂತ್ಯ ಅದೃಷ್ಟವನ್ನು ನಿರ್ಣಯಿಸುವುದರಲ್ಲಿ ಅಮೂಲ್ಯವಾದ ಶಕ್ತಿಯೂ ಪ್ರತಿಷ್ಠೆಯೂ ಮಿತ್ರರಿಗೆ ಉಂಟಾಗುವುದು. ಆದರೆ ವರ್ಕಿಂಗ್ ಕಮಿಟಿಯ ಸದಸ್ಯರು, ಪ್ರಾಮಾಣಿಕರಾಗಿ ಧೈರ್ಯದಿಂದ ನಡೆದಿದಾರೆ. ಅಂತಹ ಅಹಿಂಸೆ ತಮ್ಮದೆಂದು ಹೇಳಿಕೊಂಡಿಲ್ಲ.

ಆದುದರಿಂದ ನನ್ನ ಪರಿಸ್ಥಿತಿ ನನ್ನ ಮಟ್ಟಿಗೆ. ನಿರ್ಜನ ಮಾರ್ಗದಲ್ಲಿ ನನ್ನ ಸಹಪ್ರವಾಸಿ ಯಾರಾದರೂ ಇದಾರೆಯೇ ಎಂದು ನಾನು ಕಂಡುಹಿಡಿಯಬೇಕಾಗಿದೆ. ನಾನು ಒಬ್ಬನೇ ಆದರೆ, ಇತರರನ್ನು ನನ್ನ ಮಾರ್ಗಕ್ಕೆ ಒಲಿಸಿಕೊಳ್ಳಬೇಕು. ಒಬ್ಬನೇ ಆಗಲಿ ಅನೇಕರು ಆಗಲಿ, ಭಾರತದ ಗಡಿಯನ್ನು ರಕ್ಷಿಸುವುದಕ್ಕೆ ಸಹ ಭಾರತ ಹಿಂಸೆಯನ್ನು ಪೂರ್ಣವಾಗಿ ತ್ಯಜಿಸಬೇಕೆಂಬ ನನ್ನ ನಂಬಿಕೆಯನ್ನು ನಾನು ವ್ಯಕ್ತಪಡಿಸಬೇಕು. ಆಯುಧಗಳ ಪೈಪೋಟಿಗೆ ಸೇರುವುದು ಭಾರತ ಆತ್ಮಹತ್ಯವನ್ನು ಸ್ವಾಗತಿಸಿಕೊಂಡಂತೆ. ಭಾರತ ಅಹಿಂಸೆಯನ್ನು ತ್ಯಜಿಸುವುದು ಎಂದರೆ ಜಗತ್ತಿನ ಉದ್ಧಾರದ ಕೊನೆಯ ನಂಬಿಕೆ ನಾಶವಾದಂತೆ. ನನ್ನಮಟ್ಟಿಗೆ, ಕಳೆದ ಐವತ್ತು ವರುಷಗಳಿಂದ ಹೇಳಿಕೊಳ್ಳುತ್ತ ಬಂದಿರುವ ಧರ್ಮವನ್ನು ಅನುಸರಿಸುತ್ತಾ, ಯಾವ ಪಶುತ್ವದಿಂದ ಮನುಷ್ಯ ಮೇಲಕ್ಕೆ ಏರಿದಾನೆಯೋ, ಅದಕ್ಕೇ ಮತ್ತೆ ಹಿಂದಿರುಗದಂತೆ, ಭಾರತವು ಅಹಿಂಸೆಯನ್ನು ತನ್ನ ಧರ್ಮವಾಗಿ ಮಾಡಿಕೊಂಡು ಮಾನವನ ಘನತೆಯನ್ನು ಉಳಿಸುವುದೆಂಬ ನಂಬಿಕೆಯಿಂದ ಕೊನೆಯವರೆಗೆ ಬಾಳಬೇಕು.

## ಪರೀಕ್ಷಾಸಮಯ

ಭಾರತ ಶಸ್ತ್ರಗಳ ಅಂಗೀಕಾರ ತತ್ತ್ವವನ್ನು ಅನುಸರಿಸಿದರೆ, ಅದಕ್ಕೆ ತಾತ್ಕಾಲಿಕ ಜಯವೇನೋ ಉಂಟಾಗಬಹುದು. ಆಗ ಭಾರತ ನನ್ನ ಹೃದಯದ ಹೆಮ್ಮೆಯಾಗಿರದು. ನನ್ನ ಸರ್ವಸ್ವಕ್ಕೂ ನಾನು ಭಾರತಕ್ಕೆ ಋಣಿಯಾಗಿರುವುದರಿಂದ ಅದರೊಂದಿಗೆ ನನ್ನ ಸಂಬಂಧ ಅವಿಭಾಜ್ಯ. ಭಾರತ ಜಗತ್ತಿಗೆ ಕೊಡುವ ಕೊಡುಗೆ ಇದೆ ಎಂಬುದು ನನ್ನ ನಿಶ್ಚಲ, ಪೂರ್ಣ ನಂಬಿಕೆ. ಅದು ಕಣ್ಣು ಮುಚ್ಚಿಕೊಂಡು ಯೂರೋಪನ್ನು ಅನುಕರಿಸಬಾರದು. ಭಾರತ ಶಸ್ತ್ರಗಳನ್ನು ಅಂಗೀಕಾರ ಮಾಡಿದಾಗ ನನ್ನ ಪರೀಕ್ಷೆಯಾಗುವುದು. ನಾನು ತೇರ್ಗಡೆಯಾಗುವೆನೆಂದು ಭಾವಿಸುತ್ತೇನೆ. ನನ್ನ ಧರ್ಮಕ್ಕೆ ಭೌಗೋಲಿಕ ಗಡಿಗಳಿಲ್ಲ. ನನಗೆ ಅದರಲ್ಲಿ ಸಜೀವವಾದ ನಂಬಿಕೆಯಿದ್ದರೆ, ನನ್ನ ಭಾರತಪ್ರೇಮವನ್ನೂ ಸಹ ಅದು ಮೀರಿ ನಿಲ್ಲುವುದು. ನನ್ನ ಬಾಳು—ಅಹಿಂಸಾಧರ್ಮದ ಮೂಲಕ ಭಾರತಸೇವೆಗೆ ಅರ್ಪಿತವಾಗಿದೆ. ಅಹಿಂಸೆ ಹಿಂದೂಧರ್ಮದ ತಳಹದಿ ಎಂದು ನನ್ನ ನಂಬಿಕೆ.

ಅಹಿಂಸಾಧರ್ಮ ಬರಿಯ ಋಷಿಗಳಿಗೂ ಸಂತರಿಗೂ ಮಾತ್ರವೇ ಎಂದೂ ಅಲ್ಲ; ಅದು ಸಾಮಾನ್ಯರಿಗೂ ಸಹ.

## ವರ್ಕಿಂಗ್ ಕಮಿಟಿಯ ಜತೆಯಲ್ಲಿ

ಮೇಲಿನ ವಾಕ್ಯಗಳನ್ನು ಗಾಂಧೀಜೀ ೧೯೨೦ರಲ್ಲಿ ಬರೆದ ಒಂದು ಲೇಖನದಿಂದ ಉದ್ಧರಿಸಿದೇನೆ. ಆದರೆ ಅವು ಇವತ್ತು ಹೇಳಿದ ಮಾತುಗಳಂತೆ ಇವೆ. ಭಾರತ ಜಗತ್ತಿಗೆ ಅರ್ಪಿಸುವ ವಿಶಿಷ್ಟವಾದ ಕೊಡುಗೆ ಅಹಿಂಸೆ—ಎಂಬ ಸಜೀವವಾದ ನಂಬಿಕೆಯಿಂದ ಗಾಂಧೀಜೀ ನಮ್ಮ ಹಡಗನ್ನು ಬಿರುಗಾಳಿಯಲ್ಲಿಯೂ ಅನುಕೂಲ ವಾತಾವರಣದಲ್ಲಿಯೂ ನಡೆಸಲು ಪ್ರಯತ್ನಿಸಿದಾರೆ. ಅನೇಕ ವೇಳೆ ಅಂತರಿಕ್ಷ ತುಂತುರುಗಳೊಡನೆ ಅಂಧಕಾರಮಯವಾಗಿದೆ. ಆದರೆ ನಕ್ಷತ್ರ ಎಂದೂ ನಮ್ಮ ಕಣ್ಮರೆಯಾಗಿಲ್ಲ. ಪ್ರಕೃತದ ಬಿರುಗಾಳಿ ನಕ್ಷತ್ರವನ್ನು ನಮ್ಮ ಕಣ್ಮರೆಯಾಗಿಸಲು ಬೆದರಿಸುತ್ತಿದೆ. ಆದರೆ ನಮ್ಮ ಸಾರಥಿ, ಪ್ರಯಾಣದ ಕೊನೆಯನ್ನು ಮುಟ್ಟಿಸಬಲ್ಲ ಒಂದೇ ಮಾರ್ಗದರ್ಶಕವಾದ ನಕ್ಷತ್ರ ನಮ್ಮ

ಕಣ್ಣಿನಿಂದ ಮರೆಯಾಗದಂತೆ, ಹಗಲು-ರಾತ್ರಿ ಎಚ್ಚರಿಸುವುದನ್ನೇ ತಮ್ಮ ಕಾರ್ಯವಾಗಿ ಮಾಡಿಕೊಂಡಿದಾರೆ.

ಆದುದರಿಂದ ವರ್ಕಿಂಗ್ ಕಮಿಟಿಯ ಸಭೆಯ ಕೊನೆಯಲ್ಲಿ ಸದಸ್ಯರಿಗೆ ಹೀಗೆ ಹೇಳಿದರು: 'ಈ ಪ್ರಶ್ನೆಯನ್ನು ಮತ್ತೆ ಯೋಚಿಸಿ; ಕಾಂಗ್ರೆಸ್ಸೂ, ಕಾಂಗ್ರೆಸ್ಸಿಗರೂ ಏನು ಮಾಡಬೇಕೆಂಬುದನ್ನು ಕೊನೆಯದಾಗಿ ನಿರ್ಣಯಿಸಿ; ಸರ್ಕಾರಕ್ಕೂ ನಮಗೂ ಇರುವ ಸಂಬಂಧದ ಮೇಲೆ ಮಾತ್ರವಲ್ಲ, ಜಾತಿ ಜಾತಿಗಳ ಸಂಬಂಧದ ಮೇಲೂ ಇದರ ಪರಿಣಾಮವುಂಟಾಗುತ್ತದೆ.'

ಗಾಂಧೀಜಿಯವರ ಸೂಚನೆ ಅನೇಕ ಗಂಟೆಗಳು ಚರ್ಚಿಸಲ್ಪಟ್ಟಿತು. ಆದರೆ ಯಾವ ತೀರ್ಮಾನವೂ ಸಾಧ್ಯವಾಗಲಿಲ್ಲ. ವರ್ಕಿಂಗ್ ಕಮಿಟಿಯ ಮುಂದಿನ ಸಭೆಯಲ್ಲಿ ಪ್ರಶ್ನೆ ಮತ್ತೆ ಏಳುತ್ತದೆ. ಆಗ ಅಂತ್ಯ ನಿರ್ಣಯ ತೆಗೆದುಕೊಳ್ಳಲ್ಪಡುತ್ತದೆ. ಈ ನಡುವೆ ಸದಸ್ಯರಿಗೆ ವಿಷಯವನ್ನು ಕುರಿತು ಯೋಚಿಸಲು ತಕ್ಕಷ್ಟು ಕಾಲ ದೊರೆಯುವುದು.

## ಗಾಂಧೀ ಸೇವಾ ಸಂಘದ ಜತೆ

ಈ ಪ್ರಶ್ನೆ ಗಾಂಧೀಜಿಯ ಕಾಲವನ್ನೆಲ್ಲ ತೆಗೆದುಕೊಳ್ಳುತ್ತಿದೆ. ಈ ಯೋಚನೆಯಿಂದ ಅವರು ಪೂರ್ವಭಾವಿಯಾಗಿ ನಿಶ್ಚಯವಾಗಿದ್ದ ಜನರನ್ನು ನೋಡುವುದರ ಹೊರತು, ನಿರಂತರ ಮೌನದಲ್ಲಿದ್ದಾರೆ. ಅನೇಕ ವೇಳೆ ಇದನ್ನೇ ಯೋಚಿಸುತ್ತಾ ಬೆಳಗಿನ ಜಾವ ಎಚ್ಚರಗೊಳ್ಳುತ್ತಾರೆ. ಇಪ್ಪತ್ತೈದನೆಯ ತಾರೀಖು ಅಪರಾಹ್ನದಲ್ಲಿ ನಡೆಯುವ ಸಭೆಯಲ್ಲಿ ಗಾಂಧೀ ಸೇವಾ ಸಂಘದ ಕಾರ್ಯಕಾರಿ ಸದಸ್ಯರಿಗೆ ಏನು ಹೇಳಬೇಕೆಂದು ಯೋಚಿಸುತ್ತಾ ರಾತ್ರಿ ಒಂದು ಗಂಟೆಗೆ ಎಚ್ಚರಗೊಂಡರು. ಅವರಿಗೆ ಗಾಂಧೀಜೀ ಹೀಗೆ ಹೇಳಿದರು:

'ಸಮಸ್ಯೆ ಒಂದೇ ಸಮನೆ ನನ್ನನ್ನು ಬೇಟೆಯಾಡುತ್ತಿದೆ. ಅದರಿಂದ ನನಗೆ ವಿಶ್ರಾಂತಿ ಇಲ್ಲ. ವರ್ಕಿಂಗ್ ಕಮಿಟಿಯ ಕಿರಿಯ ಸದಸ್ಯರ ಸ್ಥಿತಿಯನ್ನು ನಾನು 'ಹರಿಜನ' ಪತ್ರಿಕೆಯಲ್ಲಿ ವಿವರಿಸಿದೇನೆ. ಅವರದು ಕಠಿಣ ಸ್ಥಿತಿ. ಒಂದೆಡೆ ಧ್ಯೇಯ, ಮತ್ತೊಂದೆಡೆ ಸಹೋದ್ಯೋಗಿಗಳೊಂದಿಗೆ ಒಮ್ಮತ ಈ ಎರಡೂ ಅವರ ಮನಸ್ಸನ್ನು ತುಯ್ದಾಡುತ್ತಿತ್ತು. ಆದರೆ ತಮ್ಮ ನಿಲುವನ್ನು

ನನಗೆ ಸ್ಪಷ್ಟಪಡಿಸುವ ಅವರ ಆತುರ ಸ್ವಾಗತಾರ್ಹವಾಗಿತ್ತು. ನಾವೆಲ್ಲ ಸತ್ಯದ ಭಕ್ತರೆಂಬುದನ್ನೂ, ನಮ್ಮ ಮನಸ್ಸಿನ ಹೋರಾಟ-ತುಯ್ದಾಟಗಳೂ ಸಹ ಸತ್ಯಕ್ಕೆ ಪ್ರಾಮಾಣಿಕರಾಗಿರಬೇಕೆಂಬ ನಮ್ಮ ಕಾತರತೆಯನ್ನೂ ಇದು ಸ್ಪಷ್ಟ ಪಡಿಸುತ್ತದೆ. ನಿನ್ನೆ ವರ್ಕಿಂಗ್ ಕಮಿಟಿಯಲ್ಲಿ ಸೊಗಸಾದ ಚರ್ಚೆ ಆಯಿತು. ಕಾಂಗ್ರೆಸ್ಸಿನ ಮತ್ತು ಜನತೆಯ ಪ್ರತಿನಿಧಿಗಳಾಗಿ ವರ್ಕಿಂಗ್ ಕಮಿಟಿ ಸದಸ್ಯರ ಸ್ಥಿತಿಯೇನು ಎಂಬುದನ್ನು ನಾವು ಆಮೂಲಾಗ್ರವಾಗಿ ಚರ್ಚಿಸಿದೆವು. ನಿಮಗೆ ಸೇರಿದಂತೆ ಪ್ರಶ್ನೆ ಬೇರೆ. ಯಾಕೆಂದರೆ ನೀವು ಇಲ್ಲಿ ನಿಮ್ಮ ಜವಾಬ್ದಾರಿಯ ಮೇಲೆ ಇದೀರಿ. ಕಾಂಗ್ರೆಸ್ ಅಥವಾ ಕಾಂಗ್ರೆಸ್ಸಿಗರು ಹೇಗೆ ಬೇಕಾದರೂ ಯೋಚಿಸಲಿ, ನಿಮ್ಮ ನಡತೆಯನ್ನು ನೀವು ನಿರ್ಣಯಿಸಬೇಕಾಗಿದೆ. ಹೀಗೆ ನಿಮ್ಮ ಮಟ್ಟಿಗೆ ಪ್ರಶ್ನೆ ಸುಲಭತರ. ನಿಮ್ಮ ಪ್ರೀತಿಪಾತ್ರರಾದವರಿಗೆ ದುಃಖ ವನ್ನೂ ಕೇಡನ್ನೂ ಉಂಟುಮಾಡಿದವರ ವಿಷಯದಲ್ಲಿಯೂ ಸಹ ನೀವು ಭ್ರಾತೃ ಭಾವನೆಯನ್ನು ತಳೆಯುವಿರಾ? ರಾಜೇಂದ್ರಬಾಬುಗಳ ಮೇಲೆ ಯಾರಾದರೂ ಕೈಮಾಡಿದರೆ ನೀವು ಪ್ರತೀಕಾರ ಮಾಡುವಿರಾ ಅಥವಾ ಆಕ್ರಮಣಕಾರಿಗೂ ರಾಜೇಂದ್ರಬಾಬುವಿಗೂ ನಡುವೆ ನಿಂತು, ರಾಜೇಂದ್ರಬಾಬುವಿಗೆ ಬೀಳಬೇಕಾದ ಹೊಡೆತಗಳನ್ನು ನೀವು ನಗುನಗುತ್ತಾ ಸ್ವೀಕರಿಸುವಿರಾ? ನೀವು ಸಂಸಾರದ ಬಂಧನಗಳನ್ನೆಲ್ಲ ಹರಿದೊಗೆದು, ದೇಹಕ್ಕೆ ಪೆಟ್ಟು ಮತ್ತು ಮರಣದ ಭಯವನ್ನೂ ಬಿಟ್ಟಿದ್ದರೆ, ಎರಡನೆಯದನ್ನು ಮಾಡುವಿರಿ. ದ್ವೇಷದಿಂದ ನಿಮ್ಮ ಮೇಲೆ ಬೀಳು ವವರಲ್ಲಿ ನಿಮಗೆ ಸಹೋದರಭಾವದ ಹೊರತು ಮತ್ತೇನೂ ಇರಕೂಡದು. ಹಾಗೆ ಇಲ್ಲದಿದ್ದಲ್ಲಿ, ಏನು ಸಂಭವಿಸಿದರೂ ಅಹಿಂಸೆಯನ್ನೇ ಅನುಸರಿಸುವೆವೆಂಬ ನಿಮ್ಮ ನಿರ್ಣಯಕ್ಕೆ ಅರ್ಥವಿರುವುದಿಲ್ಲ. ಬರಿಯ ತೀರ್ಮಾನವನ್ನು ಮಾತ್ರ ಮಾಡುವುದಕ್ಕಿಂತ ಸಂಘವನ್ನು ಮುಚ್ಚಿಬಿಡುವುದು ಎಷ್ಟೋ ಉತ್ತಮ.

'ಅಹಿಂಸೆ ಋಷಿಗಳಿಗೂ ಗುಹನಿವಾಸಿಗಳಿಗೂ ಮಾತ್ರ ಸಂಬಂಧಿಸಿದ ಏಕಾಂತ ಸದ್ಗುಣವಲ್ಲ. ಅದನ್ನು ಕೋಟ್ಯಂತರ ಜನ ಅಭ್ಯಸಿಸುವುದು ಸಾಧ್ಯ. ಅವರು ಅದರ ಅರ್ಥವನ್ನು ಪೂರ್ಣವಾಗಿ ಅರಿಯುತ್ತಾರೆ ಎಂದಲ್ಲ. ಆದರೆ ಅದು ನಮ್ಮ (ಮಾನವಕುಲದ) ಧರ್ಮ. ಮನುಷ್ಯನನ್ನು ಪ್ರಾಣಿ ಗಳಿಂದ ಬೇರೆಯಾಗಿಸುವುದು ಅದು. ಆದರೆ ಮನುಷ್ಯ ತನ್ನಲ್ಲಿರುವ ಪಶುತ್ವ ವನ್ನು ಇನ್ನೂ ತ್ಯಜಿಸಿಲ್ಲ. ಹಾಗೆ ಮಾಡಲು ಪ್ರಯತ್ನಿಸುತ್ತಿದಾನೆ. ಈ

ಪ್ರಯತ್ನ ಅಹಿಂಸೆಯ ಆಚರಣೆಗೆ—ಅದರಲ್ಲಿ ನಂಬಿಕೆಗೆ ಅಲ್ಲ—ಅನ್ವಯಿಸು ತ್ತದೆ. ಒಂದು ತತ್ತ್ವದಲ್ಲಿ ನಂಬಿಕೆಯಿಡಲು ನಾನು ಪ್ರಯತ್ನಿಸುವುದು ಸಾಧ್ಯವಿಲ್ಲ. ಅದನ್ನು ನಂಬುತ್ತೇನೆ; ಅಥವಾ ಇಲ್ಲ. ನಂಬಿದರೆ ಅದನ್ನು ಆಚರಿಸಲು ಧೈರ್ಯದಿಂದ ಪ್ರಯತ್ನಿಸಬೇಕು. ಅಹಿಂಸೆ ಧೀರರ ಒಂದು ಲಕ್ಷಣ. ಹೇಡಿತನವೂ ಅಹಿಂಸೆಯೂ ಒಂದಾಗಿರಲಾರದು; ಬೆಂಕಿಯೂ ನೀರೂ ಹೇಗೋ ಹಾಗೆ. ಈ ಬಗೆಯ ಅಹಿಂಸೆಯನ್ನು ತನ್ನಲ್ಲಿ ಬೆಳೆಸಿಕೊಳ್ಳಲು ಗಾಂಧೀ ಸೇವಾಸಂಘದ ಪ್ರತಿಸದಸ್ಯರೂ ಹೃತ್ಪೂರ್ವಕ ಪ್ರಯತ್ನಮಾಡಬೇಕು.

'ಈ ಪ್ರಶ್ನೆಯ ಮೇಲೆ ನಾವು ಅನೇಕ ವೇಳೆ ಯೋಚಿಸಿಹೇವೆ. ಆದರೆ ಯುದ್ಧ–ಸ್ವರಾಜ್ಯ ಮತ್ತು ಹಿಂದೂ–ಮುಸ್ಲಿಂ ಐಕ್ಯ ಇವುಗಳಿಗೆ ಸಂಬಂಧಿಸಿ ದಂತೆ, ಪರೀಕ್ಷೆಯ ಸಮಯ ಈಗ ಬಂದಿದೆ. ಇದೂ ಜ್ಞಾಪಕವಿರಲಿ; ಚರಖಾ ದಲ್ಲಿ ನಿಮಗೆ ನಂಬಿಕೆಯಿಲ್ಲದಿದ್ದರೆ ನಿಮ್ಮ ಅಹಿಂಸೆ ಕಾರ್ಯಕಾರಿಯಾಗುವುದಿಲ್ಲ. ಹಿಂದ್ ಸ್ವರಾಜ್ಯವನ್ನು ನನ್ನ ಕಣ್ಣಿಂದ ಓದಿ; ಭಾರತವನ್ನು ಅಹಿಂಸಾಯುತ ವಾಗಿ ಮಾಡುವುದು ಹೇಗೆ ಎಂಬ ಅಧ್ಯಾಯವನ್ನು ಓದಿ ಎಂದು ಹೇಳುತ್ತೇನೆ. ಯಂತ್ರ ನಾಗರಿಕತೆಯ ಮೇಲೆ ಅಹಿಂಸೆಯನ್ನು ನಿರ್ಮಿಸಲು ಸಾಧ್ಯವಿಲ್ಲ. ಆದರೆ ಸ್ವಾವಲಂಬಿ ಹಳ್ಳಿಗಳ ಆಧಾರದ ಮೇಲೆ ಅದನ್ನು ಸ್ಥಾಪಿಸಬಹುದು. ಹಿಟ್ಲರನಿಗೆ ಇಷ್ಟವಿದ್ದರೂ ಸಹ ಏಳು ಲಕ್ಷ ಹಳ್ಳಿಗಳನ್ನು ಅವನು ನಾಶಮಾಡ ಲಾರ. ಆ ವ್ಯವಹಾರದಲ್ಲಿ ಅವನೇ ಅಹಿಂಸಾಯುತನಾಗುತ್ತಾನೆ. ನನ್ನ ಕಲ್ಪನೆಯ ಗ್ರಾಮಗಳ ಆರ್ಥಿಕವ್ಯವಸ್ಥೆ, ಹಿಂಸೆಯನ್ನು ಪೂರ್ಣ ಬಹಿಷ್ಕರಿ ಸುತ್ತದೆ. ಇತರರಿಂದ ದುಡಿಸಿಕೊಳ್ಳುವುದೇ ಹಿಂಸೆಯ ತಿರುಳು. ಆದುದರಿಂದ ಅಹಿಂಸಾಯುತರಾಗುವುದಕ್ಕೆ ಮುಂಚೆ ನೀವು ಗ್ರಾಮಮನೋಧರ್ಮವುಳ್ಳವ ರಾಗಬೇಕಾದರೆ ಚರಖಾದಲ್ಲಿ ನಂಬಿಕೆ ಇರಬೇಕು.'

## ಪ್ರಶ್ನೆಗಳು

ಈ ಪ್ರವಚನವನ್ನು ಕೇಳಿ ಹೋಗಿ ಮಲಗಿದ ಸದಸ್ಯರು ಮಾರನೆಯ ದಿನ ಗಾಂಧೀಜಿಯವರನ್ನು ಮತ್ತೆ ಸಂಧಿಸಿದರು. ಅಹಿಂಸೆಯ ಭಕ್ತರಿಗೆಲ್ಲ ಆಗುವಂತೆ, ಅನೇಕ ಪ್ರಶ್ನೆಗಳು ಅವರ ಮನಸ್ಸನ್ನೂ ವಿಚಲಿತಗೊಳಿಸಿದ್ದವು.

ಆದರೆ ಗಾಂಧೀಜಿಯವರ ಕಾಲವನ್ನು ಲಕ್ಷಿಸಿ, ತಮ್ಮ ಪ್ರಶ್ನೆಗಳನ್ನು ಅವರು ಕೆಲವಕ್ಕೇ ಮಿತಿಗೊಳಿಸಿಕೊಂಡರು.

'ನಿಮ್ಮ ಕಲ್ಪನೆಯ ಅಹಿಂಸೆಯಲ್ಲಿ ನಂಬಿಕೆಯುಳ್ಳವನು ಹೇಗೆ ಮಂತ್ರಿ ಆಗಬಲ್ಲ ?'

ಗಾಂಧೀಜೀ ಹೀಗೆ ಉತ್ತರವಿತ್ತರು : 'ಇಂದಿನ ಪರಿಸ್ಥಿತಿಯಲ್ಲಿ ಸಾಧ್ಯವಿಲ್ಲವೆಂದು ನನ್ನ ಭಾವನೆ. ಬ್ರಿಟಿಷ್ ಸರಕಾರ ಪ್ರಾಂತ್ಯಗಳ ಸ್ವಯಮ್ ಅಧಿಕಾರದ ಕಾಲದಲ್ಲಿ ಮಾಡುತ್ತಿದ್ದಂತೆ ನಮ್ಮ ಮಂತ್ರಿಗಳೂ ಹಿಂಸೆಯನ್ನು ಅವಲಂಬಿಸಬೇಕಾಯಿತೆಂಬುದನ್ನು ನಾವು ನೋಡಿದೆವು. ಬಹುಶಃ ಅದು ಅನಿವಾರ್ಯ. ಕಾಂಗ್ರೆಸ್ಸಿಗರು ನಿಜವಾಗಿ ಅಹಿಂಸಾ ಆಚರಣೆಯವರಾಗಿದ್ದರೆ ಪ್ರಾಯಶಃ ಹಿಂಸೆಯನ್ನು ಅವರು ಅವಲಂಬಿಸುತ್ತಿರಲಿಲ್ಲ. ಆದರೆ ಕಾಂಗ್ರೆಸ್ಸಿಗರ ಬಹುಮತ, ಶುದ್ಧ ಅಹಿಂಸೆಯ ಮೇಲೆ ನಿಂತಿಲ್ಲ. ಕೆಲವು ದಿನಗಳ ಹಿಂದೆ ಒಬ್ಬ ಮಂತ್ರಿ 'ನಾನು ಅಹಿಂಸೆಯನ್ನು ಒಂದು ಕಣದಷ್ಟೂ ಬಿಡದಿದ್ದರೂ ಅತ್ಯಲ್ಪವಾದ ಬಂದೂಕು ಚಲಾವಣೆಯ ಮೇಲೆ ಅವಲಂಬಿಸದಿರಲು ಸಾಧ್ಯವಿಲ್ಲ' ಎಂದು ಹೇಳಿದರು. ಅವರು ಹಿಂಸೆಯನ್ನು ಸಾಧ್ಯವಾದಷ್ಟು ಕಡಮೆ ಪ್ರಯೋಗಿಸಿದ್ದರು. ಮಂತ್ರಿಗಳು ಆಗ ಹಾಗೆ ಹೇಳಿದ್ದಿರಬಹುದು. ಆದರೆ ನನ್ನಿಂದ ಆಗುವುದಾದರೆ ಅವರು ಮತ್ತೆ ಹಾಗೆ ಹೇಳಲಾರರು. ಯಾಕೆಂದರೆ ಮತ್ತೆ ಸರಕಾರದಲ್ಲಿ ಸೇರುವ ಮುಂಚೆ ತಮ್ಮ ನಿಲುವನ್ನು ಅವರು ಸ್ಪಷ್ಟಪಡಿಸಿರುತ್ತಾರೆ. ಬಹಳ ಮಟ್ಟಿಗೆ ಅಹಿಂಸಾಮಯವಾಗಿರುವ ಸಭೆಯನ್ನು ಅವರು ಪ್ರತಿನಿಧಿಸುತ್ತಾರೆ. ಬೇರೆ ಮಾತುಗಳಲ್ಲಿ ತಾನು ಅಹಿಂಸೆಯ ತಳಹದಿಯ ಮೇಲೆ ರಾಜ್ಯವಾಳಲು ಜನರು ಅವಕಾಶ ಕೊಡುತ್ತಾರೆಂದು ಅವನಿಗೆ ನಂಬಿಕೆ ಉಂಟಾದರೆ ಮಾತ್ರ ಅವನು ಅಧಿಕಾರ ವಹಿಸಿಕೊಳ್ಳುವನು.'

'ಅಹಿಂಸೆಯನ್ನು ಆಚರಿಸುವ ಮಂತ್ರಿ ಅಹಿಂಸೆಯಲ್ಲಿ ನಂಬಿಕೆಯಿಲ್ಲದಿರುವವನಿಗಿಂತ ಕನಿಷ್ಠ ಪ್ರಮಾಣದ ಹಿಂಸೆಗೆ ಮಿತಿಗೊಳ್ಳಬಹುದಲ್ಲವೆ ?'

'ಆ ನಂಬಿಕೆ ಬರಿಯ ಭ್ರಮೆ. ಇಂದು ಹಿಂಸೆಯನ್ನು ಉಪಯೋಗಿಸುತ್ತಿರುವವರೆಲ್ಲ ಹಾಗೆಯೇ ಹೇಳಿಕೊಳ್ಳುತ್ತಾರೆ. ಹಿಟ್ಲರನೂ ಅದೇ ಮಾತನ್ನು ಹೇಳುತ್ತಾನೆ. ಹೌಸ್ ಆಫ್ ಲಾರ್ಡ್ಸ್‌ನವರು ಜನರಲ್ ಡೈಯರ್‌ನನ್ನು

ಅಂದಿನ ಧೀರ ಎಂದು ಪ್ರಶಂಸಿಸಿದರು. ಅವನ ಗುರಿ—ಜನರ ಗುಂಪು ನಡೆಸುವ ಹಿಂಸೆಯನ್ನು ತಡೆಯುವುದಾಗಿತ್ತೆಂದು. ಸೋವಿಯಟ್ ರಷ್ಯ—ತನ್ನ ಹಿಂಸೆಯು ಹಿಂಸಾರಹಿತ ಸಮಾಜಸ್ಥಾಪನೆಯ ಒಂದು ತಾತ್ಕಾಲಿಕ ಘಟ್ಟ ಎಂದು ನಂಬುತ್ತದೆ. ಇಂದಿನ ನಮ್ಮ ನಂಬಿಕೆ ಮತ್ತು ಆಚರಣೆಯ ದೃಷ್ಟಿಯಲ್ಲಿ, ಗಾಂಧೀ ಸೇವಾ ಸಂಘವನ್ನು ಮುಕ್ತಾಯಗೊಳಿಸಿ ಪ್ರತಿಯೊಬ್ಬರೂ ಅನಿರ್ಬಂಧದಲ್ಲಿ ಬೆಳೆಯಲು ಬಿಡುವುದು ಹೆಚ್ಚು ಉತ್ತಮವಾಗಬಹುದು.'

ಕಿಶೋರ್‌ಲಾಲ್‌ಭಾಯ್ ಹೀಗೆ ಹೇಳಿದರು : 'ಆದರೆ ಸದಸ್ಯತ್ವವನ್ನು ರಚನಾತ್ಮಕ ಕಾರ್ಯದಲ್ಲಿ ತೊಡಗಿರುವವರಿಗೆ ಮಿತಿಗೊಳಿಸಬಹುದೆಂಬ ಸೂಚನೆ ಇದೆ.'

'ಆ ಸೂಚನೆ ಒಳ್ಳೆಯದು. ಸಂಘವನ್ನು ಹಾಗೆ ಬದಲಾಯಿಸುವುದು ಸಾಧ್ಯ, ಅನಂತರ ನಮ್ಮಲ್ಲಿ ಪ್ರತಿಯೊಬ್ಬರೂ ತನ್ನ ಶಕ್ತಿಗೆ ಸಾಧ್ಯವಾದಷ್ಟು ತಾನು ಪರಿಶುದ್ಧನಾಗಲು ಪ್ರಯತ್ನಿಸಬಹುದು ; ಯಾಕೆಂದರೆ ತಾನು ಪರಿಶುದ್ಧನಾದಲ್ಲದೆ ಅಹಿಂಸೆ ಅಸಾಧ್ಯ. ಆದುದರಿಂದ ನಾವು, ತಮ್ಮನ್ನು ಶುದ್ಧಿಮಾಡಿಕೊಳ್ಳುವ ಒಂದು ಸಂಘದ ಸದಸ್ಯರಾಗೋಣ. ಆದರೆ ಆ ಕಾರ್ಯಕ್ಕೆ ಸಂಘ ಆವಶ್ಯಕವಿಲ್ಲ. ಆದುದರಿಂದ ನಾವು ಪ್ರತಿಯೊಬ್ಬರೂ, ಕಷ್ಟಗಳನ್ನೂ ಸಮಸ್ಯೆಗಳನ್ನೂ ಅವು ಬಂದಂತೆ ಎದುರಿಸಿ, ಎಷ್ಟು ದೂರ ಹೋಗಬಹುದೋ ಪ್ರಯತ್ನಿಸೋಣ. ಎರಡು ವರುಷಗಳ ಕೆಳಗೆ ಹುದಲಿಯಲ್ಲಿ ನಾನು ನಿಮ್ಮನ್ನು, ಚುನಾವಣೆಯಲ್ಲಿ ಸಾಧ್ಯವಾದಷ್ಟು ಅತ್ಯುತ್ತಮರನ್ನು ಶಾಸನಸಭೆಗಳಿಗೆ ಆರಿಸಲು ಸಹಾಯಮಾಡುವಂತೆ ಕೇಳಿದೆ. ಅಂದಿನ ವಾತಾವರಣದಲ್ಲಿ ಆ ಸಲಹೆ ಕೊಟ್ಟೆ. ಇಂದು ಆ ಸಲಹೆಯನ್ನು ಕೊಡಲಾರೆ. ವಾಸ್ತವವಾಗಿ, ನಿಮ್ಮಲ್ಲಿ ಧೀರರ ಅಹಿಂಸೆಯಲ್ಲಿ ನಂಬುವವರಿಗೆ, ನಾನು ೧೯೩೪ರಲ್ಲಿ ಮಾಡಿದಂತೆ, ಕಾಂಗ್ರೆಸ್ಸಿನಿಂದ ಹೊರಗಾಗುವುದು ಆವಶ್ಯಕವಾಗುವ ಕಾಲ ಬರಬಹುದು.'

'ಸಾಮಾನ್ಯ ಜನತೆಯ ಸ್ವಭಾವ, ಕೋಪ, ದ್ವೇಷ, ಅಸೂಯೆ ಎಂಬುದು ನಮಗೆ ಗೊತ್ತು. ಅತ್ಯಲ್ಪ ಸಂಗತಿಗಳಿಗಾಗಿ ಅವರು ಕಾದುತ್ತಾರೆ. ಇಂತಹವರು ಅಹಿಂಸೆಯನ್ನು ಹೇಗೆ ಅನುಸರಿಸುವರು ?'

'ಜನತೆ ಹಾಗೆಯೇ ಇದೆ. ಆದರೆ ಎಲ್ಲರ ಒಳ್ಳೆಯದಕ್ಕಾಗಿ ಅವರು

ಅಹಿಂಸೆಯನ್ನು ಅನುಸರಿಸಬಲ್ಲರೆಂದು ನಾನು ಯೋಚಿಸುತ್ತೇನೆ. ಕಾನೂನಿಗೆ ವಿರೋಧವಾಗಿ ಉಪ್ಪನ್ನು ಶೇಖರಿಸಿದ ಸಹಸ್ರ ಸಂಖ್ಯೆಯ ಜನರಿಗೆ ಯಾರಲ್ಲಿ ಯಾದರೂ ದ್ವೇಷವಿತ್ತೆಂದು ಭಾವಿಸುತ್ತೀರಾ? ಕಾಂಗ್ರೆಸ್ ಅಥವಾ ಗಾಂಧೀ— ಇಂತಹ ಕಾರ್ಯಗಳನ್ನು ಮಾಡಬೇಕೆಂದು ಹೇಳಿದಾರೆ ಎಂದು ಅವರಿಗೆ ಗೊತ್ತಿದ್ದಿತು. ನಂಬಿಕೆಯಿಂದಲೂ ನೆಚ್ಚಿನಿಂದಲೂ ಅವರು ಆ ಕಾರ್ಯಗಳನ್ನು ಮಾಡಿದರು. ನಿರ್ದೋಷವಾದ ಅಹಿಂಸೆಯ ಪ್ರಕಾಶನ ಚಂಪಾರಣ್ಯದಲ್ಲಿ ಆಯಿತೆಂದು ನನ್ನ ಭಾವನೆ. ದಂಗೆ ಎದ್ದ ಸಾವಿರಾರು ರೈತರು, ಸರಕಾರಕ್ಕೂ ತೋಟದ ಒಡೆಯರಿಗೂ ವಿರೋಧವಾಗಿ ಸ್ವಲ್ಪವಾದರೂ ದ್ವೇಷಭಾವನೆಯುಳ್ಳವ ರಾಗಿದ್ದರೆ? ಅಹಿಂಸೆಯಲ್ಲಿ ಅವರ ನಂಬಿಕೆ ಅವರ ಬುದ್ಧಿಶಕ್ತಿಗೆ ನಿಲುಕಿದ್ದಲ್ಲ; ಭೂಮಿ ದುಂಡಾಗಿದೆ ಎಂಬ ನಂಬಿಕೆ ಬುದ್ಧಿಶಕ್ತಿಗೆ ನಿಲುಕದ ನಂಬಿಕೆಯಾಗಿರು ವಂತೆ. ಆದರೆ ತಮ್ಮ ನಾಯಕನಲ್ಲಿ ಅವರ ನಂಬಿಕೆ ನಿಜವಾಗಿತ್ತು; ಮತ್ತು ಅಷ್ಟೇ ಸಾಕಾಗಿತ್ತು. ನಾಯಕರಾಗುವವರ ವಿಷಯ ಬೇರೆ. ಅವರ ನಂಬಿಕೆ ಬುದ್ಧಿಯ ಫಲ; ಮತ್ತು ಅವರು ಆ ನಂಬಿಕೆಯ ಪೂರ್ಣ ಅರ್ಥಕ್ಕೆ ಅನುಸಾರ ವಾಗಿ ಬಾಳಬೇಕು.'

'ಹಾಗೆ ಹೇಳುವುದಾದರೆ ಸಾಮಾನ್ಯ ಜನತೆ ಜಗತ್ತಿನಲ್ಲಿ ಎಲ್ಲೆಲ್ಲಿಯೂ ಹಾಗೆಯೇ ಇದೆಯಲ್ಲವೆ?'

'ಇಲ್ಲ. ಅವರಿಗೆ ಅಹಿಂಸೆಯ ಈ ಹಿನ್ನೆಲೆ ಇಲ್ಲ.'

'ಆದರೆ ನಮ್ಮ ಜನರಲ್ಲಿ ಅಹಿಂಸೆ ಮೂಲಭೂತವಾಗಿ ಸ್ಥಾಪಿತವಾಗಿರುವು ದಾದರೆ, ಅವರು ಇಂತಹ ಗುಲಾಮಗಿರಿಗೆ ಹೇಗೆ ಇಳಿದರು?'

'ಇದೇ ನನ್ನ ಕೊಡುಗೆಯಾಗುತ್ತದೆಂದು ನನ್ನ ಹೆಮ್ಮೆ. ನನಗೆ ಬೇಕಾಗಿರುವುದು ಅಶಕ್ತರ ಅಹಿಂಸೆ ಧೀರರ ಅಹಿಂಸೆಯಾಗುವುದು. ಅದು ಕನಸು ಆಗಿರಬಹುದು. ಆದರೆ ಅದು ನನಸು ಆಗಲು ನಾನು ಹೋರಾಡ ಬೇಕಾಗಿದೆ. (ಹರಿಜನ, ४-೧೧-೧೯೩೯)

# ಕೆಲವು ಪ್ರಶ್ನೆಗಳು

ಚೀಣೀ ಮಿತ್ರರೊಬ್ಬರು ಹೀಗೆ ಕೇಳಿದರು: 'ಹೊರಡುವುದಕ್ಕೆ ಮುಂಚೆ ಒಂದೆರಡು ಮುಖ್ಯ ಪ್ರಶ್ನೆಗಳನ್ನು ಕೇಳಲೆ? ಭಾರತ ಸ್ವತಂತ್ರವಾಗುವುದನ್ನು ನೀವು ನೋಡುವಿರೆಂಬುದು ನಿಮ್ಮ ನಿರೀಕ್ಷಣೆಯೆ?'

ಗಾಂಧೀಜೀ ಅಸ್ಪಷ್ಟವಲ್ಲದ ಮಾತುಗಳಲ್ಲಿ ಹೇಳಿದರು: 'ಹೌದು, ಅನುಮಾನವಿಲ್ಲ. ನನ್ನ ಜೀವಿತಕಾಲದಲ್ಲಿ ಭಾರತ ಸ್ವತಂತ್ರವಾಗುವುದನ್ನು ನಾನು ನೋಡಬಯಸುತ್ತೇನೆ. ಆದರೆ ನನ್ನ ಕನಸು ನನಸಾಗುವುದನ್ನು ನೋಡಲು ನನಗೆ ಅರ್ಹತೆಯಿಲ್ಲವೆಂದು ದೇವರು ಭಾವಿಸಬಹುದು. ಆಗ ನಾನು ಜಗಳವಾಡುತ್ತೇನೆ—ದೇವರೊಂದಿಗಲ್ಲ, ನನ್ನೊಂದಿಗೆ.'

'ಆದರೆ ಸೈನ್ಯವಿಲ್ಲದೆ ನೀವು ಹೇಗೆ ಗೆಲ್ಲಬಲ್ಲಿರಿ?'

'ಸರಿ; ಇಲ್ಲಿಯವರೆಗೆ ಬಂದಿದೇವೆ. ಒಂದು ಗುಂಡನ್ನೂ ಹಾರಿಸದೆ ಗುರಿಯ ಹತ್ತಿರಕ್ಕೆ ಬರುತ್ತಿದೇವೆ. ನಮಗೆ ಜಯವಾದರೆ ಅದು ಒಂದು ಪವಾಡವೇ. ಅಹಿಂಸೆಯ ಅಸ್ತ್ರದ ಪರಿಣಾಮದಲ್ಲಿ ನನಗೆ ಅಪನಂಬಿಕೆಯೇ ಇಲ್ಲ. ಆದರೆ ಅಹಿಂಸೆ, ಆವಶ್ಯಕವಾದ ಪ್ರಮಾಣದಲ್ಲಿ ನಮ್ಮಲ್ಲಿದೆಯೇ ಎಂಬುದು ಇನ್ನೂ ಸಿದ್ಧಾಂತವಾಗಬೇಕಾಗಿದೆ.'

'ಬ್ರಿಟಿಷರನ್ನು ಕಂಡರೆ ದ್ವೇಷವಿದೆಯೆ?'

'ಹೌದು—ಇದು ದುಃಖ ಸಂಗತಿ—ಆದರೆ ನಾವು ಅಹಿಂಸೆಯಿಂದಿದ್ದರೆ ದ್ವೇಷ ನಾಶವಾಗುವುದು; ಉಪಯೋಗಿಸದಿದ್ದರೆ ಎಲ್ಲವೂ ನಾಶವಾಗುವಂತೆ.'

'ಜಪಾನರಲ್ಲಿ ನಮಗಿರುವ ದ್ವೇಷವನ್ನು ಹೊರದೂಡುವುದು ನಮಗೆ ಬಹಳ ಕಷ್ಟ.'

'ಹೌದು. ನೀವು ಅವರಿಗೆ ಎದುರಾಗಿ ಹಿಂಸೆಯನ್ನು ಉಪಯೋಗಿಸುತ್ತಿರುವುದರಿಂದ ನಿಮಗೆ ಅನೇಕ ತಲೆಮಾರು ಬೇಕಾಗುವುದು. ಹಿಂಸಾ ಮಾರ್ಗದಿಂದ ನಿಮ್ಮ ರಕ್ಷಣೆಯನ್ನು ನೀವು ಮಾಡಿಕೊಳ್ಳಬಾರದಾಗಿತ್ತೆಂದು ನಾನು ಹೇಳುವುದಿಲ್ಲ. ಆದರೆ ಈ ಪರಿಸ್ಥಿತಿಯಲ್ಲಿ ಹಿಂಸೆ ಸಾಯುವುದಿಲ್ಲ.'

'ಇತರರಿಗಿಂತ ಹೆಚ್ಚಾಗಿಯೇ ಬ್ರಿಟಿಷರು ವ್ಯವಹಾರ ಮಾಡಲು ಸುಲಭರೆ?'

'ಅಹಿಂಸಾದೃಷ್ಟಿಯಿಂದ ಅವರೊಂದಿಗೆ ವ್ಯವಹರಿಸುವುದು ಇತರರೊಂದಿಗೆ ಎಷ್ಟೋ ಅಷ್ಟೇ ಸುಲಭ. ಆದರೆ ಇತರರೊಂದಿಗೆ ವ್ಯವಹರಿಸದೇ ಇರುವುದರಿಂದ, ನಾನು ಅನುಭವದಿಂದ ಮಾತನಾಡಲಾರೆ. ಭಾರತ ಸಂಸ್ಕೃತಿಯಲ್ಲಿಯೂ ಸ್ವಭಾವದಲ್ಲಿಯೂ ಇರುವ ಘನತೆ, ಎಲ್ಲ ವಿಜಯಿಗಳ ಮೇಲೆಯೂ, ಮುಸಲ್ಮಾನರಾದಿಯಾಗಿ, ತನ್ನ ಪರಿಣಾಮವನ್ನುಂಟುಮಾಡಿದೆ. ಜರ್ಮನ್ನರು ಸಹ ಹೀಗೆ ಮಾಡುತ್ತಿದ್ದರೆಂದು ನನ್ನ ನಂಬಿಕೆ. ಬ್ರಿಟಿಷರು ದ್ವೀಪವಾಸಿಗಳಾದುದರಿಂದಲೂ ಅವರ ವರ್ಣ–ಅಸಹನೆಯಿಂದಲೂ ಇತರರ ಮೇಲೆ ಆಗಬಹುದಾದುದಕ್ಕಿಂತ ಅವರ ಮೇಲೆಯೇ ಪರಿಣಾಮ ಕಡಮೆಯಾಗಿರಬಹುದು.

(ಹರಿಜನ, ೧೩–೪–೧೯೪೦)

## ಪ್ರಜಾತಂತ್ರವೂ ಅಹಿಂಸೆಯೂ

**ಪ್ರಶ್ನೆ:** 'ಪ್ರಜಾತಂತ್ರ ಉಳಿಯುವುದು ಅಹಿಂಸೆಯಿಂದ ಮಾತ್ರ ಎಂದು ಯಾಕೆ ಹೇಳುತ್ತೀರಿ?' ಪ್ರಶ್ನಿಸಿದವರು ಒಬ್ಬ ಅಮೆರಿಕನ್ ಮಿತ್ರರು.

**ಉತ್ತರ:** 'ಯಾಕೆಂದರೆ, ಹಿಂಸೆಯ ಆಧಾರದಿಂದ ನಿಂತಿರುವ ಪ್ರಜಾತಂತ್ರ ನಿರ್ಬಲರನ್ನು ರಕ್ಷಿಸಲಾರದು ಮತ್ತು ಅವರಿಗೆ ಅನ್ನ–ಬಟ್ಟೆ ಒದಗಿಸಲಾರದು. ನನ್ನ ಅಭಿಪ್ರಾಯದ ಪ್ರಜಾತಂತ್ರವೆಂದರೆ, ಅದರ ಆಶ್ರಯದಲ್ಲಿ ಅತಿನಿರ್ಬಲರಿಗೂ ಅತಿಬಲಿಷ್ಠರಿಗಿರುವಷ್ಟೇ ಬೆಳವಣಿಗೆಯ ಅವಕಾಶಗಳಿರಬೇಕು. ಅಹಿಂಸೆಯಿಂದಲ್ಲದೆ ಹೀಗಾಗುವುದು ಸಾಧ್ಯವಿಲ್ಲ. ಇಂದು ಜಗತ್ತಿನ ಯಾವ ರಾಷ್ಟ್ರವೂ ನಿರ್ಬಲರಲ್ಲಿ ಅನುಗ್ರಹವನ್ನು ಹೊರತು ಮತ್ತೇನನ್ನೂ ತೋರಿಸುತ್ತಿಲ್ಲ. ನಿರ್ಬಲರು ಹಿಂದಕ್ಕೆ ದೂಡಲ್ಪಡುತ್ತಾರೆ, ಎನ್ನುತ್ತೀರಿ. ನಿಮ್ಮ ಉದಾಹರಣೆಯನ್ನೇ ತೆಗೆದುಕೊಳ್ಳಿ. ನಿಮ್ಮ ದೇಶದ ಜಮೀನು ಕೆಲವು ಬಂಡವಾಳಗಾರರ ಒಡೆತನದಲ್ಲಿದೆ. ದಕ್ಷಿಣ ಆಫ್ರಿಕದಲ್ಲಿಯೂ ಹೀಗೆಯೇ. ಈ ದೊಡ್ಡ ಆಸ್ತಿಗಳನ್ನು ಪ್ರಕಾಶವಾಗಿಲ್ಲದಿದ್ದರೂ ವೇಷ ಮರೆಸಿಕೊಂಡ ಹಿಂಸೆಯಿಂದಲ್ಲದೆ ಉಳಿಸಿಕೊಳ್ಳಲು ಸಾಧ್ಯವಿಲ್ಲ. ಇಂದು ಇರುವಂತೆ ಪಾಶ್ಚಾತ್ಯ

ಪ್ರಜಾತಂತ್ರ—ನಾಜಿಜಂ ಮತ್ತು ಫೇಸಿಸಂ ಇವುಗಳ ಮರಿರೂಪ. ಸಾಮ್ರಾಜ್ಯ ಶಾಹಿಯಲ್ಲಿರುವ ನಾಜಿಜಂ ಫೇಸಿಸಂಗಳನ್ನು ಮುಚ್ಚಿಕೊಳ್ಳಲು ಅದೊಂದು ಬರಿಯ ಮುಸುಕು. ಯುದ್ಧದಿಂದ ದೊರೆಯುವ ಲೂಟಿಗಳನ್ನು ಹಂಚಿಕೊಳ್ಳು ವುದಕ್ಕೆ ಅಲ್ಲದಿದ್ದರೆ, ಇಂದು ಈ ಯುದ್ಧ ಯಾಕೆ ಆಗುತ್ತಿತ್ತು? ಇಂಗ್ಲೆಂಡು ಭಾರತವನ್ನು ಕಿಸೆಯಲ್ಲಿ ಸೇರಿಸಿಕೊಂಡುದು ಪ್ರಜಾತಂತ್ರದ ಮಾರ್ಗದಿಂದಲ್ಲ. ದಕ್ಷಿಣ ಆಫ್ರಿಕದ ಪ್ರಜಾತಂತ್ರದ ಅರ್ಥವೇನು? ಅದರ ಸಂವಿಧಾನವೇ ಆ ಭೂಮಿಯ ಸ್ವಾಭಾವಿಕ ಒಡೆಯನಿಗೆ ವಿರೋಧವಾಗಿ ಬಿಳಿಯವರನ್ನು ರಕ್ಷಿಸಲು ರಚಿತವಾಗಿದೆ. ಉತ್ತರದ ರಾಜ್ಯಗಳು ಗುಲಾಮಗಿರಿಯ ನಿರ್ನಾಮಕ್ಕಾಗಿ ಕಾರ್ಯಮಾಡಿದ್ದರೂ ನಿಮ್ಮ ಇತಿಹಾಸ ಇನ್ನೂ ಹೆಚ್ಚು ಕಪ್ಪಾಗಿವೆ. ನೀಗ್ರೋ ಗಳ ವಿಷಯದಲ್ಲಿ ನಿಮ್ಮ ಆಚರಣೆ ಶ್ಲಾಘನೀಯವಿಲ್ಲ. ಇಂತಹ ಪ್ರಜಾತಂತ್ರ ಗಳನ್ನು ಉಳಿಸುವುದಕ್ಕೆ ಯುದ್ಧ ನಡೆಯುತ್ತಿರುವುದು. ಈಗ ನಾನು ಅಹಿಂಸೆಯ ದೃಷ್ಟಿಯಲ್ಲಿ ಯೋಚಿಸುತ್ತಾ ಹಿಂಸೆಯ ನಿಜರೂಪವನ್ನು ಸ್ಪಷ್ಟಪಡಿಸಲು ಪ್ರಯತ್ನಿಸುತ್ತಿದೇನೆ.

‘ಭಾರತ ನಿಜವಾದ ಪ್ರಜಾತಂತ್ರವನ್ನು, ಅಂದರೆ ಹಿಂಸಾರಹಿತ ಪ್ರಜಾ ತಂತ್ರವನ್ನು ವಿಕಾಸಗೊಳಿಸಲು ಪ್ರಯತ್ನಿಸುತ್ತಿದೆ. ಚರಖಾ, ಗ್ರಾಮೋದ್ಯೋಗ, ಕೈಕಸಬುಗಳ ಮೂಲಕ ಶಿಕ್ಷಣ, ಅಸ್ಪೃಶ್ಯತೆಯ ನಿವಾರಣೆ, ಜಾತೀಯ ಐಕ್ಯ, ಪಾನನಿರೋಧ, ಅಹಮದಾಬಾದಿನಲ್ಲಿರುವಂತೆ ಅಹಿಂಸಾಮಾರ್ಗದಿಂದ ಕೂಲಿಗಳ ಸಂಘಟನೆ ಮುಂತಾದ ಸತ್ಯಾಗ್ರಹದ ಆಯುಧಗಳೇ ನಮ್ಮ ಆಯುಧಗಳು. ಇವುಗಳಿಗೆ ಜನತೆಯ ಪ್ರಯತ್ನ, ಜನತೆಗೆ ಶಿಕ್ಷಣ ಬೇಕು. ಈ ಚಟುವಟಿಕೆ ಗಳನ್ನು ನಡೆಸಲು ನಮ್ಮಲ್ಲಿ ದೊಡ್ಡ ಸಿಬ್ಬಂದಿ ಇದೆ. ಅವು ಸ್ವಯಂಸೇವಕ ಸಂಸ್ಥೆಗಳು. ದೀನರಿಗೆ ಸೇವೆ ಮಾಡುವುದರಿಂದಲೇ ಅವು ತಮ್ಮ ಕಾರ್ಯಕ್ಕೆ ಅರ್ಹತೆ ಹೊಂದಿವೆ.

ಅಹಿಂಸಾಪ್ರಯತ್ನದ ಶಾಶ್ವತ ಭಾಗ ಇದು. ಈ ಪ್ರಯತ್ನದಿಂದ ಅಹಿಂಸಾತ್ಮಕವಾಗಿ ಸರಕಾರವನ್ನು ಎದುರಿಸುವ ಶಕ್ತಿಯ ಸೃಷ್ಟಿಯಾಗುತ್ತದೆ. ಇದಕ್ಕೆ ‘ಅಸಹಕಾರ ಸತ್ಯಾಗ್ರಹ’ ಎಂದು ಹೆಸರು. ಜನತೆ ಸರಕಾರಕ್ಕೆ ಕಂದಾಯವನ್ನೂ ತೆರಿಗೆಗಳನ್ನೂ ಕೊಡಲು ತಿರಸ್ಕರಿಸುವ ತುದಿಗೆ ಇದು ಮುಟ್ಟ ಬಹುದು. ನಿಮಗೆ ತಿಳಿದಿರುವಂತೆ, ಅಸಹಕಾರ, ಸತ್ಯಾಗ್ರಹ ಇವುಗಳನ್ನು

ನಾವು ತಕ್ಕಮಟ್ಟಿಗೆ ದೊಡ್ಡ ಪ್ರಮಾಣದಲ್ಲಿ ತಕ್ಕಮಟ್ಟಿನ ಜಯಗಳಿಸಿ ಪ್ರಯೋಗಿಸಿದೇವೆ. ಈ ಪ್ರಯೋಗದಲ್ಲಿ, ಉಜ್ವಲ ಭವಿಷ್ಯದ ಚಿಹ್ನೆ ಇದೆ. ಆದರೆ ನಮ್ಮ ಸತ್ಯಾಗ್ರಹ ಇನ್ನೂ ನಿರ್ಬಲರ ಸತ್ಯಾಗ್ರಹವಾಗಿದೆ. ಧೀರರ ಸತ್ಯಾಗ್ರಹವನ್ನು ಬೆಳೆಸುವುದು ನಮ್ಮ ಗುರಿ. ನಿಮ್ಮ ಯುದ್ಧಗಳಿಂದ ಪ್ರಜಾತಂತ್ರದ ರಕ್ಷಣೆ ಎಂದಿಗೂ ಭದ್ರವಾಗುವುದಿಲ್ಲ. ಜನತೆ ನಿರೀಕ್ಷಿಸಿದ ಮಟ್ಟಕ್ಕೆ ಏರಿದರೆ, ಅಥವಾ ಬೇರೆ ಮಾತುಗಳಲ್ಲಿ ಹೇಳುವುದಾದರೆ, ದೇವರು ನನಗೆ ಆವಶ್ಯಕವಾದ ವಿವೇಕವನ್ನೂ ಶಕ್ತಿಯನ್ನೂ ಕೊಟ್ಟರೆ, ಭಾರತದ ಪ್ರಯೋಗ ಫಲಕಾರಿ ಆಗಬಲ್ಲದು—ಆಗುತ್ತದೆ.' (ಹರಿಜನ, ೧೮–೫–೧೯೪೦)

## ಸುಖಿ ಮತ್ತು ಅಸುಖಿ

೧೮ನೇ ತಾರೀಖಿನ 'ಹರಿಜನ'ದಲ್ಲಿ ಈ ಕೆಳಗಿನ ನಂಬಿಕೆಯನ್ನು ವ್ಯಕ್ತಪಡಿಸಿದೆ :

'ನನ್ನ ವಾದ ಮನಮುಟ್ಟಿದ್ದರೆ, ಶಕ್ತರ ಅಹಿಂಸೆಯಲ್ಲಿ ನಮ್ಮ ನಿಶ್ಚಲ ನಂಬಿಕೆಯನ್ನು ಪ್ರಕಟಿಸಿ 'ನಮ್ಮ ಸ್ವಾತಂತ್ರ್ಯವನ್ನು ಆಯುಧಗಳ ಬಲದಿಂದ ರಕ್ಷಿಸಿಕೊಳ್ಳಲು ಬಯಸುವುದಿಲ್ಲ. ಆದರೆ ಅಹಿಂಸೆಯ ಬಲದಿಂದ ರಕ್ಷಿಸಿಕೊಳ್ಳುತ್ತೇವೆ' ಎಂದು ಹೇಳಲು ಇದು ಕಾಲವಲ್ಲವೆ?

'೨೧ನೇ ತಾರೀಖು, ಈ ನಂಬಿಕೆಯನ್ನು ಪರಿಸ್ಥಿತಿಯೊದಗಿದಾಗ ಕಾರ್ಯಗತಮಾಡುವುದಕ್ಕೆ ತಾನು ಶಕ್ತವಾಗುವುದಿಲ್ಲವೆಂದು ವರ್ಕಿಂಗ್ ಕಮಿಟಿ ಭಾವಿಸಿತು. ಯಾಕೆಂದರೆ ಅದಕ್ಕೆ ಮುಂಚೆ ತಮ್ಮ ನಂಬಿಕೆಯನ್ನು ಪರೀಕ್ಷಿಸಿಕೊಳ್ಳುವ ಸಮಯ ವರ್ಕಿಂಗ್ ಕಮಿಟಿಗೆ ಒದಗಿಯೇ ಇರಲಿಲ್ಲ. ಕಳೆದ ಸಭೆಯಲ್ಲಿ, ದೇಶದೊಳಗೆ ಸಂಭವಿಸುವಂತಿದ್ದ ಅನಾಯಕತ್ವವನ್ನೂ ಹೊರಗಿನಿಂದ ಬರಬಹುದಾದ ಆಕ್ರಮಣವನ್ನೂ ಎದುರಿಸಲು, ವರ್ಕಿಂಗ್ ಕಮಿಟಿ ಒಂದು ಕಾರ್ಯವಿಧಾನವನ್ನು ನಿರ್ಣಯಿಸಬೇಕಾಯಿತು.

''ನಾನು ಕಮಿಟಿಯ ಮುಂದೆ ಬಹಳ ವಾದಿಸಿದೆ. 'ನಿಮಗೆ ಶಕ್ತರ ಅಹಿಂಸೆಯಲ್ಲಿ ನಂಬಿಕೆಯಿದ್ದರೆ ಅದರಂತೆ ನಡೆಯಲು ಇದು ಕಾಲ. ಅನೇಕ

ಪಕ್ಷಗಳಿಗೆ ಶಕ್ತರ ಅಹಿಂಸೆಯಲ್ಲಾಗಲಿ ದುರ್ಬಲರ ಅಹಿಂಸೆಯಲ್ಲಾಗಲೀ ನಂಬಿಕೆಯಿಲ್ಲದಿದ್ದರೆ ಚಿಂತೆಯಿಲ್ಲ. ಈ ಅನಿರೀಕ್ಷಿತ ಅವಸರವನ್ನು ಅಹಿಂಸಾ ಮಾರ್ಗದಿಂದ ಎದುರಿಸಲು ಕಾಂಗ್ರೆಸ್ಸಿಗರಿಗೆ ಇದು ಪ್ರಾಯಶಃ ಇನ್ನೂ ಹೆಚ್ಚಿನ ಕಾರಣವೇ ಆಗುವುದು. ಯಾಕೆಂದರೆ ಎಲ್ಲರೂ ಅಹಿಂಸೆಯುಳ್ಳವರೇ ಆದರೆ ಆಗ ಅನ್ಯಾಯಕತ್ವ ಇರುವುದೇ ಇಲ್ಲ. ಹೊರಗಿನಿಂದ ಬರುವ ಮುತ್ತಿಗೆಯನ್ನು ಶಸ್ತ್ರಬಲದಿಂದ ಎದುರಿಸುವ ಪ್ರಶ್ನೆಯೇ ಇರುವುದಿಲ್ಲ. ಆದರೆ ಅಹಿಂಸೆಯಲ್ಲಿ ನಂಬಿಕೆ ಇಲ್ಲದಿರುವ ಇತರ ಪಕ್ಷಗಳ ಮಧ್ಯೆ ಇದ್ದುಕೊಂಡು, ಕಾಂಗ್ರೆಸ್ಸಿಗರು ಅಹಿಂಸೆಯನ್ನು ಆಚರಿಸುವ ಪಕ್ಷವಾದುದರಿಂದ, ತಮ್ಮ ನಂಬಿಕೆಗೆ ಅನುಸಾರವಾಗಿ ತಾವು ನಡೆಯಬಲ್ಲೆವೆಂಬುದನ್ನು ತೋರಿಸುವುದು ಕಾಂಗ್ರೆಸ್ಸಿಗರ ಆವಶ್ಯಕ ಕರ್ತವ್ಯವಾಗಿದೆ.

'ಆದರೆ ವರ್ಕಿಂಗ್ ಕಮಿಟಿಯ ಸದಸ್ಯರು, ಕಾಂಗ್ರೆಸ್ಸಿಗರು ಹಾಗೆ ನಡೆಯಲು ಶಕ್ತರಾಗುವುದಿಲ್ಲವೆಂದು ಭಾವಿಸಿದರು. 'ಕಾಂಗ್ರೆಸ್ಸಿಗರಿಗೆ ಇದು ಹೊಸ ಅನುಭವ. ಇಂತಹ ಪರಿಸ್ಥಿತಿಯಲ್ಲಿ ಕಾರ್ಯಮಾಡುವುದು ಅವರಿಗೆ ಹಿಂದೆ ಒದಗಿರಲಿಲ್ಲ. ಜಾತೀಯ ಕಲಹಗಳಲ್ಲಿ ಕೆಲಸ ಮಾಡಲು ನಾನು ರಚಿಸಿದ್ದ ಶಾಂತಿದಳ ಮುಂತಾದುವು ನಿಷ್ಪ್ರಯೋಜನವಾಗಿದ್ದವು. ಆದುದರಿಂದ ನಿರೀಕ್ಷಿಸುವ ಅಹಿಂಸಾಕಾರ್ಯವಿಧಾನದಲ್ಲಿ ಅವರಿಗೆ ಭರವಸೆ ಇರಲಿಲ್ಲ' ಎಂಬುದು ಅವರ ಅಭಿಪ್ರಾಯವಾಗಿತ್ತು.

'ನನ್ನ ಪರಿಸ್ಥಿತಿ ಬೇರೆಯಾಗಿತ್ತು. ಕಾಂಗ್ರೆಸ್ಸಿಗೆ ಅಹಿಂಸೆ ಯಾವಾಗಲೂ ಒಂದು ಕಾರ್ಯನೀತಿಯಾಗಿತ್ತು. ಅಪಜಯವಾದರೆ ಅಹಿಂಸೆಯನ್ನು ಬಹಿಷ್ಕರಿಸಲು ಕಾಂಗ್ರೆಸ್ಸಿಗೆ ಅವಕಾಶವಿತ್ತು. ರಾಜಕೀಯ ಮತ್ತು ಆರ್ಥಿಕ ಸ್ವಾತಂತ್ರ್ಯವನ್ನು ಅಹಿಂಸೆ ತರದಿದ್ದರೆ ಅದರಿಂದ ಕಾಂಗ್ರೆಸ್ಸಿಗೆ ಪ್ರಯೋಜನವಿರಲಿಲ್ಲ. ಆದರೆ ನನಗೆ ಅಹಿಂಸೆ ಒಂದು ಧರ್ಮ. ನಾನು ಒಂಟಿಯಾಗಿರಲಿ, ಸಂಗಡಿಗರೊಂದಿಗಿರಲಿ ಆ ಧರ್ಮದಲ್ಲಿ ನಾನು ನಡೆಯಬೇಕು. ಅಹಿಂಸೆಗೆ ಜನರನ್ನು ಒಲಿಸಿಕೊಳ್ಳುವುದು ನನ್ನ ಬಾಳಿನ ಉದ್ದಿಷ್ಟಕಾರ್ಯವಾದುದರಿಂದ, ಎಲ್ಲ ಕಾಲಗಳಲ್ಲಿಯೂ ಅದನ್ನು ನಾನು ಅನುಸರಿಸಲೇಬೇಕು. ಈಗ ಮನುಷ್ಯ ಮತ್ತು ದೇವರ ಎದುರಿಗೆ ನನ್ನ ನಂಬಿಕೆಯನ್ನು ಸಾಕ್ಷಾತ್ಕಾರ ಮಾಡಿಕೊಡುವುದಕ್ಕೆ ಕಾಲವೆಂದು ನಾನು ಭಾವಿಸಿದೆ. ಆದುದರಿಂದ ನನ್ನನ್ನು ಕಮಿಟಿ

ಯಿಂದ ಬಿಡುಗಡೆ ಮಾಡುವಂತೆ ಕೇಳಿದೆ. ಇಲ್ಲಿಯವರೆಗೆ ಕಾಂಗ್ರೆಸ್ಸಿನ ಸಾಮಾನ್ಯ ಕಾರ್ಯನೀತಿಯ ಮಾರ್ಗದರ್ಶನ ಮಾಡುವುದು ನನ್ನ ಹೊಣೆ ಯಾಗಿತ್ತು. ಅವರಿಗೂ ನನಗೂ ನಡುವೆ ಮೂಲಭೂತ ಭಿನ್ನಾಭಿಪ್ರಾಯ ವ್ಯಕ್ತವಾದಮೇಲೆ ನಾನು ಹಾಗೆ ಮಾಡಲಾರದಾದೆ. ಅವರಿಗೆ ನನ್ನ ಮನಸ್ಸಿನ ನಿಲುವು ಸರಿ ಎಂಬುದನ್ನು ಅವರು ಒಡನೆಯೇ ಅಂಗೀಕರಿಸಿದರು. ನನಗೆ ಬಿಡುಗಡೆ ಕೊಟ್ಟರು. ಅವರಲ್ಲಿಟ್ಟ ನಂಬಿಕೆ ಸರಿಯಾದುದು ಎಂಬುದನ್ನು ಅವರು ಮತ್ತೆ ತೋರಿಸಿಕೊಂಡಿದಾರೆ. ಅವರು ತಮ್ಮ ಆತ್ಮಕ್ಕೆ ತಾವು ನಿಜವಾಗಿ ನಡೆದಿದಾರೆ. ಅವರೂ ಮತ್ತು ಅವರು ಪ್ರತಿನಿಧಿಸುವ ಜನತೆಯೂ ಆವಶ್ಯಕ ವಾದ ಮಟ್ಟದ ಅಹಿಂಸೆಯನ್ನು ಕಾರ್ಯದಲ್ಲಿ ತೋರಿಸಬಲ್ಲರೆಂಬ ನಂಬಿಕೆ ಅವರಿಗೆ ಇಲ್ಲ. ಆದುದರಿಂದ ಅವರು ಪ್ರಾಮಾಣಿಕರಾಗಿ ಆರಿಸಿಕೊಳ್ಳಬಹುದಾದ ದಾರಿಯನ್ನೇ ಆರಿಸಿಕೊಂಡರು. ಅವರು ಮಾಡಿದುದು ಬಹಳ ಮಹತ್ವದ ತ್ಯಾಗ—ಜಗತ್ತಿನಲ್ಲಿ ಸಂಪೂರ್ಣ ಮತ್ತು ಶುದ್ಧ ಅಹಿಂಸೆಯ ಪ್ರತೀಕ ಎಂದು ಕಾಂಗ್ರೆಸ್ ಸಂಪಾದಿಸಿದ್ದ ಪ್ರತಿಷ್ಠೆಯ ತ್ಯಾಗ. ಮತ್ತು ನನಗೂ ಅವರಿಗೂ ನಡುವೆ ಇದ್ದ, ಬರೆಯದ ಮತ್ತು ಬಾಯಲ್ಲಿ ಹೇಳದ ಬಂಧನದ ತ್ಯಾಗ. ಇಬ್ಬರಿಗೂ ಸಮಾನವಾಗಿರುವ ಆಚರಣೆ ಮತ್ತು ಕಾರ್ಯನೀತಿಯಲ್ಲಿ ಇದು ನನಗೂ ಅವರಿಗೂ ವಿಚ್ಛೇದವಾದರೂ, ಇಪ್ಪತ್ತು ವರುಷಗಳ ಮಿತ್ರತ್ವದಲ್ಲಿ ಯಾವ ವಿಚ್ಛೇದವೂ ಇಲ್ಲ.

'ಫಲಿತಾಂಶದಿಂದ ನಾನು ಸುಖಿಯೂ ಅಸುಖಿಯೂ ಎರಡೂ ಆಗಿದೇನೆ. ಸುಖಿ ಯಾಕೆಂದರೆ, ಈ ಸ್ನೇಹವಿಚ್ಛೇದದ ಪ್ರಯಾಸವನ್ನು ತಡೆದುಕೊಂಡು ಒಂಟಿಯಾಗಿ ನಿಲ್ಲಲು ನನಗೆ ಶಕ್ತಿ ಉಂಟಾಗಿರುವುದರಿಂದ. ಅಸುಖಿ ಯಾಕೆ ಎಂದರೆ, ಇಷ್ಟು ವರುಷಗಳೂ ನನ್ನ ಜತೆಯಲ್ಲಿ ಯಾರನ್ನು ಕರೆದುಕೊಂಡು ಹೋಗುವ ಇಷ್ಟಕರ ಭಾಗ್ಯ ನನ್ನದಾಗಿತ್ತೊ, ಇಂದು ಅವರಲ್ಲಿ ನನ್ನ ಮಾತಿಗೆ ಶಕ್ತಿ ಇಲ್ಲದುದರಿಂದ. ಆದರೆ ದೇವರು ಶಕ್ತರ ಅಹಿಂಸೆಯ ಪರಿಣಾಮವನ್ನು ಆಚರಿಸಿ ತೋರಿಸಲು ನನಗೆ ದಾರಿಯನ್ನು ತೋರಿಸಿದರೆ ಈ ವಿಚ್ಛೇದ ತಾತ್ಕಾಲಿಕವಾಗುವುದೆಂದು ನನಗೆ ಗೊತ್ತು. ದೇವರು ದಾರಿ ತೋರಿಸದಿದ್ದರೆ ನನ್ನಿಂದ ಬೇರೆಯಾಗಿ ನಾನು ಒಬ್ಬನೇ ಹೋಗಲು ಅವಕಾಶ ಕೊಟ್ಟ ಅವರ ವಿವೇಕ ಸರಿ ಎಂದು ಸ್ಪಷ್ಟವಾಗುತ್ತದೆ. ನನ್ನ ವಿಷಾದಕರ ಅಶಕ್ತಿ ಪ್ರಕಾಶ

ವಾದಾಗ, ಅಹಿಂಸೆಯ ಜ್ಯೋತಿಯನ್ನು ಇನ್ನುಮುಂದೆ ತೆಗೆದುಕೊಂಡು ಹೋಗಲು ನಾನು ಅರ್ಹವಾದ ಉಪಕರಣವಾಗಿರಲಿಲ್ಲ ಎಂಬುದನ್ನು ಅರಿಯುವ ವಿನಯವೂ, ಇದುವರೆಗೆ ನನ್ನನ್ನು ಬಾಳಿಸಿರುವ ನಿಷ್ಠೆಯೂ ಇನ್ನೂ ನನ್ನಲ್ಲಿ ಉಳಿಯುವುದೆಂದು ನಂಬಿರುತ್ತೇನೆ.

'ವರ್ಕಿಂಗ್ ಕಮಿಟಿಯ ಸದಸ್ಯರು ಕಾಂಗ್ರೆಸ್ ಬಹುಮತದ ಭಾವನೆಯನ್ನು ಪ್ರತಿಬಿಂಬಿಸುತ್ತಾರೆ ಎಂಬ ಅಂಗೀಕಾರ ಈ ವಾದದ ತಳಹದಿ. ಕಾಂಗ್ರೆಸ್ಸಿನ ಅಧಿಕ ಸಂಖ್ಯೆಯವರಲ್ಲಿ ಶಕ್ತರ ಅಹಿಂಸೆ ಬೆಳೆಯಲೆಂಬುದೇ ಅವರ ಇಚ್ಛೆ. ನನ್ನ ನಂಬಿಕೆಯೂ ಅದೇಯೆ. ಕಾಂಗ್ರೆಸ್ಸಿಗರ ಶಕ್ತಿಯನ್ನು ತಾವು ಸರಿಯಾಗಿ ಅಳೆಯಲಿಲ್ಲ ಎಂಬುದು ವರ್ಕಿಂಗ್ ಸಮಿತಿ ಸದಸ್ಯರಿಗೆ ಮನದಟ್ಟಾದರೆ ಅವರಿಗೆ ಎಲ್ಲರಿಗಿಂತ ಹೆಚ್ಚು ಸಂತೋಷವಾಗುತ್ತದೆ. ಶಕ್ತರ ಅಹಿಂಸೆಯನ್ನು ಪ್ರತಿನಿಧಿಸುವವರು ಅಲ್ಪಸಂಖ್ಯಾತರೇ ಹೊರತು ಬಹುಸಂಖ್ಯಾತರಲ್ಲವೆಂಬುದೇ ಹೆಚ್ಚು ಸಂಭವ. ಇದು ವಾದದಿಂದ ತೀರ್ಮಾನವಾಗುವುದಲ್ಲ ಎಂಬುದು ಜ್ಞಾಪಕವಿರಬೇಕು. ವರ್ಕಿಂಗ್ ಕಮಿಟಿ ಸದಸ್ಯರ ಮುಂದೆ ಎಲ್ಲ ವಾದಗಳೂ ಇದ್ದವು. ಆದರೆ ಹೃದಯದ ಗುಣವಾದ ಅಹಿಂಸೆ ಬುದ್ಧಿ ಒಪ್ಪಿದ ಮಾತ್ರಕ್ಕೆ ಅಂಗೀಕಾರವಾಗಲಾರದು. ಆದುದರಿಂದ, ನಮಗೆ ಬೇಕಾಗಿರುವುದು, ಗದ್ದಲವಿಲ್ಲದ ದೃಢವಾದ ಅಹಿಂಸಾಶಕ್ತಿಯ ನಿದರ್ಶನ. ಇದರ ಅವಕಾಶ ಪ್ರತಿಯೊಬ್ಬನಿಗೂ ಹೆಚ್ಚುಕಡಮೆ ನಿತ್ಯ ಒದಗುತ್ತದೆ. ಜಾತೀಯ ಹೊಡೆದಾಟ, ದರೋಡೆ, ವಾಗ್ಯುದ್ಧ ಎಲ್ಲೆಡೆಯೂ ಇವೆ. ಇವುಗಳಲ್ಲೆಲ್ಲ ನಿಜವಾಗಿ ಅಹಿಂಸೆಯುಳ್ಳವರು ಅದನ್ನು ಆಚರಿಸಿ ತೋರಿಸಬಲ್ಲರು ; ತೋರಿಸುತ್ತಾರೆ. ತಕ್ಕಷ್ಟು ಪ್ರಮಾಣದಲ್ಲಿ ಇದನ್ನು ಪ್ರಕಾಶಪಡಿಸಿದರೆ ವಾತಾವರಣ ಇದರಿಂದ ಪೂರಿತವಾಗದಿರುವುದಿಲ್ಲ. ಅಹಿಂಸೆಯ ಶಕ್ತಿಯಲ್ಲಿ, ಬರಿಯ ಮೂರ್ಖತೆಗಾಗಿಯೇ ನಂಬಿಕೆಯಿಡದಿರುವ ಕಾಂಗ್ರೆಸ್ಸಿಗರು ಒಬ್ಬರೂ ಇಲ್ಲ ಎಂಬುದು ನನಗೆ ಬಹಳ ಮನದಟ್ಟಾಗಿದೆ. ಕಾಂಗ್ರೆಸ್—ದೇಶದ ಆಂತರಿಕ ಅಸಾಯುಕತ್ವದಲ್ಲಿಯೂ ಹೊರಶತ್ರುವನ್ನು ಎದುರಿಸುವುದರಲ್ಲಿಯೂ ಅಹಿಂಸೆಯನ್ನು ಅನುಸರಿಸಬೇಕೆಂಬ ನಂಬಿಕೆಯುಳ್ಳ ಕಾಂಗ್ರೆಸ್ಸಿಗರು—ತಮ್ಮ ನಂಬಿಕೆಯನ್ನು ನಿತ್ಯದ ಆಚರಣೆಯಲ್ಲಿ ತೋರಿಸಲು ಧೀರರ ನಂಬಿಕೆ, ಬರಿಯ ಒಂದು ಕಾರ್ಯನೀತಿ ಮಾತ್ರ ಆಗಲಾರದು. ಅದು ಒಂದು 'ಧರ್ಮ'ವಾಗಬೇಕು.

'ಧರ್ಮ' ಎಂಬ ಮಾತಿಗೆ ಆಕ್ಷೇಪಣೆ ಇದ್ದರೆ 'ಭಾವ'ವಾಗಬೇಕು. ಭಾವನೆಯ ಮನುಷ್ಯ ತನ್ನ ಎಲ್ಲ ಸಣ್ಣ ಕಾರ್ಯಗಳಲ್ಲಿ ಸಹ ಆ ಭಾವನೆಯನ್ನು ವ್ಯಕ್ತಪಡಿಸುತ್ತಾನೆ. ಆದುದರಿಂದ ಅಹಿಂಸಾಪೂರಿತನಾದವನು ಆ ಅಹಿಂಸೆ ಯನ್ನು ತನ್ನ ಸಂಸಾರದಲ್ಲಿಯೂ ವ್ಯವಹಾರದಲ್ಲಿಯೂ ಕಾಂಗ್ರೆಸ್ ಸಭೆ ಗಳಲ್ಲಿಯೂ ಸಾರ್ವಜನಿಕ ಸಭೆಗಳಲ್ಲಿಯೂ ಮತ್ತು ಪ್ರತಿಕಕ್ಷಿಗಳೊಂದಿಗೆ ವ್ಯವಹರಿಸುವುದರಲ್ಲಿಯೂ ಪ್ರಕಟಿಸುತ್ತಾನೆ. ಅಹಿಂಸೆ ಹೀಗೆ ಕಾಂಗ್ರೆಸ್ಸಿಗರಲ್ಲಿ ಪ್ರಕಟವಾಗದೆ ಇರುವುದರಿಂದ ಆಂತರಿಕ ಮತ್ತು ಹೊರಗಿನ ಆಕ್ರಮಣವನ್ನು ಅಹಿಂಸಾಮಾರ್ಗದಿಂದ ಎದುರಿಸಲು ಕಾಂಗ್ರೆಸ್ಸಿಗರು ಸಿದ್ಧರಾಗಿಲ್ಲವೆಂದು ವರ್ಕಿಂಗ್ ಕಮಿಟಿ ಸರಿಯಾಗಿಯೇ ತೀರ್ಮಾನಿಸಿತು. ಅಹಿಂಸೆಯಿಂದ ತಮಗೆ ಉಂಟಾಗುವ ಪೇಚಾಟದಿಂದ, ಸರಕಾರ ಜನಾಭಿಪ್ರಾಯಕ್ಕೆ ಬಾಗುವುದು. ಆದರೆ ಸಮಾಜದಲ್ಲಿ ಅವ್ಯವಸ್ಥೆ, ದೊಂಬಿ ಉಂಟಾದಾಗ, ಅಂತಹ ಅಹಿಂಸೆಗೆ ಅವಕಾಶವೇ ಇರುವುದಿಲ್ಲ. ದೊಂಬಿಕಾರರ ವಿಷಯದಲ್ಲಿ ಕೋಪವನ್ನೂ ದ್ವೇಷ ವನ್ನೂ ಬಿಟ್ಟು, ಪ್ರತೀಕಾರ ಮಾಡದೆ ನಾವು ಸಾವನ್ನು ಆಹ್ವಾನಿಸಬೇಕಾಗು ತ್ತದೆ. ಇಲ್ಲಿಯವರೆಗೆ ಕಾಂಗ್ರೆಸ್ಸಿಗರಿಗೆ ಅಭ್ಯಾಸವಾಗಿದ್ದ ಅಹಿಂಸೆಯಿಂದ ಇದು ತೀರ ಭಿನ್ನವಾದ ಅಹಿಂಸೆ ಎಂಬುದನ್ನು ಸುಲಭವಾಗಿ ತಿಳಿಯಬಹುದು. ಆದರೆ ನಿಜವಾದ ಅಹಿಂಸೆ, ಜಗತ್ತನ್ನು ನಾಶದಿಂದ ಉಳಿಸಬಲ್ಲ ಅಹಿಂಸೆ ಅದೇ. ಜಗತ್ತು ಯುದ್ಧದ ಶಾಪದಿಂದ ಬಿಡಿಸಿಕೊಳ್ಳಲು ಬಯಸುತ್ತಿದೆ. ಅದಕ್ಕೆ ದಾರಿ ತಿಳಿಯದು. ಈ ಜಗತ್ತಿಗೆ ಭಾರತ ಅಹಿಂಸೆಯ ಸಂದೇಶವನ್ನು ಬೀರದಿದ್ದರೆ ಜಗತ್ತು ಇಂದೋ ನಾಳೆಯೋ—ನಾಳೆಯಲ್ಲ ಇಂದೇ—ಖಂಡಿತ ನಾಶವಾಗುವುದು.

**ವಿ. ಸೂ.** ಮೇಲಿನದನ್ನು ಬರೆದು ಟೈಪ್ ಮಾಡಿಸಿದ ಬಳಿಕ ಪಂಡಿತ ಜವಾಹರಲಾಲರ ಹೇಳಿಕೆ ನೋಡಿದೆ. ನನಗೆ ಸಂಬಂಧಪಟ್ಟ ಪ್ರತಿಯೊಂದು ವಾಕ್ಯದಲ್ಲಿಯೂ ಆತನಿಗೆ ನನ್ನಲ್ಲಿ ಪ್ರೀತಿಯೂ ನಂಬಿಕೆಯೂ ವ್ಯಕ್ತವಾಗುತ್ತಿವೆ. ಮೇಲೆ ಬರೆದುದಕ್ಕೆ ಯಾವ ತಿದ್ದುಪಡಿಯ ಅಗತ್ಯವಿಲ್ಲ. ವಾಚಕರಿಗೆ ಎರಡೂ ಹೇಳಿಕೆಗಳ ಸ್ವತಂತ್ರ ಪ್ರತಿಕ್ರಿಯೆ ಉತ್ತಮ. ಈ ಅಗಲಿಕೆಯಿಂದ ಒಳ್ಳೆಯದೇ ಆಗುವುದು.'

(ಹರಿಜನ, ೨೯–೬–೧೯೪೦)

# ಒಂದು ಜಗತ್ತಿಗಾಗಿ ಪ್ರಯತ್ನಿಸಿ

ಗಾಂಧೀಜೀ ದಿಲ್ಲಿಯಲ್ಲಿರುವಾಗ ಎರಡು ಸಲ ಅಂತರರಾಷ್ಟ್ರೀಯ ಏಷ್ಯ ಸಂಬಂಧ ಸಮ್ಮೇಳನದಲ್ಲಿ ಉಪಸ್ಥಿತರಾಗಿದ್ದರು. ಮೊದಲ ದಿನ ೧-೪-೧೯೪೭ ರಂದು ಸಮ್ಮೇಳನಕ್ಕೆ ಅವರು ಪ್ರಪ್ರಥಮವಾಗಿ ಭೇಟಿ ಇತ್ತಾಗ ಅವರು ಯಾವ ಭಾಷಣವನ್ನೂ ಮಾಡಲಿಲ್ಲ. ಪ್ರತಿನಿಧಿಗಳು ಅವರನ್ನು ಕೇಳಿದ ಕೆಲವು ಪ್ರಶ್ನೆಗಳಿಗೆ ಉತ್ತರ ಕೊಟ್ಟರು ಮಾತ್ರ. ಪ್ರಶ್ನೆ ಮತ್ತು ಉತ್ತರಗಳನ್ನು ಕೆಳಗೆ ಪ್ರಕಟಿಸಿದೆ.

'ಜಗತ್ತು ಒಂದು ಆಗದಿದ್ದರೆ ಇದರಲ್ಲಿ ಬಾಳಲು ನನಗೆ ಇಷ್ಟವಿಲ್ಲ. ನನ್ನ ಜೀವಿತಕಾಲದಲ್ಲಿಯೇ ಇದು ಸಾಧ್ಯವಾಗುವುದು ನನ್ನ ಇಚ್ಛೆ.'

'ಒಂದು ಜಗತ್ತಿನಲ್ಲಿ ನಿಮಗೆ ನಂಬಿಕೆ ಇದೆಯೇ? ಜಗತ್ತಿನ ಇಂದಿನ ಪರಿಸ್ಥಿತಿಯಲ್ಲಿ ಇದು ಸಾಧ್ಯವೆ?' ಎಂಬ ಪ್ರಶ್ನೆಗೆ ಗಾಂಧೀಜೀ ಮೇಲಿನಂತೆ ಉತ್ತರ ಕೊಟ್ಟರು.

ಗಾಂಧೀಜೀ ಮುಂದೆ ಹೀಗೆ ಹೇಳಿದರು: 'ಏಷ್ಯದ ಬೇರೆ ಬೇರೆ ರಾಷ್ಟ್ರಗಳಿಂದ ಇಲ್ಲಿ ಬಂದಿರುವ ಪ್ರತಿನಿಧಿಗಳೆಲ್ಲ ಒಂದೇ ಜಗತ್ತಿಗಾಗಿ ತಮ್ಮ ಎಲ್ಲ ಪ್ರಯತ್ನಗಳನ್ನೂ ಮಾಡುವರೆಂದು ನಾನು ನಂಬುತ್ತೇನೆ. ಈ ಗುರಿಯನ್ನು ಮುಟ್ಟಲು ಅವರು ಮಾರ್ಗಗಳನ್ನು ಕಂಡುಹಿಡಿಯಬೇಕಾಗುವುದು.

'ನೀವೆಲ್ಲರೂ ಪೂರ್ಣ ದೃಢಸಂಕಲ್ಪದಿಂದ ಕೆಲಸಮಾಡಿದರೆ ನಮ್ಮ ತಲೆಮಾರಿನಲ್ಲಿಯೇ ಈ ಕನಸು ನಿಶ್ಚಯವಾಗಿ ಕೈಗೂಡುವುದು.'

ಚೀಣಾದ ಡಾಕ್ಟರ್ ಹಾನ್ ಲಿವುರವರು ಏಷ್ಯ ಸಂಸ್ಥೆ ಒಂದನ್ನು ಸ್ಥಾಪಿಸುವ ವಿಷಯದಲ್ಲಿ ಗಾಂಧೀಜಿಯವರ ಅಭಿಪ್ರಾಯಗಳನ್ನು ಕೇಳಿದರು.

ಗಾಂಧೀಜೀ ಉತ್ತರವಾಗಿ ಹೀಗೆ ಹೇಳಿದರು: 'ನಿಮ್ಮಲ್ಲಿ ನನಗೆ ಯಾರೂ ವ್ಯಕ್ತಿಶಃ ಪರಿಚಯವಿಲ್ಲದಿದ್ದರೂ ಪತ್ರವ್ಯವಹಾರದ ಮೂಲಕ ನನಗೆ ಜಗತ್ತಿನ ಎಲ್ಲ ಭಾಗಗಳೂ ಗೊತ್ತಾಗಿವೆ. ಏಷ್ಯದ ಭಾಗಗಳೂ ಗೊತ್ತಾಗಿವೆ. ಉಪಯುಕ್ತವಾಗಬಹುದಾದುದು ಏನನ್ನಾದರೂ ನಾನು ಹೇಳಬಲ್ಲೆನೆ ಎಂಬುದು ಅನುಮಾನ. ಆದರೆ ಈ ಪ್ರಶ್ನೆ ನನಗೆ ಪ್ರಿಯವಾದುದು. ನನ್ನನ್ನು ನೀವು

ಕೇಳಿದ ಪ್ರಶ್ನೆಗಳ ಪೈಕಿ ಕೆಲವಕ್ಕೆ ನಿನ್ನೆ ಪಂಡಿತ ನೆಹರೂ ಉತ್ತರ ಕೊಟ್ಟರು. ಈ ಸಮ್ಮೇಳನ ಭಾರತಭೂಮಿಯಲ್ಲಿ ಮೊದಲನೆಯದಾಗಿ ಆಗುತ್ತಿರುವುದು ನಮ್ಮ ಇತಿಹಾಸದಲ್ಲಿ ಮಹತ್ವದ ಸಂಗತಿ. ಇಂದಿನ ಪರಿಸ್ಥಿತಿಯನ್ನು ಕುರಿತು ಮಾತನಾಡಲು ನಾನು ವಿಷಾದಿಸುತ್ತೇನೆ. ನಮ್ಮನಮ್ಮಲ್ಲಿ ಶಾಂತಿಯನ್ನುಳಿಸಿ ಕೊಳ್ಳಲು ನಮಗೆ ತಿಳಿಯದು. ನಮ್ಮಲ್ಲಿ ಬಹಳ ಭೇದಗಳುಂಟಾಗಿವೆ. ಅವು ಗಳನ್ನು ಸ್ನೇಹ ಮತ್ತು ಮಾನವೀಯತೆಯ ದೃಷ್ಟಿಯಿಂದ ತೀರ್ಮಾನಿಸಿಕೊಳ್ಳಲು ನಮ್ಮಿಂದ ಸಾಧ್ಯವಿಲ್ಲ. ನಾವು ಕಾಡುಪ್ರಾಣಿಗಳ ಮಾರ್ಗವನ್ನು ಅನುಸರಿಸ ಬೇಕೆಂದು ತೋರುತ್ತಿದೆ. ಈ ಅನುಭವವನ್ನು ನಿಮ್ಮ ನಿಮ್ಮ ದೇಶಗಳಿಗೆ ತೆಗೆದುಕೊಂಡು ಹೋಗಬೇಡಿ. ಅದರ ಬದಲು ಅದನ್ನು ಇಲ್ಲಿಯೇ ಹೂಳಿಬಿಟ್ಟು ಹೋಗಿ.

‘ ಭಾರತ ಈಗ ಪೂರ್ಣಸ್ವಾತಂತ್ರ್ಯದ ಹೊಸಲಿನಲ್ಲಿದೆ. ಭಾರತವನ್ನು ತಮ್ಮ ಸ್ವಂತ ಆಸ್ತಿಯಾಗಿ ಮಾಡಿಕೊಳ್ಳಬಯಸುವ ಎಲ್ಲರ ಕೈಯಿಂದಲೂ ಭಾರತ ಸ್ವತಂತ್ರವಾಗಬಯಸುತ್ತಿದೆ. ನಮಗೆ ಬೇಕಾಗಿರುವುದು ಬರಿಯ ಯಜಮಾನನ ಬದಲಾವಣೆ ಮಾತ್ರವಲ್ಲ, ನಾವು ನಮ್ಮ ದೇಶದಲ್ಲಿ ಯಜಮಾನ ರಾಗಿರಲು ಬಯಸುತ್ತೇವೆ. ಅದು ಹೇಗೆ ಆಗುವುದೆಂಬುದು ನನಗೆ ಪೂರ್ಣ ಸ್ಪಷ್ಟವಾಗಿಲ್ಲ. ನಾವು ತಿಳಿದಿರುವುದು ಇಷ್ಟು : ನಮ್ಮ ಕರ್ತವ್ಯವನ್ನು ಮಾಡಿ ಫಲವನ್ನು ದೇವರ ಕೈಯಲ್ಲಿ—ಮನುಷ್ಯನ ಕೈಯಲ್ಲಿ ಅಲ್ಲ—ಬಿಡುವುದು. ಮನುಷ್ಯ ತನ್ನ ಅದೃಷ್ಟಕ್ಕೆ ತಾನೇ ಶಿಲ್ಪಿ ಎನ್ನುತ್ತಾರೆ. ಅದು ಕೆಲವು ಅಂಶ ಸತ್ಯ. ಆದರೆ ಮನುಷ್ಯನ ಎಲ್ಲ ಇಚ್ಛೆಗಳನ್ನೂ ಯೋಜನೆಗಳನ್ನೂ ಮೀರಿ ತನ್ನ ಯೋಜನೆಗಳನ್ನು ಮಾತ್ರ ನಡೆಸುವ ಸರ್ವಶಕ್ತಿ ಎಷ್ಟು ಅವಕಾಶ ಕೊಡು ತ್ತದೋ ಅಷ್ಟು ಮಾತ್ರ ತನ್ನ ಅದೃಷ್ಟವನ್ನು ಮನುಷ್ಯ ತಾನೇ ನಿರ್ಮಿಸಿಕೊಳ್ಳ ಬಹುದೆಂಬುದೂ ಸತ್ಯ.

‘ ಆ ಸರ್ವಶಕ್ತಿಯನ್ನು ನಾನು ಅಲ್ಲ, ದೇವರು, ಬುದ್ಧ ಎಂದು ಕರೆಯು ವುದಿಲ್ಲ. ಸತ್ಯ ಎಂದು ಕರೆಯುತ್ತೇನೆ. ನನಗೆ ಸತ್ಯವೇ ದೇವರು. ನಮ್ಮ ಯೋಜನೆಗಳಿಗೆಲ್ಲ ಅದೇ ಸಾರ್ವಭೌಮ. ಪೂರ್ಣ ಸತ್ಯ ಆ ಸರ್ವಶಕ್ತ ಸತ್ಯದ ಹೃದಯದಲ್ಲಿ ಅಡಗಿದೆ. ಸತ್ಯವನ್ನು ಮುಟ್ಟುವುದು ಅಸಾಧ್ಯ ಎಂದು ನನ್ನ ಬಾಲ್ಯದಿಂದಲೂ ನನಗೆ ಬೋಧನೆಯಾಗಿತ್ತು. ಒಬ್ಬ ಮಹಾನ್ ಆಂಗ್ಲೇಯ,

ದೇವರು ಅಜ್ಞೇಯ, ಅಂದರೆ ಅರಿಯುವುದು ಸಾಧ್ಯವಿಲ್ಲ ಎಂದು ನನಗೆ ಕಲಿಸಿದನು. ದೇವರನ್ನು ಅರಿಯಬಹುದು—ಆದರೆ ನಮ್ಮ ಮಿತವಾದ ಬುದ್ಧಿಶಕ್ತಿಗೆ ನಿಲುಕುವಷ್ಟು ಮಾತ್ರ.

'ಮಹಾಶಯರೆ, ನೀವು ಏಷ್ಯದ ನಾನಾ ಭಾಗಗಳಿಂದ ಇಲ್ಲಿಗೆ ಬಂದಿದೀರಿ. ಉತ್ಸಾಹದಿಂದ ಬರುವ ನೀವು ವರುಷಕ್ಕೊಂದು ಬಾರಿ ಅಥವಾ ಎರಡು–ಮೂರು ವರುಷಗಳಿಗೊಂದು ಬಾರಿ ಸಮ್ಮೇಳನದಲ್ಲಿ ಸೇರಬೇಕು. ನೀವು ಸಮ್ಮೇಳನದ ಸವಿನೆನಪುಗಳನ್ನು ಹಿಂದಕ್ಕೆ ಕೊಂಡುಹೋಗಬೇಕು. ಸತ್ಯದ ಮಹತ್ ಕಟ್ಟಡವನ್ನು ಕಟ್ಟಲು ಸರ್ವಪ್ರಯತ್ನಗಳನ್ನೂ ಮಾಡಬೇಕು.

'ಏಷ್ಯದ ಪ್ರತಿನಿಧಿಗಳೆಲ್ಲ ಒಂದಾಗಿ ಸೇರಿದೀರಿ. ಇದು ಯೂರೋಪು, ಅಮೆರಿಕ ಅಥವಾ ಏಷ್ಯೇತರರ ವಿರುದ್ಧ ಯುದ್ಧ ಹೂಡುವುದಕ್ಕಾಗಿಯೆ? ನಾನು ಒತ್ತಿಹೇಳುತ್ತೇನೆ 'ಅಲ್ಲ' ಎಂದು. ಭಾರತದ ಕಾರ್ಯ ಅದಲ್ಲ. ಮುಖ್ಯವಾಗಿ ಅಹಿಂಸಾಮಾರ್ಗದಿಂದಲೇ ಸ್ವಾತಂತ್ರ್ಯವನ್ನು ಸಂಪಾದಿಸಿದ ಭಾರತ, ಆ ಸ್ವಾತಂತ್ರ್ಯವನ್ನು ಜಗತ್ತಿನ ಇತರ ರಾಷ್ಟ್ರಗಳ ಸ್ವಾತಂತ್ರ್ಯನಾಶಕ್ಕೆ ಉಪಯೋಗಿಸಿದರೆ ನನಗೆ ತುಂಬ ದುಃಖವಾಗುತ್ತದೆ. ಯೂರೋಪಿನವರು ಏಷ್ಯಖಂಡದ ಜನಾಂಗಗಳನ್ನೆಲ್ಲ ಉದ್ದಕ್ಕೂ ಲೂಟಿಮಾಡಿದಾರೆ.

'ಏಷ್ಯ ಸ್ವತಂತ್ರವಾಗಿ, ಪಾಶ್ಚಾತ್ಯ ರಾಷ್ಟ್ರಗಳಂತೆ ಸ್ವತಂತ್ರವಾಗಿ ಬಾಳುವುದೆಂಬ ದೃಢನಿಶ್ಚಯ ಮಾಡದೆ, ನಾವು ಈ ಸಮ್ಮೇಳನವನ್ನು ಮುಗಿಸಿದರೆ, ಅದು ದುಃಖದ ಸಂಗತಿಯಾಗುತ್ತದೆ. ಇಂತಹ ಸಮ್ಮೇಳನಗಳು ಕಾಲಕ್ಕೆ ಸರಿಯಾಗಿ ಸೇರಬೇಕು. ಭಾರತದಲ್ಲಿಯೇ ಸೇರಬೇಕು ಎಂದು ಮಾತ್ರ ಹೇಳಬಯಸುತ್ತೇನೆ.' (ಹರಿಜನ, ೨೦–೪–೧೯೪೭)

## ಏಷ್ಯದ ಸಂದೇಶ

ಅಂತರರಾಷ್ಟ್ರೀಯ ಏಷ್ಯ ಸಂಬಂಧ ಸಮ್ಮೇಳನದ ಮುಕ್ತಾಯ ಭಾಷಣವನ್ನು ೧೯೪೭ನೇ ಏಪ್ರಿಲ್ ೨ನೇ ತಾರೀಖಿನಲ್ಲಿ ದಿಲ್ಲಿಯ ಪುರಾನಾ ಕಿಲ್ಲಾದಲ್ಲಿ ಮಾಡುತ್ತಾ ಗಾಂಧೀಜೀ ಹೀಗೆ ಹೇಳಿದರು :

‘ಮಿತ್ರರೇ, ನೀವು ನಿಜವಾದ ಭಾರತವನ್ನು ನೋಡಿಲ್ಲ. ದಿಲ್ಲಿ, ಬೊಂಬಾಯಿ, ಮದರಾಸ್, ಕಲ್ಕತ್ತ, ಲಾಹೋರ್ ಇವು ದೊಡ್ಡ ನಗರಗಳು. ಆದುದರಿಂದ ಪಾಶ್ಚಾತ್ಯ ಪ್ರಭಾವಕ್ಕೆ ಒಳಗಾಗಿವೆ. ಭಾರತದ ಅತ್ಯುತ್ಕೃಷ್ಟ ಅಂಶ, ನಮ್ಮ ಹಳ್ಳಿಗಳಲ್ಲಿ ಭಂಗಿಗಳ ವಾಸಗೃಹಗಳಲ್ಲಿ ದೊರೆಯುತ್ತದೆ. ಭಾರತ ದಲ್ಲಿ ಏಳು ಲಕ್ಷ ಹಳ್ಳಿಗಳಿವೆ. ಅವುಗಳಲ್ಲಿ ಮೂವತ್ತುಕೋಟಿ ಜನ ವಾಸಿಸು ತ್ತಿದಾರೆ.

‘ನಿಮ್ಮಲ್ಲಿ ಕೆಲವರು ಹಳ್ಳಿಗಳನ್ನು ಹೋಗಿ ನೋಡಿದರೆ ಅದರಿಂದೇನೂ ಆಕರ್ಷಿತರಾಗುವುದಿಲ್ಲ. ಗೊಬ್ಬರದ ರಾಶಿಗಳನ್ನು ಕೆದಕಿ ನೋಡಬೇಕು. ಹಿಂದೆ ಅವು ಅರಮನೆಗಳಾಗಿದ್ದುವೆಂದು ನಾನು ಹೇಳುವುದಿಲ್ಲ; ಆದರೆ ಇಂದು ಅವು ನಿಜವಾಗಿ ಗೊಬ್ಬರದ ರಾಶಿಗಳೇ. ಹೀಗೆ ಹಿಂದೆ ಅವು ಇರಲಿಲ್ಲ. ನಾನು ಹೇಳುವುದು ಇತಿಹಾಸವಲ್ಲ; ನನ್ನ ಕಣ್ಣಿನಿಂದ ನೋಡಿರುವುದು. ನಾನು ಭಾರತದಲ್ಲಿ ಒಂದು ಕೊನೆಯಿಂದ ಮತ್ತೊಂದು ಕೊನೆಗೆ ಸಂಚರಿಸಿ, ಕಾಂತಿ ಹೀನ ನೇತ್ರಗಳುಳ್ಳ ಮನುಷ್ಯಸಮಾಜದ ಈ ದುಃಖಿಗಳನ್ನು ನೋಡಿದೇನೆ. ಅದೇ ಭಾರತ. ಈ ದರಿದ್ರ ಗುಡಿಸಲುಗಳಲ್ಲಿ, ಈ ಗೊಬ್ಬರದ ರಾಶಿಗಳ ನಡುವೆ, ಭಂಗಿಗಳು ವಾಸಿಸುತ್ತಿದಾರೆ. ಭಟ್ಟಿ ಇಳಿಸಿದ ವಿವೇಕದ ಸಾರ ಅವರಲ್ಲಿ ಕಾಣುತ್ತದೆ.’

ಪೂರ್ವ ದೇಶಗಳಿಂದ ಪಶ್ಚಿಮಕ್ಕೆ ಜ್ಞಾನ ಹರಿಯಿತೆಂದು ಹೇಳುತ್ತಾ ಗಾಂಧೀಜೀ ಹೀಗೆ ಮುಂದುವರಿದರು: ‘ಈ ಜ್ಞಾನಿಗಳಲ್ಲಿ ಮೊದಲನೆಯವನು ಜರತುಷ್ಟ್ರ. ಆತ ಪೂರ್ವದೇಶದವನು. ಅವನ ಹಿಂದೆ ಬಂದವನು ಪೂರ್ವ ಹಿಂದೂಸ್ತಾನದ ಬುದ್ಧ. ಬುದ್ಧನನ್ನು ಅನುಸರಿಸಿ ಬಂದವರು ಯಾರು? ಮತ್ತೆ ಪೂರ್ವದೇಶದ ಏಸುಕ್ರಿಸ್ತ. ಏಸುಕ್ರಿಸ್ತನಿಗೆ ಮುಂಚೆ ಮೋಸಸ್ ಆದ. ಆತ ಜನಿಸಿದ್ದು ಈಜಿಪ್ಟ್, ಆದರೂ ಅವನು ಪ್ಯಾಲೆಸ್ಟೈನ್‌ಗೆ ಸೇರಿದವನು. ಏಸುಕ್ರಿಸ್ತನ ಅನಂತರ ಮಹಮ್ಮದ್ ಬಂದನು. ರಾಮ, ಕೃಷ್ಣ ಮತ್ತು ಇತರ ಜ್ಯೋತಿಗಳ ವಿಷಯ ಈಗ ಹೇಳುವುದಿಲ್ಲ. ಅವರು ಕಡಮೆ ಜ್ಯೋತಿಗಳೆಂದು ನಾನು ಹೇಳುವುದಿಲ್ಲ. ಆದರೆ ಅವರು ಸಾಹಿತ್ಯಜಗತ್ತಿಗೆ ಅಷ್ಟಾಗಿ ತಿಳಿದಿಲ್ಲ. ಆದರೂ ಭಾರತದ ಈ ಜನರಿಗೆ ಸಮಾನರಾದವರು ಜಗತ್ತಿನಲ್ಲಿ ಇರುವುದು ನನಗೆ ಗೊತ್ತಿಲ್ಲ. ಅನಂತರ ಏನಾಯಿತು? ಕ್ರಿಸ್ತಧರ್ಮ ಪಶ್ಚಿಮಕ್ಕೆ ಹೋದ

ಮೇಲೆ ಕುರೂಪವಾಯಿತು. ಹೀಗೆ ಹೇಳಲು ನನಗೆ ದುಃಖವಾಗುತ್ತದೆ. ಈ ವಿಷಯ ಮುಂದೆ ಮಾತನಾಡಲು ನನಗೆ ಇಷ್ಟವಿಲ್ಲ.

'ನಾನು ನಿಮಗೆ ಈ ಕತೆ ಹೇಳಿದುದು, ನೀವು ದೊಡ್ಡ ಪಟ್ಟಣಗಳಲ್ಲಿ ನೋಡುತ್ತಿರುವುದು ನಿಜವಾದ ಭಾರತವಲ್ಲ, ಎಂಬುದು ನಿಮಗೆ ತಿಳಿಯಲಿ ಎಂದು. ನಿಜವಾಗಿ ನಮ್ಮ ಕಣ್ಣೆದುರಿಗೆ ನಡೆಯುತ್ತಿರುವ ಈ ಕಗ್ಗೊಲೆ ನಾಚಿಕೆಯ ಪ್ರಸಂಗ. ನಿನ್ನೆ ನಾನು ಹೇಳಿದಂತೆ ಈ ಕಗ್ಗೊಲೆಯ ಸ್ಮೃತಿಯನ್ನು ಭಾರತದ ಗಡಿಯ ಆಚೆಗೆ ತೆಗೆದುಕೊಂಡು ಹೋಗಬೇಡಿ.

'ಏಷ್ಯದ ಸಂದೇಶವನ್ನು ನೀವು ಅರಿಯಬೇಕೆಂದು ನಾನು ಬಯಸುತ್ತೇನೆ. ಅದನ್ನು ಪಾಶ್ಚಾತ್ಯರ ಕನ್ನಡಕದ ಮೂಲಕ ಅಥವಾ ಅಣುಬಾಂಬಿನ ಅನುಕರಣೆಯಿಂದ ಕಲಿಯುವುದು ಸಾಧ್ಯವಿಲ್ಲ. ಪಶ್ಚಿಮ ದೇಶಗಳಿಗೆ ನೀವು ಒಂದು ಸಂದೇಶವನ್ನು ಕೊಡಬಯಸಿದರೆ, ಅದು ಸತ್ಯ ಮತ್ತು ಪ್ರೇಮದ ಸಂದೇಶವಾಗಬೇಕು. ನಿಮ್ಮ ಬುದ್ಧಿಯನ್ನು ಮಾತ್ರ ಒಪ್ಪಿಸುವುದು ನನ್ನ ಇಷ್ಟವಿಲ್ಲ. ನಿಮ್ಮ ಹೃದಯವನ್ನು ಸೆರೆಹಿಡಿಯಬಯಸುತ್ತೇನೆ.

'ಈ ಪ್ರಜಾತಂತ್ರಯುಗದಲ್ಲಿ, ಅತ್ಯಂತ ದರಿದ್ರರೂ ಎಚ್ಚರಗೊಂಡ ಈ ಯುಗದಲ್ಲಿ, ಈ ಸಂದೇಶವನ್ನು ನೀವು ಹೆಚ್ಚು ಪ್ರಾಮುಖ್ಯತೆಯಿಂದ ಪುನಃ ಪ್ರಚಾರಮಾಡಬಲ್ಲಿರಿ. ನೀವು ಪಶ್ಚಿಮವನ್ನು ಪೂರ್ಣವಾಗಿ ಜಯಿಸಬಹುದು—ನಿಮ್ಮನ್ನು ಅವರು ಲೂಟಿಮಾಡಿದುದಕ್ಕೆ ಸೇಡು ತೀರಿಸಿಕೊಳ್ಳುವುದರಿಂದ ಅಲ್ಲ—ಆದರೆ ನಿಜವಾಗಿ ಅರ್ಥಮಾಡಿಕೊಳ್ಳುವುದರಿಂದ. ನೀವೆಲ್ಲ ನಿಮ್ಮ ಬುದ್ಧಿಗಳನ್ನು ಮಾತ್ರವೇ ಅಲ್ಲ, ಹೃದಯಗಳನ್ನೂ ರಹಸ್ಯವನ್ನೂ ಅರ್ಥಮಾಡಿಕೊಳ್ಳಲು ಒಟ್ಟುಗೂಡಿಸಿದರೆ, ಆ ಮಹತ್ ಸಂದೇಶಕ್ಕೆ ನಾವು ನಿಜವಾಗಿ ಅರ್ಹರಾದರೆ, ಪಶ್ಚಿಮವನ್ನು ಜಯಿಸುವುದು ಪೂರ್ಣವಾಗುವುದು. ಈ ಜಯವನ್ನು ಪಶ್ಚಿಮವೇ ಪ್ರೀತಿಸುವುದು.

'ಇಂದು ಪಶ್ಚಿಮ, ವಿವೇಕಕ್ಕಾಗಿ ಕಾತರಿಸುತ್ತಿದೆ. ಅಣುಬಾಂಬುಗಳನ್ನು ಅಧಿಕಗೊಳಿಸುವುದರಲ್ಲಿ ಅದಕ್ಕೆ ಪೂರ್ಣ ನಿರಾಶೆಯಾಗಿದೆ. ಯಾಕೆ ಎಂದರೆ ಅಣುಬಾಂಬು ಪಶ್ಚಿಮವನ್ನು ಮಾತ್ರ ನಾಶಮಾಡುವುದಿಲ್ಲ. ಜಗತ್ತನ್ನೇ ನಾಶಮಾಡುತ್ತದೆ: ಬೈಬಲ್‌ನಲ್ಲಿ ಹೇಳಿದ ಭವಿಷ್ಯವಾಣಿ ಪೂರ್ಣವಾಗಿ ನೆರವೇರುವುದೋ ಎಂಬಂತೆ—ನಿಮ್ಮ ಮತ್ತು ನನ್ನ ಗುರುಗಳು ಏಷ್ಯಕ್ಕೆ ಬೋಧಿಸಿರುವ ಆಸ್ತಿ ಇದು.

(ಹರಿಜನ, ೨೦-೪-೧೯೪೭)

# ಅರಣ್ಯರೋದನ

**ಊರ್ಧ್ವಬಾಹುರ್ವಿರೌಮ್ಯೇಷ ನ ಚ ಕಶ್ಚಿತ್ ಶೃಣೋತಿ ಮೇ ।**
**ಧರ್ಮಾದರ್ಥಶ್ಚ ಕಾಮಶ್ಚ ಸ ಧರ್ಮಃ ಕಿಂ ನ ಸೇವ್ಯತೇ ॥**

[ ಬಾಹುವನ್ನು ಮೇಲೆ ಎತ್ತಿ ನಾನು ಕೂಗಿ ಹೇಳುತ್ತೇನೆ (ಯಾರೂ ನನ್ನ ಮಾತು ಕೇಳುವುದಿಲ್ಲ) ಧರ್ಮದಿಂದ ಅರ್ಥ–ಕಾಮ ಎರಡೂ ದೊರೆಯುತ್ತದೆ. ಧರ್ಮವನ್ನು ಯಾಕೆ ಸೇವಿಸುವುದಿಲ್ಲ ? ]

ಸಿಮ್ಲಾಕ್ಕೆ ಹಿಂದಿರುಗುವ ದಾರಿಯಲ್ಲಿ, ಬಾಪೂಜಿ ಆಣೆ ಶನಿವಾರ ನನಗೆ ಒಂದು ಅವಸರದ ಭೇಟಿ ಇತ್ತರು. ನಾವಿಬ್ಬರೂ ಒಟ್ಟಿಗೆ ಕೆಲಸ ಮಾಡಲಿ ಅಥವಾ ವಿರೋಧವಾದ ದಿಕ್ಕುಗಳಲ್ಲಿ ಕೆಲಸ ಮಾಡುತ್ತಿರಲಿ, ನನ್ನಲ್ಲಿ ಅವರ ಪ್ರೇಮ ಒಂದೇ ಸಮ. ಆದುದರಿಂದ ನಾನು ಎಲ್ಲಿದ್ದರೂ, ನನ್ನನ್ನು ನೋಡುವ ಅವಕಾಶವನ್ನು ಅವರು ತಪ್ಪಿಸಿಕೊಳ್ಳುವುದಿಲ್ಲ. ನನ್ನೊಂದಿಗೆ ಅವರು ನಿಸ್ಸಂಕೋಚವಾಗಿ ಚರ್ಚಿಸುತ್ತಾರೆ. ಅವರ ಜ್ಞಾನಭಂಡಾರದ ಒಂದೆರಡು ಶ್ಲೋಕಗಳಿಗೆ ನನ್ನನ್ನೂ ಭಾಗಿಯನ್ನಾಗಿ ಮಾಡುತ್ತಾರೆ. ಅವರ ದಿಲ್ಲಿಯ ಭೇಟಿಯಲ್ಲಿ, ನಾನು ಕಾಂಗ್ರೆಸ್ಸಿನ ಸಂಬಂಧವನ್ನು ತ್ಯಜಿಸಬೇಕಾಗಿ ಬಂದುದಕ್ಕೆ ಅವರು ನನಗೆ ಸಹಾನುಭೂತಿ ತೋರಿಸಿದರು. ಅವರು ನನ್ನನ್ನು ಅಭಿನಂದಿಸಿ, ' ನಿಮ್ಮನ್ನು ಅವರು ನಿಮ್ಮ ಪಾಡಿಗೆ ನಿಮ್ಮ ದಾರಿಯಲ್ಲಿ ಹೋಗಲು ಶಾಂತವಾಗಿ ಬಿಡಬೇಕು. ' ಪ್ರತಿ ಬ್ರಿಟನ್ನರಿಗೂ ' ನಿಮ್ಮ ಪ್ರಾರ್ಥನೆ ನಾನು ಓದಿದೆ. ಅದನ್ನು ಯಾರೂ ಕೇಳುವುದಿಲ್ಲ. ಅದರಿಂದ ನಿಮಗೆ ಆಗಬೇಕಾದ್ದು ಏನೂ ಇಲ್ಲ. ನಿಮ್ಮ ದೃಷ್ಟಿಯಲ್ಲಿ ಅವರ ಧರ್ಮ ಯಾವುದೆಂದು ನಿಮಗೆ ತೋರುತ್ತದೆಯೋ ಅದನ್ನು ಹೇಳದೆ ನಿಮಗೆ ವಿಧಿ ಇಲ್ಲ. ಅವರು ನಿಮ್ಮ ಮಾತನ್ನು ಕೇಳದಿರುವುದು ಆಶ್ಚರ್ಯವಲ್ಲ. ಕಾಂಗ್ರೆಸ್ ಸಂಸ್ಥೆಯೇ ಸಂದಿಗ್ಧ ಪರಿಸ್ಥಿತಿಯಲ್ಲಿ ನಿಮ್ಮ ಮಾತನ್ನು ಕೇಳದಿರುವುದರಿಂದ, ಅದೇನೂ ಆಶ್ಚರ್ಯವಲ್ಲ. ವ್ಯಾಸ ಋಷಿಯ್ಯೇ ತನ್ನ ಮಾತಿಗೆ ಜನರನ್ನು ಒಲಿಸಿಕೊಳ್ಳಲು ಅಶಕ್ತನಾದ ಮೇಲೆ ಇತರರ ಪಾಡೇನು ? ತನ್ನ ಮಹತ್ ಇತಿಹಾಸವಾದ ಮಹಾಭಾರತ ಕಾವ್ಯವನ್ನು, ಆತ ತನ್ನ ಹೃದಯದ ನೋವನ್ನು ಹೊರಗೆಡಹುವ ಶ್ಲೋಕದೊಂದಿಗೆ ಮುಕ್ತಾಯಗೊಳಿಸಿದಾನೆ. ಹೀಗೆ ಹೇಳಿ ನಾನು ಈ ಲೇಖನದ

ಪ್ರಾರಂಭದಲ್ಲಿ ಉದ್ಧರಿಸಿರುವ ಶ್ಲೋಕವನ್ನು ಅವರು ಹೇಳಿದರು. ಇದರಿಂದ ಅವರು ನನ್ನ ಶ್ರದ್ಧೆಯನ್ನು ಹೆಚ್ಚು ಬಲಪಡಿಸಿ, ನಾನು ಆರಿಸಿಕೊಂಡ ದಾರಿ ಎಷ್ಟು ಕಷ್ಟವಾದುದು ಎಂಬುದನ್ನೂ ತೋರಿಸಿದರು.

ಆದರೆ ಇತರರು ಊಹಿಸಿರುವಂತೆ ಅದು ನನಗೆ ಎಂದಿಗೂ ಕಠಿಣವಾಗಿ ತೋರಿಲ್ಲ. ಸರದಾರರ ಮಾರ್ಗವೂ ನನ್ನ ಮಾರ್ಗವೂ ಈ ದಿನ ಬೇರೆ ಬೇರೆಯಾಗಿರುವಂತೆ ತೋರಿದರೂ, ನಮ್ಮ ಹೃದಯಗಳೂ ಬೇರೆಬೇರೆಯಾಗಿವೆ ಎಂದು ಅರ್ಥವಲ್ಲ. ನನ್ನಿಂದ ವಿಚ್ಛೇದಹೊಂದದಂತೆ ಅವರನ್ನು ತಡೆಯುವುದು ನನ್ನ ಕೈಯಲ್ಲಿತ್ತು. ಆದರೆ ಹಾಗೆ ಮಾಡುವುದು ಸರಿಯಾಗಿ ಕಾಣಲಿಲ್ಲ. ತನ್ನ ಸ್ಪಷ್ಟ ಕರ್ತವ್ಯವೆಂದು ರಾಜಾಜಿ ಭಾವಿಸಿರುವುದಕ್ಕೆ ಎದುರಾಗಿ ಹೋರಾಡುವುದು ನೀತಿಯಾಗುತ್ತಿರಲಿಲ್ಲ. ಆದುದರಿಂದ ರಾಜಾಜಿಯವರನ್ನು ಪರಿವರ್ತಿಸುವ ಬದಲು, ತಮ್ಮ ದಾರಿಯನ್ನು ಅವರು ಅನುಸರಿಸುವಂತೆ ನಾನು ಪ್ರೋತ್ಸಾಹಿಸಿದೆ. ಹಾಗೆ ಮಾಡುವುದು ನನ್ನ ಸ್ಪಷ್ಟವಾದ ಕರ್ತವ್ಯವಾಗಿತ್ತು. ಸ್ಪಷ್ಟವಾದ ಒಂದು ಹೊಸ ಮಾರ್ಗದಲ್ಲಿ ನನ್ನ ಅಹಿಂಸಾಪ್ರಯೋಗಗಳನ್ನು ಜಯಶಾಲಿಯಾಗಿ ನಡೆಸುವ ಶಕ್ತಿ ನನಗೆ ಇದ್ದರೆ, ನನ್ನ ಶ್ರದ್ಧೆ ದೃಢವಾಗಿದ್ದರೆ, ಜನತೆ ಸ್ವಭಾವದಿಂದ ಅಹಿಂಸೆಯುಳ್ಳವರು ಎಂದು ನಾನು ಯೋಚಿಸಿರುವುದು ನಿಜವಾದರೆ, ಸರದಾರರೂ ರಾಜಾಜಿಯೂ ನನ್ನೊಂದಿಗೆ ಮತ್ತೆ ಇರುತ್ತಾರೆ.

ಅಹಿಂಸೆಯ ಪ್ರಯೋಗಕ್ಕೆ ಈ ಸ್ಪಷ್ಟವಾದ ಹೊಸ ಕ್ಷೇತ್ರಗಳು ಯಾವುವು? ವರ್ಕಿಂಗ್ ಕಮಿಟಿಯ ತೀರ್ಮಾನಗಳನ್ನೂ 'ಹರಿಜನ'ದಲ್ಲಿ ಪ್ರಕಟವಾದ ಲೇಖನಗಳನ್ನೂ ಅನುಸರಿಸುತ್ತಿರುವವರಿಗೆ ಇವು ಪರಿಚಿತವಾಗಿವೆ. ವಿಧ್ಯುಕ್ತವಾಗಿ ನಿರ್ಮಿತವಾದ ಸರ್ಕಾರಕ್ಕೆ ವಿರೋಧವಾಗಿ ಅಹಿಂಸೆ, ಒಂದು ಕ್ಷೇತ್ರ. ಇದನ್ನು ಇಲ್ಲಿಯವರೆಗೆ ನಾವು ತಕ್ಕಮಟ್ಟಿನ ಜಯದೊಂದಿಗೆ ಆಚರಿಸಿದೇವೆ. ಈ ಅಹಿಂಸೆ ದುರ್ಬಲರ ಅಹಿಂಸೆ ಎಂದು ನಾನು ಯಾವಾಗಲೂ ಹೇಳಿದೇನೆ. ಈ ಅಹಿಂಸೆ ಕಾಂಗ್ರೆಸ್ಸಿಗರಲ್ಲಿ ಶಾಶ್ವತವಾಗಿದೆ ಎಂದು ಹೇಳಬಹುದು.

ಮತ್ತೊಂದು ಕ್ಷೇತ್ರ—ಹಿಂದೂ-ಮುಸಲ್ಮಾನ ದೊಂಬಿಗಳು ಮುಂತಾದ ಇತರ ಗೊಂದಲಗಳು. ಆಂತರಿಕ ಅನಾಯಕತ್ವ ಇಷ್ಟು ಸನ್ನಿಹಿತವಾಗಿರುವಾಗ

ಕಾಂಗ್ರೆಸ್ಸಿಗರು ಮಾಡಬೇಕಾದುದೇನು? ಅವರು ಪೆಟ್ಟಿಗೆ ಪೆಟ್ಟನ್ನು ಹಿಂದಿರುಗಿಸುವರೆ? ಅಥವಾ ಕ್ರೂರವಾದ ಪೆಟ್ಟುಗಳನ್ನು ಸ್ವೀಕರಿಸಲು ಸಂತೋಷದಿಂದ ತಲೆಬಾಗುವರೆ? ಇದಕ್ಕೆ ಉತ್ತರ ನಾವು ಯೋಚಿಸುವಷ್ಟು ಸುಲಭವಲ್ಲ. ಈ ಪ್ರಶ್ನೆಯ ಸೂಕ್ಷ್ಮತೆಗಳ ಚರ್ಚೆ ಈಗ ಬೇಡ. ಕಾಂಗ್ರೆಸ್ಸಿಗರು ತಮ್ಮ ಪ್ರಾಣವನ್ನು ಬಲಿಕೊಟ್ಟು—ಪ್ರಾಣ ತೆಗೆದುಕೊಂಡಲ್ಲ—ಪರಿಸ್ಥಿತಿಯನ್ನು ಹತೋಟಿಗೆ ತರಬೇಕೆಂದು ನಾನು ಹೇಳುತ್ತೇನೆ. ಒಂದು ಏಟನ್ನೂ ಹಿಂದಿರುಗಿಸದೆ, ಮರಣವನ್ನಂಗೀಕರಿಸುವವನು ತನ್ನ ಕರ್ತವ್ಯವನ್ನು ಪೂರ್ಣವಾಗಿ ನೇರವೇರಿಸುತ್ತಾನೆ. ಉಳಿದುದೆಲ್ಲ ದೇವರ ಕೈಯಲ್ಲಿ.

ಈ ಅಹಿಂಸೆ—ಅಶಕ್ತರ ಅಹಿಂಸೆಯಲ್ಲವೆಂಬುದು ಸ್ಪಷ್ಟ. ಇದರಲ್ಲಿ ಸೆರೆಮನೆಗೆ ಹೋಗುವ ಆನಂದವಿಲ್ಲ. ಸೆರೆಮನೆಗೆ ಹೋಗುವವನಿಗೆ ಆ ಆನಂದವೂ ಆಯಿತು. ಸರ್ಕಾರಕ್ಕೆ ವಿರೋಧವಾಗಿ ಅವನ ಮನಸ್ಸಿನಲ್ಲಿ ತುಂಬಿರುವ ಅತೃಪ್ತಿಯನ್ನು ವ್ಯಕ್ತಪಡಿಸಿದಂತೆಯೂ ಆಯಿತು; ಸರ್ಕಾರದೊಂದಿಗೆ ಅಸಹಕಾರ ಮಾಡಿದಂತೆಯೂ ಆಯಿತು. ಆದರೆ ಕತ್ತಿ, ಚಾಕು, ಲಾಠಿ ಅವಿರಳವಾಗಿ ಮಳೆಗರೆಯುತ್ತಿರುವಾಗ ಒಂಟಿಯಾಗಿ ಮಾಡುವುದೇನು? ಮನಸ್ಸಿನಲ್ಲಿ ಯಾರನ್ನೂ ದ್ವೇಷಿಸದೆ, ಈ ಏಟುಗಳನ್ನು ಸ್ವೀಕರಿಸುವುದು ಸಾಧ್ಯವೆ? ಔದಾರ್ಯದಿಂದ ತುಂಬಿದ್ದ ಹೊರತು ಹಾಗೆ ಮಾಡುವುದು ಸಾಧ್ಯವಿಲ್ಲ ಎಂಬುದು ಸ್ಪಷ್ಟ. ವಿರೋಧಿಯೂ ತಾನೂ ಒಂದು ಎಂದು ಭಾವಿಸುವವನು ಮಾತ್ರ ಆ ಏಟುಗಳನ್ನು ಹೂವುಗಳನ್ನು ಸ್ವೀಕರಿಸುವಂತೆ ಸ್ವೀಕರಿಸಬಲ್ಲನು. ಅಂತಹ ಒಬ್ಬನೇ ಆದರೂ ಸರಿ, ದೇವರ ದಯೆ ಅವನಿಗಿದ್ದರೆ ಸಾವಿರ ಜನರು ಮಾಡುವ ಕಾರ್ಯವನ್ನು ತಾನು ಮಾಡಬಲ್ಲನು. ಇದಕ್ಕೆ ಬೇಕಾದುದು ಅತ್ಯಂತ ಉಚ್ಚಮಟ್ಟದ ಆತ್ಮಶಕ್ತಿ ಮತ್ತು ನೈತಿಕಧೈರ್ಯ.

ಈ ಶಕ್ತಿಯು ಅಹಿಂಸೆಯನ್ನು ಪ್ರಕಟಿಸಬಲ್ಲ ಪುರುಷ ಅಥವಾ ಸ್ತ್ರೀ, ಹೊರಗಿನ ಆಕ್ರಮಣವನ್ನು ಸುಲಭವಾಗಿ ಎದುರಿಸಬಲ್ಲರು. ಅಹಿಂಸೆಯ ಆಚರಣೆಗೆ ಇದು ಮೂರನೆಯ ಕ್ಷೇತ್ರ. ಕಾಂಗ್ರೆಸ್ ವರ್ಕಿಂಗ್ ಕಮಿಟಿಯ ಅಭಿಪ್ರಾಯ ಹೀಗಿತ್ತು: ಆಂತರಿಕ ಅನಾಯಕತ್ವದ ಸಂದರ್ಭದಲ್ಲಿ ಅಹಿಂಸೆಯನ್ನು ಆಚರಿಸಲು ಸಾಧ್ಯವಾಗಬಹುದಾದರೂ ಪರದೇಶದ ಶತ್ರುವಿನ

ಆಕ್ರಮಣವನ್ನು ಅಹಿಂಸೆಯಿಂದ ಎದುರಿಸಲು ಭಾರತಕ್ಕೆ ಶಕ್ತಿಯಿಲ್ಲ. ಅಹಿಂಸೆ ಯಲ್ಲಿ ಅವರಿಗೆ ನಂಬಿಕೆ ಇಲ್ಲದುದು ನನ್ನನ್ನು ವ್ಯಥೆಗೊಳಿಸಿದೆ. ಭಾರತದ ಶಸ್ತ್ರರಹಿತರಾದ ಕೋಟಿಗಟ್ಟಲೆ ಜನ, ಈ ವಿಶಾಲ ಕ್ಷೇತ್ರದಲ್ಲಿ ಅಹಿಂಸೆಯನ್ನು ಜಯಪ್ರದವಾಗಿ ಆಚರಿಸಲಾರರೆಂದು ನಾನು ನಂಬುವುದಿಲ್ಲ. ತಾತ್ಕಾಲಿಕವಾಗಿ ಅಹಿಂಸೆಯಲ್ಲಿ ನಂಬಿಕೆಯನ್ನು ಕಳೆದುಕೊಂಡಿರುವ ಸರದಾರರಿಗೆ, ಮೇಲೆ ಹೇಳಿದ ಕ್ಷೇತ್ರಗಳಲ್ಲಿ ಭಾರತಕ್ಕೆ ಅನುಗುಣವಾದ ಆಯುಧ ಅಹಿಂಸೆಯೇ ಎಂದು ಮತ್ತೆ ನಂಬಿಕೆಯ ಪುನಃಸ್ಥಾಪನೆ ಮಾಡಿಕೊಡುವುದು ಕಾಂಗ್ರೆಸ್ಸಿನ ಕರ್ತವ್ಯ. ಭಾರತದ ಯುದ್ಧೋತ್ಸಾಹಿ ಜನಾಂಗಗಳ ವಿಷಯವೋ ಎಂದು ಕೇಳಬೇಡಿ. ಕಾಂಗ್ರೆಸ್ಸಿಗರು ಅಹಿಂಸಾ ಸೈನ್ಯದಲ್ಲಿ ತಮ್ಮ ರಾಷ್ಟ್ರರಕ್ಷಣೆಗಾಗಿ ತಯಾರಿ ತೆಗೆದುಕೊಳ್ಳಬೇಕೆನ್ನುವುದಕ್ಕೆ ನನ್ನ ಮಟ್ಟಿಗೆ ಇದು ಇನ್ನೂ ಹೆಚ್ಚು ಕಾರಣ. ಆದರೆ ಇತರ ಕ್ಷೇತ್ರಗಳಲ್ಲಿ ಅಹಿಂಸೆಯನ್ನು ಪ್ರಯೋಗಿಸಿ ಜಯಹೊಂದಿದೆ. ಕಾಂಗ್ರೆಸ್ ಅಲ್ಲದೆ ಮತ್ತಾರು ತಾನೇ ಇದನ್ನು ಪ್ರಯೋಗಿಸುವವರು? ನನ್ನ ಅಚಲವಾದ ನಂಬಿಕೆ ಇದು: ನಮ್ಮಲ್ಲಿ ತಕ್ಕಷ್ಟು ಸಂಖ್ಯೆಯ ಅಹಿಂಸಾ ಯೋಧರು ಇರುವುದಾದರೆ ನಾವು ಈ ಹೊಸ ಕ್ಷೇತ್ರದಲ್ಲಿಯೂ ಜಯಗಳಿಸುವುದು ನಿಶ್ಚಯ. ಜತೆಗೆ ಅನಾವಶ್ಯಕವಾಗಿ ವ್ಯರ್ಥವಾಗುತ್ತಿರುವ ಕೋಟಿಸಂಖ್ಯೆಯ ಹಣ ಉಳಿತಾಯವಾಗುತ್ತದೆ.

ಆದುದರಿಂದ ಗುಜರಾತಿನ ಸ್ತ್ರೀಪುರುಷ ಕಾಂಗ್ರೆಸ್ಸಿಗರೆಲ್ಲ ತಾವು ಅಹಿಂಸೆ ಯನ್ನೇ ಆಚರಿಸುತ್ತೇವೆಂದೂ, ಹಿಂಸೆಯನ್ನೆಂದೂ ಕೈಕೊಳ್ಳುವುದಿಲ್ಲವೆಂದೂ ಸರದಾರರಿಗೆ ಮನದಟ್ಟು ಮಾಡಿಕೊಡುವರೆಂದು ನಾನು ನಂಬುತ್ತೇನೆ. ಹಿಂಸಾ ಆಚರಣೆಯಿಂದ ಜಯ ಪೂರ್ಣ ಸಂಭವವಾದರೂ, ಅವರು ಅಹಿಂಸೆಯನ್ನು ಬಿಟ್ಟು ಹಿಂಸೆಯನ್ನು ಆರಿಸಿಕೊಳ್ಳಬಾರದು. ನಮ್ಮ ತಪ್ಪುಗಳಿಂದ ನಾವು ಖಂಡಿತ ಕಲಿಯುತ್ತೇವೆ. 'ನಾವು ಬೀಳುವುದು ಏಳುವುದಕ್ಕಾಗಿ, ಕಂಗೆಡು ವುದು ಹೆಚ್ಚು ಉತ್ತಮವಾಗಿ ಹೋರಾಡುವುದಕ್ಕಾಗಿ, ನಿದ್ರಿಸುವುದು ಎದ್ದೇಳು ವುದಕ್ಕಾಗಿ.'

(ಹರಿಜನ, ೧೩-೪-೧೯೪೦)

# ಗಾಂಧೀ ಸೇವಾ ಸಂಘದ ಸಮಕ್ಷಮ

'ಕಾಂಗ್ರೆಸ್ ಸಾಮಾನ್ಯ ಯೋಧರು ಅಹಿಂಸೆಯಲ್ಲಿ ನಂಬಿಕೆ ಕಳೆದು ಕೊಂಡಿದಾರೆ. ಸಂದಿಗ್ಧ ಪರಿಸ್ಥಿತಿಯಲ್ಲಿ ಸರಿಯಾದ ಮಟ್ಟಕ್ಕೆ ಬರಲಾರರು' ಎಂದು ಕಾಂಗ್ರೆಸ್ ಕಾರ್ಯ ಸಮಿತಿ ಭಾವಿಸಿದುದು ತಪ್ಪು ಎಂದಾದರೆ ಕಾಂಗ್ರೆಸ್ಸಿನ ಸಾಮಾನ್ಯ ಯೋಧರು ವರ್ಕಿಂಗ್ ಕಮಿಟಿಗೆ ಮತ್ತೆ ಮನದಟ್ಟು ಮಾಡಿಕೊಡಬೇಕು. ಹೀಗೆ ಗಾಂಧೀಜೀ ಕಳೆದ ವಾರದ 'ಹರಿಜನ'ದಲ್ಲಿ— ಅದರಲ್ಲಿಯೂ ಮುಖ್ಯವಾಗಿ ಗುಜರಾತಿಗಳನ್ನು ಕುರಿತು ಹೇಳಿದರು. ವರ್ಕಿಂಗ್ ಕಮಿಟಿ ವರ್ಧಾದಲ್ಲಿ ಸಭೆ ಸೇರಿದ ಅಲ್ಪಕಾಲದಲ್ಲಿಯೇ, ಗಾಂಧೀ ಸೇವಾ ಸಂಘ ಮತ್ತು ಚರಖಾಸಂಘದ ಸಂಯುಕ್ತ ಸಭೆಯಲ್ಲಿ ಗಾಂಧೀಜೀ ತಮ್ಮ ಅಭಿಪ್ರಾಯ ಗಳನ್ನು ಇನ್ನೂ ಹೆಚ್ಚು ವಿವರವಾಗಿ ವಿವರಿಸಿದರು. ಅವರು ಹೀಗೆ ಹೇಳಿದರು: 'ಈಗ ನಿಮ್ಮ ಪರೀಕ್ಷೆಯ ಸಮಯ. ಹೀಗೆ ಹೇಳಿರೋಣ. ವರ್ಕಿಂಗ್ ಕಮಿಟಿ ಯನ್ನು ಪರೀಕ್ಷಿಸಿದೆವು. ಅವರು ತೇರ್ಗಡೆಹೊಂದಲಿಲ್ಲ. ಅವರ ಅಪಜಯ ವನ್ನು ಸರಿಮಾಡಲು ಗಾಂಧೀ ಸೇವಾ ಸಂಘ ಏನನ್ನಾದರೂ ಮಾಡಬಲ್ಲದೆ? ಅಹಿಂಸೆಯಲ್ಲಿ ನಿಮ್ಮ ನಂಬಿಕೆಯನ್ನು ವ್ಯಕ್ತಪಡಿಸಿ ನೀವು ಜನರನ್ನು ಕೇಳಿ ಕೊಳ್ಳಕೂಡದೆಂದು ವರ್ಕಿಂಗ್ ಕಮಿಟಿ ಹೇಳಿಲ್ಲ. ನೀವು ಹಾಗೆ ಮಾಡಬಹುದು.' ಬಳಿಕ ವರ್ಕಿಂಗ್ ಕಮಿಟಿ ಸದಸ್ಯರಿಗೆ 'ಅಹಿಂಸೆಯಲ್ಲಿ ನಮ್ಮ ನಂಬಿಕೆಯನ್ನು ನೀವು ಕಡಮೆಯಾಗಿ ಭಾವಿಸಿದಿರಿ. ನಾವು ಅಹಿಂಸಾಧರ್ಮಕ್ಕೇ ಬದ್ಧರು' ಎಂದು ನಾನು ಹೇಳುತ್ತೇನೆ. ಇದನ್ನು ಕೇಳಿ ವರ್ಕಿಂಗ್ ಕಮಿಟಿ ಸದಸ್ಯರಿಗೆ ಅಸಮಾಧಾನವುಂಟಾಗುವುದಿಲ್ಲ ಮಾತ್ರವಲ್ಲ, ಅವರು ಆನಂದದಿಂದ ಕುಣಿ ದಾಡುತ್ತಾರೆ. ನಿಮ್ಮಲ್ಲಿ ಕೆಲವರು ಕಾಂಗ್ರೆಸ್ ಸದಸ್ಯರು, ಸದಸ್ಯರಾಗಿ ಅಹಿಂಸೆಯಲ್ಲಿ ನಂಬಿಕೆ ಇರುವವರ ಕರ್ತವ್ಯ ಇದು. ಅಖಿಲಭಾರತ ಕಾಂಗ್ರೆಸ್ ಸಮಿತಿ ಸಭೆಯ ಮುಂದೆಯೂ ಕಾಲ ಒದಗಿದಾಗ ಬಹಿರಂಗ ಕಾಂಗ್ರೆಸ್ ಅಧಿವೇಶನದಲ್ಲಿಯೂ ಅಹಿಂಸೆಯಲ್ಲಿ ನಂಬಿಕೆಯನ್ನು ಬಹಿರಂಗವಾಗಿ ವ್ಯಕ್ತಪಡಿ ಸಲು ನೀವು ಕಮಿಟಿ ಸದಸ್ಯರಿಗೆ ಮನಮುಟ್ಟುವಂತೆ ಒತ್ತಿಹೇಳಬೇಕು. ಆದರೆ 'ಕಾಂಗ್ರೆಸ್ಸಿನವರಾಗಿ ನಿಮ್ಮ ಧರ್ಮ ಬೇರೆ; ಸಾಮಾನ್ಯರಾಗಿ ನಿಮ್ಮ ಧರ್ಮ ಬೇರೆ. ಕಾಂಗ್ರೆಸ್ ಕಾರ್ಯದಲ್ಲಿ ಒಂದು ನಡತೆ, ಕಾಂಗ್ರೆಸ್ ಕಾರ್ಯವಲ್ಲದು

ದರಲ್ಲಿ ಒಂದು ನಡತೆ ಎಂಬ ಭೇದಭಾವ ನಿಮ್ಮಲ್ಲಿ ಇಲ್ಲದಿರಲಿ. ನಿಮ್ಮ ಅಹಿಂಸೆ—ಅದು ನಿಜವಾದುದಾದರೆ—ನಿಮ್ಮ ನಿತ್ಯಜೀವನದ ಭಾಗವಾಗ ಬೇಕು. ನಿಮ್ಮ ಆಲೋಚನೆ, ಮಾತು, ಕಾರ್ಯ ಇವುಗಳಲ್ಲಿರಬೇಕು. ನಿಮ್ಮ ಎಲ್ಲ ನಡತೆಯಲ್ಲಿಯೂ ಪ್ರತಿಬಿಂಬಿಸಬೇಕು. ಆಗ ಮಾತ್ರ ನೀವು ವರ್ಕಿಂಗ್ ಕಮಿಟಿಗೆ ನಾನು ಹೇಳಿದ ಭರವಸೆಯನ್ನು ಕೊಟ್ಟು ತಮ್ಮ ನಿರ್ಣಯು ವನ್ನು ಬದಲಾಯಿಸುವಂತೆ ಅವರಿಗೆ ಹೇಳಲು ಸಾಧ್ಯ.'

## ನಿಮ್ಮ ಅಹಿಂಸೆ ನಿಜವೇ ಎಂಬುದರ ಪರೀಕ್ಷೆ

ಗಾಂಧೀಜೀ ಮುಂದೆ ವಿವರಿಸಿದರು : ' ಆದರೆ ಇದನ್ನು ಇನ್ನುಮುಂದೆ ವಿವರಿಸುತ್ತೇನೆ. ನಿಮ್ಮ ಪ್ರತಿಯೊಂದು ಕಾರ್ಯವನ್ನೂ ಈ ಧರ್ಮದ ಬೆಳಕಿನಲ್ಲಿ ಪರೀಕ್ಷಿಸಿ. ನೀವು ವಿಕಾರಿಗಳಾಗಿ ಸಣ್ಣ ವಿಷಯಗಳಿಗೆ ಅತಿ ಗಮನವನ್ನು ಕೊಡಬೇಕೆಂದಲ್ಲ. ನಿಮ್ಮ ನಡತೆ ಸ್ವಾಭಾವಿಕವಾಗಿರಬೇಕು. ನಾನು ಮೌನವನ್ನು ಅನುಸರಿಸಲು ಪ್ರಾರಂಭಿಸಿದಾಗ ಅದು ಪ್ರಯತ್ನಪೂರ್ವಕ ವಾಗಿತ್ತು. ಈಗ ಅದು ನನ್ನ ಸ್ವಭಾವವೇ ಆಗಿದೆ. ಮೌನವನ್ನು ಮುರಿಯು ವುದು ಈಗ ಪ್ರಯತ್ನ. ಹಾಗೆ ಅಹಿಂಸೆಯಲ್ಲಿ ನಡೆಯುವುದೇ ನಿಮ್ಮ ಸ್ವಭಾವ ವಾಗಬೇಕು. ಪ್ರತಿಯೊಂದನ್ನೂ ಅಹಿಂಸೆಗೆ ಸಂಬಂಧಿಸುವುದು ತರ್ಕದೃಷ್ಟಿ ಯಿಂದ ತಪ್ಪಾಗಬಹುದು, ಆದರೆ ನಿಮ್ಮ ಮಟ್ಟಿಗೆ ಅದು ತಪ್ಪಲ್ಲ. ನನ್ನ ಪ್ರತಿಯೊಂದು ಉಸಿರಿನಿಂದಲೂ ನಾನು ಸ್ವರಾಜ್ಯವನ್ನು ಹತ್ತಿರ ತರುತ್ತಿದೇನೆಂಬ ನನ್ನ ನಂಬಿಕೆ ಇತರರ ಕಣ್ಣಿಗೆ ತಪ್ಪಾಗಿ ತೋರಬಹುದು. ಆದರೆ ನನ್ನ ಮಟ್ಟಿಗೆ ಆ ನಂಬಿಕೆ ನಾನು ಬದುಕಿರುವುದು ಎಷ್ಟು ನಿಶ್ಚಯವೋ ಅಷ್ಟು ನಿಶ್ಚಯ. ಈ ನಂಬಿಕೆ ನಾನು ಹುಚ್ಚನಾಗುವುದನ್ನು ತಪ್ಪಿಸಿದೆ. ನನಗೆ ಈ ಚರಖಾ ಅಹಿಂಸೆಯ ಪ್ರತೀಕ. ಚರಖಾ ನಿರ್ಜೀವವಸ್ತು. ಆದರೆ ನಾನು ಅದನ್ನು ಸಂಕೇತವೆಂದಿಟ್ಟುಕೊಳ್ಳುವಾಗ ಅದು ನನಗೆ ಸಜೀವವಸ್ತುವಾಗುತ್ತದೆ. ಅದರ ಧ್ವನಿ ಇಂಪಾಗಿದ್ದರೆ ಅಹಿಂಸೆಗೆ ಶ್ರುತಿಯಾಗುತ್ತದೆ. ಧ್ವನಿ ಮಧುರವಾಗಿಲ್ಲ ದಿದ್ದರೆ ಅದು ಅಹಿಂಸೆಗೆ ಶ್ರುತಿಯಾಗುವುದಿಲ್ಲ. ಅದು ನನ್ನ ಅಜಾಗ್ರತೆಯನ್ನು ತೋರಿಸುತ್ತದೆ. ಉಕ್ಕಿನ ಕಂಬಿಯನ್ನು ವಿಷಪೂರಿತ ಆಯುಧವಾಗಿ ಉಪ

ಯೋಗಿಸಬಹುದು. ಆದರೆ ನಾವು ಅತ್ಯುತ್ತಮವಾದ ಉಪಯೋಗದಲ್ಲಿ ತೊಡಗಿಸಿದೇವೆ. ಆದುದರಿಂದ ನಾವು ಚರಖಾದ ಪ್ರತಿಭಾಗದ ವಿಷಯ ದಲ್ಲಿಯೂ ಅತ್ಯಂತ ಸೂಕ್ಷ್ಮ ಎಚ್ಚರಿಕೆಯನ್ನು ವಹಿಸಬೇಕಾಗಿದೆ. ಆಗ ಮಾತ್ರ ಅದು ಇಂಪಾದ ಗಾನವನ್ನು ಕೊಡುವುದು. ಆಗ ನೂಲುವುದು ನಿಜವಾದ ಯಜ್ಞವಾಗುವುದು.

ಆದರೆ ಈ ಬಗೆಯ ಸಾಧನೆಗೆ ಸಾವಿರಾರು ವರುಷಗಳಾಗಬಹುದೆಂದು ನೀವು ಹೇಳುವಿರಿ. ಕೆಲವರಿಗೆ ಇದಕ್ಕೆ ಸಾವಿರ ವರುಷ ಆಗಬಹುದು; ಇತರ ಕೆಲವರಿಗೆ ಒಂದೇ ವರುಷ ಆಗಬಹುದು. ನನ್ನ ಐವತ್ತು ವರುಷಗಳ ಅಭ್ಯಾಸದ ಅನಂತರವೂ ನಾನು ಇನ್ನೂ ನಿರ್ದುಷ್ಟನಾಗಿಲ್ಲದ ಮಾತ್ರಕ್ಕೆ, ನಿಮಗೆ ಇನ್ನೂ ಹೆಚ್ಚು ವರುಷಗಳು ಬೇಕೆಂದು ಯೋಚಿಸಬೇಡಿ. ಇದು ಎರಡು ಇಂಟು ಎರಡು ನಾಲ್ಕು ಎಂಬ ಮಗ್ಗಿಕೋಷ್ಟಕದ ಲೆಕ್ಕವಲ್ಲ. ನಾನು ಹೊಂದಿದುದ ಕ್ಕಿಂತ ತ್ವರಿತವಾಗಿ ನೀವು ಜಯಗಳಿಸಬಹುದು. ನಾನು ಪೃಥ್ವಿಸಿಂಗ್‌ನಿಗೆ ಹೇಳಿದ ಮಾತು ಮನಃಪೂರ್ವಕವಾಗಿತ್ತು: 'ನಿನ್ನಲ್ಲಿ ಧೀರರ ಹಿಂಸೆಯಂತೂ ಇತ್ತು. ನನ್ನಲ್ಲಿ ಅದೇನೂ ಇರಲಿಲ್ಲ. ನೀನು ನನಗಿಂತ ಹೆಚ್ಚಿನದನ್ನು ನನಗಿಂತ ಬೇಗ ಸಾಧಿಸುವೆ, ನನ್ನನ್ನು ಹಿಂದೆ ಬೀಳಿಸುವೆ' ಎಂದು. ಈ ಮಾತು ನಿಮ್ಮಲ್ಲಿ ಪ್ರತಿಯೊಬ್ಬರಿಗೂ ಅನ್ವಯಿಸುತ್ತದೆ. ದಕ್ಷಿಣ ಆಫ್ರಿಕದಲ್ಲಿ ಪಾದರಕ್ಷೆಗಳನ್ನು ಮಾಡುವುದನ್ನು ನಾನು ಮೊದಲು ಕಲಿತೆ. ಅದರಿಂದ ನಾನೇ ಇತರರಿಗೆ ಕಲಿಸಿದೆ. ಆದರೆ ಅವರು ತ್ವರಿತದಲ್ಲಿ ನನ್ನನ್ನು ಹಿಂದಕ್ಕೆ ಹಾಕಿದರು. ನಾನು ನಿಜವಾದ ಗುರುವಾದುದರಿಂದ ಹಾಗೆ ಆಯಿತು. ಈಗ ನಾನು ಅಹಿಂಸೆಯ ನಿಜವಾದ ಗುರುವಾದರೆ, ನೀವು ನಿಮ್ಮ ಗುರುವನ್ನು ಬಹಳ ಬೇಗ ಹಿಂದೆ ಬಿಡುತ್ತೀರಿ. ಹಾಗೆ ಆಗದಿದ್ದಲ್ಲಿ ನಾನು ಯೋಗ್ಯನಾದ ಗುರುವಲ್ಲ ಎಂದು ಆಯಿತು. ಆದರೆ ನನ್ನ ಬೋಧನೆ ಫಲಕಾರಿಯಾದರೆ ಆಗ ಪ್ರತಿ ಮನೆಯಲ್ಲಿಯೂ ಒಬ್ಬ ಅಹಿಂಸೆಯ ಗುರು ಇರುತ್ತಾನೆ.

ನಿಮ್ಮಲ್ಲಿ ಎಷ್ಟು ಜನ ನನ್ನೊಂದಿಗಿದೀರಿ ಎಂಬುದನ್ನು ನಾನು ತಿಳಿಯ ಬಯಸುತ್ತೇನೆ. ಯಾರೂ ನನ್ನ ಜತೆ ಬರದಿದ್ದರೆ ನಾನೊಬ್ಬನೇ ಒಂಟಿಯಾಗಿ ನನ್ನ ದಾರಿ ನಡೆಯಲು ಸಿದ್ಧನಾಗಿದೇನೆ. ಯಾಕೆಂದರೆ ನನ್ನೊಂದಿಗೆ ದೇವರು ಇರುವವರೆಗೆ ನಾನು ಎಂದೂ ಒಂಟಿಯಲ್ಲವೆಂಬುದು ನನಗೆ ಗೊತ್ತು. ನೀವು

ಎಲ್ಲರೂ ನನ್ನೊಂದಿಗೆ ಸಾಧಕರು. ನಾನು ಮುದುಕ. ಆದರೆ ನಿಮ್ಮ ಮುಂದೆ ಅನೇಕ ವರುಷಗಳಿವೆ. ಆದರೂ ನನ್ನ ವಯಸ್ಸು ನನಗೆ ಹೊರೆಯಾಗಿಲ್ಲವೆಂದು ಹೇಳುತ್ತೇನೆ. ನನ್ನ ಬೆಳವಣಿಗೆಯ ಶಕ್ತಿಯೂ ಪ್ರಯೋಗಮಾಡುವ ಶಕ್ತಿಯೂ ಕೊನೆಮುಟ್ಟಿದೆ ಎಂದು ನಾನು ಭಾವಿಸುವುದಿಲ್ಲ.

ಆದುದರಿಂದ ನೀವು ಹೋಗಿ, ಕಾಂಗ್ರೆಸ್ಸಿಗರ ಪೈಕಿ ನಿಜವಾಗಿ, ಕಾರ್ಯದಲ್ಲಿ ಅಹಿಂಸೆಯನ್ನು ನಂಬುವವರು, ಎಷ್ಟು ಮಂದಿ ಇದಾರೆಂದು ಕಂಡು ಹಿಡಿಯಬೇಕಾಗಿದೆ. ವರ್ಕಿಂಗ್ ಕಮಿಟಿ ಸದಸ್ಯರು ನಿಮ್ಮ ಪ್ರತಿನಿಧಿಗಳು. ಅವರನ್ನು ಆರಿಸಿದವರ ಅಹಿಂಸೆಯಲ್ಲಿರುವ ನಂಬಿಕೆಯನ್ನು ಅವರು ತಪ್ಪಾಗಿ ತಿಳಿದುಕೊಂಡಿದ್ದರೆ, ಅವರ ವಿವೇಚನೆಯನ್ನು ನೀವು ತಿದ್ದಬೇಕು. ನನ್ನ ಪರಿಸ್ಥಿತಿ ಅವರಿಂದ ಬೇರೆಯಾಗಿತ್ತು. ನಾನು ಅಹಿಂಸೆಯ ದೃಢಪ್ರತಿನಿಧಿ ಎಂದು ಭಾವಿಸುತ್ತೇನೆ. ಆದುದರಿಂದ ನಾನು ೧೯೩೪ರಲ್ಲಿ ಕಾಂಗ್ರೆಸ್ಸಿನೊಂದಿಗೆ ಸಂಬಂಧವನ್ನು ತ್ಯಜಿಸಿದೆ. ಹಾಗೆ ಮಾಡದೆ ನನಗೆ ವಿಧಿ ಇರಲಿಲ್ಲ. ನಾನು ಹಾಗೆ ಮಾಡದಿದ್ದರೆ ನನ್ನ ಧರ್ಮಕ್ಕೆ ನಾನು ಸತ್ಯವಾಗಿ ನಡೆದಂತೆ ಆಗುತ್ತಿರಲಿಲ್ಲ.

ನನ್ನ ದೋಷಗಳು ನನಗಿಂತ ಚೆನ್ನಾಗಿ ಮತ್ತಾರಿಗೂ ಗೊತ್ತಿಲ್ಲ. ಆದರೆ ನನ್ನಲ್ಲಿರುವ ಅಲ್ಪ ಶಕ್ತಿ ನನ್ನ ಅಹಿಂಸೆಯಿಂದ ನನಗೆ ದೊರೆತಿದೆ. ನನ್ನೆಡೆಗೆ ಸಾವಿರಾರು ಸ್ತ್ರೀಯರನ್ನು ನಿರ್ಭೀತಿ ಮತ್ತು ನಂಬಿಕೆಯಿಂದ ಆಕರ್ಷಿಸುವುದು ನನ್ನ ಅಹಿಂಸೆಯಲ್ಲದೆ ಮತ್ತೇನು? ಆದರೆ ನಾನಾಗಲೀ ನೀವಾಗಲೀ ನಮ್ಮ ಬಂಡವಾಳದ ಮೇಲೆ ವ್ಯಾಪಾರ ಮಾಡುವುದು ಸಾಧ್ಯವಿಲ್ಲ. ನಾವು ಎದ್ದು ನಿಮಿಷ ನಿಮಿಷವೂ ಕರ್ತವ್ಯ ಮಾಡುತ್ತಾ ನಮ್ಮ ಸಾಧನೆಯಲ್ಲಿ ಮುಂದುವರಿಯುತ್ತಿರಬೇಕು. ನಾವು ಅಹಿಂಸೆಯಲ್ಲಿಯೇ ಬಾಳಬೇಕು, ಅಹಿಂಸೆಯಲ್ಲಿಯೇ ಚಲಿಸಬೇಕು, ಅಹಿಂಸೆಯಲ್ಲಿಯೇ ಇರಬೇಕು—ಹಿಟ್ಲರನು ಹಿಂಸೆಯಲ್ಲಿರುವಂತೆ. ವಿನಾಶಕ ಅಸ್ತ್ರಗಳನ್ನು ನಿರ್ದುಷ್ಟವಾಗಿ ಮಾಡಿರುವ ಅವನ ಶ್ರದ್ಧೆ, ಕಾರ್ಯತತ್ಪರತೆ, ಏಕಾಗ್ರತೆ ಇವು ನನ್ನ ಮೆಚ್ಚುಕೆಯನ್ನು ಹೊಂದಿವೆ. ಹಿಟ್ಲರ್ ಅವುಗಳನ್ನು ರಾಕ್ಷಸನಾಗಿ ಉಪಯೋಗಿಸುತ್ತಾನೆಂಬುದು ನಮ್ಮ ಪ್ರಕೃತದ ಉದ್ದೇಶ್ಯಕ್ಕೆ ಅಸಂಗತ. ತನ್ನ ಸಾಧನೆಯನ್ನು ನಿರ್ದೋಷವಾಗಿ ಮಾಡುವುದರಲ್ಲಿ ಹಿಟ್ಲರ್ ದಿನದ ಇಪ್ಪತ್ತುನಾಲ್ಕು ಗಂಟೆಗಳನ್ನೂ ಕಳೆಯುತ್ತಾನೆ. ಅದಕ್ಕೆ

ತೆರಬೇಕಾದ ಬೆಲೆಯನ್ನು ಅವನು ತೆರುವುದರಿಂದ ಅವನು ಗೆಲ್ಲುತ್ತಾನೆ. ಅವನು ಕಂಡುಹಿಡಿಯುವ ಅಸ್ತ್ರಗಳು ಅವನ ಶತ್ರುಗಳನ್ನು ದಿಗ್ಭ್ರಾಂತಗೊಳಿಸುತ್ತವೆ. ಆದರೆ ತನ್ನ ಕಾರ್ಯದಲ್ಲಿ ಅವನ ಏಕಾಗ್ರಭಕ್ತಿಯೇ ನಮ್ಮ ಮೆಚ್ಚುಗೆ ಮತ್ತು ಅನುಕರಣೆಯ ವಿಷಯವಾಗಿರಬೇಕು. ಅವನು ಎಚ್ಚರವಾಗಿರುವ ಎಲ್ಲ ಕಾಲ ದಲ್ಲಿಯೂ ಕೆಲಸ ಮಾಡುತ್ತಿದ್ದರೂ, ಅವನ ಬುದ್ಧಿ ಚುರುಕಾಗಿ, ಸ್ವಚ್ಛವಾಗಿ, ದಾರಿ ತಪ್ಪದೆ ಇದೆ. ನಮ್ಮ ಬುದ್ಧಿ ಸ್ವಚ್ಛವಾಗಿ ದಾರಿ ತಪ್ಪದೆ ಇದೆಯೆ? ಅಹಿಂಸೆ ಅಥವಾ ಚರಖಾದಲ್ಲಿ ಸುಮ್ಮನೆ ನಂಬಿಕೆಯಿಡುವುದರಿಂದಲೇ ಏನೂ ಆಗುವುದಿಲ್ಲ. ಆ ನಂಬಿಕೆ ಬುದ್ಧಿಯ ಫಲವಾಗಿದ್ದು, ಹೊಸ ಸೃಷ್ಟಿಗಳನ್ನು ನಿರ್ಮಿಸುವುದಾಗಿರಬೇಕು. ಹಿಂಸಾಪ್ರಪಂಚದಲ್ಲಿ ಬುದ್ಧಿಯ ಕಾರ್ಯಭಾಗ ಬಹಳ. ಅಹಿಂಸಾಕ್ಷೇತ್ರದಲ್ಲಿ ಬುದ್ಧಿಯ ಕಾರ್ಯ ಇನ್ನೂ ಹೆಚ್ಚೆಂಬುದು ನನ್ನ ಮತ.

ಹೀಗೆ ಹೇಳಿ ಗಾಂಧೀಜೀ ರಿಚರ್ಡ್ ಗ್ರೆಗ್ಗರ ಕಾರ್ಯವನ್ನು ವಿವರಿಸಿದರು. ಗ್ರೆಗ್ಗರು 'ಚರಖಾ ಅಹಿಂಸೆಯ ಸಂಕೇತ. ಇದು ಭಾರತಕ್ಕೆ ಮಾತ್ರವೇ ಅಲ್ಲ, ಜಗತ್ತಿಗೆಲ್ಲ ಒಳ್ಳೆಯದು' ಎಂಬ ತೀರ್ಮಾನಕ್ಕೆ ಬಂದಿರುವುದನ್ನು ಹೇಳಿದರು.

ಮುಂದುವರಿದು ಗಾಂಧೀಜೀ ಹೀಗೆ ಹೇಳಿದರು : 'ವರ್ಕಿಂಗ್ ಕಮಿಟಿಯ ತೀರ್ಮಾನ ಅವರ ಸುತ್ತಲ ವಾತಾವರಣದ ಪ್ರತಿಧ್ವನಿ ಮಾತ್ರ. ನನ್ನ ತೀರ್ಮಾನ ಅದರ ಪ್ರತಿಧ್ವನಿ ಆಗುವಂತಿರಲಿಲ್ಲ. ಯಾಕೆಂದರೆ ಅಹಿಂಸೆ ನನ್ನ ವಿಶಿಷ್ಟವಾದ ಸಾಧನೆ—ಕಾಂಗ್ರೆಸ್ಸಿನದಲ್ಲ. ಅವರನ್ನು ಅವರ ಪ್ರಾಮಾಣಿಕತೆಗಾಗಿಯೂ ಧೈರ್ಯಕ್ಕಾಗಿಯೂ ಅಭಿನಂದಿಸುತ್ತೇನೆ. ಆದರೂ ನನ್ನ ಧರ್ಮದಲ್ಲಿಯೂ ನಾಯಕತ್ವದಲ್ಲಿಯೂ ಅವರಿಗೆ ನಂಬಿಕೆಯನ್ನುಂಟುಮಾಡಲು ನನಗೆ ಸಾಧ್ಯ ವಾಗದುದಕ್ಕಾಗಿ ನಾನು ದುಃಖಿಸುತ್ತೇನೆ. ನಮಗೆ ಧೀರರ ಅಹಿಂಸೆಯಲ್ಲಿ ನಂಬಿಕೆ ಇದೆ ಎಂಬುದನ್ನು ನಾವು ತೋರಿಸಬೇಕಾಗಿದೆ. ಹಾಗೆಂದರೆ ಸೆರೆ ಮನೆಗೆ ಹೋಗುವ ಶಕ್ತಿಯ ಅಭಿವೃದ್ಧಿಯಲ್ಲ. ಸ್ವರಾಜ್ಯಸಂಪಾದನೆಗೆ ನಿರ್ಮಾಣ ಕಾರ್ಯದಲ್ಲಿ ನಂಬಿಕೆಯನ್ನು ಹೆಚ್ಚಿಸುವುದು ಮತ್ತು ಅಹಿಂಸಾಕಾರ್ಯಕ್ರಮವನ್ನು ನಿರ್ಮಾಣಕಾರ್ಯದ ಚೈತನ್ಯಯುಕ್ತ ಭಾಗವಾಗಿ ಮಾಡುವುದು, ಎಂದು ಅರ್ಥ.'

## ನಿರ್ದುಷ್ಟನಲ್ಲದ ಮನುಷ್ಯನನ್ನು ಆರಿಸಿದ್ದು ಯಾಕೆ?

'ಗಾಂಧೀಜಿಯೇ ಅಹಿಂಸೆಯನ್ನು ನಿರ್ದೋಷಯುಕ್ತವಾಗಿ ಮಾಡುವುದರಲ್ಲಿ ಅಪಜಯಹೊಂದಿದಮೇಲೆ ನಾವೂ ಅಪಜಯಹೊಂದುವುದೇ ಖಂಡಿತ' ಎಂದು ಹೇಳುವವರಿಗೆ ಗಾಂಧೀಜೀ ಆಗಲೇ ಪ್ರತ್ಯುತ್ತರ ಕೊಟ್ಟಾಗಿತ್ತು. ಆದರೆ ತಮ್ಮ ಭಾಷಣದ ಕೊನೆಯಲ್ಲಿ ಅವರು ತಮ್ಮ ಕುಂದುಗಳ ಮತ್ತೊಂದು ಸ್ವರೂಪವನ್ನು ಪ್ರಕಟಗೊಳಿಸಿದರು. 'ನಿರ್ಮಾಣಕಾರ್ಯಕ್ಕಿಂತ ಹೆಚ್ಚಾಗಿ ನಾನು ಸತ್ಯಾಗ್ರಹಕ್ಕೆ ಪ್ರಾಮುಖ್ಯತೆ ಕೊಟ್ಟದ್ದು ತಪ್ಪು. ನಾನು ಮಾಡಿದ ಹಿಮಾಲಯದಂತಹ ತಪ್ಪಿನಿಂದ ನಾನು ಲಾಭಹೊಂದಲಿಲ್ಲ. ನನ್ನ ಸಹೋದ್ಯೋಗಿಗಳೊಡನೆ ಅಗಲಿಕೆಯಾಗುವುದೆಂದು ನಾನು ಹೆದರಿ, ನನ್ನ ದೋಷಯುಕ್ತ ಅಹಿಂಸೆಯನ್ನೇ ಮುಂದುವರಿಸಿದೆ. ಆದರೆ ನನ್ನ ತಪ್ಪುಗಳಿಗಾಗಿ ನನಗೆ ದುಃಖವಾಗಿಲ್ಲ. ನನ್ನ ದೋಷಗಳೂ ಅಪಜಯಗಳೂ ನನ್ನ ಜಯ ಮತ್ತು ಶಕ್ತಿಗಳಂತೆಯೇ ದೇವರವರ. ಅವನ್ನೆಲ್ಲ ನಾನು ಆತನ ಪಾದಗಳಿಗೆ ಅರ್ಪಿಸುತ್ತೇನೆ. ಆತ ಇಂತಹ ಮಹತ್ ಪ್ರಯೋಗಕ್ಕೆ ನನ್ನನ್ನು—ದೋಷಪೂರಿತ ಉಪಕರಣವಾದ ನನ್ನನ್ನು ಯಾಕೆ ಆರಿಸಿಕೊಂಡ? ಆತ ಉದ್ದೇಶ್ಯಪೂರ್ವಕವಾಗಿ ಹೀಗೆ ಮಾಡಿದಾನೆಂದು ನಾನು ಭಾವಿಸುತ್ತೇನೆ. ಹಾಗೆ ಆರಿಸಲ್ಪಟ್ಟವನು ಕೋಟ್ಯಂತರ ದೀನ ಮೂಕ ಪ್ರಾಣಿಗಳ ಸೇವೆ ಮಾಡಬೇಕಾಗಿತ್ತು. ಆತ ನಿರ್ದೋಷಿಯಾದ ಮನುಷ್ಯನಾಗಿದ್ದರೆ ಅವರಿಗೆ ಪೂರ್ಣ ನಿರಾಶೆಯಾಗುತ್ತಿತ್ತೇನೋ. ತಮ್ಮಂತೆ ದೋಷಯುಕ್ತನಾದವನು ಅಹಿಂಸೆಯ ಮಾರ್ಗದಲ್ಲಿ ಹೋಗುತ್ತಿದ್ದುದನ್ನು ಅವರು ನೋಡಿದಾಗ ತಮ್ಮ ಶಕ್ತಿಯಲ್ಲಿ ಅವರಿಗೂ ನಂಬಿಕೆಯುಂಟಾಯಿತು. ನಿರ್ದೋಷಿಯಾದ ಮನುಷ್ಯ ನಮ್ಮ ನಾಯಕನಾಗಿ ಬಂದಿದ್ದರೆ ನಾವು ಅವನನ್ನು ಗುರುತಿಸುತ್ತಿದ್ದೆವೋ ಇಲ್ಲವೊ? ನಾವು ಅವನನ್ನು ಗುಹೆಗೆ ಅಟ್ಟಬಿಡುತ್ತಿದ್ದೆವೇನೊ. ಪ್ರಾಯಶಃ ನನ್ನನ್ನು ಅನುಸರಿಸುವವನು ಹೆಚ್ಚು ಶುದ್ಧನಾಗಿರುವನು. ಅವನ ಸಂದೇಶವನ್ನು ನೀವು ಅಂಗೀಕರಿಸಬಲ್ಲವರಾಗುತ್ತೀರಿ. ಆ ಬರುವ ಶುದ್ಧ ಗುರು, ನಿಮ್ಮಲ್ಲಿಯೇ ಒಬ್ಬರು ಆಗಿರಬಹುದು.'

# ಒಂದು ಅಸಾಧ್ಯ ಧ್ಯೇಯ

'ನಾವು ತಾತ್ತ್ವಿಕ ಅರಾಜಕತೆಗೆ ಹೋಗುತ್ತಿಲ್ಲವೆ? ಇದೊಂದು ಅಸಾಧ್ಯ ಧ್ಯೇಯವಲ್ಲವೆ?'

ಕೆಲವು ತಿಂಗಳುಗಳ ಕೆಳಗೆ ಒಬ್ಬ ತತ್ತ್ವಜ್ಞಾನಿ ಮಿತ್ರ ಗಾಂಧೀಜಿಯವರನ್ನು ಮೇಲಿನ ಪ್ರಶ್ನೆ ಕೇಳಿದರು. ಗಾಂಧೀಜೀ ಅವರಿಗೆ ಕೊಟ್ಟ ಉತ್ತರಗಳು ಇಂದು ಉಪಯೋಗವಾಗಬಹುದೆಂದು ಭಾವಿಸುತ್ತೇನೆ.

**ಪ್ರಶ್ನೆ:** ನಿಜವಾದ ಅಹಿಂಸೆ ಯಾರಿಗಾದರೂ ಗೊತ್ತೆ?

**ಉತ್ತರ:** ಯಾರಿಗೂ ತಿಳಿಯದು. ಯಾಕೆಂದರೆ ಶುದ್ಧ ಅಹಿಂಸೆಯನ್ನು ಯಾರೂ ಆಚರಿಸಲಾರರು.

**ಪ್ರಶ್ನೆ:** ಹಾಗಾದಮೇಲೆ ಅದನ್ನು ರಾಜಕೀಯದಲ್ಲಿ ಆಚರಿಸುವುದು ಎಂತು?

**ಉತ್ತರ:** ಸಂಸಾರಪ್ರಪಂಚದಲ್ಲಿ ಹೇಗೋ ಹಾಗೆಯೇ ಅದು ರಾಜಕೀಯದಲ್ಲಿಯೂ ಉಪಯೋಗವಾಗಬಲ್ಲದು. ಅದರ ಉಪಯೋಗದಲ್ಲಿ ನಾವು ನಿರ್ದೋಷಿಗಳಾಗಿಲ್ಲದಿರಬಹುದು. ಆದರೆ ನಾವು ಹಿಂಸೆಯನ್ನು ಸ್ಪಷ್ಟವಾಗಿ ಬಹಿಷ್ಕರಿಸುತ್ತೇವೆ. ಅಪಜಯದ ಮೂಲಕವೇ ಜಯಕ್ಕೆ ಹೋಗುತ್ತೇವೆ.

**ಪ್ರಶ್ನೆ:** ನೀವು ಅಹಿಂಸೆಯಿಂದ ಆಳಬಯಸುತ್ತೀರಿ. ಆದರೆ ಎಲ್ಲ ಕಾನೂನೂ ಹಿಂಸೆಯೇ.

**ಉತ್ತರ:** ಇಲ್ಲ. ಎಲ್ಲ ಕಾನೂನೂ ಅಲ್ಲ. ಜನತೆ ತಮ್ಮ ಮೇಲೆ ತಾವು ವಿಧಿಸಿಕೊಳ್ಳುವ ಕಾನೂನು, ಸಮಾಜಕ್ಕೆ ಸಾಧ್ಯವಾದ ಮಟ್ಟಿಗೆ ಅಹಿಂಸೆಯೇ. ಪೂರ್ಣ ಅಹಿಂಸೆಯ ಆಧಾರದ ಮೇಲೆ ಸ್ಥಾಪಿತವಾಗಿ ನಡೆಸುವ ಸಮಾಜ, ಅತಿ ಶುದ್ಧವಾದ ಅರಾಜಕತೆ.

**ಪ್ರಶ್ನೆ:** ಇದು ಕಾರ್ಯಕಾರಿಯಾಗುವ ಧ್ಯೇಯವೆಂದು ಭಾವಿಸುತ್ತೀರಾ?

**ಉತ್ತರ:** ಹೌದು. ಅಹಿಂಸೆ ಎಷ್ಟರ ಮಟ್ಟಿಗೆ ಕಾರ್ಯಕಾರಿಯಾಗಬಲ್ಲುದೋ ಅಷ್ಟರಮಟ್ಟಿಗೆ ಇದು ಕಾರ್ಯಕಾರಿಯಾಗಬಲ್ಲುದು. ಎಲ್ಲಿ ಆಳ್ವಿಕೆ ಎಂಬುದು ಅತ್ಯಂತ ಕಡಮೆಯೋ ಆ ರಾಷ್ಟ್ರ ಪೂರ್ಣ ಅಹಿಂಸೆ. ಶುದ್ಧ

ಅರಾಜಕತೆಯ ಅತಿ ಸಮೀಪವರ್ತಿನಿ ಎಂದರೆ ಅಹಿಂಸೆಯ ಮೇಲೆ ಅವಲಂಬಿಸಿರುವ ಪ್ರಜಾಪ್ರಭುತ್ವ. ನನ್ನ ದೃಷ್ಟಿಯಲ್ಲಿ ಯೂರೋಪಿಯನ್ ಪ್ರಜಾಪ್ರಭುತ್ವಗಳು— ಪ್ರಜಾಪ್ರಭುತ್ವದ ನಿರಾಕರಣೆಗಳು.

**ಪ್ರಶ್ನೆ:** ನಿಮ್ಮ ಈ ಕಲ್ಪನೆಯ ಅಹಿಂಸೆ, ಹಿಂದೆ ಎಂದಾದರೂ ಕಾರ್ಯಕಾರಿಯಾಗಿದ್ದಿತೆಂದು ನೀವು ಭಾವಿಸುತ್ತೀರಾ ?

**ಉತ್ತರ:** ನನಗೆ ತಿಳಿಯದು. ಹಾಗೆ ಆಗದೆ ಇದ್ದಿದ್ದರೆ ನಮ್ಮಲ್ಲಿರುವ ಅತ್ಯುತ್ಕೃಷ್ಟ ಧ್ಯೇಯವನ್ನು ಮುಟ್ಟಲು ನಾವು ಎಂದಿಗೂ ಪ್ರಯತ್ನಿಸಲೇ ಇಲ್ಲ ಎಂದಾಯಿತು, ಅಷ್ಟೆ. ಯಾವುದೋ ಒಂದು ಕಾಲದಲ್ಲಿ ನಾವು ಹೆಚ್ಚು ಪ್ರಜ್ಞಾವಂತರಾಗಿದೇವೆ ಎಂಬುದರಲ್ಲಿಯೂ ಮನುಷ್ಯನ ಸ್ವಭಾವದಲ್ಲಿ ಅಡಗಿರುವ ಸೌಂದರ್ಯಗಳನ್ನು ಕಂಡುಹಿಡಿಯಬೇಕಾದರೆ ನಾವು ಇಂದು ಇರುವುದಕ್ಕಿಂತ ಇನ್ನೂ ಹೆಚ್ಚು ಬುದ್ಧಿವಂತರಾಗಬೇಕೆಂಬುದರಲ್ಲಿಯೂ ನನಗೆ ಸಂಶಯವೇ ಇಲ್ಲ. ನಾವು ಜೀವಂತವಾಗಿರುವವರೆಗೆ ಪೂರ್ಣ ಅಹಿಂಸೆ ಅಸಾಧ್ಯ, ಯಾಕೆ ಎಂದರೆ ಇರುವುದಕ್ಕಾಗಿಯಾದರೂ ನಾವು ಕೆಲವು ಭಾಗ ಪ್ರದೇಶವನ್ನು ಆಕ್ರಮಿಸಿಕೊಳ್ಳಬೇಕಾಗುತ್ತದೆ. ದೇಹವನ್ನು ಮನುಷ್ಯ ಆಶ್ರಯಿಸಿರುವವರೆಗೆ ನಿರ್ದುಷ್ಟ ಅಹಿಂಸೆ ಬರಿ ಒಂದು ತತ್ತ್ವ. ಯೂಕ್ಲಿಡ್‌ನ ಬಿಂದು (ಪಾಯಿಂಟ್) ಅಥವಾ ಸರಳರೇಖೆಯಂತೆ. ಆದರೆ ನಾವು ಅದನ್ನು ಮುಟ್ಟಲು ನಮ್ಮ ಬಾಳಿನ ಪ್ರತಿಯೊಂದು ಕ್ಷಣವೂ ಪ್ರಯತ್ನಿಸಬೇಕಾಗಿದೆ.

(ಹರಿಜನ, ೨೧-೭-೧೯೪೦)

—

## ಅಧ್ಯಾಯ – ೧೧

# ಅರಣ್ಯರೋದನ



### ಒಂದು ಮಿತ್ರತ್ವಸಂಧಾನ

ಹೊಸ ದಿಲ್ಲಿಯಲ್ಲಿ ತಮ್ಮನ್ನು ನೋಡಲು ಬಂದಿದ್ದ, ಭಾರತಕ್ಕೆ ಸಹಾಯ ಮಾಡಲು ಕಾತರರಾಗಿದ್ದ ಒಬ್ಬ ಪ್ರಭಾವಶಾಲಿ ಆಂಗ್ಲ ವೃತ್ತಪತ್ರಿಕೆಯ ಡೈರೆಕ್ಟರಿಗೆ ಗಾಂಧೀಜೀ ಹೀಗೆ ಹೇಳಿದರು : 'ನಾವು ಇಂದು ಎರಡು ಕೇಡು ಗಳಿಗೆ ಸಿಕ್ಕಿ ಕಷ್ಟಪಡುತ್ತಿದೇವೆ. ಒಂದು, ಇರುವ ವಿಷಯಗಳನ್ನು ಮುಚ್ಚು ವುದು, ಮತ್ತೊಂದು ಇಲ್ಲದುದನ್ನು ಸೃಷ್ಟಿಸುವುದು. ನಿಮ್ಮ ಪತ್ರಿಕೆ ಭಾರತಕ್ಕೆ ಒಂದು ಉಪಕಾರ ಮಾಡಬೇಕಾಗಿದೆ.'

'ದೊಂಬಿಗಳನ್ನು ಒತ್ತಿ ಒತ್ತಿ ಹೇಳುವುದರಿಂದ ಲಾಭವಿಲ್ಲ. ನನ್ನ ಪತ್ರಿಕೆ ಹಾಗೆ ಮಾಡುವುದಿಲ್ಲ' ಎಂದರು ಆ ಡೈರೆಕ್ಟರ್.

ಗಾಂಧೀಜೀ ಹೀಗೆ ಪ್ರತ್ಯುತ್ತರವಿತ್ತರು : 'ಸಂಬಂಧಿಸಿದ ವಿಷಯಗಳನ್ನು ಮುಚ್ಚುವುದರಿಂದ ನೀವೂ ನಿಮ್ಮ ಪತ್ರಿಕೆಯೂ ಭಾರತದ ಸೇವೆ ಮಾಡಿದಂತೆ ಆಗುವುದಿಲ್ಲ. ಆದರೆ ಪಕ್ಷಪಾತ ಮತ್ತು ಪೂರ್ವಗ್ರಹವಿಲ್ಲದೆ ಅವುಗಳನ್ನು ಸತ್ಯವಾಗಿ ಪ್ರಕಟಿಸುವುದರಿಂದ ಆಗುತ್ತದೆ. ಸತ್ಯ ಎಂದೂ ನ್ಯಾಯವಾದ ಒಂದು ಧ್ಯೇಯಕ್ಕೆ ಕೇಡನ್ನುಂಟುಮಾಡುವುದಿಲ್ಲ.'

ಸದ್ಯದ ಈ ಕಷ್ಟ ಯಾವಾಗ ಕೊನೆಯಾಗಬಹುದೆಂಬ ಮತ್ತೊಂದು ಪ್ರಶ್ನೆಗೆ ಉತ್ತರ ಕೊಡುತ್ತಾ ಗಾಂಧೀಜೀ 'ಇದು ಪರಿಹಾರವಾಗಿಯೇ ತೀರು ವುದು. ಆದರೆ ಅದರ ಶಮನದ ಸೂಚನೆಗಳು ಈಗಂತೂ ಕಾಣುತ್ತಿಲ್ಲ. ಈ ಹೋರಾಟವನ್ನು ಉದ್ರೇಕಿಸುವುದರಲ್ಲಿ ಆಸಕ್ತವಾದ ಪಂಗಡಗಳಿವೆ' ಎಂದರು.

ಅವರು ಮುಂದುವರಿಸಿ ಹೀಗೆ ಹೇಳಿದರು : 'ನನ್ನದು ಇಂದು ಅರಣ್ಯ ರೋದನವಾಗಬಹುದು. ಆದರೆ ನನ್ನ ಅಭಿಪ್ರಾಯದಲ್ಲಿ ಎಲ್ಲಿಯವರೆಗೆ ಬ್ರಿಟಿಷ್ ಸೈನ್ಯ ಇಲ್ಲಿ ಇರುವುದೋ ಅಲ್ಲಿಯವರೆಗೂ ಹಿಂದೂಗಳೂ ಮುಸಲ್ಮಾನರೂ

ಸಹಾಯಕ್ಕಾಗಿ ಅವರ ಕಡೆ ನೋಡುವದು ಮತ್ತು ಕಷ್ಟಪರಿಸ್ಥಿತಿ ಮುಂದು ವರೆಯುವುದು. ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿರುವ ಜನತೆಗೆ ಇದಕ್ಕಿಂತ ಹೆಚ್ಚಿನ ಕೇಡು ಇಲ್ಲ.'

## ಬ್ರಿಟಿಷ್ ಸೈನ್ಯಗಳು ಒಂದು ತಡೆ

ಮೇಲಿನ ಮಾತು ಸ್ನೇಹಿತರ ಬ್ರಿಟಿಷ್ ಮನಸ್ಸಾಕ್ಷಿಗೆ ಪೆಟ್ಟಾಯಿತು. 'ನಮ್ಮ ಸೈನ್ಯ ಬೇಗ ಈ ದೇಶ ಬಿಡಲು ಬ್ರಿಟಿಷರಿಗೆ ಇಷ್ಟ. ತಡೆಯುತ್ತಿರುವವರು ಯಾರು?'

ಗಾಂಧೀಜೀ ಹೀಗೆ ಹೇಳಿದರು: 'ಮತ್ತಾರು—ಬ್ರಿಟಿಷರೇ. ತತ್‌ಕ್ಷಣ ಇಲ್ಲಿಂದ ಹೊರಡಲು ಶಾರೀರಕವಾಗಿ ಅಸಾಧ್ಯವೆಂಬುದನ್ನು ನೀವು ಸ್ಪಷ್ಟ ಪಡಿಸದಿದ್ದರೆ—ಬ್ರಿಟಿಷರೇ ತಡೆ.'

ಇನ್ನೂ ಸ್ವಲ್ಪ ಚರ್ಚಿಸಿದನಂತರ ಮಿತ್ರರು 'ಭಾರತದಲ್ಲಿರುವ ಬ್ರಿಟಿಷ್ ಹಿತಾಸಕ್ತಿಗಳೂ ಅವರ ಬೆಂಬಲಿಗರೂ ಬ್ರಿಟಿಷ್ ಸೈನ್ಯಗಳ ನಿರ್ಗಮನಕ್ಕೆ ಅಡ್ಡಿ' ಎಂದು ಒಪ್ಪಿದರು. ಆದರೂ ಕಾನೂನು-ಶಾಂತಿಗಳನ್ನು ಪಾಲಿಸುವುದರಲ್ಲಿ ಬ್ರಿಟಿಷ್ ಸೈನ್ಯದ ಕರ್ತವ್ಯವೇನು ಎಂಬುದು ಅವರಿಗೆ ಇನ್ನೂ ಸಂಶಯವಾಗಿಯೇ ಇತ್ತು. 'ಅವರು ಇಲ್ಲಿರುವವರೆಗೆ ಶಾಂತಿ ಇರುವುದಿಲ್ಲ ಎನ್ನುತ್ತೀರಿ. ಆದರೂ ಶಾಂತಿಯನ್ನು ರಕ್ಷಿಸಲು ಪ್ರತಿನಿತ್ಯ ಅವರ ಆವಶ್ಯಕತೆ ಹೆಚ್ಚುತ್ತಿದೆ. ಅವರನ್ನು ಆವಶ್ಯಕವಾದಷ್ಟು ಉಪಯೋಗಿಸುತ್ತಿಲ್ಲ ಎಂಬುದೇ ಆಕ್ಷೇಪಣೆ' ಎಂದರು.

ಗಾಂಧೀಜೀ ಹೀಗೆ ಪ್ರತ್ಯುತ್ತರವಿತ್ತರು: 'ಅವರನ್ನು ಹಿಂದಕ್ಕೆ ಕರೆಸಿಕೊಳ್ಳಬೇಕೆಂಬುದಕ್ಕೆ ಅದೇ ಮುಖ್ಯ ಕಾರಣ. ನನ್ನ ಅಭಿಪ್ರಾಯದಲ್ಲಿ, ಅವರ ಇರುವಿಕೆ ದಂಗೆಗಳನ್ನು ತಡೆಯುವ ಸಾಧನವಲ್ಲ; ದಂಗೆ ನಡೆದ ಅನಂತರ ಶಿಕ್ಷಿಸುವ ಸಾಧನ. ಕಾನೂನು ಶಾಂತಿಯನ್ನು ಕಾಪಾಡಲು ಅವರನ್ನು ಉಪಯೋಗಿಸುತ್ತಿರುವುದು ದೊಂಬಿ ನಡೆದ ಅನಂತರ. ಭವಿಷ್ಯ ಇತಿಹಾಸಕಾರ ಇದನ್ನು ಸ್ಪಷ್ಟಪಡಿಸುತ್ತಾನೆ. ಪೂರ್ವ ಬಂಗಾಳದಲ್ಲಿಯೂ ಸ್ಥಿತಿ ಶಾಂತವಾಗುತ್ತದೆ. ಆದರೆ ಎಷ್ಟು ಕೊಲೆ, ಎಷ್ಟು ನೋವು ಆದ ಬಳಿಕ?'

ಗಾಂಧೀಜೀ ಮುಂದುವರಿಸಿದರು : ' ಇಲ್ಲ, ಬ್ರಿಟಿಷ್ ಸೈನ್ಯಗಳು ಇಲ್ಲಿ ಇರುವುದು ಭಾರತವನ್ನು ರಕ್ಷಿಸುವುದಕ್ಕಲ್ಲ; ಭಾರತದ ಮೇಲೆ ಹೇರಿರುವ ಬ್ರಿಟಿಷರ ಆಸಕ್ತಿ-ಹಿತಗಳ ರಕ್ಷಣೆಗೆ. ಬ್ರಿಟಿಷ್ ಸರಕಾರ ಸಹ ಅವುಗಳನ್ನು ಅಲ್ಲಾಡಿಸಲಾಗದ ಮಟ್ಟಿಗೆ ಅವು ಇಲ್ಲಿ ಬಲವಾಗಿ ಬೇರೂರಿವೆ. ಬ್ರಿಟಿಷರು ಭಾರತಕ್ಕೆ ಉಪಕಾರಿಗಳಾಗಿ ಬರಲಿಲ್ಲ. ಅವರೂ ಅವರ ಸೈನ್ಯಗಳೂ—ಅದಕ್ಕೆ ಪ್ರತಿಯಾಗಿ ಏನೇ ಹೇಳಿದರೂ—ಯಾವ ಲೋಕಹಿತಕ್ಕಾಗಿಯೂ ಇಲ್ಲಿ ಇಲ್ಲ.'

## ಯುದ್ಧವನ್ನು ಕೊನೆಗಾಣಿಸಲು....

ಅನಂತರ ಸಂಭಾಷಣೆ ಯುದ್ಧದ ಕಡೆ ತಿರುಗಿತು. ಬಂದವರು ಹೀಗೆ ಕೇಳಿದರು : ' ಈ ಯುದ್ಧಗಳು ಮುಂದೆಯೂ ಆಗುವುದನ್ನು ನಿಲ್ಲಿಸುವುದು ಹೇಗೆ ? '

ಗಾಂಧೀಜೀ ಹೀಗೆ ಉತ್ತರ ಕೊಟ್ಟರು : ' ದೊಡ್ಡ ರಾಷ್ಟ್ರಗಳು ಲೂಟಿ ಮತ್ತು ಹಿಂಸೆಯ ಮನೋಭಾವನೆಯನ್ನು ಬಿಡಬೇಕು. ಹಿಂಸೆಯ ಸ್ವಾಭಾವಿಕ ಪ್ರಕಟನೆ ಯುದ್ಧ. ಯುದ್ಧದ ಅನಿವಾರ್ಯ ಪರಿಣಾಮ ಅಣುಬಾಂಬ್. ದೊಡ್ಡ ರಾಷ್ಟ್ರಗಳು ಈ ಭಾವನೆಯನ್ನು ಬಿಟ್ಟ ಹೊರತು ಜಗತ್ತಿನಲ್ಲಿ ಶಾಂತಿಯ ನಂಬಿಕೆ ಇಲ್ಲ ಎಂಬುದರಲ್ಲಿ ನನಗೆ ಸಂಶಯವಿಲ್ಲ. ಯುದ್ಧದ ಸಂದರ್ಭದಲ್ಲಿ ನಾನು ನನ್ನ ಅಭಿಪ್ರಾಯವನ್ನು ಸ್ಪಷ್ಟಪಡಿಸಲು ಪ್ರಯತ್ನಪಟ್ಟೆ. ಇಂಗ್ಲೆಂಡ್, ಹಿಟ್ಲರ್, ಜಪಾನರು ಎಲ್ಲರಿಗೂ ಪತ್ರಗಳನ್ನು ಬರೆದೆ. ನನ್ನ ಶ್ರಮಕ್ಕೆ, ನನ್ನನ್ನು ಪಂಚಮ ದಳವೆಂದು ಕರೆದರು.'

ಸ್ನೇಹಿತರು ಹೀಗೆ ಮುಂದುವರಿಸಿದರು : ' ಅಹಿಂಸೆ ಫಲಕಾರಿಯಾಗಲು ಬಹಳ ಕಾಲ ಹಿಡಿಯಬಹುದು. ಆದರೆ ಎರಡನೆಯ ರಂಗಕ್ಕೆ ರಷ್ಯ ಪ್ರಾಯಶಃ ಇರುತ್ತಲೇ ಇರಲಿಲ್ಲ.'

ಗಾಂಧೀಜೀ ಉತ್ತರ ಹೇಳಿದರು : ' ಇವೆಲ್ಲ ತರ್ಕಪ್ರೇರಿತ ವಾದಗಳು. ಈ ಮಾರ್ಗದಲ್ಲಿ ಯೋಚಿಸುವುದಕ್ಕೆ ಅನುಮತಿಯೇ ಇಲ್ಲ. ಹಾಗಿಲ್ಲದಿದ್ದರೆ ಇಷ್ಟೆಲ್ಲ ಕಹಿ ಅನುಭವಗಳ ಅನಂತರವೂ, ಇನ್ನೂ ಇಂದು ಅತ್ಯಂತ ಪ್ರಕಾಶ ವಾಗಿರುವ ನನ್ನ ನಂಬಿಕೆಯನ್ನು ನಾನೇ ನಿರಾಕರಿಸಿದಂತೆ ಆಗುತ್ತದೆ.

ಅಸಂಖ್ಯಾತ ಜನಸಮೂಹ, ಕಣ್ಣು ಮುಚ್ಚಿ ತೆಗೆಯುವುದರೊಳಗಾಗಿ ಒಂದು ವಿಶಿಷ್ಟವಾದ ಅಭಿಪ್ರಾಯಕ್ಕೆ ಪರಿವರ್ತಿತವಾಗುವ ಪವಾಡಗಳ ಗುಚ್ಛವೇ ಇತಿಹಾಸದಲ್ಲಿ ಕಾಣುತ್ತದೆ. ಬೋಅರ್ ಯುದ್ಧವನ್ನೇ ತೆಗೆದುಕೊಳ್ಳಿ. ಅದು ಇಂಗ್ಲೀಷ್ ಭಾಷೆಗೆ 'ಮಾಫೆಕಿಂಗ್' ಎಂಬ ಪದವನ್ನು ಕೊಟ್ಟಿತು. ಜನ ಮಾಫೆಕಿಂಗ್ ದಿನ ಹುಚ್ಚರಂತೆ ಕುಣಿದರು. ೧೯೦೧ರಲ್ಲಿ ಬೋಅರ್ ಯುದ್ಧ ದಲ್ಲಿ ದಕ್ಷಿಣ ಆಫ್ರಿಕದ ಈ ಹೆಸರಿನ ಪಟ್ಟಣ ಶತ್ರುಗಳಿಂದ ಬಿಡುಗಡೆಯಾದಾಗ ಇಂಗ್ಲೀಷ್ ಜನರಿಗೆ ಆನಂದ–ಹರ್ಷ ಆದರೆ ಎರಡು ವರುಷ ಕಳೆಯುವುದ ರೊಳಗೆ, ಬ್ರಿಟಿಷ್ ಜನಾಂಗವೇ ಒಂದು ಪರಿವರ್ತನೆ ಹೊಂದಿತು. ಹೆನ್ರಿ ಕ್ಯಾಂಬೆಲ್ ಬ್ಯಾನರ್‌ಮನ್ ಮುಖ್ಯಮಂತ್ರಿಯಾದರು. ಯುದ್ಧಲಾಭವನ್ನೆಲ್ಲಾ ಹೆಚ್ಚುಕಡಮೆ ಪೂರ್ಣ ಹಿಂದಕ್ಕೇ ಕೊಟ್ಟುಬಿಟ್ಟರು. ಈ ಸಂಗತಿಯು ಮತ್ತೊಂದು ನಿದರ್ಶನ—ಮೊನ್ನೆ ಚುನಾವಣೆಯಲ್ಲಿ ಕೂಲಿಕಾರ ಪಕ್ಷದ ಜಯ. ನಿನ್ನೆಯ ವರೆಗೆ ಬ್ರಿಟಿಷ್ ಜನಾಂಗಕ್ಕೆ ಚರ್ಚ್‌ಹಿಲ್‌ನ ತುಟಿಪಿಟಿಕ್ಕೆಂದರೆ ಅತ್ಯಂತ ಭಯಭಕ್ತಿ. ವಾಗ್ಝುರಿ ಮತ್ತು ಬುದ್ಧಿಪ್ರಖರತೆ ಏನಿದ್ದರೂ ಆತ ಬ್ರಿಟಿಷ್ ಜನಾಂಗದ ಪೂಜಾಮೂರ್ತಿಯಾಗಲು ಕಡೆಯಾದದ್ದು ನನ್ನ ಮಟ್ಟಿಗೇನೋ ಸಾಕಾದ ಅದ್ಭುತವೇ. 'ಎಲ್ಲ ಶಕ್ತಿಗಳೂ ಮರೆಯಾದಮೇಲೆ ಒಂದು ಉಳಿಯು ತ್ತದೆ. ಅದನ್ನು ದೇವರೆನ್ನಿ, ಪ್ರಕೃತಿ ಎನ್ನಿ ಅಥವಾ ನಿಮಗೆ ತೋರಿದಂತೆ ಕರೆಯಿರಿ' ಎಂಬ ನಂಬಿಕೆ ಆಸ್ತಿಕನಾದ ನನ್ನಂತಹವನಲ್ಲಿ ದೃಢವಾಗಲು ಈ ಉದಾಹರಣೆಗಳು ಸಾಕು.'

ಅಹಿಂಸೆಯಲ್ಲಿಯ ತಮ್ಮ ನಂಬಿಕೆಯನ್ನು ಏಸುವಿನ ಪುನರಾಗಮನದ ಸಾಕ್ಷಿಗಳ ನಂಬಿಕೆಗೆ ಗಾಂಧೀಜೀ ಹೋಲಿಸಿಕೊಂಡರು. ಅದು ಸಾಕ್ಷಿಗಳ ಜೀವಮಾನಕಾಲದಲ್ಲಿಯೇ ಸಂಭವಿಸುವುದಾಗಿತ್ತು. ಆದರೆ ಆಗಲೇ ಎರಡು ಸಾವಿರ ವರುಷ ಕಳೆದುಹೋಗಿದ್ದರೂ ಅದು ಇನ್ನೂ ದೂರದ ಕನಸೇ ಆಗಿತ್ತು. ನಂಬಿಕೆ—ಬೇರೆ ದೃಷ್ಟಿಯಲ್ಲಿ ಯೋಚಿಸುವುದು ಸಾಧ್ಯವಿಲ್ಲ.

(ಹರಿಜನ, ೧೦–೧೧–೧೯೪೬)

# ಕೇಡಿಗರಿಗೆ ಶಿಕ್ಷೆ

ಒಬ್ಬ ಪತ್ರವ್ಯವಹಾರಿ ಹೀಗೆ ಬರೆಯುತ್ತಾನೆ: 'ನೀವು, ನಿಮ್ಮನ್ನು ವ್ಯಾವಹಾರಿಕ ಧ್ಯೇಯವಾದಿ ಎಂದು ಭಾವಿಸುತ್ತಿರುವಿರಿ. ಇಂದು ನಡೆಯುತ್ತಿರುವುದು ಮಾನವೀಯತೆಯಲ್ಲ, ನಿಮ್ಮ ಕಾರ್ಯಕಾರಿ ಅಹಿಂಸೆ ಈ ಕೇಡಿಗರನ್ನು ಎದುರಿಸಲು ಹೇಗೆ ಕಾರ್ಯಮಾಡಬಲ್ಲದೆಂಬುದನ್ನು ಹೇಳುವಿರಾ?'

'ನಾನು—ವ್ಯಾವಹಾರಿಕ ಧ್ಯೇಯವಾದಿ ಎಂದು ಕರೆದುಕೊಂಡಿರುವುದು ನಿಜ. ನಾನು ಬೋಧಿಸುವುದನ್ನು ಯಾವಾಗಲೂ ಆಚರಿಸಲು—ಎಷ್ಟೇ ದೋಷಪೂರ್ಣವಾಗಿಯಾದರೂ—ನಾನು ಪ್ರಯತ್ನಿಸಿದೇನೆ. ನೀವು ಭಾವಿಸುತ್ತಿರುವಂತೆ ಕೇಡಿಗರು ಯಾರು? ಋಷಿ ಮನು ವಿವರಿಸಿದಂತಹವರೇ ಅವರು? ಇವರನ್ನೆಲ್ಲ ಇವತ್ತು ಕೊಲ್ಲುತ್ತಿಲ್ಲ. ಇಂದು ಜಗತ್ತಿನಲ್ಲಿ, ಮರಣದಂಡನೆಯನ್ನು ತೆಗೆದುಹಾಕಲು ಒಂದು ಪ್ರಯತ್ನ ಎದ್ದಿದೆ. ನಿಜವಾಗಿ ಸೆರೆಮನೆಗಳನ್ನು ವೈದ್ಯಶಾಲೆಗಳಾಗಿ ಮಾಡುವ ಮತ್ತು ಅಪರಾಧಿಗಳನ್ನು ರೋಗಿಗಳಂತೆ ಉಪಚರಿಸಿ ಪರಿವರ್ತಿಸುವ ಶ್ಲಾಘ್ಯ ಪ್ರಯತ್ನ ನಡೆಯುತ್ತಿದೆ. ನಾನು ಹೇಳಬೇಕೆಂದಿರುವುದರ ಸಾರಾಂಶ—ಧರ್ಮಗ್ರಂಥ ಎಂದು ಕರೆಸಿಕೊಳ್ಳುವುದೆಲ್ಲ ಆವಶ್ಯಕವಾಗಿ ಧರ್ಮಗ್ರಂಥವಲ್ಲ. ಅಲ್ಲದೆ, ಧರ್ಮಗ್ರಂಥ ವೈಜ್ಞಾನಿಕವಾಗಿರಬೇಕಾದರೆ ಕಾಲಕ್ಕೆ ಆವಶ್ಯಕವಾದ ಪರಿಷ್ಕರಣಕ್ಕೆ ಅದು ಅನುವು ಕೊಡಬೇಕು. ಅವು ಜನತೆಯ ಭಾಳಿನಲ್ಲಿ ಬಾಳಬೇಕಾದರೆ ಕಾಲದೊಂದಿಗೆ ತಾವೂ ಮುಂದುವರಿಯಬೇಕು. ಬದಲಾವಣೆ ಹೊಂದದ ಸಾರ್ವಕಾಲಿಕ ಮೂಲಭೂತ ತತ್ತ್ವಗಳು ಯಾವಾಗಲೂ ಎಲ್ಲೋ ಕೆಲವೇ. ಅವುಗಳನ್ನು ವಿವರಿಸಲು ಪ್ರಕರಣಗ್ರಂಥಗಳ ಆವಶ್ಯಕತೆಯಿಲ್ಲ. ಪ್ರಕರಣಗ್ರಂಥಗಳು ಆ ಅಚಲವಾದ ಶಿಲೆಗಳ ಮೇಲೆಯೇ ನಿರ್ಮಿತವಾಗಿವೆ.

'ಅಲ್ಲದೆ ಕೇಡಿಗರನ್ನು ಶಿಕ್ಷಿಸಲು ಎಲ್ಲರಿಗೂ ಅಧಿಕಾರವಿಲ್ಲ. ನಾಗರಿಕ ಸಮಾಜದಲ್ಲಿ ಇದು ಸರಕಾರಕ್ಕೆ ಮಾತ್ರ ಸೇರಿದುದು. ಸರಕಾರ ಕಾನೂನುಗಳನ್ನು ಮಾಡಿ ಅದರಂತೆ ನಡೆಸಲು ನ್ಯಾಯಾಧಿಪತಿಗಳನ್ನು ನಿಯಮಿಸುತ್ತದೆ. ಪರಿಸ್ಥಿತಿ ಹಾಗೆ ಇಲ್ಲದಿದ್ದಲ್ಲಿ, ನಾವೆಲ್ಲ ಕೇಡಿಗರಾಗುವುದರಲ್ಲಿ ಸ್ಪರ್ಧಿಸುತ್ತಿದ್ದೆವು. ಬರ್ಮಾದಲ್ಲಿ ನಡೆದ ಕೊಲೆ ನಿಜವಾಗಿ ಭಯಂಕರ. ಈಗ ನಮಗೆ ನಿಶ್ಚಯವಾಗಿ

ಗೊತ್ತಾಗಿದೆ. 'ಅದರ ಹಿಂದಿನ ಉದ್ದೇಶ್ಯ ರಾಜಕೀಯ. ಕೊಲೆಗಾರರು ಆ ದೇಶಪ್ರೇಮಿಗಳನ್ನು ಕೇಡಿಗರೆಂದು ಭಾವಿಸಿದುದರಿಂದ ತಾವು ಅವರನ್ನು ಕೊಲ್ಲುವುದರಲ್ಲಿ ಸತ್ಕಾರ್ಯವನ್ನೇ ಮಾಡುತ್ತಿರುವರೆಂದು ನಂಬಿದ್ದರೆಂದು ನಾನು ನಿಶ್ಚಯವಾಗಿ ಭಾವಿಸುತ್ತೇನೆ. ನಮ್ಮ ಹಿಂಸಾಕ್ರಾಂತಿಕಾರರೂ ಹಾಗೆಯೇ ಭಾವಿಸಲಿಲ್ಲವೆ ? ತಮ್ಮಿಂದ ಕೊಲ್ಲಲ್ಪಟ್ಟವರು ಮನು ಹೇಳಿದಂತಹ ಅತ್ಯಾಚಾರಿಗಳೆಂದು ತಾವು ಆತ್ಮಸಾಕ್ಷಿಯಿಂದ ನಂಬಿದುದಾಗಿ ಅವರು ನನ್ನೊಂದಿಗೆ ಹೇಳಿದರು. ಈ ಮಿತ್ರರು ತಾವು ಹೊಸ ಬೆಳಕನ್ನು ನೋಡುವವರೆಗೆ, ಆಹುತಿಯಾದವರನ್ನು ಬಂದೂಕದಿಂದ ಕೊಂದುದು ತಪ್ಪು ಎಂದು ಭಾವಿಸಲೇ ಇಲ್ಲ. ಆದುದರಿಂದ ಕಾನೂನನ್ನು ತಮ್ಮ ಕೈಗೆ ತೆಗೆದುಕೊಂಡು ಇತರರ ತಪ್ಪನ್ನು ನಿರ್ಣಯಿಸುವ ಧಾಷ್ಟ್ಯವನ್ನು ವಹಿಸುವವರು ತಾವೇ ತಪ್ಪಿತಸ್ಥರೆಂದು ನಾನು ವಾದಿಸಿದೇನೆ. ಅಹಿಂಸೆಯ ಮಾರ್ಗವನ್ನು ಬಿಟ್ಟುಹೋಗುವುದಾದರೆ ವಿಧ್ಯುಕ್ತವಾದ ನಿಷ್ಪಕ್ಷಪಾತ ನ್ಯಾಯಾಧಿಪತಿ ನ್ಯಾಯವನ್ನು ನಿರ್ಣಯಿಸುವಾಗ ಮಾತ್ರ ಸಾಧ್ಯ. ಇಂದು ನಡೆಯುತ್ತಿರುವುದು ಕೆಡಕು ಎಂಬುದರ ಲಕ್ಷಣಕ್ಕೇ ಸೇರಿದುದು.

(ಹರಿಜನ, ೫-೮-೧೯೪೭)

## ಲೌಕಿಕ (ಸೆಕ್ಯುಲರ್)

ಸ್ಕಾಟಿಷ್ ಚರ್ಚ್ ಕಾಲೇಜಿನ ಪ್ರಿನ್ಸಿಪಾಲರಾದ ರೆವರೆಂಡ್ ಕೆಲ್ಲಾಸ್‌ರವರು ತಮ್ಮ ಸಹಾಯೋಪಾಧ್ಯಾಯರು ಕೆಲವರೊಂದಿಗೆ ಗಾಂಧೀಜಿಯನ್ನು ನೋಡಲು ಬಂದರು. ಚರ್ಚಿಸಿದ ಮುಖ್ಯ ವಿಷಯ ಶಿಕ್ಷಣ, ಧರ್ಮ ಮತ್ತು ರಾಷ್ಟ್ರ ಇವುಗಳೊಳಗಿನ ಸಂಬಂಧ. ರಾಷ್ಟ್ರ, ನಿಸ್ಸಂದೇಹವಾಗಿ ಲೌಕಿಕ (ಸೆಕ್ಯುಲರ್)ವಾಗಿರಬೇಕೆಂಬ ಅಭಿಪ್ರಾಯವನ್ನು ಗಾಂಧೀಜೀ ವ್ಯಕ್ತಪಡಿಸಿದರು. ರಾಷ್ಟ್ರದಲ್ಲಿ ವಾಸಿಸುವ ಜನರೆಲ್ಲ ರಾಷ್ಟ್ರದ ಕಾನೂನುಗಳಿಗೆ ವಿಧೇಯರಾಗಿ ನಡೆದುಕೊಂಡು ಯಾವ ತೊಂದರೆ-ತಡೆಗಳೂ ಇಲ್ಲದೆ ತಮ್ಮ ಮತವನ್ನು ಆಚರಿಸಲು, ಪ್ರಕಟಿಸಲು ಅಧಿಕಾರವುಳ್ಳವರಾಗಿರಬೇಕು. ಮತಪ್ರಚಾರಕ್ಕೆ ತಡೆ ಇರಬಾರದು. ಆದರೆ ಯಾವ ಮತಪ್ರಚಾರಕರೂ, ಪರಕೀಯರ ಆಳ್ವಿಕೆಯಲ್ಲಿ ಅನುಭವಿಸಿದಂತಹ ಪೋಷಣೆಯನ್ನು ಹೊಂದಲಾರರು.

ಈ ವಿಷಯಗಳನ್ನು ಚರ್ಚಿಸುತ್ತಾ ಗಾಂಧೀಜೀ ನಡುವೆ, ತಾವು ಬ್ರಿಟಿಷರ ರಾಜಕೀಯ ಸ್ವಾಮಿತ್ವವನ್ನು ಕಿತ್ತು ಒಗೆದಿದ್ದರೂ, ಅವರ ಸಾಂಸ್ಕೃತಿಕ ಸ್ವಾಮಿತ್ವವನ್ನು ಇನ್ನೂ ಕಿತ್ತು ಒಗೆಯಲು ಸಾಧ್ಯವಾಗಿರಲಿಲ್ಲವೆಂದು ಹೇಳಿದರು. ತಮಗೇ ಸ್ವಾಭಾವಿಕವಾದ ಶೈಲಿಯಲ್ಲಿ ಅವರು 'ಪರಕೀಯರ ಆಳ್ವಿಕೆಯನ್ನು ನಿರಾಕರಿಸಿದೆವು. ಆದರೆ ಅದೃಶ್ಯವಾದ ಪರಕೀಯ ಪ್ರಭಾವವನ್ನು ಅಲ್ಲ' ಎಂದರು. 'ನನ್ನ ಕನಸಿನ ಈ ನವಭಾರತ, ತನ್ನ ಸ್ವಾಭಾವಿಕ ವಾತಾವರಣಕ್ಕೆ ಅನುಗುಣವಾದ ಹೊಸ ಬಾಳಿನ ತಳಹದಿಯನ್ನು ಸ್ಥಾಪಿಸಬೇಕು. ಜಗತ್ತಿನ ಪ್ರತಿಯೊಂದು ರಾಷ್ಟ್ರದಲ್ಲಿಯೂ ಇಂದು ಹಿಂಸೆ—ರಾಷ್ಟ್ರರಕ್ಷಣೆಗಾಗಿ ಎನ್ನಿಸಿಕೊಂಡರೂ—ಬಾಳಿನ ಮೂಲ ಉತ್ತಮಾಂಶಗಳ ವಿರೋಧವಾದ ಸ್ಥಾನವನ್ನು ಅನುಭವಿಸುತ್ತಿದೆ. ಸಮಾಜದಲ್ಲಿರುವ ಅತ್ಯುತ್ತಮವಾದುದನ್ನು ಸಂಘಟಿಸುವ ಗುರಿಗಾಗಿ ಭಾರತ ತನ್ನನ್ನು ಅರ್ಪಿಸಿಕೊಳ್ಳಬೇಕು. ಇದನ್ನು ಮಾಡುವುದು—ಗೂಂಡಾಗಿರಿಗೆ ಇಂದು ದೊರೆತಿರುವ ಸ್ಥಾನವನ್ನು ನಾಶಮಾಡುವುದರಲ್ಲಿ ನಾವು ಜಯಶಾಲಿಗಳಾದರೆ ಮಾತ್ರ ಸಾಧ್ಯ.'

ಆಗ ಉಪಾಧ್ಯಾಯರ ಪೈಕಿ ವಿಜ್ಞಾನ ಶಾಖೆಯವರು ಗಾಂಧೀಜಿಯವರನ್ನು ಹೀಗೆ ಕೇಳಿದರು: 'ಇದು ಸ್ವತಂತ್ರ ಭಾರತ ಸರ್ಕಾರ, ಯುದ್ಧ ಸಹಾಯಕ ಮತ್ತು ಅಣುಬಾಂಬು ಪ್ರಯೋಗದಲ್ಲಿ ವಿಜ್ಞಾನಿಗಳು ತೊಡಗಬೇಕೆಂದು ಹೇಳಿದರೆ ಆಗ ವಿಜ್ಞಾನಿಗಳು ಏನು ಮಾಡಬೇಕು?'

ಗಾಂಧೀಜೀ ಕೂಡಲೆ ಹೀಗೆ ಉತ್ತರವಿತ್ತರು: 'ವಿಜ್ಞಾನಿಗಳು ತಮ್ಮ ಹೆಸರಿಗೆ ಅರ್ಹರಾಗಬೇಕಾದರೆ ಆ ಸ್ಥಿತಿಯನ್ನು, ಮರಣಪರ್ಯಂತ ಎದುರಿಸಬೇಕು.' (ಹರಿಜನ, ೨೪–೮–೧೯೪೭)

---

## ಅಧ್ಯಾಯ – ೧೨

# ಅಹಿಂಸೆಯ ಪ್ರಯೋಗ



### ಅಹಿಂಸೆಗೆ ಅತ್ಯುತ್ತಮ ಕ್ಷೇತ್ರ

ಕಳೆದ ವಾರ ನಾನು ಅಹಿಂಸೆಯ ಆಚರಣೆಗೆ ಮೂರು ಕ್ಷೇತ್ರಗಳ ವಿಷಯ ಕುರಿತು ಬರೆದೆ. ಇಂದು ಅಹಿಂಸೆಯ ಆಚರಣೆಗೆ ನಾಲ್ಕನೆಯ ಮತ್ತು ಅತ್ಯುತ್ತಮವಾದ ಕ್ಷೇತ್ರವನ್ನು ಕುರಿತು ಹೇಳಲು ಉದ್ದೇಶಿಸಿದೇನೆ. ಇದೇ ಸಂಸಾರಕ್ಷೇತ್ರ—ಸಾಮಾನ್ಯವಾಗಿ ಅರ್ಥಮಾಡಿಕೊಳ್ಳುವುದಕ್ಕಿಂತ ಹೆಚ್ಚು ವಿಶಾಲವಾದ ಅರ್ಥದಲ್ಲಿ. ಇಲ್ಲಿ ಒಂದು ಸಂಸ್ಥೆಯ ಸದಸ್ಯರೆಲ್ಲ ಒಂದು ಸಂಸಾರ ಎಂದು ಭಾವಿಸಬೇಕು. ಆ ಸಂಸಾರದ ವ್ಯಕ್ತಿಗಳಲ್ಲಿ, ಅಹಿಂಸೆಯ ಆಚರಣೆ ಸುಲಭವಾಗಿರಬೇಕು. ಇದು ಸಾಧ್ಯವಾಗದಿದ್ದಲ್ಲಿ ನಾವು ಶುದ್ಧವಾದ ಅಹಿಂಸೆಯನ್ನು ಸಾಕಷ್ಟು ಬೆಳೆಸಿಕೊಂಡಿಲ್ಲವೆಂದು ಅರ್ಥ. ನಮ್ಮ ಸಂಸಾರಗಳಲ್ಲಿಯೂ ಸಂಸ್ಥೆಗಳಲ್ಲಿಯೂ ಬಂಧುಗಳಲ್ಲಿಯೂ ಸಹೋದ್ಯೋಗಿಗಳಲ್ಲಿಯೂ ನಾವು ಆಚರಿಸಬೇಕಾದ ಪ್ರೇಮವನ್ನೇ ನಮ್ಮ ಶತ್ರುಗಳಲ್ಲಿಯೂ ಡಕಾಯಿತರೇ ಮೊದಲಾದವರಲ್ಲಿಯೂ ಆಚರಿಸಬೇಕಾಗುತ್ತದೆ. ಒಂದೆಡೆ ಅಪಜಯವಾದಲ್ಲಿ ಮತ್ತೊಂದೆಡೆ ಜಯವಾಗುತ್ತದೆಂಬುದು ಬರಿಯ ಭ್ರಾಂತಿ.

ಕುಟುಂಬದ ಕ್ಷೇತ್ರದಲ್ಲಿ ಅಹಿಂಸೆಯ ಆಚರಣೆ ಸಾಧ್ಯವಿಲ್ಲದಿದ್ದರೂ ರಾಜಕೀಯ ಕ್ಷೇತ್ರದಲ್ಲಿ ಸಾಧ್ಯವೆಂದು ನಾವು ಸಾಮಾನ್ಯವಾಗಿ ಭಾವಿಸಿದೇವೆ. ಇದು ಶುದ್ಧ ಭ್ರಾಂತಿ ಎಂದು ಸ್ಪಷ್ಟವಾಗಿದೆ. ಇದುವರೆಗೆ ನಾವು ಅನುಸರಿಸಿದ ಮಾರ್ಗವನ್ನು ಅಹಿಂಸೆ ಎಂದು ಹೇಳಿ ಅಹಿಂಸೆಯನ್ನೇ ವಿಕಾರವಾಗಿ ಚಿತ್ರಿಸಿದೇವೆ. ಅದು ಅಹಿಂಸೆಯಾಗಿದ್ದರೂ, ಸಂದಿಗ್ಧ ಪರಿಸ್ಥಿತಿಯಲ್ಲಿ ನಿರುಪಯೋಗಿ ಆದಂತಹ ಅಶಕ್ತ ವಸ್ತುವೆಂದು ಸ್ಪಷ್ಟವಾಯಿತು. ಅಹಿಂಸೆಯ ಅಕ್ಷರಮಾಲೆಯನ್ನು ಸಂಸಾರಪಾಠಶಾಲೆಯಲ್ಲಿ ಅತ್ಯುತ್ತಮವಾಗಿ ಕಲಿಯಬಹುದು. ನನ್ನ ಅನುಭವದಿಂದ ಹೀಗೆ ಹೇಳುತ್ತೇನೆ: ಅಲ್ಲಿ ನಮಗೆ ಜಯವಾದರೆ ಇತರ ಎಲ್ಲೆಡೆಯೂ ಜಯವಾಗುವುದು ನಿಶ್ಚಯ. ಅಹಿಂಸೆಯ ಮನೋಭಾವವುಳ್ಳ

ವ್ಯಕ್ತಿಗೆ ಅಖಿಲ ಜಗತ್ತೂ ಒಂದೇ ಸಂಸಾರ. ಆದುದರಿಂದ ಅವನು ಯಾರಿಗೂ ಹೆದರುವುದಿಲ್ಲ. ಅವನಿಗೂ ಯಾರೂ ಹೆದರುವುದಿಲ್ಲ.

ಅಹಿಂಸೆಯ ಈ ಪರೀಕ್ಷೆಯಲ್ಲಿ ತೇರ್ಗಡೆಯಾಗುವವರು ಬಹಳ ವಿರಳ ಎಂದು ಥಟ್ಟನೆ ಪ್ರತ್ಯುತ್ತರ ಹೇಳಿಬಿಡಬಹುದು. ಅದು ನನ್ನ ವಾದಕ್ಕೆ ಪ್ರತ್ಯುತ್ತರವಲ್ಲ. ಅಹಿಂಸೆಯನ್ನು ನಂಬುತ್ತೇವೆಂದು ಹೇಳಿಕೊಳ್ಳುವವರು ಆ ನಂಬಿಕೆಯ ಅರ್ಥವ್ಯಾಪ್ತಿಯನ್ನು ಅರಿಯಬೇಕು. ಆ ಅರ್ಥವ್ಯಾಪ್ತಿ ಅವರನ್ನು ಗಾಬರಿಪಡಿಸುವುದಾದರೆ ಆ ನಂಬಿಕೆಯನ್ನು ಬಿಟ್ಟುಬಿಡಲು ಅವರನ್ನು ಆಹ್ವಾನಿಸುತ್ತೇನೆ. ಈಗ ಕಾಂಗ್ರೆಸ್ ವರ್ಕಿಂಗ್ ಕಮಿಟಿ ತನ್ನ ಪರಿಸ್ಥಿತಿಯನ್ನು ಸ್ಪಷ್ಟಪಡಿಸಿರುವುದರಿಂದ ಅಹಿಂಸೆಯನ್ನು ನಂಬುವವರಿಂದ ಜಗತ್ತು ಏನು ನಿರೀಕ್ಷಿಸುತ್ತಿದೆ ಎಂಬುದನ್ನು ಅವರು ಸ್ಪಷ್ಟವಾಗಿ ತಿಳಿಯುವುದು ಆವಶ್ಯಕ. ಫಲವಾಗಿ, ಅಹಿಂಸಾಸೈನ್ಯದ ಸಿಪಾಯಿಗಳ ಸಂಖ್ಯೆ ಕಡಮೆಯಾದರೆ ಚಿಂತೆಪಡಬೇಕಾದುದಿಲ್ಲ. ಸೈನ್ಯ, ಒಂದು ದಿನ ದೊಡ್ಡದಾಗಿಯೇ ಆಗುವುದು. ನಿಜವಾದ ಅಹಿಂಸೆಯಿಲ್ಲದವರ ಸೈನ್ಯ, ಅದು ಬೆಳೆಯುತ್ತಿರಲಿ ಕ್ಷೀಣಿಸುತ್ತಿರಲಿ, ಯಾವ ಉಪಯೋಗಕ್ಕೂ ಬರುವುದಿಲ್ಲ.

ಮೇಲೆ ಬರೆದುದರಿಂದ, ಅಹಿಂಸೆಯ ಎಲ್ಲ ಅರ್ಥವನ್ನೂ ತಮ್ಮ ಬಾಳಿನಲ್ಲಿ ಆಚರಿಸುವವರಿಗೆ ಮಾತ್ರ ಅಹಿಂಸಾಸೈನ್ಯದಲ್ಲಿ ಅವಕಾಶವಿರುವುದೆಂದು ಯಾರೂ ಭಾವಿಸದಿರಲಿ. ಈ ಅರ್ಥವನ್ನು ಒಪ್ಪಿ ಅದನ್ನು ಅನುಸರಿಸಲು ಹೆಚ್ಚು ಹೆಚ್ಚು ಪ್ರಯತ್ನಮಾಡುವವರಿಗೆಲ್ಲ ಅದರಲ್ಲಿ ಅವಕಾಶವುಂಟು. ಪೂರ್ಣ ಅಹಿಂಸೆ ಉಳ್ಳವರ ಸೈನ್ಯ ಸಾಧ್ಯವೇ ಇಲ್ಲ. ಅಹಿಂಸೆಯನ್ನು ಆಚರಿಸಲು ಪ್ರಾಮಾಣಿಕರಾಗಿ ಪ್ರಯತ್ನಿಸುವವರಿಂದ ಈ ಸೈನ್ಯ ಸೃಷ್ಟಿಯಾಗುತ್ತದೆ. ಕಳೆದ ಐವತ್ತು ವರುಷಗಳಿಂದ ನನ್ನ ಬಾಳನ್ನು ಹೆಚ್ಚು ಹೆಚ್ಚು ಅಹಿಂಸಾಯುತವಾಗಿ ಮಾಡಲು ಮತ್ತು ನನ್ನ ಸಹೋದ್ಯೋಗಿಗಳಿಗೆ ಆ ದಿಶೆಯಲ್ಲಿ ಸ್ಫೂರ್ತಿ ಕೊಡಲು ನಾನು ಪ್ರಯತ್ನಿಸಿದೇನೆ. ನನಗೆ ತಕ್ಕಮಟ್ಟಿಗೆ ಜಯವಾಗಿದೆಯೆಂದೂ ಭಾವಿಸುತ್ತೇನೆ. ಸುತ್ತಲೂ ಹಬ್ಬುತ್ತಿರುವ ಕತ್ತಲೆ ನನ್ನ ನಂಬಿಕೆಯನ್ನು ಮಂಕುಗೊಳಿಸಿ ಆತ್ಮವನ್ನು ಕುಗ್ಗಿಸುವ ಬದಲು, ಅದನ್ನು ಇನ್ನೂ ಹೆಚ್ಚು ಪ್ರಕಾಶವಾಗಿ ಮಾಡಿ, ಅಹಿಂಸೆಯ ಅರ್ಥವನ್ನು ನನಗೆ ಸ್ಪಷ್ಟವಾಗಿ ತೋರಿಸುತ್ತಿದೆ.

(ಹರಿಜನ, ೨೧-೭-೧೯೪೦)

## ಅಹಿಂಸೆಯನ್ನು ಬೆಳೆಸಿಕೊಳ್ಳುವುದು ಹೇಗೆ ?

**ಪ್ರಶ್ನೆ:** ಅಕಾಲದಲ್ಲಿ ಸಕಾಲದಲ್ಲಿ ಯಾವಾಗಲೂ ಅಹಿಂಸೆ, ಅಹಿಂಸೆ ಎಂದು ನೀವು ಕೂಗುವುದರಿಂದ ಪ್ರಯೋಜನವೇನು ? ಅದು ತಾನೇ ಜನರಿಗೆ ಅಹಿಂಸೆಯಿಂದ ಇರಲು ಕಲಿಸುವುದೆ ? ಅದರ ಬದಲು ಜನರಿಗೆ ಶುದ್ಧ ಅಹಿಂಸೆಯನ್ನಾಗಲೀ ಶಕ್ತರ ಅಹಿಂಸೆಯನ್ನಾಗಲೀ ಹೇಗೆ ಬೆಳೆಸಿಕೊಳ್ಳಬೇಕು ಎಂಬುದನ್ನು ಹೇಳಿದರೆ ಹೆಚ್ಚು ಉಪಯೋಗವಲ್ಲವೆ ?

**ಉತ್ತರ:** ನಿಮ್ಮದು ಸಕಾಲಿಕ ಮತ್ತು ಸಂದರ್ಭೋಚಿತ ಪ್ರಶ್ನೆ. ನಾನು ಈ ಮುಂಚೆ ಅನೇಕ ಸಂದರ್ಭಗಳಲ್ಲಿ ಅದಕ್ಕೆ ಜವಾಬು ಕೊಡಲು ಪ್ರಯತ್ನಿಸಿದೇನೆ. ಆದರೆ ನನ್ನ ಪ್ರಯತ್ನ ಅವ್ಯವಸ್ಥಿತವಾಗಿದ್ದಿದೆಯೆಂದು ನಾನೇ ಒಪ್ಪುತ್ತೇನೆ. ಅದರಲ್ಲಿ ನಾನು ಏಕಾಗ್ರತೆ ಇಡಲಿಲ್ಲ ಅಥವಾ ಅದಕ್ಕೆ ಕೊಡಬೇಕಾದ ಮಹತ್ವವನ್ನು ಕೊಡಲಿಲ್ಲ. ಸರ್ಕಾರದೊಂದಿಗೆ ಹೋರಾಟಕ್ಕೆ ನಾನು ಮಾರ್ಗವನ್ನು ಕಂಡುಹಿಡಿಯಲು ನನ್ನ ಶಕ್ತಿಯನ್ನೆಲ್ಲ ಉಪಯೋಗಿಸುತ್ತಿದ್ದಾಗ ಅದೇನೋ ಸರಿಯಾಯಿತು. ಅದರ ಫಲ ಶುದ್ಧ ಅಹಿಂಸೆಯ ಬೆಳವಣಿಗೆಗೆ ತಡೆ; ಇಂದು ನಾವು ಧೀರರ ಅಹಿಂಸೆಯ ಗಡಿಯೊಳಗೆ ಸಹ ಇಲ್ಲ. ಈಗ ನಾವು ಮುಂದುವರಿಯಬೇಕಾದರೆ, ಕೆಲವು ಕಾಲವಾದರೂ ಕಾನೂನಿನಿಂದ ಸ್ಥಾಪಿತವಾದ ಸರ್ಕಾರಕ್ಕೆ ಎದುರಾಗಿ ಅಹಿಂಸೆಯ ವಿರೋಧವನ್ನು ಒಡ್ಡುವುದನ್ನು ಪೂರ್ಣವಾಗಿ ಮರೆಯಬೇಕು. ಸಂಸಾರಕ್ಷೇತ್ರದಲ್ಲಿ ಅಹಿಂಸೆ ಜಯಪ್ರದವಾಗಿ ಸಾಧ್ಯವಾದರೆ, ವಿಧ್ಯುಕ್ತವಾಗಿ ಸ್ಥಾಪಿತವಾದ ಸರ್ಕಾರಕ್ಕೆ ವಿರೋಧವಾಗಿಯೂ ಅಹಿಂಸೆ ತನ್ನ ಶುದ್ಧಸ್ವರೂಪದಲ್ಲಿ ಪುನರುತ್ಥಾನಗೊಳ್ಳುವುದು. ಅಹಿಂಸೆ ಆಗ ಅಜೇಯವಾಗುವುದು.

ಈಗ ನಾನು ಕಾಂಗ್ರೆಸ್ಸಿನಲ್ಲಿ ಇಲ್ಲದುದರಿಂದ, ಅದರ ಹೆಸರಿನಲ್ಲಿ ನಾನು ವೈಯಕ್ತಿಕವಾಗಿ ಸಹ ಸತ್ಯಾಗ್ರಹವನ್ನು ಆಚರಿಸುವಂತಿಲ್ಲ. ಆದರೆ ನಾನು, ಆವಶ್ಯಕತೆ ತೋರಿದ ಕಡೆ, ವ್ಯಕ್ತಿಶಃ ಸತ್ಯಾಗ್ರಹ ಮಾಡಲು ಸ್ವತಂತ್ರನಾಗಿದೇನೆ. ದೇಶಕ್ಕೆ ಶಕ್ತರ ಅಹಿಂಸೆಯನ್ನು ಕಲಿಸುತ್ತಿರುವಾಗ, ಎಲ್ಲ ಸತ್ಯಾಗ್ರಹವೂ ತ್ಯಾಜ್ಯ ಎಂದು ಯಾರೂ ಭಾವಿಸಬೇಕಾದುದಿಲ್ಲ. ಆದರೆ ನನ್ನ ಭಾವನೆಯ ಅಹಿಂಸಾದಳವನ್ನು ಸೇರಬಯಸುವವರು, ಬೇಗ ಸತ್ಯಾಗ್ರಹದ ಸಂಭವವನ್ನು

ಇಟ್ಟುಕೊಳ್ಳಕೂಡದು. ಎಲ್ಲಿಯವರೆಗೆ ಶುದ್ಧ ಅಹಿಂಸೆಯನ್ನು ಅವರು ತಮ್ಮ ಬಾಳಿನಲ್ಲಿ ಆಚರಣೆಗೆ ತಂದಿಲ್ಲವೋ ಅಲ್ಲಿಯವರೆಗೆ ತಮಗೆ ಸತ್ಯಾಗ್ರಹ ಇಲ್ಲ ಎಂಬುದನ್ನು ಅವರು ಅರಿಯಬೇಕು.

ಶುದ್ಧ ಅಹಿಂಸೆ ಎಂಬ ಹೆಸರು ಯಾರನ್ನೂ ಗಾಬರಿಗೊಳಿಸಬೇಕಾದುದಿಲ್ಲ. ನಮಗೆ ಅದರ ಕಲ್ಪನೆ ಸ್ಪಷ್ಟವಾಗಿದ್ದು, ಅದರ ಅದ್ವಿತೀಯ ಪರಿಣಾಮ ಶಕ್ತಿಯಲ್ಲಿ ಸಜೀವ ನಂಬಿಕೆ ಇದ್ದರೆ ಅದರ ಅನುಷ್ಠಾನ, ನಾವು ಭಾವಿಸಿರುವಷ್ಟು ಕಠಿಣವಲ್ಲ. ಈ ಸಂದರ್ಭದಲ್ಲಿ ಮಹಾಭಾರತದ ಅಮೃತಶ್ಲೋಕವನ್ನು ಜ್ಞಾಪಕದಲ್ಲಿಟ್ಟುಕೊಳ್ಳುವುದು ಒಳ್ಳೆಯದು. ಅದರಲ್ಲಿ ಕವಿಋಷಿಯು, 'ಧರ್ಮದಲ್ಲಿ ನ್ಯಾಯವಾದ ಅರ್ಥಕಾಮಗಳೂ ಸೇರಿವೆ. ಇಹಲೋಕದ ಸುಖಕ್ಕೂ ಆತ್ಮದ ಆನಂದಕ್ಕೂ ದಾರಿಯಾದ ಧರ್ಮದ ರಾಜಮಾರ್ಗವನ್ನು ಜನ ಯಾಕೆ ಅನುಸರಿಸುತ್ತಿಲ್ಲ ?' ಎಂದು ಕೇಳುತ್ತಾನೆ. ಇಲ್ಲಿ ಧರ್ಮ ಎಂದರೆ ಬರಿಯ ಬಾಹ್ಯ ಆಚರಣೆಗಳು ಎಂದು ಅರ್ಥವಲ್ಲ. ಸತ್ಯ ಮತ್ತು ಅಹಿಂಸೆಯ ಮಾರ್ಗವನ್ನು ಸೂಚಿಸುತ್ತದೆ. ಧರ್ಮಗ್ರಂಥಗಳು ನಮಗೆ ಎರಡು ತತ್ತ್ವಗಳನ್ನು ಕೊಟ್ಟಿವೆ. ಒಂದು, ಅಹಿಂಸೆಯೇ ಪರಮಧರ್ಮ ಎಂಬುದು. ಎರಡನೆಯದು, ಸತ್ಯಕ್ಕಿಂತ ಬೇರೆ ಧರ್ಮವಿಲ್ಲವೆಂಬುದು. ಈ ಎರಡು ತತ್ತ್ವಗಳು ನ್ಯಾಯವಾದ ಎಲ್ಲ ಅರ್ಥಕಾಮಗಳಿಗೂ ನಮಗೆ ದಾರಿಯನ್ನು ತೋರಿಸುತ್ತವೆ. ಹೀಗಿರುವಾಗ ಅವುಗಳ ಆದೇಶದಂತೆ ನಡೆಯಲು ನಾವು ಯಾಕೆ ಹಿಂದುಮುಂದು ನೋಡಬೇಕು ? ಒಂದು ಸಂಗತಿ ಆಶ್ಚರ್ಯವಾದರೂ ನಿಜ. ಏನೆಂದರೆ ಅತ್ಯಂತ ಸುಲಭವಾದ ವಿಷಯ, ಅನುಸರಿಸಲು ಬಹಳ ಕಷ್ಟವೆಂಬುದನ್ನು ಜನ ತಿಳಿಯುತ್ತಾರೆ. ಇದರ ಕಾರಣ—ಭೌತಶಾಸ್ತ್ರದ ಮಾತಿನಲ್ಲಿ ಹೇಳಬೇಕಾದರೆ—ನಮ್ಮ ಅಲಸಿಕೆ. ಭೌತಶಾಸ್ತ್ರಜ್ಞರು ಅಲಸಿಕೆ ಅಥವಾ ಆಲಸ್ಯ, ವಸ್ತುವಿನ ಆವಶ್ಯಕವಾದ, ಇರುವಲ್ಲಿಯೇ ಉಪಯುಕ್ತ ಗುಣವೆಂದು ಹೇಳುತ್ತಾರೆ. ಬ್ರಹ್ಮಾಂಡವನ್ನು ಸ್ತಿಮಿತದಲ್ಲಿಟ್ಟು ಅದು ತಟಕ್ಕನೆ ಹಾರದಂತೆ ತಡೆಹಿಡಿದಿರುವುದು ಈ ಆಲಸ್ಯವೇ. ಅದು ಇಲ್ಲದಿದ್ದರೆ, ವಿಶ್ವ, ಅವ್ಯವಸ್ಥಿತ ಚಲನೆಯೇ ಆದೀತು. ಆದರೆ ಆಲಸ್ಯ ಮನಸ್ಸನ್ನು ಹಳೆಯ ಜಾಡಿಗೇ ಕಟ್ಟಿಹಾಕಿದರೆ ಅದು ಪೀಡೆಯೂ ದೋಷವೂ ಆಗುತ್ತದೆ. ಶುದ್ಧ ಅಹಿಂಸೆಯ ಆಚರಣೆ ಕಷ್ಟ ಎಂಬ ನಮ್ಮ ಬೇರುಬಿಟ್ಟ ಪೂರ್ವಗ್ರಹಕ್ಕೆ ಕಾರಣ, ಈ ಆಲಸ್ಯವೇ. ಈ ಆಲಸ್ಯವನ್ನು

ತೊಲಗಿಸುವುದು ನಮ್ಮ ಹೊಣೆ. ಇದಕ್ಕೆ ಮೊದಲನೆಯ ಹೆಜ್ಜೆ, ಎಲ್ಲ ಅಸತ್ಯವೂ ಹಿಂಸೆಯೂ—ಅವುಗಳಿಗಾಗಿ ಎಷ್ಟೇ ತ್ಯಾಗಮಾಡಬೇಕೆಂದು ತೋರಿದರೂ —ಇನ್ನುಮುಂದೆ ನಮಗೆ ತ್ಯಾಜ್ಯ ಎಂಬ ತೀರ್ಮಾನ ಮಾಡುವುದು. ಯಾಕೆ ಎಂದರೆ ಅಸತ್ಯ ಹಿಂಸೆಯಿಂದ ಉಂಟಾಗುತ್ತಿರುವ ತೋರಿಕೆಯ ಶುಭ, ಬರಿ ತೋರಿಕೆ ಮಾತ್ರ. ಅವು ನಿಜವಾಗಿ ಮಾರಕ ವಿಷಗಳು. ನಮ್ಮ ನಿರ್ಣಯ ದೃಢವಾದರೆ, ಅಭಿಪ್ರಾಯ ಸ್ಪಷ್ಟವಾದರೆ, ಅರ್ಧ ಹೋರಾಟವನ್ನು ಗೆದ್ದಂತೆಯೆ. ಈ ಗುಣಗಳ ಆಚರಣೆ ಹೆಚ್ಚು ಸುಲಭವಾಗಿ ಕೈಗೂಡುವುದು.

ಅಹಿಂಸೆಯ ಮಟ್ಟಿಗೆ ಮಿತಿಗೊಳಿಸಿಕೊಳ್ಳೋಣ. ನಾವು ಉದ್ದಕ್ಕೂ ಚರಖಾ, ಗ್ರಾಮೋದ್ಯೋಗ, ಗ್ರಾಮಕೈಗಾರಿಕೆಗಳನ್ನು ಅಹಿಂಸಾಸ್ತಂಭಗಳೆಂದು ಭಾವಿಸುತ್ತಾ ಬಂದಿದೇವೆ. ನಿಜವಾಗಿಯೂ ಅವು ಹಾಗೆಯೇ. ಅವು ಉಳಿಯ ಬೇಕು. ಆದರೆ ಈಗ ನಾವು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಬೇಕಾಗಿದೆ. ಅಹಿಂಸಾವಾದಿ ತನ್ನ ತಾಯಿತಂದೆಗಳು–ಮಕ್ಕಳು–ಹೆಂಡತಿ–ಸೇವಕರು– ಆಶ್ರಿತರು ಎಲ್ಲರೊಂದಿಗೂ ತನ್ನ ಸಂಬಂಧವನ್ನು—ಇದುವರೆಗಾಗಲೇ ಹಾಗೆ ಮಾಡದಿದ್ದಲ್ಲಿ—ಅಹಿಂಸೆಯ ತಳಹದಿಯ ಮೇಲೆಯೇ ರೂಪಿಸುತ್ತಾನೆ. ಆದರೆ ನಿಜವಾದ ಪರೀಕ್ಷೆ, ಜಾತೀಯ ಅಥವಾ ರಾಜಕೀಯ ಹೊಡೆದಾಟಗಳ ಕಾಲದಲ್ಲಿ, ಅಥವಾ ಕಳ್ಳರು ಡಕಾಯಿತರ ಅಪಾಯದಲ್ಲಿ ಸಂಭವಿಸುತ್ತದೆ. ಆ ಪರಿಸ್ಥಿತಿಯಲ್ಲಿ ತನ್ನ ಪ್ರಾಣವನ್ನು ಬಲಿಕೊಡುವುದಾಗಿ ನಿರ್ಣಯಿಸಿಕೊಳ್ಳುವುದು ಮಾತ್ರ ಸಾಲದು. ಆ ತ್ಯಾಗಮಾಡುವುದಕ್ಕೆ ಅರ್ಹವಾದ ಯೋಗ್ಯತೆಯೂ ಇರಬೇಕು. ನಾನು ಹಿಂದೂ ಆದರೆ ಮುಸಲ್ಮಾನರೊಂದಿಗೂ ಇತರರೊಂದಿಗೂ ಅಣ್ಣತಮ್ಮಂದಿರಂತೆ ವರ್ತಿಸಬೇಕು. ಜನರೊಂದಿಗೆ ವ್ಯವಹರಿಸುವಾಗ ನನ್ನ ಮತಾವಲಂಬಿಗಳಲ್ಲಿ ಬೇರೆ ಮತದವರಲ್ಲಿಯೂ ವ್ಯತ್ಯಾಸ ಮಾಡಬಾರದು. ಅವರನ್ನು ಭಯ ಅಥವಾ ಅಸ್ವಾಭಾವಿಕತೆಯಿಲ್ಲದೆ ಸೇವಿಸುವ ಅವಕಾಶಗಳನ್ನು ನಾನು ಹುಡುಕಬೇಕು. ಅಹಿಂಸೆಯ ನಿಘಂಟಿನಲ್ಲಿ 'ಭಯ' ಎಂಬ ಶಬ್ದಕ್ಕೆ ಸ್ಥಳವಿಲ್ಲ. ಹೀಗೆ ನಿಸ್ವಾರ್ಥಸೇವೆಯಿಂದ ಯೋಗ್ಯತೆಯನ್ನು ಸಂಪಾದಿಸಿ ಕೊಂಡ ಶುದ್ಧ ಅಹಿಂಸೆಯ ಉಪಾಸಕ, ಜಾತೀಯ ಗಲಭೆಯ ಅಗ್ನಿಯಲ್ಲಿ ತನ್ನನ್ನು ಬಲಿಯಾಗಿ ಅರ್ಪಿಸಲು ಅರ್ಹನಾಗುತ್ತಾನೆ. ಹಾಗೆಯೇ ಕಳ್ಳರ ಮತ್ತು ಡಕಾಯಿತರ ಅಪಾಯವನ್ನು ಎದುರಿಸಲು ಅವನು ಯಾವ ಪಂಗಡ

ಗಳಿಂದ ಕಳ್ಳರೂ ಡಕಾಯಿತರೂ ಸಾಧಾರಣವಾಗಿ ಸೃಷ್ಟಿಯಾಗುತ್ತಾರೋ, ಆ ಜನರನ್ನು ಹೋಗಿ ಕಂಡು ಅವರೊಡನೆ ಸ್ನೇಹಸಂಬಂಧವನ್ನು ಬೆಳೆಸುವುದು ಆವಶ್ಯಕವಾಗುತ್ತದೆ.

ಈ ಬಗೆಯ ಕಾರ್ಯದ ಉಜ್ವಲ ಉದಾಹರಣೆ ರವಿಶಂಕರ ಮಹಾರಾಜರ ಕಾರ್ಯ. ಗುಜರಾತಿನ ಗುಡ್ಡಗಾಡಿನ ಕಾಡುಜನರ ನಡುವೆ, ಅವರ ಕಾರ್ಯ ಬರೋಡ ಸರ್ಕಾರದ ಪ್ರಶಂಸೆಯನ್ನು ಸಹ ಆಹ್ವಾನಿಸಿದೆ. ಈ ಬಗೆಯ ಕಾರ್ಯಕ್ಕೆ ಮಿತಿಯೇ ಇಲ್ಲದ ಕ್ಷೇತ್ರವಿದೆ. ಪ್ರೇಮದ ಹೊರತು ಮತ್ತಾವ ಹೆಚ್ಚು ಶಕ್ತಿಯ ಆವಶ್ಯಕತೆಯೂ ಅದಕ್ಕೆ ಬೇಕಿಲ್ಲ. ರವಿಶಂಕರ ಮಹಾರಾಜರಿಗೆ ಇಂಗ್ಲೀಷ್ ಸ್ವಲ್ಪವೂ ತಿಳಿಯದು. ಅವರ ಗುಜರಾತಿ ಜ್ಞಾನವಾದರೂ ನಿತ್ಯವ್ಯವಹಾರಕ್ಕೆ ಹಾಗೂ ಹೀಗೂ ಸಾಕಾಗುವಷ್ಟು ಮಾತ್ರ. ಆದರೆ ದೇವರು ಅವರಿಗೆ ತಮ್ಮ ನೆರೆಹೊರೆಯವರಲ್ಲಿ ಸೀಮಾತೀತ ಪ್ರೇಮವನ್ನು ಆಶೀರ್ವದಿಸಿದಾನೆ. ಸತ್ಯಾಗ್ರಹದ ಇತರ ಕ್ಷೇತ್ರಗಳಲ್ಲಿ ಅವರಂತೆ ತೊಡಗಿರುವವರಿಗೆಲ್ಲ, ಅವರ ಉದಾಹರಣೆ ಮಾರ್ಗದರ್ಶನ ಮತ್ತು ಸ್ಫೂರ್ತಿಯನ್ನು ಕೊಡಲಿ.

(ಹರಿಜನ, ೨೧–೭-೧೯೪೦)

## ಅಹಿಂಸೆಯಲ್ಲಿ ದೋಷ

**ಪ್ರಶ್ನೆ :** ಬ್ರಿಟಿಷರು ಆಯುಧಗಳನ್ನು ತ್ಯಜಿಸಿ ಅಹಿಂಸೆಯನ್ನನುಸರಿಸ ಬೇಕೆಂದು ಮನವಿ ಮಾಡಿದೀರಿ. ಇದರಲ್ಲಿ ಒಂದು ನೀತಿಕ್ಲಿಷ್ಟತೆ (ಧರ್ಮ ಸಂಕಟ) ತಲೆದೋರುತ್ತದೆ. 'ಅ' ಎಂಬುವನ ಅಹಿಂಸೆ 'ಬ' ಎಂಬುವನ ಹಿಂಸೆಯನ್ನು ಉದ್ರೇಕಿಸುತ್ತದೆ. ಭಾವನೆಗಳು ಹೊಗದಂತೆ ಹೃದಯವನ್ನು ಕಲ್ಲುಮಾಡುತ್ತದೆ. ಅಹಿಂಸಾಭಾವನೆಯ ಮನುಷ್ಯ, ಪ್ರಾಣವಿಲ್ಲದ ವಸ್ತುವನ್ನು ಎದುರಿಸಿದಾಗ ಅವನ ಅಹಿಂಸೆ ಅದರ ಮೇಲೆ ಏನೂ ಪರಿಣಾಮವಾಗುವುದಿಲ್ಲ. ಆದುದರಿಂದ ನಿಮ್ಮ ನಂಬಿಕೆಯಲ್ಲಿ ಎಲ್ಲಿಯೋ ಏನೋ ದೋಷವಿದೆ. ಅಹಿಂಸೆಗೆ ಒಂದು ಸಂಕುಚಿತ ವಾತಾವರಣದಲ್ಲಿ ಜಯವಾಗುವ ಸಂಭವವುಂಟು. ಹಾಗೆ ಆದರೆ ಅದರಿಂದ ಸರ್ವವ್ಯಾಪಿ ಉದ್ದೇಶ್ಯಗಳಿಗೆ ಏನು ಪ್ರಯೋಜನ? ಅದು ಸರ್ವವ್ಯಾಪಿ ಉದ್ದೇಶ್ಯಕ್ಕೆ ಎಂಬ ನಿಮ್ಮ ಹೇಳಿಕೆ ನಿರಾಧಾರವಾಗುತ್ತದೆ.

**ಉತ್ತರ:** ಅಹಿಂಸೆಯನ್ನು ನೀವು ಯೋಚಿಸುವಂತೆ ಅಷ್ಟು ಹಗುರ ವಾಗಿ ಮುಗಿಸಿಬಿಡುವುದಕ್ಕಾಗುವುದಿಲ್ಲ. ಅಹಿಂಸೆ, ತಿಳಿದಿರುವ ಶಕ್ತಿಗಳ ಪೈಕಿ ಪ್ರಬಲ ಶಕ್ತಿ. ಈ ಅತಿ ಪ್ರಬಲ ಶಕ್ತಿಯನ್ನು ಎಲ್ಲರೂ ಸುಲಭವಾಗಿ ಉಪಯೋಗಿಸಬಹುದಾದರೆ ಅದರ ಪ್ರಾಮುಖ್ಯತೆಯೇ ಹೊರಟುಹೋಗುತ್ತದೆ. ನಿತ್ಯ ನಾವು ಉಪಯೋಗಿಸುವ ನೀರಿನಂತಹ ಸಾಮಾನ್ಯ ವಸ್ತುವಿನ ಅಸಂಖ್ಯಾತ ಗುಣಗಳ ನಿಜವಾದ ಅಂಶವನ್ನು ಕಂಡುಹಿಡಿಯಲು ನಮಗೆ ಸಾಧ್ಯವಾಗಿಲ್ಲ. ಅದರ ಕೆಲವು ಗುಣಗಳು ನಮ್ಮಲ್ಲಿ ಆಶ್ಚರ್ಯವನ್ನು ತುಂಬು ತ್ತವೆ. ಆದುದರಿಂದ ಅತಿ ಸೂಕ್ಷ್ಮಶಕ್ತಿಯಾದ ಅಹಿಂಸೆಯನ್ನು ಕುರಿತು ಹಗುರವಾಗಿ ಮಾತನಾಡುವುದು ಬೇಡ. ಅದರಲ್ಲಿ ಹುದುಗಿರುವ ಶಕ್ತಿಯನ್ನು ಸಹನೆ ಮತ್ತು ನಂಬಿಕೆಯಿಂದ ಕಂಡುಕೊಳ್ಳಲು ಪ್ರಯತ್ನಿಸೋಣ. ಬಹಳ ಸ್ವಲ್ಪ ಕಾಲದಲ್ಲಿಯೇ ಈ ಶಕ್ತಿಯ ಉಪಯೋಗದ ಮಹತ್ ಪ್ರಯೋಗದಲ್ಲಿ ತಕ್ಕಮಟ್ಟಿನ ಜಯವನ್ನು ಸಂಪಾದಿಸಿದೇವೆ. ನಿಮಗೇ ತಿಳಿದಿರುವಂತೆ ಆ ಜಯ ಬಹಳ ಹೆಚ್ಚೆಂದು ನಾನು ಭಾವಿಸುವುದಿಲ್ಲ. ಅದನ್ನು ಅಹಿಂಸೆಯ ಪ್ರಯೋಗ ಎಂದು ಕರೆಯುವುದಕ್ಕೆ ಕೂಡ ನಾನು ಹಿಂದುಮುಂದು ನೋಡು ತ್ತೇನೆ. ಆದರೆ ಪುರಾಣದಲ್ಲಿ ಹೇಳಿರುವಂತೆ, ಕಲ್ಲುಗಳನ್ನು ತೇಲಿಸಲು ರಾಮನ ಹೆಸರೇ ಸಾಕಾದಂತೆ, ಅಹಿಂಸೆಯ ಹೆಸರಿನಲ್ಲಿ ನಡೆಸಿದ ಚಳುವಳಿ, ದೇಶದಲ್ಲಿ ದೊಡ್ಡ ಎಚ್ಚರಿಕೆಯನ್ನುಂಟುಮಾಡಿ, ನಮ್ಮನ್ನು ಮುಂದೆ ಕೊಂಡುಹೋಯಿತು. ದೃಢನಂಬಿಕೆಯಿಂದ ಜನ ಈ ಪ್ರಯೋಗವನ್ನು ಮುಂದುಮುಂದಕ್ಕೆ ನಡೆಸಿ ಕೊಂಡು ಹೋಗುವಾಗ ಆಗಬಹುದಾದುದನ್ನು ಈಗಲೇ ಭವಿಷ್ಯ ಹೇಳುವುದು ಕಷ್ಟ. ಹಿಂಸಾಮಾರ್ಗವನ್ನು ಅನುಸರಿಸುವವರೆಲ್ಲ, ನಿರ್ದಯರೆಂದು ಹೇಳು ವುದು ಅತಿಶಯೋಕ್ತಿ. ಕೆಲವರೇನೋ ವಿವೇಕವನ್ನು ಪೂರ್ತ ಕಳೆದುಕೊಂಡಂತೆ ತೋರುತ್ತಾರೆ. ಆದರೆ ನೀತಿನಿಯಮಗಳನ್ನು ಇಂತಹ ಅಪವಾದಗಳ ಮೇಲೆ ನಾವು ಸ್ಥಾಪಿಸಲು ಪ್ರಯತ್ನಿಸಿದರೆ ನಮ್ಮದು ತಪ್ಪು ಆಗುವುದು ನಿಶ್ಚಯ. ನಮ್ಮ ಸಾಮಾನ್ಯ ಅನುಭವದ ಮೇಲೆ ನಿಯಮಗಳನ್ನು ಹಾಕಿಕೊಳ್ಳುವುದು ಅತ್ಯುತ್ತಮ ಮಾರ್ಗ. ನಮ್ಮ ಸಾಮಾನ್ಯ ಅನುಭವದಲ್ಲಿ, ಹಿಂಸೆಗೆ ಪ್ರತಿ ಅಸ್ತ್ರ ಅಥವಾ ವಿಷಹಾರಿ ಅಹಿಂಸೆ. ಮಹತ್ ಹಿಂಸೆಯನ್ನು ಮಹತ್ ಅಹಿಂಸೆ ಯಿಂದ ಎದುರಿಸಬಹುದೆಂದು ಊಹಿಸುವುದು ಸರಿಯಾದುದು.

ಆದರೆ ಒಂದು ಗಳಿಗೆ ನಿರ್ಜೀವ ವಸ್ತುಗಳನ್ನು ಕುರಿತು ಯೋಚಿಸೋಣ. ತಲೆಯಿಂದ ಕಲ್ಲನ್ನು ಕುಟ್ಟುವವನು ಖಂಡಿತ ತಲೆ ಒಡೆದುಕೊಳ್ಳುತ್ತಾನೆ. ಆದರೆ ಅಂತರಿಕ್ಷದಿಂದ ನಮ್ಮೆಡೆಗೆ ಒಂದು ಕಲ್ಲು ಬರುತ್ತದೆಂದು ಭಾವಿಸಿ. ನಾವು ಮಗ್ಗುಲಿಗೆ ಸರಿದು ಕಲ್ಲಿನ ಏಟನ್ನು ತಪ್ಪಿಸಿಕೊಳ್ಳಬಹುದು. ಮಗ್ಗುಲಿಗೆ ಸರಿಯಲು ಸ್ಥಳವಿಲ್ಲದಿದ್ದರೆ, ಇರುವಲ್ಲಿಯೇ ಧೈರ್ಯದಿಂದ ನಿಂತು ಕಲ್ಲಿನ ಏಟನ್ನು ಸ್ವೀಕರಿಸಬಹುದು. ಅದರಿಂದ ಕನಿಷ್ಠ ಪ್ರಮಾಣದ ನೋವು ಉಂಟಾಗುವುದು. ಏಟು ಮಾರಕವಾದರೆ ಮರಣ, ಏಟನ್ನು ತಪ್ಪಿಸಿಕೊಳ್ಳಲು ನಾವು ಮಾಡಿದ್ದರೆ ಆಗುತ್ತಿದ್ದಷ್ಟು ಹಿಂಸಕವಾಗುವುದಿಲ್ಲ.

ಇದೇ ಯೋಚನೆಯನ್ನೇ ಇನ್ನೂ ಸ್ವಲ್ಪ ಮುಂದೆ ನೀಡಿ. ಅವಿವೇಕಿಯಾದ ಮನುಷ್ಯನನ್ನು ಅವನ ಪಾಡಿಗೆ ಬಿಟ್ಟು ಅವನನ್ನು ಯಾರೂ ಎದುರಿಸಲು ಪ್ರಯತ್ನಿಸದಿದ್ದರೆ ತನಗೆ ತಾನೇ ಅವನು ಬಳಲಿಹೋಗುವನು. ನಿಜವಾಗಿ, ಅನೇಕರ ಪ್ರೇಮತ್ಯಾಗ ಆ ಹುಚ್ಚನನ್ನು ವಿವೇಕಿಯಾಗಿ ಪರಿವರ್ತಿಸುವುದು ಅಸಂಭವವಲ್ಲ. ಪೂರ್ಣ ಹುಚ್ಚರು ವಿವೇಕಿಗಳಾಗಿ ಪರಿವರ್ತನೆಹೊಂದಿದ ಉದಾಹರಣೆಗಳು ಇಲ್ಲದೆ ಇಲ್ಲ. (ಹರಿಜನ, ೨೮–೭–೧೯೪೦)

ಪೆಶಾವರ್‌ನ ಇಸ್ಲಾಮಿಯಾ ಕಾಲೇಜಿನ ಪ್ರೊಫೆಸರ್ ಟಿಮೂರ್‌ರವರು ಬರೆಯುತ್ತಾರೆ :

'ಕಠಿಣ ಸಮಯದಲ್ಲಿ ಅಹಿಂಸೆಯ ಅದೃಶ್ಯ ಗುಣಗಳನ್ನು ಜಗತ್ತಿಗೆ ತೋರಿಸಿಕೊಟ್ಟುದಕ್ಕಾಗಿ ಜಗತ್ತು ನಿಮಗೆ ಋಣಿಯಾಗಿದೆ. ಪರಕೀಯರ ಆಕ್ರಮಣಕ್ಕೆ ವಿರೋಧವಾಗಿ, ಶಸ್ತ್ರರಹಿತವಾಗಿ ಭಾರತದ ರಕ್ಷಣೆ ಮಾಡಬೇಕೆಂದಿರುವ ನಿಮ್ಮ ಪ್ರಯೋಗ ಎಂದೆಂದಿಗೂ ಅತ್ಯಂತ ಧೀರವಾದ ನೈತಿಕ ಪ್ರಯೋಗವಾಗುತ್ತದೆ. ಅಂತಹ ಮಾರ್ಗದಿಂದ ಆಗಬಹುದಾದ ಎರಡು ಫಲಗಳಿವೆ. ಆಕ್ರಮಣಕ್ಕೆ ಒಳಗಾದವರು ತೋರಿಸುವ ಪ್ರೇಮದಿಂದ ಆಕ್ರಮಣಕಾರರ ಅಂತಸ್ಸಾಕ್ಷಿ ಎಚ್ಚರಗೊಳ್ಳಬಹುದು. ಅವರು ತಮ್ಮ ಪಾಪಕ್ಕೆ ಪಶ್ಚಾತ್ತಾಪಪಡಬಹುದು. ಅಥವಾ ಅಹಂಕಾರಿಗಳಿಂದ ಆಕ್ರಮಣಕಾರರು, ಅಹಿಂಸೆ, ಅಶಕ್ತಿಯ ಅಥವಾ ಅವನತಿಯ ಕುರುಹು ಎಂದು ಭಾವಿಸಿ, ಅಶಕ್ತರನ್ನು ಅಮುಕಿ ಲೂಟಿಮಾಡಿ ಆಳಬಹುದು. ಇದೇ ನೀಷೆಯ ತತ್ತ್ವ.

ಹಿಟ್ಲರ್ ಇದನ್ನು ಅನುಸರಿಸುತ್ತಿದಾನೆ. ದೈಹಿಕವಾಗಿ ಪ್ರಬಲರಾಗಿರುವವರು ದೈಹಿಕವಾಗಿ ದುರ್ಬಲರಾಗಿರುವವರನ್ನು ಹೀಗೆ ಜಯಿಸುವುದರಲ್ಲಿ ಒಂದು ದೊಡ್ಡ ನಷ್ಟ ಅಡಗಿದೆ. ಜಯಿಸಲ್ಪಟ್ಟ ರಾಷ್ಟ್ರದ ಕೆಲವು ದೃಢವಾದ ಮನಶ್ಶಕ್ತಿಯ ಧೀರರು, ಜಯಿಸಿದವರಿಗೆ ನಿಷ್ಠೆಯನ್ನು ತೋರಿಸಲು ಒಪ್ಪದಿರಬಹುದು. ಆದರೆ ವಿಸ್ತಾರವಾದ ಬಹುಮತ ತನ್ನನ್ನು ರಕ್ಷಿಸಿಕೊಳ್ಳುವುದಕ್ಕಾಗಿ ಯಾವಾಗಲೂ ವಿಧೇಯವಾಗಿ ದೈನ್ಯ ಆಚರಣೆಯನ್ನು ಅವಲಂಬಿಸುತ್ತದೆ. ಅವರಲ್ಲಿ ದೊಡ್ಡ ವಿಜ್ಞಾನಿಗಳು, ದಾರ್ಶನಿಕರು, ಕಲೆಗಾರರು ಎಲ್ಲ ಇರಬಹುದು. ಅಸಾಧಾರಣ ವಾದ ಬುದ್ಧಿಯೂ ನೀತಿಬಲವೂ ಯಾವಾಗಲೂ ಒಬ್ಬರಲ್ಲಿಯೇ ಸೇರಿರುವುದಿಲ್ಲ. ತನ್ನ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳಲು, ಧೀರನಾದವನಿಗೆ ಸೈನ್ಯಗಳು ಬೇಕಿಲ್ಲ. ಆತ್ಮವನ್ನು ಉಳಿಸಿಕೊಳ್ಳಲು ಅವನು ದೇಹವನ್ನು ಬಲಿಕೊಡುತ್ತಾನೆ. ಆದರೆ ಅಂತಹವರು ವಿರಳ. ಈಗ ಒಬ್ಬರು, ಆಗ ಒಬ್ಬರು. ದುರ್ಬಲ ಬಹು ಸಂಖ್ಯಾತರಿಗೇ ರಕ್ಷಣೆ ಬೇಕಾಗಿರುವುದು. ಅಹಿಂಸಾಮಾರ್ಗದಿಂದ ಆ ರಕ್ಷಣೆ ಯನ್ನು ಒದಗಿಸುವುದು ಹೇಗೆ? ದೇಶದ ರಕ್ಷಣೆಗೆ ಅಹಿಂಸೆಯನ್ನು ಅನುಸರಿಸ ಬೇಕೆಂದು ತೋರಿದಾಗ, ಎಲ್ಲ ದೇಶಪ್ರೇಮಿಗಳಿಗೂ ಈ ಕಷ್ಟ ಅನುಭವವಾಗು ತ್ತದೆ.

‘ ‘ಹರಿಜನ’ದ ಸಂಚಿಕೆಯಲ್ಲಿ ನೀವು ಆದಷ್ಟು ಬೇಗ ಈ ವಿಷಯದ ಮೇಲೆ ಬೆಳಕು ಹರಿಸುವ ಕೃಪೆಮಾಡುತ್ತೀರೆಂದು ನಂಬುತ್ತೇನೆ.’

ದುರ್ಬಲ ಬಹುಸಂಖ್ಯಾತರಿಗೆ ನಿಸ್ಸಂದೇಹವಾಗಿ ರಕ್ಷಣೆ ಬೇಕು. ಎಲ್ಲರೂ ಹಿಂಸೆ ಅಥವಾ ಅಹಿಂಸೆಯ ಯೋಧರೇ ಆಗಿದ್ದರೆ ಈ ಪತ್ರಿಕೆಯಲ್ಲಿ ಚರ್ಚೆ ಆಗುತ್ತಿರುವಂತಹ ಪ್ರಶ್ನೆಯೇ ಏಳುತ್ತಿರಲಿಲ್ಲ. ಮನುಷ್ಯನ ಚೇಷ್ಟೆಯಿಂದ ರಕ್ಷಣೆ ಹೊಂದಬಯಸುವ ನಿರ್ಬಲ ಬಹುಸಂಖ್ಯಾತರು ಯಾವಾಗಲೂ ಇದ್ದೇ ಇರುತ್ತಾರೆ. ಪರಂಪರಾಗತವಾದ ಮಾರ್ಗ ನಮಗೆ ಗೊತ್ತೇ ಇದೆ. ಅದರ ಸಕಾರಣ ಫಲ ನಾಜಿವಾದ. ಒಂದು ಸ್ಪಷ್ಟವಾದ ಆವಶ್ಯಕತೆಗೆ ಇದು ಉತ್ತರ. ಒಂದು ರಾಷ್ಟ್ರಕ್ಕೆ ಉದ್ದೇಶ್ಯಪೂರ್ವಕವಾಗಿ ಮಾಡಿದ ಕ್ರೂರವಾದ ಅನ್ಯಾಯ ಪರಿಹಾರಕ್ಕಾಗಿ ಕೂಗಿಕೊಂಡಿತು. ಆ ಸೇಡನ್ನು ತೀರಿಸಲು ಹಿಟ್ಲರ್ ಉದ್ಭವಿಸಿ ದನು. ಯುದ್ಧದ ಅಂತ್ಯಪರಿಣಾಮ ಏನೇ ಆಗಬಹುದು. ಆದರೆ ಮತ್ತೆ ಜರ್ಮನಿಯನ್ನು ಅವಮಾನಗೊಳಿಸುವುದಕ್ಕಾಗುವುದಿಲ್ಲ. ವಿನಯ ಎರಡನೆಯ

ಅವಕಾಶವನ್ನು ಸಹಿಸುವುದಿಲ್ಲ. ಆವರೆ ಒಂದು ಅನ್ಯಾಯವನ್ನು ಹೆಚ್ಚು ಕಡಮೆ ನಿರ್ದುಷ್ಟವಾದ ಹಿಂಸಾಮಾರ್ಗದ ಮತ್ತೊಂದು ಅನ್ಯಾಯದಿಂದ ಪರಿಹರಿಸುವುದರಲ್ಲಿ, ಹಿಟ್ಲರ್ ಜರ್ಮನಿಯನ್ನು ಮಾತ್ರವೇ ಅಲ್ಲ; ಮನುಷ್ಯಸಮಾಜದ ಬಹುಭಾಗವನ್ನೇ ಪಶುಗಳನ್ನಾಗಿ ಮಾಡಿದಾನೆ. ಇದರ ಕೊನೆಯನ್ನು ನಾವು ಇನ್ನೂ ಮುಟ್ಟಿಲ್ಲ. ಇಂಗ್ಲೆಂಡ್ ಎಲ್ಲಿಯವರೆಗೆ ರೂಢಿಯಲ್ಲಿರುವ ಮಾರ್ಗಕ್ಕೆ ಅಂಟಿಕೊಂಡಿರುವುದೋ ಅಲ್ಲಿಯವರೆಗೆ, ಜಯಪ್ರದವಾಗಿ ಎದುರಿಸಲು ಅದೂ ನಾಜೀ ಮಾರ್ಗವನ್ನೇ ನಕಲು ಮಾಡಬೇಕಾಗುತ್ತದೆ. ಆದ್ದರಿಂದ ಹಿಂಸಾಮಾರ್ಗದ ಸಕಾರಣ ಪರಿಣಾಮ ಮನುಷ್ಯನನ್ನು 'ನಿರ್ಬಲ ಬಹುಸಂಖ್ಯಾತರೂ' ಸೇರಿ ಹೆಚ್ಚು ಹೆಚ್ಚು ಪಶುವಾಗಿ ಮಾಡುತ್ತಾ ಹೋಗುವುದು. ಯಾಕೆ ಎಂದರೆ ಅದು ತನ್ನ ರಕ್ಷಕರಿಗೆ ಆವಶ್ಯಕವಾದ ಸಹಕಾರವನ್ನು ಕೊಡಬೇಕಾಗಿದೆ.

ಈಗ ಅದೇ ಬಹುಸಂಖ್ಯೆಯ ಜನವನ್ನು, ಅಹಿಂಸಾಮಾರ್ಗದಿಂದ ರಕ್ಷಿಸುವುದನ್ನು ಊಹಿಸಿಕೊಳ್ಳಿ. ಇದು ಅಸಂಸ್ಕೃತಿ, ಮೋಸ, ದ್ವೇಷ ಇವುಗಳನ್ನು ಒಪ್ಪುವುದಿಲ್ಲವಾಗಿ, ಇದು ದೇಶವನ್ನು ರಕ್ಷಿಸಿಕೊಳ್ಳುತ್ತಿರುವವರ ನೀತಿಯ ಮಟ್ಟವನ್ನು ಹೆಚ್ಚಿಸುತ್ತದೆ. ಅದರಿಂದ ನಿರ್ಬಲ ಬಹುಸಂಖ್ಯಾತರ ನೀತಿಯ ಮಟ್ಟ ಅದಕ್ಕನುಸಾರವಾಗಿ ಬೆಳೆಯುತ್ತದೆ. ವ್ಯತ್ಯಾಸ ಎಷ್ಟು ಎಂಬುದರಲ್ಲಿಯೇ ಹೊರತು ಹೇಗೆ ಎಂಬುದರಲ್ಲಿ ಅಲ್ಲ.

ಆದರೆ ತೊಡಕು ಉಂಟಾಗುವುದು ಅಹಿಂಸಾಮಾರ್ಗದ ಅನುಸರಣೆಯ ಕಾರ್ಯಕ್ರಮವನ್ನು ನಾವು ನಿರ್ಣಯಿಸುವುದರಲ್ಲಿ. ಹಿಂಸಾಮಾರ್ಗದ ಆಚರಣೆಗೆ ಜನರನ್ನು ಒದಗಿಸಿಕೊಳ್ಳುವುದು ಕಷ್ಟವಿಲ್ಲ. ಆದುದರಿಂದ ಆ ಮಾರ್ಗ ಸುಲಭವಾಗಿ ತೋರುತ್ತದೆ. ಅಹಿಂಸೆಯಿಂದ ದೇಶರಕ್ಷಣೆ ಮಾಡುವವರು ಸಿಕ್ಕಬೇಕಾದರೆ, ನಾವು ಹುಡುಕಿ ಆರಿಸಿಕೊಳ್ಳಬೇಕು. ಹಣದಿಂದ ಅವರನ್ನು ಕೊಳ್ಳಲು ಸಾಧ್ಯವಿಲ್ಲ. ಅಹಿಂಸಾಮಾರ್ಗ, ರೂಢಿಯಲ್ಲಿರುವ ಮಾರ್ಗದಿಂದ ತೀರ ಭಿನ್ನವಾಗಿದೆ. ನಾನು ಇಷ್ಟು ಮಾತ್ರ ಹೇಳಬಲ್ಲೆ: ಕಳೆದ ಅರ್ಧಶತಮಾನದಿಂದ ಅಹಿಂಸೆಯನ್ನು ವ್ಯವಸ್ಥೆಗೊಳಿಸುವುದರಲ್ಲಿ ನನ್ನ ಅನುಭವ, ಭವಿಷ್ಯದ ವಿಷಯದಲ್ಲಿ ನನ್ನಲ್ಲಿ ಆಸೆ ತುಂಬಿದೆ. ಅದು ತಕ್ಕಷ್ಟು ನಿರ್ಬಲ ಬಹುಸಂಖ್ಯಾತರನ್ನು ತಕ್ಕಷ್ಟು ಪ್ರಮಾಣದಲ್ಲಿ ರಕ್ಷಿಸುವುದರಲ್ಲಿ ಜಯಶಾಲಿಯಾಗಿದೆ. ಈ ಅಸ್ತ್ರದ

ರಹಸ್ಯ ಶಕ್ತಿಗಳನ್ನು ಅರಿತು ಕೆಲಸಮಾಡಲು, ಅರ್ಧ ಶತಮಾನ ಏನೇನೂ ಸಾಲದು. ಆದುದರಿಂದ ಈ ಪತ್ರವ್ಯವಹಾರಿಯಂತೆ ಅಹಿಂಸೆಗೆ ಆಕರ್ಷಿತ ರಾದವರು ತಮ್ಮ ಶಕ್ತಿ ಮತ್ತು ಅವಕಾಶಗಳಿಗನುಗುಣವಾಗಿ ಪ್ರಯೋಗದಲ್ಲಿ ತಾವೂ ಸೇರಬೇಕು. ಅಹಿಂಸೆ ಬಹಳ ಕುತೂಹಲಜನಕವಾದ ಮತ್ತು ಕಠಿಣ ವಾದ ಘಟ್ಟವನ್ನು ಮುಟ್ಟಿದೆ. ನಾನೇ ನಕ್ಷೆ ಇಲ್ಲದ ಸಮುದ್ರಮಾರ್ಗದಲ್ಲಿ ಯಾನಮಾಡುತ್ತಿದೇನೆ. ಪ್ರತಿಯೊಂದು ಅರ್ಧ ಗಂಟೆಗೂ ನಾನು ನೀರಿನ ಆಳವನ್ನು ಕಂಡುಕೊಳ್ಳಬೇಕಾಗಿದೆ. ಈ ಕಷ್ಟ, ಹೋರಾಟಕ್ಕೆ ನನ್ನನ್ನು ಇನ್ನೂ ಹುರಿದುಂಬಿಸುತ್ತದೆ ಮಾತ್ರ. (ಹರಿಜನ, ೧೧-೮-೧೯೪೦)

## ಅಹಿಂಸೆ ಅಸಾಧ್ಯವೆ ?

'ಅಹಿಂಸೆ ಅಮೋಘವಾದ ಅಸ್ತ್ರವೆಂದೂ ಪೂರ್ಣ ಅಹಿಂಸೆಯನ್ನು ಸಾಧಿಸಿರುವವನಿಗೆ ಜಗತ್ತಿನ ಯಾವ ಶಕ್ತಿಯೂ ಸಾಟಿ ಅಲ್ಲವೆಂದೂ ತತ್ತ್ವದಲ್ಲಿ ಒಪ್ಪಬಹುದು. ಆದರೆ ಇದು ಸಾಧ್ಯವೆ ? ಹುಲಿಗಳನ್ನೂ ಸಿಂಹಗಳನ್ನೂ ಪಳಗಿಸಿ, ಕುರಿಗಳಂತೆ ಸಾಧುವಾಗಿ ಮಾಡುವ ಅಪೂರ್ವ ಯೋಗಿ ಒಬ್ಬ ಇರಬಹುದು. ಆದರೆ ಸಾಮಾನ್ಯ ಮನುಷ್ಯ ಆ ಪ್ರಾಣಿಗಳಿಂದ ತನ್ನನ್ನು ರಕ್ಷಿಸಿಕೊಳ್ಳಲು ಬಂದೂಕು ಅಥವಾ ಇತರ ಆಯುಧಗಳನ್ನು ಅವಲಂಬಿಸಬೇಕು. ಅದ್ಭುತಶಕ್ತಿ ಯುಳ್ಳ ನೀವು, ನಿಮ್ಮ ಯೋಚನೆಯ ಪ್ರಭಾವಮಾತ್ರದಿಂದಲೇ ಜನರನ್ನು ಪರಿವರ್ತಿಸಬಹುದು. ಆದರೆ ಸಾಮಾನ್ಯ ಮನುಷ್ಯ, ನ್ಯಾಯಾಸ್ಥಾನ ನ್ಯಾಯ ವಾದಿ ಮುಂತಾದ ವ್ಯಾವಹಾರಿಕ ಪರಿಹಾರಗಳನ್ನು ಅವಲಂಬಿಸಬೇಕಾಗುತ್ತದೆ. ಪುರಾಣಕಾಲದಲ್ಲಿ ಸಹ ತಮ್ಮ ನಿತ್ಯಜೀವನದಲ್ಲಿ ಅಹಿಂಸೆಯನ್ನು ಆಚರಿಸಿ ದವರು ಅಪರೂಪ. ಬುದ್ಧದೇವ ಜನರನ್ನು ಕೆಲವು ಕಾಲ ಅಹಿಂಸಾಮಾರ್ಗ ದಲ್ಲಿ ನಡೆಸಿಕೊಂಡು ಹೋಗಲು ಪ್ರಯತ್ನಿಸಿದ. ಆದರೆ ಅವನ ಬಳಿಕ ಏನಾಯಿತು ? ಸಮಾಜ ಬುದ್ಧನ ಬೋಧನೆಗಳನ್ನು ಮರೆತು ತನ್ನ ಹಿಂದಿನ ದಾರಿ ಹಿಡಿಯಿತು. ಭವಿಷ್ಯಸಮಾಜ ಅಹಿಂಸಾಮಾರ್ಗದಲ್ಲಿ ಹೋಗುವುದು ಎಂಬುದಕ್ಕೆ ಭೂತಕಾಲದ ಸಮಾಜದಲ್ಲಿ ಏನೂ ಸೂಚನೆ ಇಲ್ಲ. ಆದುದ ರಿಂದಲೇ ನಮ್ಮ ಋಷಿಗಳು ಜ್ಞಾನಿಗಳಾದುದರಿಂದ ಪ್ರಪಂಚವನ್ನು ತೊರೆದು,

ಸತ್ಯ ಮತ್ತು ಅಹಿಂಸೆಯ ಆಚರಣೆಗೆ ವನಗಳನ್ನು ಆಶ್ರಯಿಸಿದರೆಂದು ತೋರು ತ್ತದೆ. ಅಹಿಂಸೆಯನ್ನು ಅಧ್ಯಯನಮಾಡಲು ನೀವು ಕೆಲವರಿಗೆ ಸ್ಫೂರ್ತಿ ಉಂಟುಮಾಡಬಹುದು. ಆದರೆ ಪೂರ್ತ ಸಮಾಜ ಅದನ್ನು ಅಂಗೀಕರಿಸುವ ಸಂಭವವಿಲ್ಲ. ಈ ವಾದ ಭಾರತರಾಷ್ಟ್ರಕ್ಕೂ ಅನ್ವಯಿಸುತ್ತದೆ. ತನ್ನ ಸ್ವಾತಂತ್ರ್ಯ ವನ್ನು ಜಯಿಸಿಕೊಳ್ಳಲು, ಭಾರತ ಅಹಿಂಸೆಗಿಂತ ಬೇರೆಯಾದ ಸಾಧನೆಗಳನ್ನು ಆರಿಸಿಕೊಳ್ಳಬೇಕು. ಪ್ರಾಥಮಿಕ ಗ್ರಂಥವನ್ನು ಕಲಿಯುತ್ತಿರುವ ಮಗು, ಟಿಳಕರ ಗೀತೆಯಂತಹ ಪುಸ್ತಕವನ್ನು ಅರ್ಥಮಾಡಿಕೊಳ್ಳುವುದೆಂದು ನಿರೀಕ್ಷಿ ಸುವುದು ವ್ಯರ್ಥ. ಹಾಗೆಯೇ ಪ್ರಾಪಂಚಿಕ ಸುಖದಲ್ಲಿ ಮಗ್ನರಾಗಿರುವ ಜನರು, ಅಹಿಂಸೆಯ ಶ್ಲಾಘ್ಯತೆಯನ್ನು ಅರ್ಥಮಾಡಿಕೊಳ್ಳುತ್ತಾರೆಂದು ಭಾವಿಸು ವುದು ವ್ಯರ್ಥ. ಅಹಿಂಸೆ ಅಂತ್ಯ ಗುರಿ. ಅದನ್ನು ಸಾಧಿಸಲು ವೈದ್ಯ ಅಥವಾ ಎಂಜನೀಯರಿಂಗ್ ಪದವಿ ಗಳಿಸಲು ಆವಶ್ಯಕವಾದುದಕ್ಕಿಂತ ಹೆಚ್ಚು ಶ್ರಮ, ಸಿದ್ಧತೆ ಬೇಕಾಗುತ್ತದೆ. ಸತ್ಯ ಮತ್ತು ಅಹಿಂಸೆಯ ವಿಜ್ಞಾನಗಳನ್ನು ಬೋಧಿ ಸಲು ನಾವು ಅಸಂಖ್ಯಾತ ಕಾಲೇಜುಗಳನ್ನು ಸ್ಥಾಪಿಸಬೇಕಾಗುತ್ತದೆ. ಇಂದು ಸಮಾಜ, ಹೊಸ ಆವಶ್ಯಕತೆಗಳನ್ನು ಸೃಷ್ಟಿಸಿ ಅವುಗಳನ್ನು ಪೂರೈಸಿಕೊಳ್ಳು ವುದಕ್ಕಾಗಿಯೇ ತನ್ನ ಶಕ್ತಿಯನ್ನು ವಿನಿಯೋಗಿಸುತ್ತಿದೆ. ಅದು ತನ್ನ ಶಕ್ತಿ ಗಳನ್ನು ಅಹಿಂಸೆಯ ಪ್ರಯೋಗದ ಕಡೆಗೆ ತಿರುಗಿಸುವುದೆಂದು ನೀವು ನಿರೀಕ್ಷಿ ಸುತ್ತೀರಾ ? '

ಈ ಪತ್ರವ್ಯವಹಾರಿ ಹೇಳುವ ಸಂಶಯ ಮತ್ತು ಕ್ಲಿಷ್ಟತೆಗಳು ಇತರರಿಗೂ ತೋರುತ್ತವೆ. ಅವುಗಳನ್ನು ಪರಿಹರಿಸಲು ನಾನು ಬೇರೆ ಬೇರೆ ಸಂದರ್ಭಗಳಲ್ಲಿ ಪ್ರಯತ್ನಿಸಿದೇನೆ. ಆದರೆ ಕಾಂಗ್ರೆಸ್ ವರ್ಕಿಂಗ್ ಕಮಿಟಿ ಅಹಿಂಸೆಯನ್ನು ಸಜೀವ ವಾದಾಂಶವಾಗಿ ಮಾಡುವುದಕ್ಕೆ ಕಾರಣವಾದುದರಿಂದ, ಈ ಸಂಶಯ ಮತ್ತು ಕ್ಲಿಷ್ಟತೆಗಳನ್ನು ಇನ್ನೂ ಹೆಚ್ಚು ವಿವರವಾಗಿ ಪರಿಗಣಿಸುವುದು ಆವಶ್ಯಕ ಎಂದು ತೋರುತ್ತದೆ.

ಪತ್ರವ್ಯವಹಾರಿ ಅಹಿಂಸೆಯ ಸಾರ್ವತ್ರಿಕ ಪ್ರಯೋಗದಲ್ಲಿ ಸಂಶಯ ವನ್ನು ವ್ಯಕ್ತಪಡಿಸಿ ಸಮಾಜ ಅದರ ದಿಕ್ಕಿನಲ್ಲಿ ಮುಂದುವರಿಯಲೇ ಇಲ್ಲವೆಂದು ಹೇಳುತ್ತಾರೆ. ' ಬುದ್ಧನಂತಹ ಗುರುಗಳು ತೋರಿ ಮಾಡಿದ ಪ್ರಯತ್ನಗಳಿಂದ ಅವರ ಜೀವಿತಕಾಲದಲ್ಲಿ ಸ್ವಲ್ಪ ಜಯ ತೋರಿತು. ಆದರೆ ಸಮಾಜ ಅವರು

ಬಂದು ಹೋಗಿದ್ದರೂ ಇದ್ದಲ್ಲಿಯೇ ಇದೆ. ಅಹಿಂಸೆ, ವ್ಯಕ್ತಿಯ ಧರ್ಮವಾಗಲು ತಕ್ಕುದಾಗಿರಬಹುದು. ಸಮಾಜದಿಂದ ಏನೂ ಸಾಧ್ಯವಿಲ್ಲ. ಸ್ವಾತಂತ್ರ್ಯ ಸಂಪಾದನೆಗಾಗಿ ಭಾರತವೂ ಅಹಿಂಸಾಮಾರ್ಗವನ್ನೆ ಅನುಸರಿಸಬೇಕಾಗುವುದು.'

ಈ ವಾದ ಮೂಲತಃ ದೋಷಯುಕ್ತವಾದುದೆಂದು ನಾನು ಭಾವಿಸುತ್ತೇನೆ. ಕೊನೆಯ ವಾಕ್ಯ ಸರಿಯಾದುದಲ್ಲ. ಯಾಕೆಂದರೆ ಕಾಂಗ್ರೆಸ್ ಸ್ವರಾಜ್ಯ ಸಾಧನೆಗಾಗಿ ಅಹಿಂಸೆಯನ್ನೇ ಒಪ್ಪಿಕೊಂಡಿದೆ. ಅದು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿದೆ. ಆಂತರಿಕ ಗೊಂದಲದಲ್ಲಿ ಕಾಂಗ್ರೆಸ್ ಅಹಿಂಸೆಯನ್ನೇ ಆಯುಧವಾಗಿ ಮುಂದುವರಿಸುವುದೇ ಎಂಬ ಪ್ರಶ್ನೆ ಚರ್ಚಿತವಾಗಿ ಕಾಂಗ್ರೆಸ್ 'ಹೌದು' ಎಂದು ಪ್ರತ್ಯುತ್ತರ ಕೊಟ್ಟಿದೆ. ಹೊರಗಿನಿಂದ ಬರುವ ಮುತ್ತಿಗೆಯಿಂದ ರಕ್ಷಿಸಿಕೊಳ್ಳಲು ಮಾತ್ರ ಕಾಂಗ್ರೆಸ್ ಸಶಸ್ತ್ರಬಲ ಇಟ್ಟುಕೊಳ್ಳುವುದು ಆವಶ್ಯಕವೆಂದು ಹೇಳಿದೆ. ಇದರಲ್ಲಿ ಸಹ ತೀರ್ಮಾನಕ್ಕೆ ವಿರೋಧವಾಗಿ ಮತ ಚಲಾಯಿಸಿದವರ ಸಂಖ್ಯೆಯೂ ಗಣನೀಯವಾದಷ್ಟು ಇತ್ತು. ತತ್ತ್ವದ ಮೇಲೆ ಮತ ಚಲಾವಣೆಯಾದಾಗ ಅಸಮ್ಮತಿಯನ್ನು ಗಣನೆಗೆ ತೆಗೆದುಕೊಳ್ಳಬೇಕು. ಕಾಂಗ್ರೆಸ್ ನೀತಿ ಯಾವಾಗಲೂ ಬಹುಮತದಿಂದಲೇ ನಿರ್ಣಯವಾಗಬೇಕು. ಆದರೆ ಅಲ್ಪಸಂಖ್ಯಾತರ ಮತವನ್ನು ಅದು ಇಲ್ಲದಂತೆ ಮಾಡುವುದಿಲ್ಲ. ಅದು ಇರುತ್ತದೆ. ಎಲ್ಲಿ ತತ್ತ್ವದ ಪ್ರಶ್ನೆ ಇಲ್ಲವೋ, ಅನುಸರಿಸಬೇಕಾದ ಕಾರ್ಯಕ್ರಮ ಮಾತ್ರ ಇರುವುದೋ, ಅಲ್ಲಿ ಅಲ್ಪಸಂಖ್ಯೆಯವರು ಬಹುಸಂಖ್ಯೆಯವರನ್ನು ಅನುಸರಿಸಬೇಕು. ಆದರೆ ತತ್ತ್ವ ಇರುವೆಡೆ, ಅಸಮ್ಮತಿಗೆ ಸ್ಥಾನವಿದೆ. ಅವಕಾಶ ದೊರೆತಾಗ ಅದು ಕಾರ್ಯದಲ್ಲಿ ವ್ಯಕ್ತವಾಗುತ್ತದೆ. ಹಾಗೆಂದರೆ ಸರ್ವಕಾಲಕ್ಕೂ ಸರ್ವ ಉದ್ದೇಶಕ್ಕೂ ಅಹಿಂಸೆ ಎಂಬುದನ್ನು ಸಮಾಜದ ಒಂದು ಭಾಗ ಒಪ್ಪಿದೆ—ಆ ಭಾಗ ಎಷ್ಟೇ ಚಿಕ್ಕದಾಗಿರಬಹುದು—ಸಮಾಜ ಅಹಿಂಸೆಯನ್ನು ಪರಿಹಾರಮಾರ್ಗವಾಗಿ ಉಪಯೋಗಿಸುವುದರಲ್ಲಿ ತಕ್ಕಮಟ್ಟಿನ ಹೆಜ್ಜೆಗಳನ್ನಿಟ್ಟಿದೆ ಎಂದಾಯಿತು. ಮುಂದಿನ ಹೆಜ್ಜೆಯನ್ನು ಅದು ಇಡುವುದೇ ಇಲ್ಲವೆ ಅದು ಬೇರೆ ವಿಷಯ. ಆದುದರಿಂದ ವರ್ಕಿಂಗ್ ಕಮಿಟಿಯ ನಿರ್ಣಯ ಪತ್ರವ್ಯವಹಾರಿಯ ಸಂಶಯಕ್ಕೆ ಯಾವ ಬೆಂಬಲವನ್ನೂ ಕೊಡುವುದಿಲ್ಲ. ಅದರ ಬದಲು, ಆ ನಿರ್ಣಯ ಸಂಶಯಗಳನ್ನು ಹೋಗಲಾಡಿಸಬೇಕು.

ಇನ್ನು 'ನಾನು ಅಪೂರ್ವ ವ್ಯಕ್ತಿ ಮತ್ತು ಸಮಾಜ ಅಹಿಂಸೆಯಲ್ಲಿ ಅಲ್ಪಸ್ವಲ್ಪ ಸಾಧಿಸಿರುವುದು ನನ್ನ ಪ್ರಭಾವದ ಕಾರಣದಿಂದ ಮತ್ತು ನನ್ನ ಜತೆಯಲ್ಲಿ ಇದು ಮಾಯವಾಗುತ್ತದೆ' ಎಂಬ ವಾದ. ಇದು ಸರಿಯಲ್ಲ. ಕಾಂಗ್ರೆಸ್ಸಿಗೆ ಆಲೋಚನೆ ಮಾಡಬಲ್ಲ ಅನೇಕ ನಾಯಕರಿದ್ದಾರೆ. ಮೌಲಾನರು ವಿಶಾಲ ವ್ಯಾಸಂಗ ಮತ್ತು ತೀಕ್ಷ್ಣಬುದ್ಧಿಯ ದೊಡ್ಡ ಆಲೋಚನೆಗಾರರು. ಅರಬ್ಬೀ ಮತ್ತು ಪರ್ಶಿಯನ್ ಪಾಂಡಿತ್ಯದಲ್ಲಿ ಅವರನ್ನು ಸರಿಗಟ್ಟುವವರು ಇಲ್ಲವೇ ಇಲ್ಲ. ಅಹಿಂಸೆಯೊಂದೇ ಭಾರತವನ್ನು ಸ್ವತಂತ್ರವಾಗಿ ಮಾಡಬಲ್ಲದೆಂಬುದನ್ನು ಅನುಭವ ಅವರಿಗೆ ಕಲಿಸಿದೆ. ಆಂತರಿಕ ಗೊಂದಲದಲ್ಲಿ ಅಹಿಂಸೆಯನ್ನು ಆಯುಧವಾಗಿ ಒಪ್ಪಬೇಕೆಂಬ ನಿರ್ಣಯವನ್ನು ಒತ್ತಿಹೇಳಿದವರು ಅವರೇ. ಪಂಡಿತ ಜವಾಹರಲಾಲ್ ಯಾರನ್ನೂ ಕಂಡು ಭಯಭ್ರಾಂತರಾಗುವವರಲ್ಲ. ಅವರ ಇತಿಹಾಸ, ವರ್ತಮಾನ ಜಗತ್ತಿನ ಜ್ಞಾನ, ಮತ್ತೆ ಯಾರದಕ್ಕೂ ಕಡಮೆ ಅಲ್ಲ. ಪೂರ್ತಿಯಾಗಿ ಆಲೋಚನೆ ಮಾಡಿದ ಅನಂತರವೇ ಅವರು ಸ್ವರಾಜ್ಯ ಸಾಧನೆಯ ಮಾರ್ಗಕ್ಕೆ ಅಹಿಂಸೆಯನ್ನು ಒಪ್ಪಿದ್ದಾರೆ. ಅಹಿಂಸೆ ನಿಷ್ಪ್ರಯೋಜಕವಾಗಿ, ಹಿಂಸೆಯಿಂದ ಸ್ವರಾಜ್ಯವನ್ನು ಜಯಿಸಬಹುದಾದರೆ ಆ ಸ್ವರಾಜ್ಯವನ್ನು ತಾವು ಅಂಗೀಕರಿಸುವುದಾಗಿ ಅವರು ಹೇಳಿರುವುದು ನಿಜ. ಆದರೆ ಅದು ಪ್ರಕೃತದ ವಾದಕ್ಕೆ ಸಂಬಂಧಪಟ್ಟುದಲ್ಲ. ಸ್ವರಾಜ್ಯ ಸಂಪಾದನೆಗಾದರೂ ಅಹಿಂಸೆ ಮಾತ್ರವೇ ಆಯುಧವೆಂದು ಅಂಗೀಕರಿಸಿರುವ ಇನ್ನೂ ಕೆಲವು ದೊಡ್ಡ ಹೆಸರುಗಳು ಕಾಂಗ್ರೆಸ್ಸಿನಲ್ಲಿ ಇಲ್ಲದೇ ಇಲ್ಲ. ನಾನು ಮರೆಯಾದ ಕೂಡಲೇ ಅವರೆಲ್ಲ ಅಹಿಂಸೆಯನ್ನು ಬಿಟ್ಟುಬಿಡುತ್ತಾರೆ ಎಂದು ಯೋಚಿಸುವುದು ಅವರನ್ನು ಅವಮಾನಗೊಳಿಸಿದಂತೆ; ಮನುಷ್ಯಸ್ವಭಾವವನ್ನೇ ಅವಮಾನಗೊಳಿಸಿದಂತೆ. ಪ್ರತಿಯೊಬ್ಬರಿಗೂ ಆಲೋಚನಾಶಕ್ತಿ ಇದೆಯೆಂದು ನಾವು ನಂಬಬೇಕು. ಮುಂದುವರಿಯಬೇಕಾದರೆ ಅಷ್ಟರಮಟ್ಟಿಗೆ ಪರಸ್ಪರ ಗೌರವ ಆವಶ್ಯಕ. ನಮ್ಮ ಮಿತ್ರರಿಗೆ ಸ್ವತಂತ್ರ ನಿರ್ಣಯಶಕ್ತಿಯಿರುವುದೆಂದು ನಾವು ಒಪ್ಪುವುದರಿಂದ, ಅವರು ದುರ್ಬಲರೆಂದು ವ್ಯಕ್ತರಾಗಿದ್ದರೂ ಸ್ವತಂತ್ರ ಬುದ್ಧಿಯುಳ್ಳವರಾಗಲು ಅವರಿಗೆ ನಾವು ಹೆಚ್ಚು ಶಕ್ತಿ ಕೊಡುತ್ತೇವೆ.

ಕಾಂಗ್ರೆಸ್ ಅಹಿಂಸೆಗೆ ತಿಲಾಂಜಲಿಯಿತ್ತಿದೆ ಎಂದು ಪತ್ರವ್ಯವಹಾರಿಯಾಗಲೀ ಇತರರಾರೇ ಆಗಲಿ ನಂಬುವುದಿಲ್ಲವೆಂದು ನಾನು ಭಾವಿಸುತ್ತೇನೆ.

ಸೂಚಿತವಾದ ಮಿತಿಗೆ ಒಳಪಟ್ಟು, ಅಹಿಂಸೆಯಲ್ಲಿ ನಂಬಿಕೆಯ ಪುನಃ ಪ್ರಕಟನೆ ನಿಸ್ಸಂದೇಹವಾಗಿ ಕಾಂಗ್ರೆಸ್‌ನಿಂದ ಆಗಿದೆ. ಕಾಂಗ್ರೆಸ್ ಹಾಕಿರುವ ಮಿತಿ ಅಹಿಂಸೆಯ ವ್ಯಾಪ್ತಿಯನ್ನು ತಕ್ಕಮಟ್ಟಿಗೆ ಸಂಕುಚಿತಗೊಳಿಸಿ, ಅದರ ಉಜ್ವಲತೆಯನ್ನು ಮಂಕುಗೊಳಿಸುತ್ತದೆಯೆಂದು ನಾನು ಒಪ್ಪುತ್ತೇನೆ. ಆದರೆ ನಮ್ಮ ಇಂದಿನ ವಾದಕ್ಕೆ ಕಾಂಗ್ರೆಸ್ಸಿನ ಮಿತವಾದ ಅಹಿಂಸೆ ಸಾಕಾಗಿದೆ. ಯಾಕೆಂದರೆ ಅಹಿಂಸೆಯ ಕ್ಷೇತ್ರ ವಿಸ್ತಾರವಾಗುತ್ತಿದೆಯೆಂದೂ, ಅಹಿಂಸೆಯನ್ನು ಕಾಂಗ್ರೆಸ್ ಮಿತಿಯೊಳಗೆ ಅಂಗೀಕರಿಸಿರುವುದರಿಂದ ನನ್ನ ನಿಲುವಿಗೆ ಅದರ ಬೆಂಬಲವಿದೆ ಎಂದೂ ನಾನು ತೋರಿಸಬಯಸುತ್ತಿದೇನೆ.

ಇತಿಹಾಸದ ಗುರುತು ಸಿಕ್ಕುವ ಕಾಲದಿಂದ ಇಂದಿನವರೆಗೆ ನೋಡಿದರೆ ಮನುಷ್ಯ ಹೆಜ್ಜೆಹೆಜ್ಜೆಯಾಗಿ ಅಹಿಂಸೆಯ ಕಡೆಗೆ ಮುಂದುವರಿಯುತ್ತಿರುವುದು ಕಾಣುತ್ತದೆ. ನಮ್ಮ ಪ್ರಾಚೀನ ಪೂರ್ವಜರು ನರಭಕ್ಷಕರಾಗಿದ್ದರು. ನರಭಕ್ಷಣೆ ಬೇಸರಿಕೆಯಾಗಿ, ಅವರು ಬೇಟೆಯಿಂದ ಜೀವಿಸಲು ಪ್ರಾರಂಭಿಸಿದರು. ಮುಂದೆ ಮನುಷ್ಯ ಬೇಟೆಗಾರನಾಗಿ ಅಲೆಯುವುದರಲ್ಲಿ ನಾಚಿಕೆಗೊಂಡ ಒಂದು ಕಾಲ ಬಂತು. ಆದುದರಿಂದ ಅವನು ವ್ಯವಸಾಯವನ್ನು ಕೈಕೊಂಡು ತನ್ನ ಆಹಾರಕ್ಕೆ ಭೂಮಿತಾಯಿಯ ಮೇಲೆ ಮುಖ್ಯವಾಗಿ ಅವಲಂಬಿಸಿದನು. ಹೀಗೆ, ಅಲೆಯುತ್ತಿದ್ದವನು ನಾಗರಿಕ ಜೀವನದಲ್ಲಿ, ಒಂದೆಡೆ ನಿಂತು ಹಳ್ಳಿಗಳನ್ನೂ ಪಟ್ಟಣಗಳನ್ನೂ ನಿರ್ಮಿಸಿದನು. ಸಂಸಾರದ ಒಬ್ಬನಾಗಿದ್ದವನು, ಸಮಾಜದ ಮತ್ತು ದೇಶದ ಪ್ರಜೆಯಾದನು. ಇವೆಲ್ಲ ಬೆಳೆಯುತ್ತಿರುವ ಅಹಿಂಸೆ ಮತ್ತು ಕ್ಷೀಣಿಸುತ್ತಿರುವ ಹಿಂಸೆಯ ಪ್ರತೀಕಗಳಾಗಿವೆ. ಹೀಗಲ್ಲದೆ ಬೇರೆ ಬಗೆಯಾಗಿದ್ದರೆ ಇತರ ಪ್ರಾಣಿಗಳು ನಾಶವಾಗಿರುವಂತೆ ಮನುಷ್ಯಜಾತಿಯೂ ಈ ವೇಳೆಗೆ ಕಣ್ಮರೆಯಾಗಿರುತ್ತಿತ್ತು.

ಪ್ರವಾದಿಗಳೂ ಅವತಾರಪುರುಷರೂ ಹೆಚ್ಚುಕಡಮೆ ಅಹಿಂಸೆಯ ಪಾಠಗಳನ್ನೇ ಬೋಧಿಸಿದಾರೆ. ಹಿಂಸೆಯನ್ನು ಕಲಿಸುತ್ತೇನೆ ಎಂದು ಅವರಾರೂ ಹೇಳಿಕೊಳ್ಳಲಿಲ್ಲ. ಹಾಗಲ್ಲದೆ ಮತ್ತೇನು ತಾನೇ ಸಾಧ್ಯ? ಹಿಂಸೆಯನ್ನು ಕಲಿಸಬೇಕಾದ ಅಗತ್ಯವಿಲ್ಲ. ಮನುಷ್ಯಪ್ರಾಣಿಯಾಗಿ ಹಿಂಸೆ ; ಆತ್ಮವಾಗಿ ಅಹಿಂಸೆ. ಒಳಗಿರುವ ಆತ್ಮ ಜಾಗೃತವಾದ ಕೂಡಲೇ ಅವನು ಹಿಂಸಕನಾಗಿ ಉಳಿಯಲಾರ. ಅವನು ಅಹಿಂಸೆಯ ಎಡೆಗೆ ಮುಂದುವರಿಯುತ್ತಾನೆ ; ಇಲ್ಲವೇ ತನ್ನ ನಾಶಕ್ಕೆ ನುಗ್ಗು

ತ್ತಾನೆ. ಆದುದರಿಂದಲೇ ಪ್ರವಾದಿಗಳೂ ಅವತಾರಗಳೂ, ಅಹಿಂಸೆಯ ಲಕ್ಷಣ ಗಳಾದ ಸತ್ಯ-ಸಾಮರಸ್ಯ-ಭ್ರಾತೃತ್ವ-ನ್ಯಾಯ ಮುಂತಾದುವನ್ನು ಬೋಧಿಸಿ ದಾರೆ.

ಆದರೂ ಕೂಡ ಹಿಂಸೆ ಇದ್ದೇ ಇದೆ; ನಮ್ಮ ಪತ್ರವ್ಯವಹಾರಿಯಂತಹ ವರು ಅದೇ ಅಂತಿಮ ಅಸ್ತ್ರ ಎಂದು ಪರಿಗಣಿಸುವವರೆಗೆ ಇದ್ದೇ ಇದೆ. ಆದರೆ ನಾನು ತೋರಿಸಿರುವಂತೆ ಇತಿಹಾಸ ಮತ್ತು ಅನುಭವ ಅವರಿಗೆ ವಿರೋಧ ವಾಗಿದೆ.

ಮನುಷ್ಯಸಮಾಜ, ಅಹಿಂಸೆಯ ಕಡೆಗೆ ಹೆಜ್ಜೆ ಹೆಜ್ಜೆ ಮುಂದುವರಿದಿದೆ ಎಂದು ನಂಬುವುದಾದರೆ, ಅದು ಇನ್ನೂ ಅಹಿಂಸೆಯ ಕಡೆಗೇ ಮುಂದುವರಿಯ ಬೇಕು ಎಂಬುದೂ ವ್ಯಕ್ತವಾಗುತ್ತದೆ. ಈ ಜಗತ್ತಿನಲ್ಲಿ ಯಾವುದೂ ಜಡವಲ್ಲ; ಎಲ್ಲವೂ ಚಲಿಸುತ್ತಿದೆ. ಮುನ್ನಡೆ ಇಲ್ಲದಿದ್ದರೆ ಆಗ ಅನಿವಾರ್ಯವಾಗಿ ಹಿನ್ನಡೆ ಆಗಲೇಬೇಕಾಗುತ್ತದೆ. ಈ ಶಾಶ್ವತ ಚಕ್ರಕ್ಕೆ ಸಿಲುಕದವರು ದೇವರ ಹೊರತು ಮತ್ತಾರೂ ಇರಲಾರರು.

ಇಂದಿನ ಯುದ್ಧ, ಹಿಂಸೆಯಲ್ಲಿ ಪರಮಾವಧಿ. ಹಿಂಸೆಯ ಅಂತ್ಯವೂ ಇದೇ ಎಂದು ನನ್ನ ಮನಸ್ಸಿಗೆ ತೋರುತ್ತದೆ. ಅಹಿಂಸೆಯ ಬೆಲೆಯನ್ನು ಮನುಷ್ಯಸಮಾಜ ಹಿಂದೆ ಯಾವಾಗಲೂ ಇಲ್ಲದಷ್ಟು ಇಂದು ಅರಿತಿದೆ ಎಂಬು ದಕ್ಕೆ ನನಗೆ ನಿತ್ಯಸಾಕ್ಷಿ ದೊರೆಯುತ್ತಿದೆ. ಪಶ್ಚಿಮದಿಂದ ನಿತ್ಯ ಬರುತ್ತಿರುವ ಸಾಕ್ಷಿಗಳೆಲ್ಲ ಆ ದಿಶೆಯನ್ನೇ ತೋರಿಸುತ್ತಿವೆ. ಕಾಂಗ್ರೆಸ್ ಮಿತವಾಗಿಯಾದರೂ ಅಹಿಂಸೆಯ ಪ್ರತಿಜ್ಞೆಯನ್ನು ಕೈಕೊಂಡಿದೆ. ಪತ್ರವ್ಯವಹಾರಿಗಳನ್ನೂ ಅವರಂತಹ ಇತರ ಸಂಶಯಗ್ರಸ್ತರನ್ನೂ ನಾನು ಆಹ್ವಾನಿಸುತ್ತೇನೆ: ಸಂಶಯವನ್ನು ಬಿಟ್ಟು ಅಹಿಂಸೆಯ ಪವಿತ್ರ ಯಜ್ಞಕುಂಡದಲ್ಲಿ ಧುಮುಕಲಿ. ಆಗ ಕಾಂಗ್ರೆಸ್ ತನ್ನ ಹೆಜ್ಜೆಯನ್ನು ಹಿಂದಿರುಗಿಸುವುದರಲ್ಲಿ ಸಂದೇಹವಿಲ್ಲ. 'ಅದು ಯಾವಾಗಲೂ ಒಪ್ಪುತ್ತದೆ.' ನಮ್ಮ ಕವಿ ಪ್ರೀತಮ ಹೀಗೆ ಹಾಡಿಲ್ಲವೆ?

> ಬೆಂಕಿಗೆ ಹಾರುವವರು ಅತ್ಯಂತ ಸುಖಿಗಳು
> ಸುತ್ತ ನಿಂತು ನೋಡುವವರೋ—
> ಬೆಂಕಿಯ ಉರಿ ಅವರಿಗೆ ತಗಲಿಲ್ಲ, ಅಷ್ಟೆ.

(ಹರಿಜನ, ೧೧-೮-೧೯೪೦)

## ನೀತಿಬಲ

ಒಬ್ಬ ಮಿತ್ರರು ಹೀಗೆ ಬರೆಯುತ್ತಾರೆ :

'ಯುದ್ಧದ ಘೋಷಣೆಯಾದ ಬಳಿಕ ನೀವು ಬ್ರಿಟನ್ನಿಗೆ ನಿಮ್ಮ ನೀತಿ ಬಲವನ್ನು ಕೊಡುವುದಾಗಿ ಪ್ರಕಟಿಸಿದಿರಿ. ಆ ಬಲದ ಅರ್ಥ ಅನೇಕರಿಗೆ ತಿಳಿಯಲೇ ಇಲ್ಲ. ನನಗೆ ತಿಳಿದ ಮಟ್ಟಿಗೆ ಅದನ್ನು ನೀವು ವಿವರಿಸಿಯೂ ಇಲ್ಲ. ನಾನು 'ಹರಿಜನಬಂಧು'ವಿನ ಕ್ರಮವಾದ ವಾಚಕ. ಅದರಲ್ಲಿ ಸ್ಪಷ್ಟವಾದ ವಿವರಣೆಯನ್ನು ನಾನು ಕಾಣಲಿಲ್ಲ. ಆ ಮಾತುಗಳಿಗೆ ಪ್ರತಿಯೊಬ್ಬರೂ ತಮಗೆ ತೋರಿದ ಅರ್ಥ ಹೇಳುತ್ತಾರೆ. ಗುಜರಾತ್ ಪ್ರಾಂತೀಯ ಕಾಂಗ್ರೆಸ್ ಸಮಿತಿಯ ಹೋದ ಸಭೆಯಲ್ಲಿ ನಾಯಕರು ಹೀಗೆ ಹೇಳಿದರು : 'ಬಾಪೂ ಬ್ರಿಟನ್ನಿಗೆ ನೈತಿಕ ಬೆಂಬಲ ಕೊಡಲು ಸಿದ್ಧರಾಗಿಯೇ ಇದ್ದರು. ಈಚಿನ ಕಾಂಗ್ರೆಸ್ ನಿರ್ಣಯ ಇನ್ನೇನು ತಾನೇ ಮಾಡಿದೆ ? ವಾಸ್ತವವಾಗಿ ಕಾಂಗ್ರೆಸ್ ತಾನು ಕೊಡುವುದಾಗಿ ವಾಗ್ದಾನಮಾಡುವುದಕ್ಕಿಂತ ಹೆಚ್ಚಾಗಿ ಕೇಳುತ್ತಿದೆ. ಬಾಪೂ ಸುಮ್ಮನೆಯೇ ಎಲ್ಲವನ್ನೂ ಕೊಡಲು ಸಿದ್ಧರಾಗಿದ್ದರು. ಯುದ್ಧ ಎಂಬುದೇ ಕೆಟ್ಟ ಕೃತ್ಯವಾದರೆ, ಅದಕ್ಕೆ ನೀತಿಬಲ ಅಥವಾ ಶುಭ ಆಶೀರ್ವಾದಕ್ಕೆ ಅರ್ಹತೆ ಎಲ್ಲಿದೆ ? ಮಹಾಭಾರತದಲ್ಲಿ ಅರ್ಜುನನಿಗೆ ಕೃಷ್ಣ ಕೊಟ್ಟ ಸಹಾಯ —ನೀತಿಯೇ ? ಅಥವಾ ಅದು ಅತ್ಯಂತ ಮಾರಕವಾದ ಆಯುಧಕ್ಕಿಂತ ಹೆಚ್ಚು ವಿನಾಶಕಾರಕವೆ ? '

ನಾನು 'ಹರಿಜನ'ದಲ್ಲಿ, ನೀತಿಬಲ ಎಂದರೆ ನನ್ನ ಅಭಿಪ್ರಾಯವೇನು ಎಂಬುದನ್ನು ವಿವರಿಸಿದೇನೆ. ಆದರೆ 'ಹರಿಜನಬಂಧು'ವಿನಲ್ಲಿ ಅದು ಪ್ರಕಟ ವಾಗದೆ ಇದ್ದಿರಬಹುದು. ನನ್ನ ಇಂಗ್ಲೀಷ್ ಬರಹಗಳಲ್ಲಿ, ತಾನಾಗಿಯೇ ಅರ್ಥವಾಗಲಿ ಎಂದು ಹೇಳದೆ ಬಿಟ್ಟಿರುವುದು ಅನೇಕ ಉಂಟು. ಆದರೆ ಭಾಷಾಂತರಗಳಲ್ಲಿ ಆ ಅಧ್ಯಾಹಾರಗಳು ಸ್ಪಷ್ಟವಾಗಿ ವ್ಯಕ್ತವಾಗುವುದು ಆವಶ್ಯಕ.

ಸ್ಥೂಲವಾಗಿ, ಬ್ರಿಟನ್ ಭಾರತದ ವಿಷಯದಲ್ಲಿ ನ್ಯಾಯವಾಗಿ ನಡೆದಿದ್ದರೆ ಮಾತ್ರ ಅದಕ್ಕೆ ಕಾಂಗ್ರೆಸ್ಸಿನ ನೀತಿಬಲ ದೊರೆಯುವುದಾಗಿದ್ದಿತು. ನನ್ನ ಸೂಚನೆಯಲ್ಲಿ ವ್ಯಾಪಾರಿಮನೋಭಾವವಿರಲಿಲ್ಲ. ಯಾಕೆಂದರೆ ನನ್ನ ಸಹಾಯ ಯಾವುದಕ್ಕೂ ಪ್ರತಿಯಾಗಿ ಅಲ್ಲ.

ನನ್ನ ಮಿತ್ರರು ತಪಸ್ಸಿನಿಂದ ಸಂಪಾದಿಸಿರುವ ನೀತಿಬಲವುಳ್ಳವರಾಗಿ ದಾರೆಂದು ಭಾವಿಸೋಣ. ನನಗೆ ಆ ಬಲದ ಆವಶ್ಯಕತೆ ಇದೆ ಎಂದೂ ಭಾವಿಸೋಣ. ಆತ ಅದನ್ನು ನಾನು ಸುಮ್ಮನೆ ಕೇಳಿದಮಾತ್ರಕ್ಕೇ ಕೊಡುವು ದಿಲ್ಲ. ಅದನ್ನು ಕೊಡಲು ಅವನು ಯಾವಾಗಲೂ ಸಿದ್ಧನಾಗಿರಬಹುದು. ಆದರೆ ಅವನಿಂದ ಅದನ್ನು ತೆಗೆದುಕೊಳ್ಳಲು ನನಗೆ ಶಕ್ತಿ ಇಲ್ಲದಿದ್ದರೆ ಅದು ಹೇಗೆ ನನಗೆ ದೊರೆಯುತ್ತದೆ? ನೀತಿಬಲವನ್ನು 'ಕೊಡುವುದು' ಎಂಬ ಅರ್ಥದಲ್ಲಿ ಕೊಡಲು ನಿಜವಾಗಿ ಸಾಧ್ಯವಿಲ್ಲ. ಅದನ್ನು ತೆಗೆದುಕೊಳ್ಳಲು ಅರ್ಹತೆಯಿರುವವನಿಗೆ ಅದು ಸ್ವಾಭಾವಿಕವಾಗಿ ಬರುತ್ತದೆ. ಅಂತಹವನು ಅದನ್ನು ಸಮೃದ್ಧವಾಗಿ ತೆಗೆದುಕೊಳ್ಳಬಲ್ಲನು.

ಕಾಂಗ್ರೆಸ್ಸಿನಲ್ಲಿ ಈ ನೀತಿಭಂಡಾರ ಇದೆ. ಸತ್ಯ ಮತ್ತು ಅಹಿಂಸೆಯ ಧರ್ಮವನ್ನು ಅಂಗೀಕರಿಸಿದುದು ಅದರ ತಪಸ್ಸು ಆಗಿದೆ. ತನ್ನ ಗುರಿಯ ಸಾಧನೆಗಾಗಿ ಸತ್ಯವನ್ನೂ ಅಹಿಂಸೆಯನ್ನೂ ಅಂಗೀಕರಿಸಿ ಅದು ಜಗತ್ತಿನಲ್ಲಿ ಪ್ರತಿಷ್ಠೆ ಸಂಪಾದಿಸಿದೆ. ಕಾಂಗ್ರೆಸ್ ಬ್ರಿಟನ್ನಿಗೆ ತನ್ನ ಶುಭ ಆಶೀರ್ವಾದಗಳನ್ನು ಕೊಡಬಹುದಾಗಿದ್ದರೆ, ಜಗತ್ತು ಬ್ರಿಟನ್ನಿನ ಹೋರಾಟ ನ್ಯಾಯಕ್ಕಾಗಿ ಎಂದು ತೀರ್ಮಾನಿಸುತ್ತಿತ್ತು. ಕಾಂಗ್ರೆಸ್ಸಿನ ಅಧೀನದಲ್ಲಿರುವ ಜನತೆ ಸಹ ಬ್ರಿಟಿಷರ ಕಡೆಗೆ ನ್ಯಾಯವಿದೆಯೆಂದು ಅಂಗೀಕರಿಸುತ್ತಿತ್ತು. ಆದರೆ ಇದರಲ್ಲೆಲ್ಲ ಕಾಂಗ್ರೆಸ್ ಭೌತವಾದುದು ಯಾವುದನ್ನೂ ಕೊಡುತ್ತಿರಲಿಲ್ಲ. ಬ್ರಿಟಿಷ್ ಸರ್ಕಾರ ತನ್ನ ಕಾರ್ಯದಿಂದ ನೀತಿಯ ಘನತೆಯನ್ನೂ ಶಕ್ತಿಯನ್ನೂ ಸಂಪಾದಿಸಿಕೊಳ್ಳುತ್ತಿದ್ದಿತು. ಕಾಂಗ್ರೆಸ್ ಒಬ್ಬ ಮನುಷ್ಯನನ್ನೂ ಒಂದು ಕಾಸನ್ನೂ ಸಹಾಯವಾಗಿ ಕೊಡದಿದ್ದರೂ, ಅದರ ನೀತಿಬಲವೂ ಆಶೀರ್ವಾದವೂ—ತಕ್ಕಡಿ ಬ್ರಿಟಿಷರ ಕಡೆಗೇ ವಾಲುವಂತೆ ಮಾಡುತ್ತಿತು. ಇದು ನನ್ನ ನಂಬಿಕೆ. ನನ್ನ ನಂಬಿಕೆ ಆಧಾರ ರಹಿತವೂ ಕಾಂಗ್ರೆಸ್ಸಿಗೆ ಎಂದೂ ನೀತಿಯ ಘನತೆ ಇರಲಿಲ್ಲವೆಂಬುದೂ ಸಾಧ್ಯ. ಈ ಪ್ರಶ್ನೆಯ ತೀರ್ಮಾನ ನನ್ನ ವಾದಕ್ಕೆ ಅನಾವಶ್ಯಕ.

ನೀತಿಬಲವನ್ನು ಕೊಡುವ ಅವಕಾಶವೇ ಈಗ ಇಲ್ಲದಂತೆ ತೋರುತ್ತದೆ. ನನ್ನ ದಾರಿಯನ್ನು ಅನುಸರಿಸಲು ತನಗೆ ಶಕ್ತಿಯಿಲ್ಲ ಎಂದು ಕಾಂಗ್ರೆಸ್ ಭಾವಿಸಿತು. ಆ ದಾರಿಯನ್ನು ಯಾಂತ್ರಿಕವಾಗಿ ಅನುಸರಿಸುವುದಕ್ಕಾಗುವುದಿಲ್ಲ. ಸತ್ಯ ಮತ್ತು ಅಹಿಂಸೆಯಲ್ಲಿ ಸಜೀವ ನಂಬಿಕೆ ಅದರಲ್ಲಿ ಪೂರ್ವಸೂಚಿತವಾಗಿದೆ.

ತನ್ನಲ್ಲಿ ಇಲ್ಲದುದನ್ನು ಇದೆ ಎಂದು ಕಾಂಗ್ರೆಸ್ ಎಂದಿಗೂ ಹೇಳಿಕೊಳ್ಳದೆ ಇರುವುದು ಕಾಂಗ್ರೆಸ್ಸಿನ ಮಹತ್ವಗುಣ. ಆದುದರಿಂದ ಎಲ್ಲ ನಿರ್ಣಯಗಳೂ ಗಾಂಭೀರ್ಯಯುತವಾಗಿ ಶಕ್ತಿಯನ್ನು ಪ್ರಕಟಿಸುವುವಾಗಿವೆ.

ಕಾಂಗ್ರೆಸ್ ತನ್ನ ಇತ್ತೀಚಿನ ನಿರ್ಣಯದಲ್ಲಿ, ಪ್ರತಿಫಲಕ್ಕಾಗಿ ಕೊಡುವುದಾಗಿ ವಾಗ್ದಾನಮಾಡಿರುವ ಸಹಾಯ, ನಿಸ್ಸಂದೇಹವಾಗಿ ಉನ್ನತ ನ್ಯಾಯ. ಆದರೆ ಅದು ಯಾವ ಶರತ್ತೂ ಇಲ್ಲದಂತೆ ಆಗಿಲ್ಲ; ಆಗಲಾರದು. ಈ ನಿಲುವು ಅಸಮರ್ಥನೀಯ ಅಥವಾ ಅನ್ಯಾಯ ಎಂದು ನಾನು ಸೂಚಿಸುವುದಿಲ್ಲ. ನಿರ್ಣಯದಲ್ಲಿ ಗಾಂಭೀರ್ಯವಿದೆ. ಯಾಕೆಂದರೆ ಅದು ಬಹುಮತದ, ಚೆನ್ನಾಗಿ ಆಲೋಚಿಸಿದ ಅಭಿಪ್ರಾಯ. ಆದರೆ ಆ ನಿರ್ಣಯವನ್ನು ಅಂಗೀಕರಿಸಿದುದರಿಂದ ನನ್ನ ಅಭಿಪ್ರಾಯದಲ್ಲಿ, ಕಾಂಗ್ರೆಸ್ ತನಗೆ ಇದ್ದ ಅಥವಾ ತನಗೆ ಇದೆಯೆಂದು ಜನ ಭಾವಿಸಿದ್ದ ಘನತೆಯನ್ನು ಬಿಟ್ಟುಕೊಟ್ಟಿದೆ. ಸ್ವರಾಜ್ಯವನ್ನು ಅಹಿಂಸೆಯಿಂದ ಗೆಲ್ಲಬಹುದೆಂದು ತಾವು ದೃಢವಾಗಿ ನಂಬಿದ್ದರೂ, ಅನಂತರ ಅದನ್ನು ಅಹಿಂಸೆಯಿಂದ ಉಳಿಸಿಕೊಳ್ಳಬಹುದೆಂಬುದು ತಮ್ಮ ಅಭಿಪ್ರಾಯವಾಗಿರಲಿಲ್ಲ ಎಂದು ಅನೇಕ ಕಾಂಗ್ರೆಸ್ಸಿಗರು ಹೇಳುತ್ತಾರೆ. ಆದರೆ ಹೊರಗಿನ ಪ್ರಪಂಚವೆಲ್ಲ ಕಾಂಗ್ರೆಸ್ ಯುದ್ಧವನ್ನು ಇಲ್ಲದಂತೆ ಮಾಡಲು ಸುವರ್ಣಮಾರ್ಗವನ್ನು ತೋರಿಸುತ್ತಿದೆಯೆಂದು ನಂಬಿದರು. ಕಾಂಗ್ರೆಸ್ ಬ್ರಿಟನ್‌ನಂತಹ ಪ್ರಬಲ ರಾಷ್ಟ್ರದ ಕೈಯಿಂದ ಅಹಿಂಸೆಯಿಂದ ಸ್ವಾತಂತ್ರ್ಯವನ್ನು ಕಿತ್ತುಕೊಳ್ಳಬಲ್ಲದುದಾದರೆ ಅದೇ ಸಾಧನದಿಂದ ಅದನ್ನು ಉಳಿಸಿಕೊಳ್ಳಲು ಭಾರತಕ್ಕೆ ಸಾಧ್ಯವಾಗುವುದಿಲ್ಲ, ಎಂದು ಭಾರತದ ಹೊರಗಡೆ ಯಾರೂ ನಂಬುವುದಿಲ್ಲ.

ನನ್ನ ಅಭಿಪ್ರಾಯದಲ್ಲಿ ಅರ್ಜುನನಿಗೆ ಕೃಷ್ಣನ ಸಹಾಯ ನೀತಿಕಾರ್ಯವಲ್ಲ. ಯಾಕೆಂದರೆ ಕೃಷ್ಣನಲ್ಲಿಯೇ ಒಂದು ಸೈನ್ಯವಿತ್ತು. ಅವನು ಯುದ್ಧದಲ್ಲಿ ನಿಪುಣನೂ ಆಗಿದ್ದನು. ದುರ್ಯೋಧನನು ಕೃಷ್ಣನ ಸೈನ್ಯವನ್ನು ಅಪೇಕ್ಷಿಸಿದುದು ಮೂರ್ಖ ಕಾರ್ಯ. ಯುದ್ಧವಿದ್ಯಾನಿಪುಣನಾದ ಕೃಷ್ಣ ದೊರೆತುದರಿಂದ, ಅರ್ಜುನನಿಗೆ ಬೇಕಾದುದು ಅವನಿಗೆ ಸಿಕ್ಕಿತು. ಆದುದರಿಂದ ನಾವು ಮಹಾಭಾರತವನ್ನು ಅಕ್ಷರಶಃ ಅರ್ಥಮಾಡಿಕೊಂಡರೆ, ಕೃಷ್ಣನ ಬಲ, ಅವನ ಸೈನ್ಯದ ಬಲಕ್ಕಿಂತ ಹೆಚ್ಚು ವಿನಾಶಕಾರಿಯಾಗಿತ್ತು. ತನ್ನ ವಿಜ್ಞಾನನಿಪುಣತೆಯಿಂದ, ಕೃಷ್ಣ ಏಳು ಅಕ್ಷೋಹಿಣಿ ಸೈನ್ಯದಿಂದ ದುರ್ಯೋಧನನ ಹನ್ನೊಂದು ಅಕ್ಷೋಹಿಣಿ

ಸೈನ್ಯವನ್ನು ನಾಶಮಾಡಲು ಶಕ್ತನಾದನು. ಆದರೆ ನಾನು ಮಹಾಭಾರತವನ್ನು ಬರಿಯ ಭೂಮಿಯ ಮೇಲಿನ ಯುದ್ಧದ ವರದಿ ಎಂದು ಭಾವಿಸಿರುವುದಿಲ್ಲ ಎಂಬುದು ಚೆನ್ನಾಗಿ ಗೊತ್ತಾಗಿದೆ. ಒಂದು ಮಹತ್ಕಾವ್ಯದ ವೇಷದಲ್ಲಿ ಕವಿ, ವ್ಯಕ್ತಿಗಳಲ್ಲಿಯೂ ಸಮಾಜದಲ್ಲಿಯೂ ನಡೆಯುತ್ತಿರುವ ಸತ್ಯ–ಅಸತ್ಯ, ಹಿಂಸೆ–ಅಹಿಂಸೆ, ನ್ಯಾಯ–ಅನ್ಯಾಯ ಇವುಗಳ ನಡುವಿನ ಹೋರಾಟವನ್ನು ವರ್ಣಿಸಿದ್ದಾನೆ. ಕಾವ್ಯವನ್ನು ಮೇಲೆ ಮೇಲೆ ನೋಡಿದರೂ, ಮಹತ್ ಋಷಿ ವ್ಯಾಸ, ಈ ಯುದ್ಧದಲ್ಲಿ ಸೋತವರಿಗಿಂತ ಗೆದ್ದವರು ಏನೂ ಉತ್ತಮರಾಗಿರಲಿಲ್ಲವೆಂದು ನಿದರ್ಶನ ಮಾಡಿಕೊಟ್ಟಿದಾನೆ ಎಂಬುದು ಗೊತ್ತಾಗುತ್ತದೆ. ಆ ಅಸಂಖ್ಯ ಯೋಧರ ಸಮೂಹದಲ್ಲಿ, ಕಥೆ ಹೇಳಲು ಉಳಿದವರು ಏಳು ಮಂದಿ ಮಾತ್ರ. ಈ ಏಳು ಮಂದಿಯ ದುಃಖಪೂರ್ಣ ಮನಸ್ಸಿನ ವಾಸ್ತವ ನಿಲುವನ್ನು ಕವಿ ಕೊಟ್ಟಿದಾನೆ. ಸಶಸ್ತ್ರ ಯುದ್ಧದಲ್ಲಿ ಹೋರಾಡುತ್ತಿರುವ ಪಕ್ಷಗಳು ಅಲ್ಪತೆ, ಮೋಸ ಇವುಗಳಿಗೂ ಇಳಿಯುತ್ತಾರೆಂಬುದನ್ನು ಕವಿ ಸ್ಪಷ್ಟವಾಗಿ ತೋರಿಸಿದಾನೆ. ಸಮಯ ಬಂದಾಗ, ಧರ್ಮಿಷ್ಠನಾದ ಯುಧಿಷ್ಠಿರನೂ ಯುದ್ಧದಲ್ಲಿ ಗೆಲ್ಲಲು ಅಸತ್ಯವನ್ನು ಅವಲಂಬಿಸಬೇಕಾಯಿತು.

ಲೇಖಕರ ಇನ್ನೊಂದು ಪ್ರಶ್ನೆಗೆ ಉತ್ತರ ಕೊಡಬೇಕು. ಯುದ್ಧ ಎಂಬುದು ಕೆಟ್ಟ ಕಾರ್ಯವಾದಮೇಲೆ ನೀತಿಯ ಬೆಂಬಲ ಅಥವಾ ಶುಭ ಆಶೀರ್ವಾದದ ಅರ್ಹತೆ ಅದಕ್ಕೆ ಎಲ್ಲಿಯದು? ಎಲ್ಲ ಯುದ್ಧವೂ ಪೂರ್ಣ ತಪ್ಪು ಎಂಬುದು ನನ್ನ ಮತ. ಆದರೆ ಹೋರಾಡುತ್ತಿರುವ ಎರಡು ಪಕ್ಷಗಳ ಉದ್ದೇಶ್ಯಗಳನ್ನು ನಾವು ಪರೀಕ್ಷಿಸಿದರೆ ಒಬ್ಬರದು ನ್ಯಾಯ, ಮತ್ತೊಬ್ಬರದು ಅನ್ಯಾಯ ಎಂಬುದು ನಮಗೆ ಗೊತ್ತಾಗಬಹುದು. ಉದಾಹರಣೆಗೆ 'ಅ' ಎಂಬುವನು 'ಬ' ಎಂಬುವನ ದೇಶವನ್ನು ಹಿಡಿದುಕೊಳ್ಳಲು ಪ್ರಯತ್ನಿಸಿದರೆ 'ಬ'ನಿಗೆ ಅನ್ಯಾಯವಾಗಿದೆ ಎಂಬುದು ಸ್ಪಷ್ಟ. ಇಬ್ಬರೂ ಶಸ್ತ್ರಗಳೊಂದಿಗೆ ಹೋರಾಡುತ್ತಾರೆ. ಹಿಂಸಾಯುದ್ಧದಲ್ಲಿ ನಮಗೆ ನಂಬಿಕೆ ಇಲ್ಲ. ಆದರೂ 'ಬ'ನ ನಿಲುವು ನ್ಯಾಯವಾದುದರಿಂದ ನನ್ನ ನೀತಿಬಲಕ್ಕೂ ಆಶೀರ್ವಾದಕ್ಕೂ ಅದು ಅರ್ಹ.

(ಹರಿಜನ, ೧೮–೮–೧೯೪೦)

## ಒಂದು ಸ್ವಾರಸ್ಯವಾದ ಸಂಭಾಷಣೆ

'ನಿಮ್ಮ ಪ್ರತಿಯೊಂದು ಪ್ರಶ್ನೆಗೂ ನಾನು ತತ್‌ಕ್ಷಣ ಸ್ವಲ್ಪವೂ ಸಂಶಯ ಇಲ್ಲದೆ ಉತ್ತರ ಕೊಡುತ್ತಿದ್ದೇನೆ. ಇದಕ್ಕೆ ಕಾರಣ: ನಿಮ್ಮ ಪ್ರಶ್ನೆಗಳ ಮೂಲದಲ್ಲಿರುವ ಮುಖ್ಯಪ್ರಶ್ನೆ ನನ್ನ ಮನಸ್ಸನ್ನು ಹಿಡಿದಿರುವುದು ಮತ್ತು ಅಹಿಂಸೆಯ ಬೇರೆ ಬೇರೆ ಅರ್ಥಗಳಿಂದ ಏಳಬಹುದಾದ ಪ್ರತಿಯೊಂದು ಪರಿಸ್ಥಿತಿಯನ್ನೂ ನನಗೇ ನಾನು ಪದೇ ಪದೇ ಹೇಳಿಕೊಂಡಿರುವುದು.'

ಅಹಿಂಸೆಯಲ್ಲಿ ತಮ್ಮ ಸಂಶಯಗಳನ್ನು ನಿವಾರಣೆ ಮಾಡಿಕೊಳ್ಳುವ ಏಕಮಾತ್ರ ಉದ್ದೇಶ್ಯಕ್ಕಾಗಿ ಪೂನಾದಿಂದ ಬಂದಿದ್ದ ಅನೇಕ ಸ್ನೇಹಿತರಿಗೆ ದೀರ್ಘವಾದ ಮತ್ತು ಸ್ವಾರಸ್ಯವಾದ ಸಂಭಾಷಣೆಯ ಕೊನೆಯಲ್ಲಿ ಗಾಂಧೀಜೀ ಮೇಲಿನ ವಾಕ್ಯಗಳನ್ನು ಹೇಳಿದರು. ಅವರೆಲ್ಲ ಅಹಿಂಸೆಯಲ್ಲಿ ಪೂರ್ಣ ನಂಬಿಕೆಯುಳ್ಳವರು ಅಥವಾ ಹಾಗಿಲ್ಲದಿದ್ದರೆ ತಮ್ಮ ಸಂಶಯಗಳೆಲ್ಲ ನಿವಾರಣೆಯಾದ ಮೇಲೆ ಅಂತಹ ನಂಬಿಕೆಯುಳ್ಳವರಾಗಬೇಕೆಂದು ಪೂನಾದಿಂದ ಅಷ್ಟು ದೂರ ಬಂದಿದ್ದವರು. ಬೊಂಬಾಯಿನ ಮಾಜಿ ಮುಖ್ಯಮಂತ್ರಿ ಬಾಳಾಸಾಹೇಬ್ ಖೇರ್‌ರವರು ಅವರೊಂದಿಗಿದ್ದರು. ಅವರು, ಚರ್ವಿತಚರ್ವಣವಾಗಬಹುದೆಂಬ ಭಯವಿದ್ದರೂ, ಎಲ್ಲ ಪ್ರಶ್ನೆಗಳ ಪೂರ್ಣ ಪಟ್ಟಿಯನ್ನು ಮಾಡಿದ್ದರು. ಯಾಕೆ ಎಂದರೆ ಯಾವ ಸಂಶಯವನ್ನೂ ತೀರ್ಮಾನ ಮಾಡಿಕೊಳ್ಳದೆ ಬಿಡಲು ಅವರಿಗೆ ಇಷ್ಟವಿರಲಿಲ್ಲ.

ಮೊದಲನೆಯ ಪ್ರಶ್ನೆ—ಅಹಿಂಸೆಯ ಮಿತಿ, ಅದರ ಅರ್ಥ, ಆಚರಣೆಯ ವೈಶಾಲ್ಯ ಇವುಗಳನ್ನು ಕುರಿತುದಾಗಿತ್ತು. ಮನುಷ್ಯಜಾತಿಗೆ ಇದನ್ನು ಮಿತಿಗೊಳಿಸಬೇಕೆ? ಅಥವಾ ಸೃಷ್ಟಿಗೆಲ್ಲ ಇದನ್ನು ಅನ್ವಯಿಸಬೇಕೆ?

ಗಾಂಧೀಜೀ ಹೀಗೆ ಹೇಳಿದರು: 'ನಾನು ಈ ಪ್ರಶ್ನೆಗೆ ಸಿದ್ಧವಾಗಿರಲಿಲ್ಲ. ಕಾಂಗ್ರೆಸ್ಸಿನವರಿಗೆ ಅಹಿಂಸೆ ರಾಜಕೀಯಕ್ಕೆ ಮಾತ್ರ ಮಿತಿಗೊಂಡಿದೆ. ಅಂದರೆ ಮನುಷ್ಯಜಾತಿಗೆ ಮಾತ್ರ. ಆದುದರಿಂದ ನಮ್ಮ ಉದ್ದೇಶ್ಯಕ್ಕೆ ಪೂರ್ಣ ಅಹಿಂಸೆ ಎಂದರೆ ರಾಜಕೀಯ ಕ್ಷೇತ್ರದಲ್ಲಿ ಎಲ್ಲ ಬಗೆಯ ಅಹಿಂಸೆಗಳೂ. ಸ್ಪಷ್ಟವಾದ ಮಾತುಗಳಲ್ಲಿ ಇದು ಸಂಸಾರ ಸಂಬಂಧ, ಸರ್ಕಾರದೊಂದಿಗೆ ಸಂಬಂಧ, ಆಂತರಿಕ ಗೊಂದಲ, ಹೊರಗಿನಿಂದ ಬರುವ ಮುತ್ತಿಗೆ ಇವು ಎಲ್ಲವನ್ನೂ

ಒಳಗೊಂಡಿದೆ. ಬೇರೆ ಮಾತುಗಳಲ್ಲಿ ಹೇಳುವುದಾದರೆ, ಇದು ಮನುಷ್ಯನ ಎಲ್ಲ ವ್ಯವಹಾರಗಳನ್ನೂ ಒಳಗೊಂಡಿದೆ.'

**ಪ್ರಶ್ನೆ :** ಹಾಗಾದರೆ ಮಾಂಸದ ಸೇವನೆ, ಮೊಟ್ಟೆಗಳ ಸೇವನೆ ಇದರ ವಿಷಯವೋ? ಇದು ಅಹಿಂಸೆಗೆ ಅನುಗುಣವಾದುದೆ?

**ಉತ್ತರ :** ಹೌದು. ಹಾಗಲ್ಲದಿದ್ದರೆ ನಾವು ಅಹಿಂಸೆಯಲ್ಲಿ ಸಹೋದ್ಯೋಗಿಗಳಾಗಬಹುದಾದ ಮುಸಲ್ಮಾನರನ್ನೂ ಕ್ರೈಸ್ತರನ್ನೂ ಬಹುಸಂಖ್ಯೆಯ ಹಿಂದೂಗಳನ್ನೂ ಹೊರಚ್ಚು ಮಾಡಬೇಕಾಗುತ್ತದೆ. ಅನೇಕ ಮಾಂಸಾಹಾರಿಗಳು ಸಸ್ಯಾಹಾರಿಗಳಿಗಿಂತ ಹೆಚ್ಚು ಅಹಿಂಸೆಯುಳ್ಳವರಾಗಿರುವುದು ನನಗೆ ಗೊತ್ತಿದೆ.

**ಪ್ರಶ್ನೆ :** ಆದರೆ ತತ್ತ್ವಕ್ಕಾಗಿ ಅವರನ್ನು ಬಿಡಬೇಕಾಗಿ ಬಂದರೆ?

**ಉತ್ತರ :** ಹೌದು. ತತ್ತ್ವಕ್ಕೆ ಧಕ್ಕೆ ಬರುವುದಿದ್ದರೆ ಬಿಡುವುದೇ. ಆದರೆ ನಮ್ಮ ತತ್ತ್ವ ನಾನು ಹಿಂದೆ ಹೇಳಿದಂತೆ.

## ಒಂದು ತಪ್ಪು ಹೋಲಿಕೆ

'ನೀವು ಹೇಳಿದಂತೆ, ಜರ್ಮನ್ ಮುತ್ತಿಗೆಗೆ, ಪೋಲೆಂಡಿನ ಪ್ರತಿಭಟನೆ ಸ್ವಲ್ಪ ಹೆಚ್ಚುಕಡಮೆ ಅಹಿಂಸೆಯೇ ಆದರೆ ನೀವು ಅದಕ್ಕೆ ಹೊಂದಿಕೊಂಡಂತೆ ತೋರುತ್ತದೆ. ಅಂದಮೇಲೆ ವರ್ಕಿಂಗ್ ಕಮಿಟಿಯ ವರ್ಧಾ ನಿರ್ಣಯವನ್ನು ನೀವು ಯಾಕೆ ಆಕ್ಷೇಪಿಸುತ್ತೀರಿ?'

ಗಾಂಧೀಜೀ ಹೇಳಿದರು : 'ನಿಜವಾಗಿ ಎರಡಕ್ಕೂ ಹೋಲಿಕೆ ಇಲ್ಲ. ಒಬ್ಬ ಮನುಷ್ಯನು ಕೈಯಲ್ಲಿ ಕತ್ತಿ ಹಿಡಿದು ಒಂಟಿಯಾಗಿ, ಪೂರ್ಣ ಶಸ್ತ್ರಧಾರಿಗಳಾದ ಡಕಾಯಿತರ ಗುಂಪಿನೊಂದಿಗೆ ಕಾದಿದರೆ, ಅವನು ಬಹುಮಟ್ಟಿಗೆ ಅಹಿಂಸೆಯಿಂದ ಹೋರಾಡುತ್ತಾನೆಂದು ಹೇಳುತ್ತೇನೆ. ನಾನು ನಮ್ಮ ಮಹಿಳೆಯರಿಗೆ ಹೇಳಿಲ್ಲವೆ? 'ನಿಮ್ಮ ಮಾನವನ್ನು ರಕ್ಷಿಸಿಕೊಳ್ಳಲು ನೀವು ಉಗುರು, ಹಲ್ಲು, ಕಠಾರಿಗಳನ್ನು ಉಪಯೋಗಿಸಿ ಹೋರಾಡಿದರೂ ನಿಮ್ಮ ನಡೆಯನ್ನು ಅಹಿಂಸೆಯೆಂದು ಭಾವಿಸುತ್ತೇನೆ' ಎಂದು. ಆಕೆಗೆ ಹಿಂಸೆ–ಅಹಿಂಸೆಗಳ

ವ್ಯತ್ಯಾಸ ಗೊತ್ತಿಲ್ಲ. ಆಕೆ ಪ್ರಯತ್ನವಿಲ್ಲದೆ ಕಾರ್ಯಮಾಡುತ್ತಾಳೆ. ಬೆಕ್ಕಿನೊಂದಿಗೆ ಇಲಿಮರಿ ತನ್ನ ಚೂಪಾದ ಮೂತಿಯನ್ನುಪಯೋಗಿಸಿ ಕಾದಾಡಿದರೆ ಆ ಇಲಿ ಮರಿಯನ್ನು ಹಿಂಸ್ರಕನೆನ್ನುತ್ತೀರಾ ? ಅದೇ ರೀತಿ ಪೋಲರು ಸಂಖ್ಯೆಯಲ್ಲಿಯೂ ಯುದ್ಧಶಸ್ತ್ರಾಸ್ತ್ರಗಳಲ್ಲಿಯೂ ಶಕ್ತಿಯಲ್ಲಿಯೂ ಅನೇಕ ಪಾಲು ಹೆಚ್ಚಿನವರಾದ ಜರ್ಮನ್ ಸೈನ್ಯವನ್ನು ಧೀರತನದಿಂದ ಎದುರಿಸಿದುದು ಬಹುಪಾಲು ಅಹಿಂಸೆಯೇ. ಆ ವಾಕ್ಯವನ್ನು ಮತ್ತೆ ಮತ್ತೆ ಹೇಳುವುದಕ್ಕೆ ನನಗೆ ಇಷ್ಟವೆ. 'ಬಹುಮಟ್ಟಿಗೆ' ಎಂಬ ಪದಕ್ಕೆ ನೀವು ಪೂರ್ಣ ಅರ್ಥವನ್ನು ಕೊಡಬೇಕು. ಇಲ್ಲಿ ನಾವು ನಾಲ್ವತ್ತು ಕೋಟಿ ಇದೇವೆ. ನಾವು ಒಂದು ದೊಡ್ಡ ಸೈನ್ಯವನ್ನು ವ್ಯವಸ್ಥೆ ಗೊಳಿಸಿ ಪರಕೀಯರ ಆಕ್ರಮಣವನ್ನು ಎದುರಿಸಿ ಹೋರಾಡಲು ಸಿದ್ಧತೆ ಮಾಡಿ ಕೊಂಡರೆ, ನಮ್ಮ ಊಹಾಶಕ್ತಿಯನ್ನು ಎಷ್ಟು ದೂರ ಓಡಿಸಿದರೆ ತಾನೇ ಬಹು ಮಟ್ಟಿನ ಅಹಿಂಸೆಯುಳ್ಳವರು ಎಂಬಾಗಲೀ, ಅಹಿಂಸೆಯುಳ್ಳವರೆಂದಾಗಲೀ ಕರೆದುಕೊಳ್ಳಬಹುದು ? ಶತ್ರುಗಳು ತಮ್ಮ ಮೇಲೆ ಹಾಗೆ ಹಠಾತ್ತಾಗಿ ಎರಗಿ ದುದಕ್ಕೆ ಪೋಲರು ಸಿದ್ಧರಾಗಿರಲಿಲ್ಲ. ಸಶಸ್ತ್ರ ಆಕ್ರಮಣವನ್ನು ಕುರಿತು ನಾವು ಮಾತನಾಡುವಾಗ, ನಮ್ಮ ಹೆಚ್ಚಾದ ಹಿಂಸೆಯಿಂದ, ಎಲ್ಲ ಬಗೆಯ ಹಿಂಸೆಯ ಮಿಲನವನ್ನೂ ಎದುರಿಸುವ ಸಿದ್ಧತೆಯನ್ನೂ ಆಲೋಚಿಸುತ್ತೇವೆ. ಭಾರತ ಎಂದಾದರೂ ಆ ಮಾರ್ಗದಲ್ಲಿ ಸಿದ್ಧತೆ ಮಾಡಿಕೊಂಡರೆ ಆಗ ಭಾರತ ಜಗತ್ತಿಗೆ ದೊಡ್ಡ ವಿಪತ್ತು ಆಗುವುದು. ಯಾಕೆಂದರೆ ನಾವು ಆ ಮಾರ್ಗವನ್ನು ಆರಿಸಿ ಕೊಂಡರೆ, ಆಗ ಯೂರೋಪಿಯನ್ ರಾಷ್ಟ್ರಗಳಂತೆ ಇತರ ರಾಷ್ಟ್ರಗಳ ಮೇಲೆ ದಬ್ಬಾಳಿಕೆ ಮಾಡುವ ಮಾರ್ಗವನ್ನೂ ಆರಿಸಿಕೊಳ್ಳಬೇಕಾಗುತ್ತದೆ. ಆದುದ ರಿಂದಲೇ ನನ್ನ ಮಾತುಗಳು ಸರದಾರರ ಮತ್ತು ರಾಜಾಜಿಯ ಮನಸ್ಸನ್ನು ಒಪ್ಪಿಸಲಾಗದಿದ್ದ ಗಳಿಗೆಗಾಗಿ ನಾನು ಪಶ್ಚಾತ್ತಾಪ ಪಡುತ್ತೇನೆ. ಆ ನಿರ್ಣಯ ವನ್ನು ಅಂಗೀಕರಿಸಿ ನಾವು ಇದುವರೆಗೆ ಒಪ್ಪಿದ್ದ ಅಹಿಂಸೆ ನಿಜವಾಗಿ ಅಹಿಂಸೆ ಯಲ್ಲ, ಅದು ಹಿಂಸೆಯ ಒಂದು ಬಗೆ—ಎಂದು ಜಗತ್ತಿಗೆ ಸಾರಿದೇವೆ.'

# ಅಹಿಂಸೆಯಿಂದ ಆಳ್ವಿಕೆ

**ಪ್ರಶ್ನೆ:** ಅಹಿಂಸಾಮಾರ್ಗದಿಂದ ಹೇಗೆ ದೇಶದ ಆಳ್ವಿಕೆ ನಡೆಸುತ್ತೀರಿ?

**ಉತ್ತರ:** 'ಅಹಿಂಸೆಯ ಮಾರ್ಗದಿಂದ ನಾವು ಸ್ವಾತಂತ್ರ್ಯವನ್ನು ಗಳಿಸಿರುವೆವೆಂದು ನೀವು ಭಾವಿಸುವುದಾದರೆ, ಅದರ ಅರ್ಥ ಜನತೆಯ ಬಹು ಭಾಗ ಅಹಿಂಸಾಮಾರ್ಗದಲ್ಲಿ ವ್ಯವಸ್ಥಿತವಾಗಿದೆ ಎಂದು. ಜನತೆಯ ಬಹುಭಾಗ ಅಹಿಂಸೆಯುಳ್ಳವರಾಗದೆ, ಅಹಿಂಸಾ ಸ್ವರಾಜ್ಯ ನಮಗೆ ದೊರೆಯುವುದಿಲ್ಲ. ಆದುದರಿಂದ ಶುದ್ಧ ಅಹಿಂಸಾಮಾರ್ಗದಿಂದ ನಮಗೆ ಸ್ವರಾಜ್ಯ ದೊರೆತರೆ, ಆಳ್ವಿಕೆಯನ್ನು ಸೈನ್ಯವಿಲ್ಲದೆ ನಡೆಸುವುದು ಕಷ್ಟವಾಗಬಾರದು. ಗೂಂಡಾಗಳೂ ಆ ವೇಳೆಗೆ ನಮ್ಮ ಅಧೀನಕ್ಕೆ ಬಂದಿರುವರು. ಉದಾಹರಣೆಗೆ, ಸೇವಾಗ್ರಾಮ ದಲ್ಲಿ ಅಹಿಂಸೆಯಿಂದ ವ್ಯವಸ್ಥಿತರಾದ ಏಳುನೂರು ಜನರ ಮಧ್ಯೆ ಐದೋ ಏಳೋ ಗೂಂಡಾಗಳಿದ್ದರೆ, ಆ ಐವರೋ ಏಳ್ವರೋ, ಇತರರ ನಿಯಮಗಳಿಗೆ ಅನುಸಾರ ಜೀವಿಸುವರು; ಇಲ್ಲವೇ ಹಳ್ಳಿಯನ್ನು ಬಿಡುವರು.

'ನಾನು ಪ್ರಶ್ನೆಗೆ ಬಹಳ ಎಚ್ಚರಿಕೆಯಿಂದ ಉತ್ತರ ಕೊಡುತ್ತಿರುವುದು ನಿಮಗೆ ಗೊತ್ತಾಗುವುದು. ನನ್ನ ಸತ್ಯಪ್ರಿಯತೆ ನಾವು ಪೋಲೀಸ್ ದಳವನ್ನು ಇಡಬೇಕಾಗಬಹುದೆಂಬುದನ್ನು ಒಪ್ಪುತ್ತದೆ. ಆದರೆ ಪೋಲೀಸ್ ದಳ ನಮ್ಮ ಮಾದರಿಗನುಸಾರವಾಗಿ—ಬ್ರಿಟಿಷ್ ಮಾದರಿಯಂತಲ್ಲ—ನಾವು ವಯಸ್ಕರ ಮತದಾನಪದ್ಧತಿ ಹೊಂದುವುದರಿಂದ ಅತಿ ಚಿಕ್ಕವರ ಮಾತಿಗೂ ಬೆಲೆಯುಂಟು. ಆದ್ದರಿಂದಲೇ ನಾನು, ಆದರ್ಶ ಅಹಿಂಸಾರಾಜ್ಯ, ಕ್ರಮಬದ್ಧವಾದ ಅನಾಯ ಕತ್ವವೆಂದು ಹೇಳಿದೇನೆ. ಯಾವ ರಾಜ್ಯದಲ್ಲಿ ಆಳ್ವಿಕೆ ಅತಿ ಕಡಮೆಯೋ ಅದು ಉತ್ತಮ. ನನ್ನ ಕೈಯಲ್ಲಿ ಸರಕಾರವನ್ನು ಒಪ್ಪಿಸಲು ಯಾರಿಗೂ ನಂಬಿಕೆ ಇಲ್ಲ. ಇಲ್ಲದಿದ್ದರೆ ದೇಶವನ್ನು ಅಹಿಂಸೆಯಿಂದ ಆಳುವುದು ಹೇಗೆಂಬುದನ್ನು ನಾನು ತೋರಿಸುತ್ತಿದ್ದೆ. ನಾನು ಪೋಲೀಸ್ ದಳವನ್ನು ಇಡುವುದಾದರೆ ಅದು ಸುಧಾರಕರ ತಂಡ.'

ಒಬ್ಬರು ಮಾತು ತಿರುಗಿಸಿದರು: 'ಆದರೆ ನಿಮಗೆ ಕಾಂಗ್ರೆಸ್ಸಿನಲ್ಲಿ ಅಧಿಕಾರವಿತ್ತಲ್ಲ?'

ಗಾಂಧೀಜೀ ಹೇಳಿದರು : ' ಅದು ಕಾಗದದ ದೋಣಿ. ನಾನು ಕಾಂಗ್ರೆಸ್ ಮಂತ್ರಿಗಳನ್ನೂ ಸುಮ್ಮನೆ ಬಿಡಲಿಲ್ಲವೆಂಬುದನ್ನು ಮರೆಯಬೇಡಿ. ಮುನ್ಶಿ, ಪಂತ್‌ಜಿ ಇವರು ನನ್ನ ಅನೇಕ ಖಂಡನೆಗೆ ಒಳಗಾದರು. ನಾನು ಇನ್ನೊಂದು ಸಂದರ್ಭದಲ್ಲಿ ಹೇಳಿದಂತೆ, ಗಂಗಾನದಿಯ ನೀರಿನೊಂದಿಗೆ ಬೆರೆತ ಚರಂಡಿ ನೀರು ಸಹ, ಗಂಗೆಯ ನೀರಿನಂತೆಯೇ ಶುದ್ಧವಾಗುತ್ತದೆ. ಹಾಗೆ ಗೂಂಡಾಗಳೂ ಕಾಂಗ್ರೆಸ್ ಶಿಸ್ತಿನ ಅಡಿಯಲ್ಲಿ ಕಾರ್ಯ ಮಾಡುವರೆಂದು ನಾನು ಭಾವಿಸಿದ್ದೆ. ಆದರೆ ನಿಜವಾಗಿ ನಮ್ಮ ಮಂತ್ರಿಗಳು ಕಣ್ಣೆಯ ಗಂಗಾನದಿಯ ಪಾವಿತ್ರ್ಯ-ಸಾಮರ್ಥ್ಯವನ್ನು ಗಳಿಸಿಕೊಂಡಿರಲಿಲ್ಲ.'

ಆ ನಡುವೆ ಶ್ರೀ ಖೇರ್ ಬಾಯಿಹಾಕಿ ಹೀಗೆ ಹೇಳಿದರು : ' ಕಾಂಗ್ರೆಸ್ ಮಂತ್ರಿಗಳಿಗೆ ಅಹಿಂಸಾಶಕ್ತಿ ಇರಲಿಲ್ಲ. ಐದುನೂರು ಗೂಂಡಾಗಳನ್ನು ಇಷ್ಟ ಬಂದಂತೆ ಹೋಗಲು ಬಿಟ್ಟು, ತಡೆಯದೆ ಇದ್ದಿದ್ದರೆ, ಅವರು ಊಹಿಸಲಸಾಧ್ಯ ವಾದ ಅನಾಹುತ ಮಾಡಿಬಿಡುತ್ತಿದ್ದರು. ಅವರನ್ನು ಹೇಗೆ ನಡೆಸುವುದು ಎಂಬುದು ನಿಮಗೂ ಗೊತ್ತಾಗುತ್ತಿರಲಿಲ್ಲ.'

ಗಾಂಧೀಜೀ ಹೀಗೆ ಹೇಳಿದರು : ' ನಿಜ. ಅಂತಹ ಪರಿಸ್ಥಿತಿಯನ್ನು ನಾನು ಮತ್ತೆ ಮತ್ತೆ ಹೇಳಿಕೊಂಡಿದ್ದೆ. ಅಂತಹ ಸಂದರ್ಭಗಳಲ್ಲಿ ಮಂತ್ರಿಗಳು ಅಲ್ಲಿ ಹೋಗಿ ಗೂಂಡಾಗಳಿಂದ ತಮ್ಮ ಕೊಲೆಗೆ ಅವಕಾಶ ಕೊಡಬಹುದಾಗಿತ್ತು. ಆದರೆ ಆವಶ್ಯಕವಾದ ಅಹಿಂಸೆ ನಮ್ಮಲ್ಲಿರಲಿಲ್ಲವೆಂದು ಒಪ್ಪಿಕೊಳ್ಳೋಣ. ನಾವು ಅರ್ಧ ಬೆಂದ ಅಹಿಂಸೆಯೊಡನೆ ಅಧಿಕಾರವನ್ನು ಅಂಗೀಕರಿಸಿದೆವು. ಆದರೂ ಚಿಂತೆ ಇಲ್ಲ. ಅಧಿಕಾರವನ್ನು ಬಿಡಬೇಕಾದಾಗ ಗಳಿಗೆಯಲ್ಲಿ ನಾವು ಬಿಟ್ಟುಬಿಟ್ಟೆವು. ಆ ಅಧಿಕಾರದ ಎರಡು-ಮೂರು ವರುಷಗಳಲ್ಲಿ ನಾವು ಪೂರ್ಣ ಅಹಿಂಸೆಗೆ ಬದ್ಧರಾಗಿದ್ದಿದ್ದರೆ, ಅಹಿಂಸೆ ಮತ್ತು ಸ್ವಾತಂತ್ರ್ಯದ ದಿಶೆಯಲ್ಲಿ ಕಾಂಗ್ರೆಸ್ಸಿನ ಮುನ್ನಡೆ ಮಹತ್ತಾಗಿ ಆಗುತ್ತಿದ್ದಿತೆಂದು ನನ್ನ ಸ್ಪಷ್ಟ ಅಭಿಪ್ರಾಯ.'

ಬಾಳಾಸಾಹೇಬ್ : ' ನಾಲ್ಕು-ಐದು ವರುಷಗಳ ಕೆಳಗೆ ದೊಂಬಿ ನಡೆ ದಾಗ, ಮುಖಂಡರು ಹೋಗಿ ಬೆಂಕಿಯಲ್ಲಿ ಬೀಳಬೇಕೆಂದು ನಾನು ಕೇಳಿಕೊಂಡೆ. ಒಬ್ಬರೂ ಸಿದ್ಧರಾಗಿರಲಿಲ್ಲ.'

'ಅಂದರೆ ನನ್ನ ವಾದವನ್ನೇ ನೀವೂ ಪುಷ್ಟೀಕರಿಸುತ್ತಿದೀರಿ. ಅಹಿಂಸೆಯಲ್ಲಿ ನಮ್ಮ ನಿಷ್ಠೆ ಬರಿಯ ವಚನನಿಷ್ಠೆಯಾಗಿತ್ತು ; ಹೃದಯನಿಷ್ಠೆ ಅಲ್ಲ. ಅರ್ಧ ಅಹಿಂಸೆಯೇ ನಮ್ಮನ್ನು ಬಹುದೂರ ಕರೆದುಕೊಂಡು ಹೋಯಿತೆಂದರೆ, ಪೂರ್ಣ ಅಹಿಂಸೆ ಇನ್ನೂ ಬಹುದೂರ, ನಮ್ಮ ಗುರಿಗೆ ನಮ್ಮನ್ನು—ಇದುವರೆಗೆ ಕೊಂಡುಹೋಗದಿದ್ದರೆ—ಕೊಂಡುಹೋಗುವುದೆಂಬುದು ಇದರಿಂದ ಅರ್ಥ ಆಗುವುದಿಲ್ಲವೆ ?

## ಅಹಿಂಸೆಯ ಸೈನ್ಯ

'ಪರಕೀಯರ ಆಕ್ರಮಣಕ್ಕೆ ಅಹಿಂಸೆಯಿಂದ ನೀವು ಹೇಗೆ ಎದುರಾಗಿ ನಿಲ್ಲುವಿರೆಂಬುದನ್ನು ನಾವು ಚಿತ್ರಿಸಿಕೊಳ್ಳಲಾರೆವು.'

'ಪೂರ್ಣ ಚಿತ್ರವನ್ನು ನಾನು ಈಗ ನಿಮಗಾಗಿ ಚಿತ್ರಿಸಲಾರೆ. ಯಾಕೆ ಎಂದರೆ ಅನುಸರಿಸಲು ನಮಗೆ ಹಿಂದಿನ ಅನುಭವವಿಲ್ಲ. ಮತ್ತು ನಮ್ಮ ಎದುರಿಗೆ ವಾಸ್ತವಿಕ ಸ್ಥಿತಿ ಇಲ್ಲ. ಘೂರ್ಖರು, ಸೀಖರು, ಪಠಾಣರು ಈ ಯೋಧರಿರುವ ಸರ್ಕಾರದ ಸೈನ್ಯವಿದೆ. ನಾನು ಯೋಚಿಸುವುದು ಹೀಗೆ: ನನ್ನ ಅಹಿಂಸಾಸೈನ್ಯದೊಂದಿಗೆ—ಎರಡು ಸಾವಿರ ಜನ ಎಂದು ಭಾವಿಸಿ—ನಾನು, ಹೋರಾಡುತ್ತಿರುವ ಎರಡೂ ಸೈನ್ಯಗಳ ನಡುವೆ ನಿಲ್ಲುತ್ತೇನೆ. ಇದು ಆಕ್ರಮಣಕ್ಕೆ ಪ್ರತ್ಯುತ್ತರವೆಲ್ಲ ಎಂದು ನನಗೆ ಗೊತ್ತು. ಆಕ್ರಮಣಕಾರನ ಹಿಂಸೆಯನ್ನು ಇದರಿಂದ ನಾವು ಕನಿಷ್ಠಮಿತಿಗೆ ಇಳಿಸಲು ಸಾಧ್ಯವಾಗುವುದು. ಅಹಿಂಸಾಸೈನ್ಯಾಧಿಪತಿಗೆ ಹಿಂಸಾಸೈನ್ಯದ ಅಧಿಪತಿಗಿಂತ ಹೆಚ್ಚು ವಿವೇಕವೂ ಬುದ್ಧಿಚತುರತೆಯೂ ಇರಬೇಕಾಗುತ್ತದೆ. ಉಂಟಾಗುವ ಪರಿಸ್ಥಿತಿಯನ್ನು ಎದುರಿಸಲು ಆವಶ್ಯಕವಾದ ಕುಶಲತೆಯನ್ನು ದೇವರು ಅವನಿಗೆ ಅನುಗ್ರಹಿಸುತ್ತಾನೆ.'

ಶ್ರೀ ಖೇರ್‌ರು ಆಗ ಒಂದು ವೇದಾಂತದ ಪ್ರಶ್ನೆ ಎತ್ತಿದರು : 'ಜಗತ್ತು ಒಂದಕ್ಕೊಂದಕ್ಕೆ ವಿರೋಧವಾದ ದ್ವಂದ್ವಗಳಿಂದ ಆಗಿದೆ. ಭಯ ಎಲ್ಲಿದೆಯೋ ಅಲ್ಲಿ ಧೈರ್ಯವೂ ಇದೆ. ಕಮರಿಯ ತುದಿಯಲ್ಲಿ ನಡೆಯುವಾಗ ನಾವು ಎಚ್ಚರಿಕೆಯಿಂದ ನಡೆಯುತ್ತೇವೆ. ಯಾಕೆಂದರೆ ನಮಗೆ ಭಯ. ಭಯ ನಾವು ತಿರಸ್ಕರಿಸ

ಬೇಕಾದ ವಸ್ತುವಲ್ಲ. ನಿಮ್ಮ ಅಹಿಂಸಾಸೈನ್ಯ ಈ ದ್ವಂದ್ವಗಳನ್ನು ಮೀರಿ ನಿಲ್ಲುವುದೆ ? '

ಅದೇ ವೇದಾಂತಪ್ರಕ್ರಿಯೆಗಳಿಂದಲೇ ಪ್ರತ್ಯುತ್ತರ ಕೊಡುತ್ತಾ ಗಾಂಧೀಜೀ ಹೇಳಿದರು : ' ಇಲ್ಲ. ಯಾಕೆಂದರೆ ಹಿಂಸೆ ಮತ್ತು ಅಹಿಂಸೆಯ ದ್ವಂದ್ವದ ಪೈಕಿ ನನ್ನ ಸೈನ್ಯ, ಒಂದಾದ ಅಹಿಂಸೆಯನ್ನು ಪ್ರತಿನಿಧಿಸುವುದು. ನಾನಾಗಲೀ ನನ್ನ ಸೈನ್ಯವಾಗಲೀ ಪರಸ್ಪರ ವಿರೋಧವಾದ ದ್ವಂದ್ವಗಳನ್ನು ಮೀರಿದವರಲ್ಲ. ಗೀತೆಯ ಭಾಷೆಯ ಗುಣಾತೀತಸ್ಥಿತಿ, ಹಿಂಸೆ-ಅಹಿಂಸೆ ಎರಡನ್ನೂ ಮೀರಿ ನಿಲ್ಲುತ್ತದೆ. ಭಯದಿಂದ ಉಪಯೋಗವಿರಬಹುದು. ಹೇಡಿತನದಿಂದ ಏನೂ ಇಲ್ಲ. ಸರ್ಪದ ದವಡೆಗೆ ನಾನು ನನ್ನ ಕೈಬೆರಳುಗಳನ್ನು ಚಾಚದಿರಬಹುದು. ಆದರೆ ಸರ್ಪ ಕಣ್ಣಿಗೆ ಬಿದ್ದ ಕೂಡಲೇ ನಾನು ಭಯದಿಂದ ನಡುಗಬೇಕಾದುದಿಲ್ಲ. ಕಷ್ಟ ಏನೆಂದರೆ, ಸಾವು ನಮ್ಮನ್ನು ಆಕ್ರಮಣಮಾಡುವುದಕ್ಕೆ ಮುಂಚೆಯೇ, ನಾವು ಬಹುಸಲ ಸಾಯುತ್ತೇವೆ.

' ನನ್ನ ಸೈನ್ಯ ಹೇಗಿರುತ್ತದೆ ಎಂಬುದನ್ನು ವಿವರಿಸುತ್ತೇನೆ. ಅವರಿಗೆ ಸೈನ್ಯದ ಅಧಿಪತಿಯ ಜ್ಞಾನವಾಗಲೀ ಬುದ್ಧಿಚಾತುರ್ಯವಾಗಲೀ ಇರಬೇಕಾದುದಿಲ್ಲ, ಇರುವುದಿಲ್ಲ. ಆದರೆ ಅಧಿಪತಿಯ ಅಪ್ಪಣೆಯನ್ನು ಶ್ರದ್ಧೆಯಿಂದ ನಡೆಸುವ ಶಿಸ್ತಿನ ಜ್ಞಾನ ಅವರಿಗೆ ಇರುತ್ತದೆ. ಸೈನ್ಯದ ಅವಿಚ್ಛಿನ್ನ ವಿಧೇಯತೆಯನ್ನು ಅಧೀನದಲ್ಲಿಟ್ಟುಕೊಳ್ಳುವ ಗುಣ ಅಧಿಪತಿಯಲ್ಲಿರಬೇಕು. ಈ ವಿಧೇಯತೆಗಿಂತ ಹೆಚ್ಚಾಗಿ ಏನನ್ನೂ ಅವನು ನಿರೀಕ್ಷಿಸಬಾರದು. ದಾಂಡೀಯಾತ್ರೆ ಪೂರ್ಣವಾಗಿ ನನ್ನ ಕಲ್ಪನೆ. ಪಂಡಿತ ಮಾಳವೀಯಜೀ ಅದನ್ನು ಕೇಳಿ ಮೊದಲು ನಕ್ಕರು; ಅದೊಂದು ವಿಚಿತ್ರ ಭ್ರಾಂತಿಯಾತ್ರೆ ಎಂದು ಯೋಚಿಸಿದರು. ಜಮನಾಲಾಲ್ ಬಜಾಜರು ಅದರ ಬದಲು ವೈಸರಾಯರ ವಾಸಸ್ಥಾನದ ಮೇಲೆ ನುಗ್ಗಬಹುದೆಂದು ಸೂಚಿಸಿದರು. ಆದರೆ ನಾನು ನಮ್ಮ ದೇಶದ ಕೋಟ್ಯಂತರ ಜನರಿಗೆ ಅನ್ವಯಿಸುವಂತೆ ಯೋಚಿಸಬೇಕಾಗಿದ್ದುದರಿಂದ ಉಪ್ಪಿನ ಯಾತ್ರೆಯ ಹೊರತು ಮತ್ತೇನನ್ನೂ ಯೋಚಿಸಲಾರದವನಾಗಿದ್ದೆ. ಅದು ದೇವರು ನನಗೆ ಕೊಟ್ಟ ಕಲ್ಪನೆ. ಪಂಡಿತ ಮಾಳವೀಯರು ಸ್ವಲ್ಪ ವಾದಿಸಿದರು. ಅನಂತರ ವಾದಿಸುವುದು ಸರಿಯಲ್ಲವೆಂದೂ ನಾನು ಅಧಿಪತಿಯಾದುದರಿಂದ ನನ್ನಲ್ಲಿ ನಂಬಿಕೆ ಇಡುತ್ತೇವೆಂದೂ ಹೇಳಿ ಸುಮ್ಮನಾದರು. ಅನಂತರ ನನ್ನನ್ನು ಜಂಬುಸಾರ್

ನಲ್ಲಿ ನೋಡಿದಾಗ, ಅವರು ಪೂರ್ಣವಾಗಿ ಪರಿವರ್ತನೆ ಹೊಂದಿದ್ದರು. ಯಾಕೆಂದರೆ ಜನತೆಯಲ್ಲಿ ಉಂಟಾಗಿದ್ದ ಜಾಗೃತಿಯನ್ನು ಅವರು ತಮ್ಮ ಕಣ್ಣುಗಳಿಂದ ನೋಡಿದರು. ಆ ಜಾಗೃತಿ ಒಂದು ಯಕ್ಷಿಣಿ. ನಮ್ಮ ಮಹಿಳೆಯರು ಅಂತಹ ಅಸಂಖ್ಯಾತ ಸಂಖ್ಯೆಯಲ್ಲಿ ಪ್ರದರ್ಶಿಸಿದ ಗಂಭೀರವಾದ ಧೈರ್ಯದ ಸಾದೃಶ್ಯಗಳನ್ನು ನಾವು ಇತಿಹಾಸದಲ್ಲಿ ಇನ್ನೆಲ್ಲಿ ತಾನೇ ಕಾಣಬಲ್ಲೆವು ?'

'ಆದರೂ ಚಳುವಳಿಯಲ್ಲಿ ಭಾಗವಹಿಸಿದ ಸಾವಿರಾರು ಮಂದಿಯ ಪೈಕಿ ಯಾರೊಬ್ಬರೂ ಸಾಮಾನ್ಯವಾದುದಕ್ಕಿಂತ ಮೇಲುಮಟ್ಟದಲ್ಲಿರಲಿಲ್ಲ. ಅವರು ತಪ್ಪುಮಾಡುವ, ಪಾಪಮಾಡುವ ಮನುಷ್ಯಪ್ರಾಣಿಗಳು. ಅತ್ಯಂತ ಅಶಕ್ತವಾದ ಉಪಕರಣಗಳನ್ನು ಉಪಯೋಗಿಸುವ ಮತ್ತು ಯಾವುದರಿಂದಲೂ ನಿರ್ಲಿಪ್ತನಾಗಿ ಉಳಿಯುವ ಮಾರ್ಗ ದೇವರಲ್ಲಿದೆ. ಅವನೊಬ್ಬನೇ ಗುಣಾತೀತ.

## ನಿಜವಾದ ಸಾಮಾನು ಸರಂಜಾಮು

ಜಯವನ್ನು ಹೊಂದುವ ಸೈನ್ಯ ತಾನೇ ಯಾವುದು ? 'ರಾಮನಲ್ಲಿ ರಥವಿಲ್ಲ, ರಕ್ಷಾಕವಚವಿಲ್ಲ, ಕಾಲಿಗೆ ಪಾದುಕೆ ಇಲ್ಲ; ಹೀಗಿರುವಾಗ ರಾವಣನಂತಹ ಶತ್ರುವನ್ನು ರಾಮ ಜಯಿಸುವುದು ಹೇಗೆ ?' ಎಂದು ವಿಭೀಷಣ ಆಶ್ಚರ್ಯಪಡುತ್ತಿದ್ದಾಗ ರಾಮನು ಕೊಟ್ಟ ಪ್ರತ್ಯುತ್ತರ ನಿಮಗೆ ಗೊತ್ತಿದೆ. ರಾಮ ಹೀಗೆ ಹೇಳುತ್ತಾನೆ :

'ಪ್ರಿಯ ವಿಭೀಷಣ, ರಾಮನಿಗೆ ಜಯವನ್ನು ಗಳಿಸುವ ರಥ ಸಾಮಾನ್ಯ ರಥಗಳಿಂದ ಬೇರೆ ಬಗೆಯದು. ಪೌರುಷ ಮತ್ತು ಧೈರ್ಯಗಳೇ ಅದರ ಚಕ್ರಗಳು; ಶಾಶ್ವತ ಸತ್ಯ ಮತ್ತು ಶೀಲಗಳೇ ಅದರ ಧ್ವಜಗಳು; ಶಕ್ತಿ–ವಿವೇಕ–ಸಂಯಮ ಮತ್ತು ದಯೆ ಅದರ ಅಶ್ವಗಳು ; ಕ್ಷಮೆ–ಕಾರುಣ್ಯ–ಶಾಂತಿ ಲಗಾಮು ; ಭಗವತ್ ಪ್ರಾರ್ಥನೆಯೇ ಜಯಹೊಂದುವವನ ನಿರ್ದೋಷಿ ಸಾರಥಿ ; ಅನುದ್ರೇಕವೇ ಗುರಾಣಿ, ತೃಪ್ತಿಯೇ ಖಡ್ಗ, ಔದಾರ್ಯವೇ ಕುಠಾರ, ಬುದ್ಧಿಯೇ ಈಟಿ, ನಿರ್ದೋಷ ವಿಜ್ಞಾನವೇ ಬಲಿಷ್ಠವಾದ ಬಿಲ್ಲು. ಅವನ ಶುದ್ಧವಾದ ಮತ್ತು ಚಂಚಲವಿಲ್ಲದ ಮನಸ್ಸು ಬತ್ತಳಿಕೆಯ ಪ್ರತಿನಿಧಿ, ಆತನ ಮನಶ್ಶಾಂತಿ ಮತ್ತು ಯಮನಿಯಮ ಅನುಷ್ಠಾನಗಳೇ ಬಾಣಗಳ ಕಂತೆ, ಅವನ

ಬ್ರಾಹ್ಮಣಭಕ್ತಿ-ಗುರುಭಕ್ತಿ ಇವೇ ಅಭೇದ್ಯ ಕವಚಗಳು. ಜಯ ಗಳಿಸಲು ಇದಕ್ಕೆ ಸಮಾನವಾದ ಯುದ್ಧಸರಂಜಾಮು ಬೇರೆ ಯಾವುದೂ ಇಲ್ಲ. ಧರ್ಮ ರಥದ ಮೇಲೆ ನಿಂತಿರುವವನನ್ನು ಜಯಿಸಬಲ್ಲ ಶತ್ರು ಯಾರೂ ಇಲ್ಲ. ಇಂತಹ ಪರಾಕ್ರಮ ರಥವುಳ್ಳವನು ಅಜೇಯ ಶತ್ರುವಾದ ಪ್ರಪಂಚ(ಸಂಸಾರ)ವನ್ನು ಸಹ ಜಯಿಸಬಲ್ಲ ಯೋಧ. ನನ್ನ ಮಾತನ್ನು ಕೇಳು, ಹೆದರಬೇಡ.'

ಗಾಂಧೀಜೀ ಹೇಳಿದರು : ನಮ್ಮನ್ನು ಜಯಕ್ಕೆ ಕೊಂಡೊಯ್ಯುವ ಯುದ್ಧ ಸಾಮಗ್ರಿ ಇದು. ನಾನು ಜಗದ್ವ್ಯಾಪಾರಗಳಿಂದ ನಿವೃತ್ತನಾಗಿಲ್ಲ. ಆಗುವುದು ನನ್ನ ಉದ್ದೇಶ್ಯವೂ ಅಲ್ಲ. ನಾನು ವಿರಕ್ತನಲ್ಲ. ಸೇವಾಗ್ರಾಮದಲ್ಲಿ ನನ್ನ ಕೈಲಾದ ಕೆಲಸ ಮಾಡಿಕೊಂಡು ನನ್ನಲ್ಲಿ ಬರುವವರಿಗೆ ನನ್ನಿಂದಾದ ಮಾರ್ಗ ದರ್ಶನ ಮಾಡುವುದರಲ್ಲಿ ನಾನು ತೃಪ್ತ. ನಮಗೆ ಬೇಕಾಗಿರುವುದು ನಿಷ್ಠೆ. ಸರಿಯಾದ ಮಾರ್ಗವನ್ನು ಅನುಸರಿಸುವುದರಲ್ಲಿ ನಮಗೆ ಆಗುವ ನಷ್ಟವೇನು ? ನಮಗೆ ಸಂಭವಿಸಬಹುದಾದ ಅತ್ಯಂತ ದೊಡ್ಡ ಅಪಾಯ—ನಮ್ಮ ವಿನಾಶ. ಸೋತುಹೋಗುವುದಕ್ಕಿಂತ ವಿನಾಶವಾಗುವುದು ಉತ್ತಮ.

ಆದರೆ ನಾವು ಹಿಂಸಾಮಾರ್ಗದಲ್ಲಿ ಯುದ್ಧಸರಂಜಾಮುಗಳನ್ನು ಒದಗಿಸಿ ಕೊಳ್ಳಬೇಕಾದರೆ ನಮ್ಮ ಬುದ್ಧಿ ಪೂರ್ಣ ಮಂಕಾಗುತ್ತದೆ. ನಾನು ಯುದ್ಧ ಸನ್ನಾಹಯೋಜನೆಯನ್ನು ಸಹ ಕುರಿತು ಯೋಚಿಸಲಾರೆ ; ಕಾರ್ಯಗತಮಾಡುವು ದಂತೂ ಸಾಧ್ಯವೇ ಇಲ್ಲ. ಅದರ ಬದಲು ನನ್ನ ಅಹಿಂಸಾಯೋಜನೆ ಕಲ್ಪನಾ ತೀತ ಸರಳ, ಸುಲಭ. ದೇವರು ನಮ್ಮ ಸೈನ್ಯಾಧಿಪತಿ ಮತ್ತು ನಿರ್ದೋಷಿ ಮಾರ್ಗದರ್ಶಿ. ಹೀಗಿರುವಾಗ ಭಯಕ್ಕೆ ಕಾರಣವೆಲ್ಲಿ ?

(ಹರಿಜನ, ೨೫-೮-೧೯೪೦)

## ಮತ್ತೊಂದು ಸ್ವಾರಸ್ಯ ಸಂಭಾಷಣೆ

ಈಗ ಕಾರ್ಯಾಚರಣೆಯಲ್ಲಿ ಕಷ್ಟವಾಗುವ ಪ್ರಶ್ನೆಗಳು ಬಂದವು.

**ಪ್ರಶ್ನೆ :** ಅಹಿಂಸಾಮನುಷ್ಯ ಐಶ್ವರ್ಯವನ್ನು ಇಟ್ಟುಕೊಳ್ಳಬಹುದೆ ? ಬಹುದಾದರೆ ಹಿಂಸೆಯಿಲ್ಲದೆ ಇಟ್ಟುಕೊಳ್ಳುವುದು ಹೇಗೆ ಸಾಧ್ಯ ?

**ಉತ್ತರ :** ಅವನು ಐಶ್ವರ್ಯವನ್ನು ತನ್ನ ಸ್ವಂತದ್ದಾಗಿ ಮಾಡಿಕೊಳ್ಳ ಬಾರದು ; ಆದರೆ ಇಟ್ಟುಕೊಳ್ಳಬಹುದು. ಅವನು ಅದನ್ನು ನ್ಯಾಸಧಾರಿ ಇಟ್ಟುಕೊಳ್ಳಬಹುದು. ಅವನು ಡಕಾಯಿತರ ಮತ್ತು ಕಳ್ಳರ ನಡುವೆ ವಾಸಿಸು ತ್ತಿದ್ದರೆ ಕೌಪೀನದ ಹೊರತು ಮತ್ತೇನನ್ನೂ ಸ್ವಂತದ್ದಾಗಿ ಇಟ್ಟುಕೊಳ್ಳ ಕೂಡದು. ಹೀಗೆ ಮಾಡಿದರೆ ಅವರ ಮನಸ್ಸನ್ನು ಆತ ಪರಿವರ್ತಿಸಬಹುದು.

ಆದರೆ ಯಾವುದನ್ನೂ ಸಾಮಾನ್ಯ ಸೂತ್ರವಾಗಿ ನಿರೂಪಿಸಕೂಡದು. ಅಹಿಂಸಾರಾಷ್ಟ್ರದಲ್ಲಿ ಡಕಾಯಿತರು ಬಹು ಸ್ವಲ್ಪ ಮಂದಿ ಇರುತ್ತಾರೆ. ವ್ಯಕ್ತಿ ಗಳಿಗೆ ಸುವರ್ಣನಿಯಮ—ಅವರು ಏನನ್ನೂ ಸ್ವಂತದ್ದಾಗಿ ಇಟ್ಟುಕೊಳ್ಳಬಾರ ದೆಂಬುದು. ನಾನು ಗುಡ್ಡಗಾಡಿನ (ಕ್ರಿಮಿನಲ್ ಟ್ರೈಬ್) ಜನರ ಜತೆ ವಾಸಿಸುತ್ತಾ, ಅವರಿಗಾಗಿ ಕೆಲಸಮಾಡಲು ತೀರ್ಮಾನಿಸಿದರೆ, ಬರಿಗೈಯಲ್ಲಿ ಹೋಗಿ, ಆಹಾರ ಮತ್ತು ವಾಸಕ್ಕೆ ಅವರ ಮೇಲೆ ಅವಲಂಬಿಸಬೇಕು. ಅವರ ಸೇವೆಗಾಗಿ ನಾನು ಅವರ ಜತೆ ಇರುವೆನೆಂಬುದು ಅವರಿಗೆ ತಿಳಿದ ಕೂಡಲೇ ಅವರು ನನ್ನ ಮಿತ್ರರಾಗುವರು. ನಿಜವಾದ ಅಹಿಂಸೆ ಆ ಮನೋಭಾವದಲ್ಲಿದೆ. ಆದರೆ ಈ ಪ್ರಶ್ನೆಯನ್ನು ನಾನು 'ಹರಿಜನ'ದ ಇತ್ತೀಚಿನ ಸಂಚಿಕೆಯಲ್ಲಿ ಚರ್ಚಿಸಿದೇನೆ.

**ಪ್ರಶ್ನೆ :** ಸ್ತ್ರೀಯರ ಮಾನವನ್ನು ಕಾಪಾಡುವುದು ಹೇಗೆ ?

**ಉತ್ತರ :** ನೀವು 'ಹರಿಜನ'ವನ್ನು ಕ್ರಮವಾಗಿ ಓದುತ್ತಿಲ್ಲವೆಂದು ನಾನು ಭಾವಿಸುತ್ತೇನೆ. ಈ ಪ್ರಶ್ನೆಯನ್ನು ಅನೇಕ ವರುಷಗಳ ಕೆಳಗೇ ಚರ್ಚಿಸಿದೆ ; ಈಚೆಗೂ ಅನೇಕ ಸಲ ಚರ್ಚಿಸಿದೇನೆ. ಪ್ರಶ್ನೆಯನ್ನು ಎರಡು ಭಾಗವಾಗಿ ಚರ್ಚಿಸಬಹುದು : (೧) ಒಬ್ಬ ಮಹಿಳೆ ತನ್ನ ಮಾನವನ್ನು ಕಾಪಾಡಿಕೊಳ್ಳುವುದು ಹೇಗೆ ? (೨) ಅವಳ ಪುರುಷಬಂಧುಗಳು ಅದನ್ನು ಕಾಪಾಡುವುದು ಹೇಗೆ ?

ಮೊದಲನೆಯ ಪ್ರಶ್ನೆಯ ವಿಷಯ : ಅಹಿಂಸೆಯ ವಾತಾವರಣವಿರುವ ಕಡೆ ಅಹಿಂಸೆಯ ಬೋಧನೆ ಎಡೆಬಿಡದೆ ನಡೆಯುತ್ತಲೇ ಇರುತ್ತದೆ. ಸ್ತ್ರೀ ತಾನು ಅಧೀನಳು, ಅಶಕ್ತಳು, ನಿಸ್ಸಹಾಯಳು ಎಂದು ಭಾವಿಸುವುದಿಲ್ಲ. ಅವಳು ನಿಜವಾಗಿ ಶುದ್ಧಳಾಗಿರುವವರೆಗೆ, ನಿಜವಾಗಿ ನಿಸ್ಸಹಾಯಳಲ್ಲ.

ಅವಳ ಪರಿಶುದ್ಧತೆ, ಅವಳ ಶಕ್ತಿಯನ್ನು ಅವಳಿಗೆ ತೋರಿಸುತ್ತದೆ. ಸ್ತ್ರೀಯನ್ನು ಅವಳ ಇಚ್ಛೆಗೆ ವಿರೋಧವಾಗಿ ದೈಹಿಕವಾಗಿ ಅತಿಕ್ರಮಿಸುವುದು ಅಸಾಧ್ಯವೆಂದು ನಾನು ಯಾವಾಗಲೂ ಅಭಿಪ್ರಾಯಪಟ್ಟಿದ್ದೇನೆ. ಭಯದಿಂದ ಅವಳು ಸೋತಾಗ ಅಥವಾ ಅವಳ ನೀತಿಧೈರ್ಯ ಅವಳಿಗೆ ಅನುಭವವಾಗದಿರುವಾಗ, ಅತ್ಯಾಚಾರ ಸಂಭವಿಸುತ್ತದೆ. ಅತ್ಯಾಚಾರಿಯ ದೇಹಶಕ್ತಿಯನ್ನು ಎದುರಿಸಲು ಆಕೆಗೆ ಶಕ್ತಿಯಿಲ್ಲದಿದ್ದರೂ, ಅತ್ಯಾಚಾರಿ ಅವಳನ್ನು ಭಂಗಗೊಳಿಸುವುದಕ್ಕೆ ಮುಂಚೆ ಸಾಯುವ ಶಕ್ತಿಯನ್ನು, ಆಕೆಯ ಪರಿಶುದ್ಧತೆ ಅವಳಿಗೆ ಉಂಟುಮಾಡುವುದು. ಸೀತೆಯ ಉದಾಹರಣೆ ತೆಗೆದುಕೊಳ್ಳಿ. ದೈಹಿಕವಾಗಿ ರಾವಣನ ಎದುರಿಗೆ ಅವಳು ನಿರ್ಬಲ ಪ್ರಾಣಿ. ಆದರೆ ಅವಳ ಪರಿಶುದ್ಧತೆ ರಾವಣನ ರಾಕ್ಷಸಶಕ್ತಿ ಎದುರಿಸಬಲ್ಲುದುದಕ್ಕಿಂತ ಹೆಚ್ಚಾಗಿತ್ತು. ಅವನು ಅವಳನ್ನು ನಾನಾ ಪ್ರಲೋಭನೆಗಳಿಂದ ಒಲಿಸಿಕೊಳ್ಳಲು ಪ್ರಯತ್ನಿಸಿದನು. ಆದರೆ ಆಕೆಯ ಒಪ್ಪಿಗೆಯಿಲ್ಲದೆ ವಿಷಯಾಸಕ್ತಿಯಿಂದ ಆಕೆಯನ್ನು ಸ್ಪರ್ಶಿಸುವುದೂ ಅವನಿಗೆ ಸಾಧ್ಯವಾಗಲಿಲ್ಲ. ಅದರ ಬದಲು, ಸ್ತ್ರೀ ತನ್ನ ದೈಹಿಕಶಕ್ತಿಯ ಮೇಲಾಗಲೀ, ತನ್ನಲ್ಲಿರುವ ಆಯುಧಶಕ್ತಿಯ ಮೇಲಾಗಲೀ ಅವಲಂಬಿಸಿದರೆ ತನ್ನ ಶಕ್ತಿ ಉಡುಗಿದ ಕೂಡಲೆ ಅವಳು ಪರಾಭವಹೊಂದುವುದು ನಿಶ್ಚಯ.

ಎರಡನೆಯ ಪ್ರಶ್ನೆಯ ಉತ್ತರ ಸುಲಭ. ಹೆಣ್ಣಿನ ಸಹೋದರನೋ ತಂದೆಯೋ ಮಿತ್ರನೋ, ಆಕೆಗೂ ಅತ್ಯಾಚಾರಿಗೂ ನಡುವೆ ನಿಲ್ಲುವನು. ಅವನು ಅತ್ಯಾಚಾರಿಯನ್ನು ದುಷ್ಟ ಕಾರ್ಯದಿಂದ ವಿಮುಖನಾಗುವಂತೆ ಪ್ರೇರಿಸುವನು. ಅದು ಸಾಧ್ಯವಾಗದಿದ್ದಲ್ಲಿ ಅತ್ಯಾಚಾರಿಯನ್ನು ತಡೆಯುವ ಪ್ರಯತ್ನದಲ್ಲಿ ತಾನೇ ಕೊಲ್ಲಲ್ಪಡುವನು. ಹೀಗೆ ಜೀವ ಕೊಡುವುದರಿಂದ, ಅವನು ತನ್ನ ಕರ್ತವ್ಯವನ್ನು ನೆರವೇರಿಸುವುದು ಮಾತ್ರವಲ್ಲದೆ, ತನ್ನ ಮಾನವನ್ನು ಕಾಪಾಡಿಕೊಳ್ಳುವುದನ್ನು ಅರಿಯದಿರುವ ಆ ಹೆಣ್ಣಿಗೆ ಅಧಿಕ ಬಲವನ್ನು ಕೊಡುವನು.'

ಪೂನಾದ ಒಬ್ಬ ಸೋದರಿ ಹೇಳಿದಳು : 'ಆದರೆ ಇರುವ ತೊಡಕು ಅಲ್ಲಿ. ಹೆಂಗಸು ತನ್ನ ಪ್ರಾಣವನ್ನು ಕೊಡುವುದು ಹೇಗೆ? ಅದು ಅವಳಿಗೆ ಸಾಧ್ಯವೇ?'

ಗಾಂಧೀಜೀ ಹೇಳಿದರು : 'ಹೌದು. ಗಂಡಸಿಗೆ ಸಾಧ್ಯವಾಗುವುದಕ್ಕಿಂತ ಹೆಂಗಸಿಗೆ ಯಾವಾಗಲೂ ಹೆಚ್ಚು ಸಾಧ್ಯ. ಸ್ತ್ರೀಯರು ಇನ್ನೂ ಬಹು ಕಡಮೆ ಉದ್ದೇಶ್ಯಗಳಿಗಾಗಿಯೂ ತಮ್ಮ ಜೀವನವನ್ನು ತ್ಯಜಿಸುವುದು ನನಗೆ ಗೊತ್ತು.

ಕೆಲವು ದಿನಗಳ ಕೆಳಗೆ, ಇಪ್ಪತ್ತು ವರುಷದ ಚಿಕ್ಕ ಹುಡುಗಿ, ಸಾಮಾನ್ಯ ವಿದ್ಯೆಯನ್ನು ಕಲಿಯಲು ತನ್ನನ್ನು ಬಲಾತ್ಕರಿಸುತ್ತಿರುವರೆಂದು ಭಾವಿಸಿ, ತನ್ನನ್ನು ಬೆಂಕಿಯಲ್ಲಿ ಸುಟ್ಟುಕೊಂಡಳು. ಎಂತಹ ಗಂಭೀರವಾದ ಧೈರ್ಯ ಮತ್ತು ದೃಢತೆಯಿಂದ ಅವಳು ನಾಶಹೊಂದಿದಳು! ಅವಳು ಎಣ್ಣೆಯ ದೀಪದಿಂದ ಸೀರೆಯನ್ನು ಹತ್ತಿಸಿಕೊಂಡಳು; ಒಂದೇ ಒಂದು ಕಿರುಧ್ವನಿಯನ್ನು ಸಹ ಮಾಡಲಿಲ್ಲ. ನೆರೆಹೊರೆಯ ಕೊಠಡಿಗಳಲ್ಲಿದ್ದವರಿಗೆ ಸಹ ಎಲ್ಲ ಮುಗಿಯುವವರೆಗೆ ಏನೂ ಗೊತ್ತಾಗಲಿಲ್ಲ. ಅವಳ ಉದಾಹರಣೆಯನ್ನು ಪ್ರಶಂಸಿಸುವುದಕ್ಕಾಗಿ ನಾನು ಈ ವಿವರಗಳನ್ನು ಕೊಡುತ್ತಿಲ್ಲ—ಆದರೆ ಸ್ತ್ರೀ ತನ್ನ ಜೀವವನ್ನು ಎಷ್ಟು ಸುಲಭವಾಗಿ ತ್ಯಜಿಸಬಲ್ಲಳು ಎಂಬುದಕ್ಕಾಗಿ. ಹೇಗಾದರೂ ನನ್ನಿಂದ ಈ ಧೈರ್ಯ ಸಾಧ್ಯವಿಲ್ಲ. ಆದರೆ ಬೇಕಾಗಿರುವುದು ಹೊರಗಿನ ದೀಪವಲ್ಲ, ಒಳಗಿನದು—ಎಂದು ನಾನು ಒಪ್ಪುತ್ತೇನೆ.'

ಅದೇ ಸೋದರಿ 'ಮಕ್ಕಳೊಂದಿಗೆ ನಡೆಯುವಾಗ ಕೋಪ-ಹಿಂಸೆಗಳನ್ನು ಬಿಡುವುದು ಹೇಗೆ?' ಎಂದು ತವಕಿಸಿದಳು.

ಗಾಂಧೀಜೀ ಹೃತ್ಪೂರ್ವಕವಾಗಿ ನಗುತ್ತಾ, 'ನಮ್ಮ ಪ್ರಾಚೀನ ನಾಣ್ಣುಡಿ ಗೊತ್ತೇ ಇದೆಯಲ್ಲ—ಐದು ವರುಷಗಳವರೆಗೆ ಲಾಲಿಸು; ಅನಂತರ ಹತ್ತು ವರುಷಗಳು ತಾಡಿಸು; ಹದಿನಾರು ವರುಷಗಳನಂತರ ಮಿತ್ರನಂತೆ ನೋಡು. ಆದರೆ ಯೋಚಿಸಬೇಡ. ಒಂದೊಂದು ವೇಳೆ ನಿನ್ನ ಮಗುವಿನ ಮೇಲೆ ನೀನು ಕೋಪಿಸಿಕೊಳ್ಳಬೇಕಾಗಿ ಬಂದರೆ ಅದು ಅಹಿಂಸೆಯ ಕೋಪ ಎಂದು ನಾನು ಕರೆಯುತ್ತೇನೆ. ನಾನು ಮಾತನಾಡುತ್ತಿರುವುದು ವಿವೇಕಿಗಳಾದ ತಾಯಂದಿರನ್ನು ಕುರಿತು; ತಾಯಂದಿರೆಂಬ ಹೆಸರಿಗೇ ಅರ್ಹರಲ್ಲದ ಅಜ್ಞಾನಿಗಳನ್ನು ಕುರಿತು ಅಲ್ಲ' ಎಂದರು.

## ಧೀರರ ಅಹಿಂಸೆ

ಒಬ್ಬ ಪತ್ರವ್ಯವಹಾರಿ ಬರೆಯುತ್ತಾರೆ:

'ಅಹಿಂಸೆ ಧೀರರಿಗೆ, ಹೇಡಿಗಳಿಗಲ್ಲ ಎಂದು ನೀವು ಹೇಳುತ್ತೀರಿ. ನನ್ನ ಅಭಿಪ್ರಾಯದಲ್ಲಿ ಭಾರತ ಧೀರರು ಇಲ್ಲದುದಕ್ಕೆ ಹೆಸರಾಗಿದೆ. ನಾವು ಧೀರರು

ಎಂದು ನಾವು ಹೇಳಿಕೊಂಡರೂ ಜಗತ್ತು ನಮ್ಮ ಮಾತನ್ನು ನಂಬುವುದಿಲ್ಲ. ಭಾರತಕ್ಕೆ ಆಯುಧಗಳಿಲ್ಲ. ಆದುದರಿಂದ ತನ್ನನ್ನು ತಾನು ರಕ್ಷಿಸಿಕೊಳ್ಳ ಲಾರದು ಎಂದು ಜಗತ್ತಿಗೆ ಗೊತ್ತು. ಆದುದರಿಂದ ಧೀರರ ಅಹಿಂಸೆಯನ್ನು ಬೆಳೆಸಿಕೊಳ್ಳಲು ನಾವು ಮಾಡಬೇಕಾದುದೇನು ? '

ಭಾರತದಲ್ಲಿ ಧೀರರ ಅಭಾವ ಪ್ರಸಿದ್ಧ ಎಂದು ಯೋಚಿಸುವುದರಲ್ಲಿ ಪತ್ರ ವ್ಯವಹಾರಿ ತಪ್ಪು ಮಾಡುತ್ತಾರೆ. ಪರಕೀಯರು ಯಾವಾಗಲೋ ಒಂದು ಸಲ ನಮ್ಮನ್ನು ಹೇಡಿಗಳೆಂದು ಕರೆದುದರಿಂದ ಆ ತಲೆಬರಹವನ್ನು ನಾವು ಅಂಗೀಕರಿ ಸುವುದು ನಾಚಿಕೆಗೇಡು. ಮನುಷ್ಯ, ತಾನು ಏನೆಂದು ತನ್ನನ್ನು ನಂಬುತ್ತಾ ನೆಯೋ ಅನೇಕ ವೇಳೆ ಅದೇ ಆಗುತ್ತಾನೆ. ಒಂದು ಕೆಲಸವನ್ನು ನಾನು ಮಾಡಲಾರೆ ಎಂದು ನಾನು ಹೇಳಿಕೊಳ್ಳುತ್ತಾ ಇದ್ದರೆ ಕೊನೆಯಲ್ಲಿ ಅದನ್ನು ಮಾಡಲು ನಾನು ನಿಜವಾಗಿ ಅಶಕ್ತನಾಗಬಹುದು. ಅದರ ಬದಲು ನಾನು ಅದನ್ನು ಮಾಡಬಲ್ಲೆ ಎಂಬ ನಂಬಿಕೆ ನನ್ನಲ್ಲಿ ಇದ್ದಲ್ಲಿ, ಪ್ರಾರಂಭದಲ್ಲಿ ಶಕ್ತಿ ಇಲ್ಲದೆ ಇದ್ದರೂ, ನಾನು ಮಾಡುವ ಶಕ್ತಿಯನ್ನು ಗಳಿಸಿಕೊಳ್ಳಬಹುದು. ಮತ್ತು ನಾವು ಹೇಡಿಗಳೆಂಧು ಜಗತ್ತು ಇಂದು ಭಾವಿಸಿದೆ ಎಂದು ಹೇಳುವುದೂ ತಪ್ಪು. ಸತ್ಯಾಗ್ರಹ ಚಳುವಳಿಯಿಂದ ಈಚೆಗೆ ಜಗತ್ತು ಹಾಗೆ ಯೋಚಿಸು ವುದನ್ನು ಬಿಟ್ಟಿದೆ. ಕಳೆದ ಇಪ್ಪತ್ತು ವರುಷಗಳಿಂದ ಪಶ್ಚಿಮ ದೇಶದಲ್ಲಿ ಕಾಂಗ್ರೆಸ್ಸಿನ ಘನತೆ ಬಹಳ ಬೆಳೆದಿದೆ. ನಮ್ಮಲ್ಲಿ ಆಯುಧಗಳಿಲ್ಲದಿದ್ದರೂ ನಾವು ಸ್ವರಾಜ್ಯವನ್ನು ಗಳಿಸುವ ನಂಬಿಕೆಯುಳ್ಳವರಾಗಿದೇವೆ. ಅದರ ಸಮೀಪಕ್ಕೇ ನಿಜವಾಗಿ ಬಂದಿದೇವೆ ಎಂಬುದನ್ನು ಜಗತ್ತು ಆಶ್ಚರ್ಯ-ಕುತೂಹಲ ಗಳಿಂದ ಈಕ್ಷಿಸುತ್ತಿದೆ. ಮತ್ತು ನಮ್ಮ ಈ ಅಹಿಂಸಾ ಚಳುವಳಿಯಲ್ಲಿ ಜಗತ್ತು ಶಾಂತಿಯ ಆಶಾಕಿರಣಗಳನ್ನೂ ರಕ್ತಕೋಡಿಯ ನರಕದಿಂದ ಮೋಕ್ಷವನ್ನೂ ನೋಡುತ್ತಿದೆ. ಮನುಷ್ಯಸಮಾಜದ ಬಹುಭಾಗ, ಸೇಡಿನ ಮನೋಭಾವ ಮರೆಯಾಗಿ, ರಕ್ತಯುದ್ಧಗಳು ನಿಲ್ಲಬೇಕಾದರೆ, ಆ ಶುಭಕಾರ್ಯ, ಕಾಂಗ್ರೆಸ್ ಅನುಸರಿಸುತ್ತಿರುವ ಅಹಿಂಸಾನೀತಿಯಿಂದ ಮಾತ್ರ ಸಾಧ್ಯ ಎಂಬ ನಂಬಿಕೆ ಯನ್ನು ಹೊಂದುತ್ತಿದೆ. ಆದುದರಿಂದ ಪತ್ರವ್ಯವಹಾರಿಯ ಭಯ ಮತ್ತು ಸಂಶಯ ಆಧಾರರಹಿತವಾದುವು.

ಆದುದರಿಂದ ಭಾರತ ಶಸ್ತ್ರರಹಿತವಾಗಿರುವುದು ಅಹಿಂಸೆಗೆ ಅಡ್ಡಿಯಲ್ಲ

ಎಂಬುದು ವ್ಯಕ್ತವಾಗುತ್ತದೆ. ಬ್ರಿಟಿಷ್ ಸರ್ಕಾರ ಬಲಾತ್ಕಾರದಿಂದ ಭಾರತ ವನ್ನು ನಿಶ್ಶಸ್ತ್ರವನ್ನಾಗಿ ಮಾಡಿದುದು ದೊಡ್ಡ ತಪ್ಪು ಮತ್ತು ಕ್ರೂರ ಅನ್ಯಾಯ. ಆದರೆ ದೇವರು ನಮ್ಮ ಜತೆ ಇದ್ದರೆ, ಅಥವಾ ನಿಮಗೆ ಒಪ್ಪಿಗೆಯಾದರೆ—ನಮಗೆ ಬುದ್ಧಿಯಿದ್ದರೆ ಎಂದು ಹೇಳೋಣ—ನಾವು ಅನ್ಯಾಯವನ್ನೂ ನಮ್ಮ ಉಪಯೋಗಕ್ಕೆ ತಿರುಗಿಸಿಕೊಳ್ಳಬಹುದು. ಭಾರತದಲ್ಲಿ ಹಾಗೆ ಸಂಭವಿಸಿದೆ.

ಅಹಿಂಸೆಯಲ್ಲಿ ಸಿದ್ಧತೆ ಪಡೆಯಲು ನಿಜವಾಗಿ ಆಯುಧಗಳು ಆವಶ್ಯಕ ವಿಲ್ಲ. ವಾಸ್ತವವಾಗಿ ಆಯುಧಗಳಿದ್ದರೆ, ಖಾನ್‌ಸಾಹೇಬರು ಗಡಿನಾಡಿನಲ್ಲಿ ಮಾಡಿದಂತೆ, ಅವುಗಳನ್ನು ಎಸೆಯಬೇಕಾಗುತ್ತದೆ. ಅಂಹಿಸೆಯನ್ನು ಕಲಿಯು ವುದಕ್ಕೆ ಮುಂಚೆ, ಹಿಂಸೆಯನ್ನು ಕಲಿಯಬೇಕೆಂದು ಹೇಳುವವರು, ಪಾಪಿಗಳು ಮಾತ್ರ ಪುಣ್ಯಶಾಲಿಗಳಾಗಬಲ್ಲರೆಂದು ಹೇಳಬಹುದು.

ಹಿಂಸೆಯ ತರಪೇತಿನಲ್ಲಿ ಕೊಲ್ಲುವುದನ್ನು ಕಲಿಯುವಂತೆ, ಅಹಿಂಸೆಯ ತರಪೇತಿನಲ್ಲಿ ಸಾಯುವುದನ್ನು ಕಲಿಯಬೇಕು. ಹಿಂಸಾವಲಂಬಿಗಳು ಎಂದ ಮಾತ್ರಕ್ಕೆ ಅವರಿಗೆ ಭಯದಿಂದ ಬಿಡುಗಡೆ ಎಂದು ಆಗಲಿಲ್ಲ. ಆದರೆ ಭಯದ ಕಾರಣವನ್ನು ಎದುರಿಸುವ ಸಾಧನೆಯನ್ನು ಕಂಡುಹಿಡಿಯುವುದು ಎಂದು. ಅದರ ಬದಲು ಅಹಿಂಸೆಯಲ್ಲಿ ಭಯಕ್ಕೆ ಕಾರಣವೇ ಇಲ್ಲ. ಅಹಿಂಸೆಯ ಭಕ್ತ, ಭಯದಿಂದ ಬಿಡುಗಡೆಹೊಂದಲು, ಅತ್ಯುನ್ನತ ತ್ಯಾಗದ ಶಕ್ತಿಯನ್ನು ಬೆಳೆಸಿ ಕೊಳ್ಳಬೇಕಾಗುತ್ತದೆ. ತನ್ನ ಭೂಮಿ, ತನ್ನ ಐಶ್ವರ್ಯ, ತನ್ನ ಪ್ರಾಣ—ಇವನ್ನು ಕಳೆದುಕೊಳ್ಳುವುದೂ ಅವನಿಗೆ ಲೆಕ್ಕವಿಲ್ಲ. ಎಲ್ಲ ಭಯವನ್ನೂ ಜಯಿಸದೆ ಇರುವವನು ಅಹಿಂಸೆಯನ್ನು ಪೂರ್ಣವಾಗಿ ಆಚರಿಸಲಾರ. ಅಹಿಂಸೆಯ ಭಕ್ತನಿಗೆ ಇರುವುದು ಒಂದೇ ಭಯ—ದೇವರು. ದೇವರಲ್ಲಿ ಆಶ್ರಯ ಹುಡುಕು ವವನು, ದೇಹವನ್ನು ಮೀರಿದ ಆತ್ಮದ ಸಕೃತ್‌ದರ್ಶನ ಪಡೆಯಲೇಬೇಕು. ಯಾವ ಕ್ಷಣದಲ್ಲಿ ಅವಿನಾಶಿಯಾದ ಆತ್ಮದರ್ಶನ ಅವನಿಗೆ ಆಗುತ್ತದೆಯೋ ಅದೇ ಕ್ಷಣದಲ್ಲಿ ಅವನು ನಶ್ವರ ದೇಹಪ್ರೇಮವನ್ನು ಕಿತ್ತು ಒಗೆಯುತ್ತಾನೆ. ಆದುದರಿಂದ ಅಹಿಂಸೆಯಲ್ಲಿನ ತರಪೇತಿ, ಹಿಂಸೆಯಲ್ಲಿನ ತರಪೇತಿಗೆ ಹೀಗೆ ಪೂರ್ಣ ವಿರೋಧ. ಬಾಹ್ಯವಸ್ತುವಿನ ರಕ್ಷಣೆಗಾಗಿ ಹಿಂಸೆ ಆವಶ್ಯಕ. ಆತ್ಮದ ರಕ್ಷಣೆಗೆ ಮತ್ತು ಕೀರ್ತಿಯ ರಕ್ಷಣೆಗೆ ಅಹಿಂಸೆ ಆವಶ್ಯಕ.

ಈ ಅಹಿಂಸೆಯನ್ನು ಮನೆಯಲ್ಲಿ ಕುಳಿತುಕೊಂಡು ಕಲಿಯಲು ಸಾಧ್ಯವಿಲ್ಲ.

ಇದಕ್ಕೆ ಸಾಹಸ ಬೇಕು. ನಮ್ಮನ್ನು ಪರೀಕ್ಷೆಮಾಡಿಕೊಳ್ಳಲು, ನಾವು ಅಪಾಯ, ಮರಣಗಳನ್ನು ಎದುರಿಸುವುದನ್ನು ಕಲಿಯಬೇಕು. ದೇಹವನ್ನು ದಂಡಿಸಬೇಕು. ಎಲ್ಲ ಕ್ಲೇಶಗಳನ್ನೂ ಸಹಿಸುವುದನ್ನು ಕಲಿಯಬೇಕು. ಇಬ್ಬರು ಹೊಡೆದಾಡುತ್ತಿರುವುದನ್ನು ನೋಡಿದಕೂಡಲೇ ನಡುಗುವವನಾಗಲೀ ಅಥವಾ ಆ ಸ್ಥಳ ಬಿಟ್ಟು ಓಡಿಹೋಗುವವನಾಗಲೀ ಅಹಿಂಸೆಯುಳ್ಳವನಲ್ಲ. ಅವನು ಹೇಡಿ. ಇಂತಹ ಹೊಡೆದಾಟಗಳನ್ನು ತಪ್ಪಿಸುವುದರಲ್ಲಿ ಅಹಿಂಸಾವಾದಿ ತನ್ನ ಪ್ರಾಣವನ್ನು ಕೊಡುವನು. ಅಹಿಂಸಾ ಆಚರಣೆಯವನ ಧೈರ್ಯ, ಹಿಂಸಾ ಆಚರಣೆಯವನ ಧೈರ್ಯಕ್ಕಿಂತ ಬಹುಪಾಲು ಉನ್ನತಮಟ್ಟದ್ದು. ಹಿಂಸ್ರಕನ ಲಾಂಛನ ಈಟಿ ಅಥವಾ ಖಡ್ಗ ಅಥವಾ ಬಂದೂಕು. ದೇವರು ಅಹಿಂಸಕನ ಗುರಾಣಿ.

ಅಹಿಂಸೆಯನ್ನು ಕಲಿಯಬಯಸುವವನಿಗೆ ಇದು ತಯಾರಿಪಾಠವಲ್ಲ. ಆದರೆ ನಾನು ಇಟ್ಟಿರುವ ತತ್ತ್ವಗಳಿಂದ ಒಂದನ್ನು ಸುಲಭವಾಗಿ ವಿಕಸನಗೊಳಿಸಬಹುದು.

ಮೇಲಿನದರಿಂದ, ಎರಡು ಬಗೆಯ ಧೈರ್ಯಕ್ಕೂ ನಡುವೆ ಯಾವ ಹೋಲಿಕೆಯೂ ಇಲ್ಲವೆಂದು ವ್ಯಕ್ತವಾಗುವುದು. ಒಂದು ಮಿತವಾದದ್ದು, ಇನ್ನೊಂದು ಮಿತಿಯಿಲ್ಲದುದು. ಅಹಿಂಸೆಯ ಧೈರ್ಯವನ್ನು ಹೆಚ್ಚು ಧೈರ್ಯದಿಂದಲೂ ಅಹಿಂಸಾವಾದಿಯ ಹೋರಾಟವನ್ನು ಹೆಚ್ಚು ಹೋರಾಟದಿಂದಲೂ ಎದುರಿಸುವುದು ಎಂಬುದು ಇಲ್ಲ. ಅಹಿಂಸೆ ಅಜೇಯ. ಈ ಬಗೆಯ ಅಹಿಂಸೆಯನ್ನು ಸಾಧಿಸಬಹುದು ಎಂಬುದರಲ್ಲಿ ಸಂದೇಹ ಬೇಕಿಲ್ಲ. ಕಳೆದ ಇಪ್ಪತ್ತು ವರುಷಗಳ ಚರಿತ್ರೆ ನಮಗೆ ಪುನಃ ಭರವಸೆ ನೀಡಲು ಸಾಕು.

(ಹರಿಜನ, ೧–೯–೧೯೪೦)

## ಮತ್ತೊಂದು ಸಂಭಾಷಣೆ

ಈ ಪತ್ರಿಕೆಯ ಬೇರೆಡೆ, ವಾಚಕರಿಗೆ ಭಾರತಾನಂದಜಿಯವರ ಪರಿಚಯ ಆಗುತ್ತದೆ. ಗಾಂಧೀಜಿಯವರು ಭಾರತಾನಂದಜಿಯ ದೇಶಬಾಂಧವರಾದ ಪೋಲರಿಗೆ ಕೊಟ್ಟ ಪ್ರಶಂಸೆಗಾಗಿ ಭಾರತಾನಂದಜೀ ಆಕ್ಷೇಪಿಸಿದರು. 'ಪೋಲರು ಬಹುಪಾಲು ಅಹಿಂಸೆಯುಳ್ಳವರಾಗಿದ್ದರೆಂದು ನೀವು ಹೇಳುತ್ತೀರಿ. ನಾನು

ಹಾಗೆ ಭಾವಿಸುವುದಿಲ್ಲ. ಪೋಲರ ಹೃದಯದಲ್ಲಿ ಕರಾಳ ದ್ವೇಷವಿತ್ತು. ಆ ಪ್ರಶಂಸೆಗೆ ಅವರು ಅರ್ಹರೆಂದು ನಾನು ಭಾವಿಸುವುದಿಲ್ಲ.'

ಗಾಂಧೀಜೀ ಹೇಳಿದರು : 'ನಾನು ಹೇಳುವುದನ್ನು ನೀವು ಅಷ್ಟು ಅಕ್ಷರಶಃ ತೆಗೆದುಕೊಳ್ಳಬಾರದು. ಹತ್ತು ಸಿಪಾಯಿಗಳು ಸರ್ವಶಸ್ತ್ರಸಜ್ಜಿತರಾದ ಸಾವಿರ ಯೋಧರನ್ನು ಎದುರಿಸಿದರೆ ಅದು 'ಬಹುಪಾಲು ಅಹಿಂಸೆಯೇ'. ಯಾಕೆಂದರೆ ಸರಿಯಾದ ಪ್ರಮಾಣದ ಹಿಂಸೆಗೆ ಅವರಿಗೆ ಶಕ್ತಿಯೇ ಇಲ್ಲ. ಆದರೆ ನಾನು ತೆಗೆದುಕೊಂಡ ಹುಡುಗಿಯ ಉದಾಹರಣೆ ಹೆಚ್ಚು ಸಮಂಜಸ ವಾಗುತ್ತದೆ. ತನ್ನ ಆಕ್ರಮಣಕಾರನನ್ನು ತನ್ನ ಉಗುರುಗಳಿಂದ (ಅವು ಬೆಳೆ ದಿದ್ದರೆ) ಮತ್ತು ತನ್ನ ಹಲ್ಲುಗಳಿಂದ (ಅವು ಇದ್ದರೆ) ಎದುರಿಸುವ ಹುಡುಗಿ 'ಬಹುಪಾಲು ಅಹಿಂಸೆಯವಳು.' ಯಾಕೆಂದರೆ ಅವಳಲ್ಲಿ ಮೊಧಲೇ ಆಲೋಚಿಸಿ ಕೊಂಡಿರುವ ಹಿಂಸೆ ಇಲ್ಲ. ಅವಳ ಹಿಂಸೆ—ಬೆಕ್ಕಿಗೆ ಎದುರಾದ ಇಲಿಮರಿಯ ಹಿಂಸೆ.'

'ಒಳ್ಳೆಯದು, ಬಾಪೂಜೀ. ನಿಮಗೊಂದು ಉದಾಹರಣೆ ಕೊಡುತ್ತೇನೆ: ಚಿಕ್ಕ ವಯಸ್ಸಿನ ಒಬ್ಬ ರಷ್ಯನ್ ಹುಡುಗಿಯ ಮೇಲೆ ಒಬ್ಬ ಸಿಪಾಯಿ ಬಿದ್ದ. ಅವಳು ತನ್ನ ಉಗುರುಗಳನ್ನೂ ಹಲ್ಲುಗಳನ್ನೂ ಬಳಸಿ ಅವನನ್ನು ಚೂರುಚೂರು ಮಾಡಿದಳೆಂದೇ ಹೇಳಬೇಕು. ಅವಳೂ 'ಬಹುಪಾಲು ಅಹಿಂಸೆ'ಯನ್ನು ಉಳ್ಳವಳೆ ?'

'ಆ ಗಳಿಗೆಯಲ್ಲಿ ಒಡ್ಡಿದ ನಿರೋಧ, ಜಯವಾದಮಾತ್ರಕ್ಕೆ ಅಹಿಂಸೆ ಆಗುವುದು ತಪ್ಪುತ್ತದೆಯೆ ?' ಎಂದೆ ನಾನು. (ಈ ವಾಕ್ಯವನ್ನು ಮಹಾದೇವ ದೇಸಾಯಿ ಹೇಳಿದುದು.) ಗಾಂಧೀಜೀ ಅಲಕ್ಷ್ಯದಿಂದ ಎಂಬಂತೆ 'ಇಲ್ಲ' ಎಂದರು.

ಭಾರತಾನಂದಜೀ ಹೀಗೆ ಹೇಳಿದರು : 'ಹಾಗಾದರೆ ನಾನು ನಿಜವಾಗಿ ಗೊಂದಲದಲ್ಲಿ ಸಿಕ್ಕಿದ್ದೇನೆ. ಪೂರ್ವಸಿದ್ಧತೆಯ ಹಿಂಸೆ ಇರಕೂಡದು, ಪ್ರಮಾ ಣಾನುಗುಣವಾದ ಹಿಂಸೆಯಿಂದ ಎದುರಿಸಲು ಶಕ್ತಿ ಇರಕೂಡದು ಎನ್ನುತ್ತೀರಿ ನೀವು. ಇಲ್ಲಿ ಆಕೆ ತನಗೆ ಶಕ್ತಿ ಇದ್ದಿತೆಂಬುದನ್ನು ತನ್ನ ಜಯದಿಂದ ರುಜುವಾತು ಮಾಡಿದಳು.'

ಗಾಂಧೀಜೀ ಹೇಳಿದರು : ' ನಾನು ವಿಷಾದಿಸುತ್ತೇನೆ. ಮಹಾದೇವ್‌ಗೆ ಅಲಕ್ಷ್ಯದಿಂದ ' ಇಲ್ಲ ' ಎಂದುಬಿಟ್ಟೆ. ಅಲ್ಲಿ ಅದು ಹಿಂಸೆ. ಸಮಾನಬಲ ಇಬ್ಬರದೂ.'

ಭಾರತಾನಂದಜೀ ಕೇಳಿದರು : ' ಆದರೆ ಕೊನೆಯಲ್ಲಿ ಉದ್ದೇಶ್ಯ ತಾನೇ ಒರೆಗಲ್ಲು ? ಒಬ್ಬ ಶಸ್ತ್ರಚಿಕಿತ್ಸಕ ತನ್ನ ಶಸ್ತ್ರಗಳನ್ನು ಉಪಯೋಗಿಸುವುದು ಅಹಿಂಸೆ. ಶಾಂತಿಪಾಲಕ ಸಮಾಜವನ್ನು ರಕ್ಷಿಸಲು ಅತ್ಯಾಚಾರಿಗಳಿಗೆ ವಿರೋಧ ವಾಗಿ ಬಲಪ್ರಯೋಗ ಮಾಡುತ್ತಾನೆ. ಅದೂ ಅಹಿಂಸೆಯೇ ? '

ಗಾಂಧೀಜೀ ಉತ್ತರವಿತ್ತರು : ' ಉದ್ದೇಶ್ಯವನ್ನು ನಿರ್ಣಯಿಸುವವರು ಯಾರು ? ನಾವಲ್ಲ. ನಮಗೆ ಬಹು ಸಂದರ್ಭಗಳಲ್ಲಿ ಕಾರ್ಯವೇ ಒರೆಗಲ್ಲು. ನಾವು ಸಾಧಾರಣವಾಗಿ ಕಾರ್ಯವನ್ನು ಪರೀಕ್ಷಿಸುತ್ತೇವೆ ; ಉದ್ದೇಶ್ಯವನ್ನಲ್ಲ. ದೇವರೇ ಉದ್ದೇಶ್ಯವನ್ನು ಬಲ್ಲ.'

' ಹಾಗಾದಮೇಲೆ ಹಿಂಸೆ ಯಾವುದು, ಅಹಿಂಸೆ ಯಾವುದು—ಅದನ್ನೂ ದೇವರೇ ಬಲ್ಲ.'

' ಹೌದು, ದೇವರು ಮಾತ್ರವೇ ಕೊನೆಯ ತೀರ್ಪುಗಾರ. ನಾವು ಯಾವುದನ್ನು ಅಹಿಂಸೆಯೆಂದು ನಂಬುತ್ತೇವೆಯೋ ಅದು ದೇವರ ದೃಷ್ಟಿಯಲ್ಲಿ ಹಿಂಸೆಯಾಗಿರುವುದು ಸಾಧ್ಯ. ಆದರೆ ನಮಗೆ ದಾರಿ ಸ್ಪಷ್ಟವಾಗಿದೆ. ಮತ್ತು ಇದೂ ತಿಳಿಯಬೇಕು : ನಿಜವಾದ ಅಹಿಂಸೆಯ ಆಚರಣೆ ಎಂದರೆ ಆಚರಿಸುವವ ರಲ್ಲಿ ತೀಕ್ಷ್ಣವಾದ ಬುದ್ಧಿ ಮತ್ತು ಪೂರ್ಣ ಜಾಗೃತವಾದ ಪ್ರಜ್ಞೆ ಇರುವುದು. ಅವನು ತಪ್ಪುಮಾಡುವುದು ಕಷ್ಟ. ಪೋಲೆಂಡ್ ವಿಷಯದಲ್ಲಿ ಆ ಮಾತು ಗಳನ್ನು ನಾನು ಉಪಯೋಗಿಸಿದಾಗ, ಮತ್ತು ತಾನು ನಿರ್ಬಲಳೆಂದು ಭಾವಿ ಸಿರುವ ಹುಡುಗಿ ಆಕ್ರಮಣಕಾರನಿಗೆ ವಿರೋಧವಾಗಿ ಹಲ್ಲುಗಳನ್ನೂ ಉಗುರು ಗಳನ್ನೂ ಉಪಯೋಗಿಸಿದರೂ ಅದು ಅಹಿಂಸೆಯಲ್ಲವೆಂದು ಸೂಚಿಸಿದಾಗ, ನನ್ನ ಮನಸ್ಸಿನ ಅಂತರಾಳದಲ್ಲಿದ್ದ ಅರ್ಥವನ್ನು ನೀವು ಅರಿಯಬೇಕು. ತಡೆಯಲು ಅಸಾಧ್ಯವಾದ ಬಲಕ್ಕೆ ಮಣಿಯಲು ನಿರಾಕರಿಸುವುದರಿಂದ ಮರಣ ಖಂಡಿತ ಎಂದು ಗೊತ್ತಾಗಿದ್ದರೂ, ಮಣಿಯಲು ನಿರಾಕರಿಸುವುದು. ತಾವು ಧೂಳೀಪಟ ಆಗುವೆವೆಂದು ಪೋಲರಿಗೆ ಗೊತ್ತಿದ್ದಿತು. ಆದರೂ ಅವರು ಜರ್ಮನ್ ತಂಡ

ಗಳನ್ನು ಎದುರಿಸಿದರು. ಆದುದರಿಂದಲೇ ನಾನು ಅದನ್ನು 'ಬಹುಪಾಲು ಅಹಿಂಸೆ' ಎಂದುದು.'

'ಆದರೆ ಬಾಪೂಜೀ, ದೇವರು ನ್ಯಾಯಾಧಿಪತಿ ಎಂಬುದನ್ನು ನಾನು ಹೇಗೋ ಮರೆಯಲಾರೆ. ದೇವರು ಹಿಂಸೆಯನ್ನು ಒಪ್ಪುತ್ತಾನೆ. ಒಂದು ಪುರಾಣದ ಕಥೆ ಇದೆ. ನಿಮಗೆ ಹೇಳಬಯಸುತ್ತೇನೆ. ಪಾರ್ವತಿಯೂ ಈಶ್ವರನೂ ಸಂಭಾಷಣೆ ಮಾಡುತ್ತಿದ್ದಾಗ, ಈಶ್ವರ ಇದ್ದಕ್ಕಿದ್ದಂತೆ ಅದೃಶ್ಯ ನಾದನು. ಆದರೆ ಬೇಗ ಹಿಂದಿರುಗಿದನು. 'ಎಲ್ಲಿಗೆ ಹೋಗಿದ್ದಿರಿ?' ಎಂದು ಕೇಳಿದುದಕ್ಕೆ 'ಆತತಾಯಿ ಒಬ್ಬ ಭಕ್ತನ ಆಕ್ರಮಣ ಮಾಡಿದ. ಭಕ್ತನ ಸಹಾಯಕ್ಕೆ ಹೋದೆ. ಆದರೆ ಭಕ್ತ ಆಕ್ರಮಣಕಾರನನ್ನು ಕಲ್ಲಿನಿಂದ ಹೊಡೆದು ತನ್ನನ್ನು ರಕ್ಷಿಸಿಕೊಂಡಿದ್ದ. ಆದುದರಿಂದ ಹಿಂದಿರುಗಿದೆ' ಎಂದ.'

'ಸರಿ, ಸರಿ. ಎಷ್ಟು ವಾದವೂ ನಮಗೆ ಅಹಿಂಸೆಯನ್ನು ಕಲಿಸಲಾರದು. ಯೋಗದ ಪರಮಗುರುಗಳಾದ ಪತಂಜಲಿಯಂತಹವರು ನಿರ್ದೇಶಿಸಿರುವ ಆಧ್ಯಾತ್ಮಿಕ ಪರಿಶ್ರಮವನ್ನು ಪೂರ್ಣವಾಗಿ ಪಡೆಯುವವರೆಗೆ, ತನ್ನ ಉದ್ದೇಶ್ಯ ಶುದ್ಧವಾಗಿದೆಯೇ ಎಂಬುದನ್ನು ನಿರ್ಣಯಿಸುವುದಕ್ಕಾಗುವುದಿಲ್ಲ. ಇದನ್ನೂ ಮರೆಂಬಬಾರದು. ಪೂರ್ಣ ಚಿತ್ತಶುದ್ಧಿಯನ್ನು ಮತ್ತಾವ ಮಾರ್ಗದಿಂದಲೂ ಗಳಿಸಲು ಸಾಧ್ಯವಿಲ್ಲ.'

ಇಲ್ಲಿ ಭಾರತಾನಂದಜೀ ಗಾಂಧೀಜಿಯವರೊಂದಿಗೆ ಸಹಮತವಾಗಿರು ವಂತೆ ಕಂಡರು. ಮತ್ತು ಯಾರೂ ತನ್ನನ್ನೇ ತಾನು ಮೋಸಮಾಡಿಕೊಳ್ಳು ವುದು ಸುಲಭವೆಂದೂ ಒಪ್ಪಿಕೊಂಡರು. ಆದರೆ ಅವರು ಮತ್ತೊಂದು ಪ್ರಶ್ನೆ ಹಾಕಿದರು: 'ಅಹಿಂಸೆ, ಬ್ರಹ್ಮಚರ್ಯ, ನೂಲುವುದು ಇವೆಲ್ಲ ಸಾಧನಗಳು. ಒಬ್ಬರಿಗೆ ಒಂದು ಒಗ್ಗಬಹುದು, ಮತ್ತೊಬ್ಬರಿಗೆ ಅದು ಒಗ್ಗದಿರಬಹುದು. ನೀವು ಅಹಿಂಸೆಯನ್ನು ಮಾತ್ರ ಸರ್ವವ್ಯಾಪಿವಿಧಿಯಾಗಿ ಏಕೆ ಮಾಡಿದೀರಿ?' ಎಂದರು.

'ಒಬ್ಬ ವಿಜ್ಞಾನಿ ಪ್ರಯೋಗದಿಂದ ದೋಷರಹಿತವಾದ ಪರಿಣಾಮವುಳ್ಳ ಒಂದು ಸಾಧನೆಯನ್ನು ಕಂಡುಹಿಡಿದಾಗ ಅದನ್ನು ಸರ್ವರ ಮುಂದೆಯೂ ಇಡುತ್ತಾನೆ. 'ಯಥಾ ಪಿಂಡೇ ತಥಾ ಬ್ರಹ್ಮಾಂಡೇ' ಎಂಬ ವಾಕ್ಯ ಕೇಳಿ

ದೀರಿ. ಒಬ್ಬನ ವಿಷಯದಲ್ಲಿ ಯಾವುದು ನಿಜವೋ ಅದು ಬ್ರಹ್ಮಾಂಡದ ವಿಷಯದಲ್ಲಿಯೂ ನಿಜ.'

'ಆದರೆ ನೀವು ಸಂತನಿಗೂ ಕಳ್ಳನಿಗೂ ಇಬ್ಬರಿಗೂ ಒಂದೇ ಧರ್ಮವನ್ನು ನಿಯಮಿಸುತ್ತೀರಿ.'

'ಹೌದು. ಧರ್ಮ ಒಂದೇ. ದಾರಿ ಸಂತನಿಗಿಂತ ಕಳ್ಳನಿಗೆ ಹೆಚ್ಚು ಕಷ್ಟ ವಾಗಬಹುದು. ವ್ಯಕ್ತಿಗಳು ಅದರಿಂದ ಎಷ್ಟೇ ಸರಿದರೂ ಧರ್ಮವೇ ಆದರ್ಶ.'

'ಆದರೆ ಆದರ್ಶಕ್ಕಿಂತ ಮುಂಚೆ ವಾಸ್ತವಾಂಶ ಎಂಬುದನ್ನು ನೀವು ಮರೆಯುತ್ತೀರಿ.'

'ಇಲ್ಲ. ವಾಸ್ತವಾಂಶ ಯಾವಾಗಲೂ ನನ್ನ ಮುಂದೆ ಇದೆ. ಆದರೆ ಯಾವಾಗಲೂ ಧ್ಯೇಯವನ್ನು ಮುಟ್ಟುವುದು ನನ್ನ ಸಾಧನೆ. ಯೂಕ್ಲಿಡ್‌ನ ಸರಳರೇಖೆ ಎಂಬುದು ನಮ್ಮ ಕಲ್ಪನೆಯಲ್ಲಿ ಮಾತ್ರ ಇದೆ. ಆದರೆ ನಾವು ಯಾವಾಗಲೂ ಅದನ್ನು ಅಂಗೀಕರಿಸಬೇಕಾಗಿದೆ. ನಾವು ಯೂಕ್ಲಿಡ್‌ನ ಕಲ್ಪನೆಯ ರೇಖೆಗೆ ಸಮನಾದ ರೇಖೆಯನ್ನು ಎಳೆಯಲು ಯಾವಾಗಲೂ ಪ್ರಯತ್ನಿಸಬೇಕಾಗಿದೆ.

'ಇದನ್ನು ಕೇಳುತ್ತಿದ್ದಾಗ ನನಗೆ ಕಾರ್ಲೈಲ್‌ನ ಅದೇ ಬಗೆಯ ಮಾತು ಗಳು ಜ್ಞಾಪಕಕ್ಕೆ ಬಂದವು. 'ಧ್ಯೇಯಗಳು ಪೂರ್ಣವಾಗಿ ಎಂದಿಗೂ ಆಚರಣೆ ಯಲ್ಲಿ ದೇಹತಾಳುವುದು ಸಾಧ್ಯವಲ್ಲ. ಆದರೂ ಧ್ಯೇಯಗಳಿರುವುದನ್ನು ಎಂದಿಗೂ ಮರೆಯಕೂಡದು; ಅವುಗಳ ಸಮೀಪಕ್ಕಾದರೂ ಹೋಗದಿದ್ದರೆ ಜಗತ್ತು ನಿಸ್ಸಂದೇಹವಾಗಿ ನಾಶವಾಗುವುದು. ಯಾವ ಇಟ್ಟಿಗೆ ಕಟ್ಟುವವನೂ ನಿರ್ದಿಷ್ಟವಾಗಿ ನೆಟ್ಟಗೆ ಗೋಡೆ ಕಟ್ಟುವುದಿಲ್ಲ. ಗಣಿತ ದೃಷ್ಟಿಯಿಂದ ಇದು ಸಾಧ್ಯವಲ್ಲ. ಒಂದು ಮಟ್ಟದ 'ನೆಟ್ಟಗೆ' ಅವನಿಗೆ ಸಾಕು. ಕೆಲಸವನ್ನು ಮಾಡಿ ಮುಗಿಸಬೇಕಾದ ಅವನು ಅದನ್ನು ಅಷ್ಟಕ್ಕೆ ಬಿಡುತ್ತಾನೆ. ಆದರೆ ಅವನು ಸಮಕೋಣದಿಂದ ತುಂಬ ಆಚೆಗೆ ವಾಲಿದರೆ—ಎಲ್ಲದಕ್ಕಿಂತ ಹೆಚ್ಚಾಗಿ ಅವನು ನಕ್ಷೆಯನ್ನೂ ನೇರವನ್ನೂ ಆಚೆಗೆ ಎಸೆದು, ಕೈಗೆ ಸಿಕ್ಕಿದಂತೆ ಇಟ್ಟಿಗೆ ಗಳನ್ನು ಒಂದರ ಮೇಲೆ ಒಂದರಂತೆ ಪೇರಿಸುತ್ತಾ ಹೋದರೆ—ಅಂತಹ ಇಟ್ಟಿಗೆ ಕೆಲಸಗಾರ ನಿಜವಾಗಿ ಕೆಟ್ಟ ದಾರಿ ಹಿಡಿದಿದಾನೆ. ಅವನು ತನ್ನನ್ನು ತಾನು

ಮರೆತಿದಾನೆ. ಆದರೆ ಗುರುತ್ವಾಕರ್ಷಣಶಕ್ತಿಯ ನಿಯಮ ಅವನ ಮೇಲೆ ಪ್ರತಿಕ್ರಿಯೆಯನ್ನು ಮರೆಯುವುದಿಲ್ಲ. ಅವನೂ ಅವನ ಗೋಡೆಯೂ ನಾಶದ ಕಡೆಗೆ ಕೊಚ್ಚಿಕೊಂಡು ಹೋಗುವುದು.' (ಹರಿಜನ, ೮-೯-೧೯೪೦)

## ಆರಿಸುವುದು ಹೇಗೆ?

### ಅನ್ವೇಷಕನ ಪತ್ರ

ಹರಿಜನದ ಸಂಪಾದಕರಿಗೆ,

ಸ್ವಾಮಿ, ಜರ್ಮನಿಗೂ ಇಂಗ್ಲೆಂಡಿಗೂ ನಡುವೆ ಯುದ್ಧ ಯಾವ ರೀತಿ ಕಾದಲ್ಪಡುತ್ತಿದೆಯೆಂಬುದನ್ನು ನೀವು ಪತ್ರಿಕೆಗಳಲ್ಲಿ ಓದಿರಬೇಕು. ಬೆಂಕಿಯನ್ನು ಕಾರುವ ಸಾವಿರಾರು ಬಾಂಬು ತುಂಬಿದ ಆಕಾಶವಿಮಾನ ಗಳು ಅನಿರ್ವಚನೀಯ ಅನಾಹುತವನ್ನುಂಟುಮಾಡುವುವು. ವರ್ತ ಮಾನಪತ್ರಗಳೂ ಆಕಾಶವಾಣಿಯೂ, ಪ್ರತಿಯೊಂದು ಪಕ್ಷವೂ ಎದುರು ಪಕ್ಷದಲ್ಲಿ ನಡೆಸಲು ಸಾಧ್ಯವಾದ ನೋವನ್ನು ಸಂತೋಷದಿಂದ ಪ್ರಕಟಿ ಸುವುವು. ಸಾರ್ವಜನಿಕರಿಗೆ, ಶತ್ರುವಿನ ದೇಶದಲ್ಲಿ ತಾವು ನಡೆಸಿರುವ ವಿನಾಶ, ಶತ್ರು ತಮ್ಮ ದೇಶದಲ್ಲಿ ನಡೆಸಿರುವುದಕ್ಕಿಂತ ಹೆಚ್ಚು ಎಂಬ ಸಮಾಧಾನವು ಹೇಳಲ್ಪಡುತ್ತಿದೆ. ಯುದ್ಧವಸ್ತು ಮತ್ತು ಯುದ್ಧ ಪ್ರದೇಶಗಳೇ ಮುತ್ತಿಗೆಗಾರರ ಏಕಮಾತ್ರ ಗುರಿ ಎಂದು ಹೇಳುತ್ತಾರೆ. ಆದರೆ ತುಂಬ ಎತ್ತರದಲ್ಲಿ ಹಾರುತ್ತಾ ಹೊಗೆಯ ತೆರೆಯನ್ನು ನಿರ್ಮಿಸಿ ಕೊಂಡನಂತರ ಬಾಂಬು ಹೊಡೆಯುವವರು, ಸರಿಯಾದ ಗುರಿಯನ್ನು ತೆಗೆದುಕೊಳ್ಳುವರೆಂದು ನಂಬುವುದು ಕಷ್ಟ. ಅನಂತರ ಎರಡು ಕಡೆ ಯವರೂ ಜಯಪ್ರದವಾಗಿ ದಿಗ್ಬಂಧನ ಮಾಡಿರುವುದನ್ನು ಕೇಳುತ್ತೇವೆ. ಇದರ ಉದ್ದೇಶ್ಯ ಕ್ಷಾಮ. ಕ್ಷಾಮ—ಬಾಂಬುಗಳಿಗಿಂತ ಹೆಚ್ಚಾಗಿ ಜನಸಾಮಾನ್ಯರನ್ನು ಕಷ್ಟಗೊಳಿಸುತ್ತದೆ.

ಹೋರಾಡುತ್ತಿರುವವರಿಗೆ ಮಾನವೀಯತೆಯ ದೃಷ್ಟಿಯಲ್ಲಿ ಯೋಚಿಸಿ ಈ ರಕ್ತಪಾತವನ್ನು ನಿಲ್ಲಿಸುವುದು ಸಾಧ್ಯವೇ ಇಲ್ಲವೆ?

ಯುದ್ಧದಿಂದ ಎಂದಾದರೂ ಯಾವ ಒಳ್ಳೆಯದಾದರೂ ಆಗಬಲ್ಲದೆ? ಆದುದರಿಂದ ನಾವು ಯಾವ ಯುದ್ಧಕ್ಕೂ, ಯಾರ ಮೇಲೆ ಯುದ್ಧಕ್ಕೂ, ಯಾವ ಧ್ಯೇಯಕ್ಕಾಗಿ ಯುದ್ಧಕ್ಕೂ—ನಮ್ಮ ವಿರೋಧವನ್ನು ಸಂಕೋಚ ಇಲ್ಲದೆ ಸ್ಪಷ್ಟವಾಗಿ ಪ್ರಕಟಿಸಬೇಡವೆ?

ಯುದ್ಧದಲ್ಲಿ ತೊಡಗಿರುವ ರಾಷ್ಟ್ರಗಳಲ್ಲಿ ಹೀಗೆ ಯೋಚಿಸುತ್ತಿರುವ ಅನೇಕ ದೇವತಾಪುರುಷರು ಇರಬೇಕು. ಆದರೆ ತಮ್ಮ ಪ್ರತಿಭಟನೆಯ ಧ್ವನಿಯನ್ನು ಪ್ರಕಟಿಸಲು ಅವರಿಗೆ ಶಕ್ತಿ ಇಲ್ಲ. ಅವರು ಹಾಗೆ ಮಾಡಲು ಅವರಿಗೆ ನಾವು ಸಹಾಯ ಮಾಡಬೇಡವೆ? ಹಾಗೆಯೇ, ಯೋಚನಾ ಪರರ ಮಲಗಿರುವ ಅಂತಃಕರಣವನ್ನೂ ನಾವೂ ಜಾಗೃತಗೊಳಿಸ ಬೇಡವೆ?

ನಿಮ್ಮ,

**ಅನ್ವೇಷಕ**

ಈ ಪತ್ರಿಕೆಯ ಬೇರೆ ಕಡೆ ಒಬ್ಬ ಅನ್ವೇಷಕ ಒಂದು ಪ್ರಶ್ನೆಯನ್ನು ಕೇಳಿದಾನೆ. ಇದೇ ಪ್ರಶ್ನೆ ಎಲ್ಲರಿಗೂ ಹೊಳೆದಿರಬೇಕು. ಈ ಪ್ರಶ್ನೆಯನ್ನು ಪ್ರವೇಶ ಗೊಳಿಸುವುದರಲ್ಲಿ ಇದರ ಸೊಗಸು ಅಡಗಿದೆ. ವಾಚಕ ಸ್ವಾಭಾವಿಕವಾಗಿ, 'ಈ ಬಗೆಯ ಹಿಂಸೆಯಿಂದ ಜಗತ್ತಿನ ಸಾಮ್ರಾಜ್ಯವನ್ನೇ ಗೆಲ್ಲುವುದು ಸಾಧ್ಯ ವಾದರೂ ನನಗೆ ಬೇಡ' ಎಂಬ ಉದ್ಗಾರವನ್ನು ತೆಗೆಯುತ್ತಾನೆ. ಈ ದಳ್ಳುರಿಯನ್ನು ಬಹು ಘೋರ ವರ್ಣದಲ್ಲಿ, ಹಿಂಸೆಯಲ್ಲಿ ನಮಗೆ ಅಸಹ್ಯವೂ ಜಿಗುಪ್ಸೆಯೂ ಉಂಟಾಗುವ ರೀತಿಯಲ್ಲಿ ಚಿತ್ರಿಸಿದಾನೆ.

ಆದರೆ ಈ ಬೆಂಕಿಯನ್ನು ಆರಿಸಲು ಈ ಉದ್ಗಾರದಿಂದ ಪ್ರಯೋಜನ ವಾಗುವುದಿಲ್ಲ. ಅದು ಎಂದೋ ತಾನಾಗಿಯೇ ಆರುತ್ತದೆಂಬುದರಲ್ಲಿ ಸಂದೇಹ ವಿಲ್ಲ. ಅಂದರೆ ಅದು, ಹಿಂದಿನ ಯಾದವರು ತಾವೂ ನಾಶವಾಗಿ ಭೂಭಾರ ವನ್ನೂ ಕಡಮೆ ಮಾಡಿದಂತೆ ಪರಸ್ಪರ ಬಂಧುಗಳ ಕೊಲೆ ಎಂದು ಅರ್ಥ. ಈ ಮುಂದುವರಿಯುತ್ತಿರುವ ಅಗ್ನಿಜ್ವಾಲೆಗಿಂತ ಆ ಮುಕ್ತಾಯ ಹೇಗೂ ಸ್ವಾಗತಾರ್ಹ. ಆದರೆ ಇದನ್ನು ಯಾರೂ ಬಯಸುವುದಿಲ್ಲ. ಎಲ್ಲರೂ ಶ್ರದ್ಧೆ ಯಿಂದ ಬಯಸುವುದೇನೆಂದರೆ, ಜಗತ್ತು ಪೂರ್ಣ ನಾಶವಾಗುವುದಕ್ಕೆ ಮುಂಚೆ

ಈ ಅಗ್ನಿಜ್ವಾಲೆಯನ್ನು ನಿಲ್ಲಿಸಲು ಯಾವುದಾದರೂ ಧೀರ ಕಾರ್ಯ. ಇಂತಹ ಕಾರ್ಯ ಅಹಿಂಸೆಯೊಂದೇ. ಎಲ್ಲಿ ಮತ್ತು ಹೇಗೆ ಇದನ್ನು ಪ್ರಯೋಗಿಸಬೇಕು ಎಂಬುದನ್ನು ಕಂಡುಹಿಡಿಯಬೇಕು. ಈ 'ಅನ್ವೇಷಕ'ನಿಗೆ ಇದನ್ನು ಕಂಡು ಹಿಡಿದಾಗ ಸಮಾಧಾನವಾಗುವುದು. ನನ್ನ ಅಭಿಪ್ರಾಯದಲ್ಲಿ ಆಗಲೇ ಕಂಡು ಹಿಡಿದಾಗಿದೆ. ಈ ಅಗ್ನಿಜ್ವಾಲೆ ನಡೆಯುತ್ತಿರುವಾಗಲೂ, ಭಾರತ ಅಹಿಂಸೆ ಯಿಂದ ಸ್ವರಾಜ್ಯವನ್ನು ಗೆದ್ದುಕೊಳ್ಳಲು ಸಾಧ್ಯವಾದರೆ, ಆ ಒಂದು ಸಂಗತಿ ಯಿಂದಲೇ ಯುದ್ಧದ ಈ ಅಗ್ನಿಜ್ವಾಲೆ ಶಮನವಾಗುವುದು. ಅದು ನನ್ನ ದೃಢ ನಂಬಿಕೆಯಾದುದರಿಂದ, ನಾನು ವರ್ಧಾ ನಿರ್ಣಯವನ್ನು ನನ್ನ ಸರ್ವಶಕ್ತಿ ಯಿಂದಲೂ ಎದುರಿಸಿದೆ—ನನ್ನ ಹೆಮ್ಮೆಯನ್ನು ಉಬ್ಬಿಸುವುದಕ್ಕಾಗಿ ಅಲ್ಲ, ಆದರೆ ಪ್ರಯೋಗದ ಜಯಕ್ಕಾಗಿ. ಮತ್ತು ಈ ಸ್ವಾತಂತ್ರ್ಯವನ್ನು ನಾನು ಬಿಡಬೇಕಾಗುವುದಾದರೆ—ಅದೂ ಸಾಧ್ಯ—ಆ ಉದ್ದೇಶ್ಯಕ್ಕಾಗಿಯೇ.

ಪ್ರಾಚೀನ ಕಾಲದಲ್ಲಿ ಕಠಿಣ ಪರೀಕ್ಷೆ ಅಥವಾ ಆಪತ್ತುಗಳಿಂದ ತಮ್ಮ ಬಿಡುಗಡೆ ಸಾಧಾರಣ ಮಾರ್ಗಗಳಿಂದ ಆಗದಿದ್ದಾಗ, ಜನ ತಪಸ್ಸನ್ನು ಆಚರಿಸುತ್ತಿದ್ದರೆಂದು ಪುರಾಣಗಳಲ್ಲಿ ಓದಿದೇವೆ. ಈ ತಪಸ್ಸೆಂದರೆ ತಮ್ಮನ್ನು ತಾವು ಸುಟ್ಟುಕೊಂಡು ಸಾಯುವುದು. ಈ ಕತೆಗಳನ್ನು ಕಟ್ಟುಕತೆಗಳೆಂದು ನಾನು ಭಾವಿಸುವುದಿಲ್ಲ. ತಪಸ್ಸಿನಲ್ಲಿ ಬೇರೆ ಬೇರೆ ಬಗೆಗಳಿವೆ. ಸರಿಯಾದ ಮಾರ್ಗದರ್ಶನವಿಲ್ಲದವರು, ಇವತ್ತು ನಮಗೆ ಕಾಣುತ್ತಿರುವಂತೆ ಅದನ್ನು ಅನುಸರಿಸಬಲ್ಲರು. ವಿವೇಕಿಗಳೂ ಅದನ್ನು ಮಾಡಬಲ್ಲರು. ತಪಸ್ಸಿನ ಅರ್ಥ ವನ್ನು ತಿಳಿಯುವುದು ಉತ್ತಮ. ಪಾಶ್ಚಾತ್ಯ ವಿಜ್ಞಾನಿಗಳು ತಮ್ಮ ಶೋಧನೆ ಗಳನ್ನು ಕಂಡುಹಿಡಿದುದು ತಪೋಬಲದಿಂದಲೇ. ಕಾಡಿಗೆ ಹೋಗಿ, ಅಗ್ನಿಯ ನಡುವೆ ಕುಳಿತುಕೊಳ್ಳುವುದು ಮಾತ್ರವೇ ತಪಸ್ಸಲ್ಲ. ಆ ತಪಸ್ಸು ಅವಿವೇಕದ ಪರಮಾವಧಿಯಾಗಬಹುದು. ಆದುದರಿಂದ ನಾವು ವಿವೇಕವನ್ನು ಬಳಸಬೇಕು.

ಅನ್ವೇಷಕ ಎತ್ತಿರುವ ಪ್ರಶ್ನೆ ನಿರಾಶೆಯಿಂದ ಎದ್ದಿರುವುದಲ್ಲ. ಅಹಿಂಸೆ ಯನ್ನು ನಂಬುವವರ ಅಂತರಂಗವನ್ನು ಜಾಗೃತಗೊಳಿಸುವುದು ಅದರ ಉದ್ದೇಶ್ಯ. ನಾನು ಮಾರ್ಗವನ್ನು ಆಗಲೇ ತೋರಿಸಿದೇನೆ. ಅದು ನನ್ನ ಈಚಿನ ಲೇಖನದಲ್ಲಿ ವಿವರಿಸಿರುವ ಹದಿಮೂರು ಅಂಶಗಳ ನಿರ್ಮಾಣಕಾರ್ಯ ಕ್ರಮವನ್ನು ಪೂರ್ಣಗೊಳಿಸುವುದೇ. ಆ ಕಾರ್ಯಕ್ರಮವನ್ನು ನಿಷ್ಠೆಯಿಂದ, ಜ್ಞಾನ

ದಿಂದ, ಸ್ವಲ್ಪವೂ ಆಡಂಬರವಿಲ್ಲದೆ ನಡೆಸುವವರು ಈ ಯುದ್ಧದ ಅಗ್ನಿಜ್ವಾಲೆ ಯನ್ನು ಆರಿಸುವ ಕಾರ್ಯದಲ್ಲಿ ತಮ್ಮ ಭಾಗದ ತಪಸ್ಸನ್ನು ಮಾಡಿದಂತಾಯಿತು. ಏಕಕಾಲದಲ್ಲಿ ಅವರು ಎರಡು ಗುರಿಗಳನ್ನು ಸಾಧಿಸುವರು. ಅವರು ಭಾರತ ವನ್ನು ಸ್ವತಂತ್ರವಾಗಿ ಮಾಡುವರು, ಯುದ್ಧದ ಅಗ್ನಿಜ್ವಾಲೆಯನ್ನೂ ಆರಿಸುವರು. ಇಂತಹವರ ಸಂಖ್ಯೆ ಬಹಳ ಮಿತವಾಗಿರಬಹುದು—ಪರಿಣಾಮವೇ ಆಗದಷ್ಟು ಮಿತವಾಗಿರಬಹುದು. ಪೂರ್ಣ ಅಹಿಂಸಾವಾದಿ ಒಬ್ಬನೇ ಇದ್ದರೂ ಅವನು ಈ ಅಗ್ನಿಜ್ವಾಲೆಯನ್ನು ಶಮನಮಾಡಬಲ್ಲನೆಂದು ನಾನು ಹೇಳುತ್ತಿದೇನೆ. ಆದರೆ ಸಾಮಾನ್ಯ ಮನುಷ್ಯರೆಲ್ಲ ಸುಲಭವಾಗಿ ಮಾಡಬಹುದಾದ ತಪಸ್ಸನ್ನು ನಾನು ಸೂಚಿಸಿದೇನೆ. ಈ ಪ್ರಜಾತಂತ್ರಯುಗದಲ್ಲಿ, ಜನತೆಯ ಸಾಮುದಾಯಿಕ ಪ್ರಯತ್ನದಿಂದ ಇಷ್ಟವಾದ ಫಲವನ್ನು ಹೊಂದುವುದು ಆವಶ್ಯಕ. ಅತ್ಯಂತ ಮಹಿಮಾನ್ವಿತವಾದ ಒಬ್ಬ ವ್ಯಕ್ತಿಯ ಪ್ರಯತ್ನದಿಂದ ಇಷ್ಟವಾದ ಗುರಿಯನ್ನು ಮುಟ್ಟುವುದು ನಿಸ್ಸಂದೇಹವಾಗಿ ಒಳ್ಳೆಯದು. ಆದರೆ ಅದರಿಂದ ಸಮಾಜ ತಮ್ಮ ಸಾಮೂಹಿಕ ಶಕ್ತಿಯ ಜ್ಞಾನವನ್ನು ಹೊಂದುವುದಿಲ್ಲ. ಒಬ್ಬ ವ್ಯಕ್ತಿಯ ಜಯ, ಲಕ್ಷಾಧಿಪತಿ ಲಕ್ಷಾಂತರ ಕ್ಷುತ್‌ಪೀಡಿತರಿಗೆ ಅನ್ನದಾನ ಮಾಡಿದಂತೆ ಆಗುವುದು. ಆದುದರಿಂದ ಹದಿಮೂರು ಅಂಶಗಳ ನಿರ್ಮಾಣಕಾರ್ಯಕ್ರಮದ ಪೂರೈಕೆಗಾಗಿ ನಮ್ಮ ಪ್ರಯತ್ನಗಳನ್ನೆಲ್ಲ ವಿನಿಯೋಗಿಸಬೇಕು. ಅದರಿಂದ ಸ್ವರಾಜ್ಯಸಂಪಾದನೆಯಾಗಬಹುದು, ಇಲ್ಲದಿರಬಹುದು. ಆದರೆ ನಮ್ಮ ಅತ್ಯುತ್ತಮ ಕರ್ತವ್ಯವನ್ನು ಮಾಡಿದ ತೃಪ್ತಿ ನಮಗೆ ಉಂಟಾಗುವುದು.

ಅನ್ವೇಷಕನ ಪತ್ರದಲ್ಲಿ ಒಂದು ಎಚ್ಚರಿಕೆಯಿದೆ. ಅದನ್ನು ವಾಚಕರ ಗಮನಕ್ಕೆ ತರಲು ಬಯಸುತ್ತೇನೆ. ' ಪತ್ರಿಕೆಗಳೂ ಆಕಾಶವಾಣಿ ಭಾಷಣಗಳೂ, ಎರಡು ಪಕ್ಷದವರೂ ಪರಸ್ಪರರಿಗೆ ಮಾಡುತ್ತಿರುವ ಅನಾಹುತವನ್ನು ಪೈಶಾಚಿಕ ಆನಂದದಿಂದ ವಿವರಿಸುತ್ತಿವೆ. ಅಂತಹ ಸುದ್ದಿಗಳು ಜನರಿಗೆ ಆನಂದವನ್ನುಂಟು ಮಾಡುವ ಬದಲು—ಅವರು ಶಾಂತಿಸ್ಥಾಪನೆಯಲ್ಲಿ ಭಾಗವಹಿಸುವವರಾದರೆ—ಅವರನ್ನು ಜಿಗುಪ್ಸೆಯಿಂದ ತುಂಬಬೇಕು ' ಎಂದು ಅನ್ವೇಷಕ ಹೇಳುತ್ತಾನೆ. ನಾನು ಒಪ್ಪುತ್ತೇನೆ. ಅಂತಹವರು ರಚನಾತ್ಮಕ ಕಾರ್ಯಕ್ರಮವನ್ನು ಸಹ ಸಾಧಿಸಲು ಶಕ್ತರಾಗುವುದಿಲ್ಲ. ಯಾಕೆಂದರೆ ಅದರಲ್ಲಿ ಅವರಿಗೆ ನಂಬಿಕೆ ಇರುವುದಿಲ್ಲ.

ಅದು ಹೇಗೇ ಇರಲಿ, ಈ ಅಗ್ನಿಜ್ವಾಲೆಯೂ ಅಹಿಂಸಾಕಾರ್ಯದಿಂದ ಶಮನ ವಾಗುವುದಾದರೆ ಅದು ಭಾರತದಿಂದ ಮಾತ್ರ ಆಗುತ್ತದೆ ಎಂಬುದು ಸೂರ್ಯನ ಬೆಳಕಿನಷ್ಟೇ ಸ್ಪಷ್ಟ. (ಹರಿಜನ, ೮-೯-೧೯೪೦)

## ದೊಂಬಿಗಳ ಕಾಲದಲ್ಲಿ ಅಹಿಂಸೆ

ಒಬ್ಬ ಮಿತ್ರರು ಬರೆಯುತ್ತಾರೆ :

' ದೊಂಬಿಗಳ ಕಾಲದಲ್ಲಿ ಅಹಿಂಸೆ ಹೇಗೆ ಪರಿಣಾಮಕಾರಿಯಾಗಬಲ್ಲದು ? ಆತ್ಮಬಲಿದಾನದಿಂದ, ಮೊದಲೇ ನಾವು ಯಾರೊಂದಿಗೆ ಸಜೀವಬಾಂಧವ್ಯವನ್ನು ಹೊಂದಿದೇವೆಯೋ ಅಂತಹವರನ್ನು ಮಾತ್ರ ಮನವೊಲಿಸಬಹುದು. ಆದರೆ ದೊಂಬಿಯ ಕಾಲದಲ್ಲಿ ಹಿಂಸಾಕೃತ್ಯವನ್ನು ಮಾಡುವ ಪುಂಡರನ್ನು ಸಾಧಾರಣ ವಾಗಿ ಬೇರೆ ಕಡೆಯಿಂದ ಹಣ ಕೊಟ್ಟು ಕರೆತಂದಿರುತ್ತಾರೆ. ಮೊದಲು ತಮಗೆ ಪರಿಚಯವಿಲ್ಲದಿರುವವರನ್ನೂ ಯಾರಲ್ಲಿ ತಮಗೆ ಗೌರವ-ಪ್ರೇಮಗಳಿಲ್ಲವೋ ಅಂತಹವರನ್ನೂ ನೋಯಿಸುವುದರಲ್ಲಿ ಆ ಪುಂಡರಿಗೆ ಯಾವ ಅಳುಕೂ ಇರುವುದು ಹೇಗೆ ಸಾಧ್ಯ ? '

ಪ್ರಶ್ನೆಯನ್ನು ಎಚ್ಚರಿಕೆಯಿಂದ ಪರಿಶೀಲಿಸುವುದಗತ್ಯ. ಈ ಪ್ರಶ್ನೆಯನ್ನು ಹಾಕಿರುವವರು ಧೀರರಾದ ಕೆಲಸಗಾರರು. ಈಚಿನ ದೊಂಬಿಯಲ್ಲಿ ಅವರ ಪ್ರಾಣವೇ ಹೋಗುವ ಘಟ್ಟ ಬಂದಿತ್ತು. ಈ ಪ್ರಶ್ನೆಯ ಮೇಲೆ ನಾನು ಹಿಂದೆ ಅನೇಕ ವೇಳೆ ಬರೆದಿದ್ದೇನೆ. ದುಃಖದ ಸಂಗತಿಯೇನೆಂದರೆ, ಅಹಿಂಸೆ ಯಿಂದ ದೊಂಬಿಯನ್ನು ಅಡಗಿಸುವ ಮಾರ್ಗವನ್ನು ಕುರಿತು ಕಾಂಗ್ರೆಸ್ಸಿಗರು ಗಂಭೀರವಾಗಿ ಯೋಚಿಸಿಯೇ ಇಲ್ಲ. ಅವರ ಅಹಿಂಸೆ ಸರ್ಕಾರಕ್ಕೆ ವಿರೋಧ ವಾಗಿ ಸತ್ಯಾಗ್ರಹವನ್ನು ಆಚರಿಸುವುದಷ್ಟಕ್ಕೇ ಮಿತಿಗೊಂಡಿತ್ತು. ಅಷ್ಟರಮಟ್ಟಿಗೆ ಮಾತ್ರ—ಮತ್ತು ಅದಕ್ಕೆ ಮುಂದೆ ಹೋಗದ ಅಹಿಂಸೆ—ನನ್ನ ಅಭಿಪ್ರಾಯದಲ್ಲಿ ಅಹಿಂಸೆ ಎಂಬ ಹೆಸರಿಗೇ ಅರ್ಹವಲ್ಲ. ಅದನ್ನು ಬೇಕಾದರೆ ನೀವು ಶಸ್ತ್ರರಹಿತ ಪ್ರತಿಭಟನೆ ಎಂದು ಕರೆಯಬಹುದು. ಸರ್ಕಾರವನ್ನು ಪೇಚಾಡಿಸುವ ಮಟ್ಟಿಗೆ ಅದು ಉಪಾಯವಾಗಿರುವವರೆಗೆ ಅದು ಒಂದು ಬಗೆಯ ಹಿಂಸೆಯೇ. ದೊಂಬಿ ಗಳನ್ನು ಅಹಿಂಸೆಯಿಂದ ಅಡಗಿಸಬೇಕಾದರೆ ಹೃದಯದಲ್ಲಿ ಸತ್ಯವಾದ ಅಹಿಂಸೆ

ಇರಬೇಕು; ಪುಂಡರನ್ನೂ ತಮ್ಮ ಹಿತವಾದ ಆಲಿಂಗನದಲ್ಲಿ ಅಂಗೀಕರಿಸುವ ಅಹಿಂಸೆ ಇರಬೇಕು. ಇಂತಹ ಮನೋಭಾವವನ್ನು ಬೆಳೆಸಿಕೊಳ್ಳುವುದು ಸಾಧ್ಯವಿಲ್ಲ. ಶಾಂತಿಯ ಕಾಲದಲ್ಲಿ ಮಾಡುವ ಸಹನಾಯುಕ್ತವಾದ ದೀರ್ಘ ಪ್ರಯತ್ನದಿಂದ ಇದು ತಾನಾಗಿಯೇ ಬರುತ್ತದೆ. ಭವಿಷ್ಯ ಶಾಂತಿದಳದ ಸದಸ್ಯ, ಸಮಾಜದ ಗೂಂಡಾಗಳೆನ್ನಿಸಿಕೊಳ್ಳುವವರ ನಿಕಟಸಂಪರ್ಕಹೊಂದಿ ಅವರ ಸ್ನೇಹವನ್ನು ಬೆಳೆಸಿಕೊಳ್ಳಬೇಕು. ಅವನು ಎಲ್ಲರನ್ನೂ ಅರಿಯಬೇಕು. ಎಲ್ಲರಿಗೂ ಪರಿಚಿತನಾಗಿರಬೇಕು. ತನ್ನ ನಿಸ್ವಾರ್ಥ ಸೇವೆಯಿಂದ ಎಲ್ಲರ ಹೃದಯವನ್ನೂ ಆಕರ್ಷಿಸಬೇಕು. ಸಮಾಜದ ಯಾವ ಭಾಗವನ್ನೂ ಅವನು ತುಚ್ಛ ಅಥವಾ ತಿರಸ್ಕಾರದಿಂದ ಕಂಡು ಅದರೊಡನೆ ಮಿಳನವಾಗದಿರಬಾರದು. ಗೂಂಡಾಗಳು ದೆವ್ವಗಳಂತೆ ಅಂತರಿಕ್ಷದಿಂದ ಬೀಳುವುದಿಲ್ಲ; ಭೂಮಿಯಿಂದಲೂ ಹುಟ್ಟಿಬರುವುದಿಲ್ಲ. ಅವರು ಸಮಾಜದ ಅವ್ಯವಸ್ಥೆಯ ಫಲಗಳು. ಆದುದರಿಂದ ಅದಕ್ಕೆ ಸಮಾಜವೇ ಹೊಣೆ. ಬೇರೆ ಮಾತಿನಲ್ಲಿ ಅವರನ್ನು ನಮ್ಮ ರಾಜಕೀಯ ದೇಹದ ಅಶುದ್ಧಿಯ ಗುರುತೆಂದು ಕಾಣಬೇಕು. ರೋಗವನ್ನು ಇಲ್ಲದಂತೆ ಮಾಡಲು, ತಳದಲ್ಲಿ ಹುದುಗಿರುವ ಕಾರಣವನ್ನು ಮೊದಲು ಕಂಡುಹಿಡಿಯಬೇಕು. ಪರಿಹಾರವನ್ನು ಕಂಡುಹಿಡಿಯುವುದು ಅನಂತರ ತಕ್ಕಷ್ಟು ಸುಲಭವಾಗುವುದು. ಇಲ್ಲಿಯವರೆಗೆ ನಾವು ಸರಿಯಾಗಿ ಪ್ರಾರಂಭ ಸಹ ಮಾಡಿಲ್ಲ. ಆದರೆ ತಿದ್ದಿಕೊಳ್ಳಲು ಕಾಲ ಎಂದೂ ಮೀರಿಲ್ಲ. ಇದು ಆವಶ್ಯಕ ಎಂದು ನಾವು ಎಚ್ಚೆತ್ತಿರುವುದೇ ಸಾಕು. ಈಗ ಒಡನೆಯೇ ಕಾರ್ಯತತ್ಪರರಾಗಬೇಕು. ಆಸಕ್ತಿಯಿರುವವರೆಲ್ಲ ತಮ್ಮ ನೆರೆಹೊರೆಯಲ್ಲಿ ಕೂಡಲೇ ಈ ಕಾರ‍್ಯವನ್ನು ಪ್ರಾರಂಭಮಾಡಲಿ. ನಾವು ಸರಿಯಾದ ಮನೋಭಾವದಿಂದ ಮುಂದುವರಿದರೆ ಪತ್ರವ್ಯವಹಾರಿ ಹೇಳುವ ಕಷ್ಟ ಸ್ವಾಭಾವಿಕವಾಗಿ ತಾನಾಗಿಯೇ ಪರಿಹಾರವಾಗುತ್ತದೆ.

(ಹರಿಜನ, ೧೫–೯–೧೯೪೦)

## ಒಂದು ದುಃಖಕರ ಪ್ರಸಂಗ

ಸರ್ದಾರ್ ವಲ್ಲಭಭಾಯಿಯವರು ಆ ದಿನ ಸೇವಾಗ್ರಾಮದಿಂದ ಹೊರಡುತ್ತಿರುವಾಗ ಖೇಡ ಜಿಲ್ಲೆಯ ಒಂದು ಮನೆಯಲ್ಲಿ ನಡೆದ ಡಕಾಯಿತಿಯನ್ನು

ಕುರಿತು ಹೇಳಿದರು. ಶಸ್ತ್ರಸಜ್ಜಿತರಾದ ಡಕಾಯಿತರು ಮನೆಗೆ ನುಗ್ಗಿ ಮನೆಯವರನ್ನು ಬಡಿದು ಲೂಟಿಯೊಡನೆ ಓಡಿಬಿಟ್ಟರು. ಕಥೆ ಹೃದಯವಿದ್ರಾವಕವಾಗಿತ್ತು. ಅದೇ ಬಗೆಯ ಪರಿಸ್ಥಿತಿಯಲ್ಲಿ ನಾನು ಏನು ಮಾಡಬೇಕು ಎಂಬ ಯೋಚನೆ ನನ್ನಲ್ಲಿ ಬಂದಿತು. ಅಲ್ಲಿಂದ ಡಕಾಯಿತಿಯಿಂದ ಹೊರಟ ಆಲೋಚನಾತರಂಗ ನನ್ನ ಮನಸ್ಸನ್ನು ಹಿಡಿದಿದೆ. ಕಾಂಗ್ರೆಸ್ ಇಪ್ಪತ್ತು ವರುಷಗಳಿಂದ ಒಂದೇ ಸಮನೆ ಅಹಿಂಸಾತತ್ತ್ವಕ್ಕಾಗಿ ಕೆಲಸಮಾಡುತ್ತಿದೆ. ಗುಜರಾತ ಪ್ರಾಂತ್ಯಕ್ಕೆ ಸರ್ದಾರ್ ಪಟೇಲರಂತಹ ಸತ್ತ್ವಶಾಲಿಗಳ ನಾಯಕತ್ವದ ಸಹಾಯ ಸಹ ದೊರಕಿದೆ. ಆದರೂ ಡಕಾಯಿತಿಗಳು ಧೈರ್ಯದಿಂದ ನಡೆಯುತ್ತವೆ. ಹಾಗಾದಮೇಲೆ ಕಾಂಗ್ರೆಸ್ಸಿನ ಪ್ರಭಾವ ಜನರಲ್ಲಿ ಎಷ್ಟು ಆಳವಾಗಿ ಪರಿಣಾಮಕಾರಿಯಾಗಿರಬಹುದು? ಈ ದಿನ ಬ್ರಿಟಿಷ್ ಸರ್ಕಾರ ನಿಂತುಹೋದರೆ ಅಹಿಂಸೆಯ ಕಾಂಗ್ರೆಸ್ಸಿಗರು ಸ್ವಾಭಾವಿಕವಾಗಿ ಅವರ ಸ್ಥಳಕ್ಕೆ ಬರುವರೆಂದು ಜನ ಭಾವಿಸುತ್ತಾರೆ. ಆದರೆ ಹಾಗೆ ಇಲ್ಲ. ಈ ಗುರಿಯ ಕಡೆಗೆ ನಾನು ಕಳೆದ ಇಪ್ಪತ್ತು ವರುಷಗಳಿಂದ ಕೆಲಸ ಮಾಡುತ್ತಿದೇನೆ. ಆದರೆ ನನ್ನ ಕನಸು ನನಸಾಗಿಲ್ಲ. ಯಾಕೆಂದರೆ ೧೯೨೦ರಿಂದ ತಾನು ಅನುರಿಸಿರುವ ಮಾರ್ಗದಲ್ಲಿ ಕಾಂಗ್ರೆಸ್ಸಿಗೆ ಸಜೀವವಾದ ನಂಬಿಕೆಯಿಲ್ಲ. ಆದುದರಿಂದ ಕಾಂಗ್ರೆಸ್ಸಿನ ಅಹಿಂಸೆ ನಿಜವಾಗಿ ಅಶಕ್ತರ ಅಹಿಂಸೆಯಾಗಿದೆ. ಆದರೆ ಸರ್ಕಾರವನ್ನು ಶಕ್ತರು ಮಾತ್ರ ನಡೆಸಬಲ್ಲರು. ಅಹಿಂಸೆಯು ಜಗತ್ತಿನಲ್ಲಿ ಅತ್ಯಂತ ಶಕ್ತವಾದ ಅಸ್ತ್ರ ಎಂಬ ನಂಬಿಕೆಯುಳ್ಳವರಿಂದ ಮಾತ್ರ ಅಹಿಂಸೆಯ ಸರ್ಕಾರವನ್ನು ನಡೆಸುವುದು ಸಾಧ್ಯ. ನಮಗೆ ಈ ಶಕ್ತಿ ಇದ್ದಿದ್ದರೆ ಹಿಂದೂ-ಮುಸ್ಲಿಮ್ ದಂಗೆ ಆಗುತ್ತಿರಲಿಲ್ಲ. ಕಳ್ಳರೂ ಡಕಾಯಿತರೂ ಇರುತ್ತಿರಲಿಲ್ಲ. ಇಂತಹ ಶಕ್ತಿಸಂಪಾದನೆಗೆ ಒಬ್ಬ ಏಸು ಅಥವಾ ಬುದ್ಧ ಆವಶ್ಯಕವೆಂದು ಕೆಲವರು ಹೇಳಬಹುದು. ಆದರೆ ವಿಷಯ ಹಾಗಲ್ಲ. ಏಸುವಾಗಲೀ ಬುದ್ಧನಾಗಲೀ ರಾಜಕೀಯ ಕ್ಷೇತ್ರದಲ್ಲಿ ಅಹಿಂಸೆಯನ್ನು ಪ್ರಯೋಗಿಸಲಿಲ್ಲ ಅಥವಾ ಅವರ ಕಾಲದಲ್ಲಿ ಇಂದಿನ ಮಾದರಿಯ ರಾಜಕೀಯ ಇರಲಿಲ್ಲವೆಂದು ಹೇಳಿದರೆ ಹೆಚ್ಚು ಸತ್ಯವಾಗುತ್ತದೆ. ಆದುದರಿಂದ ಕಾಂಗ್ರೆಸ್ಸಿನ ಪ್ರಯೋಗ ಹೊಸ ಪ್ರಯೋಗ. ದುಃಖದ ಸಮಾಚಾರವೆಂದರೆ, ಕಾಂಗ್ರೆಸ್ಸಿಗರು ಇದನ್ನು ಪೂರ್ಣ ನಿಷ್ಠೆ, ಪೂರ್ಣ ಜ್ಞಾನ ಮತ್ತು ಪೂರ್ಣ ಶ್ರದ್ಧೆಯಿಂದ ಪ್ರಯೋಗಿಸಿಲ್ಲ. ಈ ಮೂರು ಆವಶ್ಯಕ ಗುಣಗಳು ಅವರಲ್ಲಿದ್ದಿದ್ದರೆ ಇಂದು

ಕಾಂಗ್ರೆಸ್ ಇನ್ನೂ ಬಹಳ ಘನತೆಗೇರಿರುತ್ತಿತ್ತು. ಆದರೆ ಉಕ್ಕಿಹೋದ ಹಾಲಿಗಾಗಿ ನಾನು ಅಳುವುದು ಬೇಡ. ಮುಂದಿನ ಮಾರ್ಗದರ್ಶನಕ್ಕಾಗಿ ಹಿಂದಿನದನ್ನು ಕುರಿತು ಹೇಳಿದೆ. ನಾವು ಈಗ ಎಚ್ಚೆತ್ತರೂ ಆಟ ನಮ್ಮದು; ಎಚ್ಚರಗೊಳ್ಳದಿದ್ದರೆ ನಿಶ್ಚಯವಾಗಿ ನಾವು ಕಳೆದುಕೊಳ್ಳುತ್ತೇವೆ. ಅಧಿಕಾರ ಅನಿವಾರ್ಯವಾಗಿ ಧೀರರ ಕೈಸೇರಲು ಬಯಸುತ್ತದೆ. ಆ ಧೀರತ್ವ, ದೈಹಿಕ ವಾದುದಿರಬಹುದು, ಹೃದಯದ್ದಾಗಿರಬಹುದು. ಅಧಿಕಾರ ಅಥವಾ ಆತ್ಮ ಎಂಬ ಮಾತನ್ನು ಹೇಳಲು ನಮಗೆ ಸಂಕೋಚವಿಲ್ಲದಿದ್ದರೆ—ಆತ್ಮದ್ದಾಗ ಬಹುದು. ಹೃದಯದ ಬಲ ಆತ್ಮಬಲವನ್ನು ಸೂಚಿಸುತ್ತದೆ. ಇಂದು ನಾವು ಆಯುಧಗಳ ಶಕ್ತಿಯಿಂದ ಅಧಿಕಾರವನ್ನು ಹೊಂದಲು ಪ್ರಯತ್ನಿಸ ಬೇಕೆಂದು ನಿರ್ಣಯಿಸಿದರೆ ಇದುವರೆಗೆ ಜನತೆಯಲ್ಲಿ ಇಪ್ಪತ್ತು ವರುಷಗಳಿಂದ ನಾವು ಮಾಡಿದ ಕಾರ್ಯವನ್ನೆಲ್ಲ ಕಿತ್ತುಹಾಕಬೇಕು. ಜನರಿಗೆ ಇದುವರೆಗಿನ ದಕ್ಕಿಂತ ವಿರೋಧವಾದ ತರಪೇತು ಕೊಡಲು ನಾವು ತಕ್ಕಷ್ಟು ಕಾಲ ಕಳೆಯ ಬೇಕಾಗುತ್ತದೆ. ಈ ಸಂದಿಗ್ಧ ಸಮಯದಲ್ಲಿ ಅದಕ್ಕೆ ಕಾಲ ಕಳೆಯಲು ನಮಗೆ ಸಾಧ್ಯವಿಲ್ಲ. ಇಂದು ಯಾರಲ್ಲಿ ಯಾವ ಬಗೆಯ ಶಕ್ತಿಯಿದ್ದರೂ, ಅವರು ಅದನ್ನು ಅಧಿಕಾರವನ್ನು ಆಕ್ರಮಿಸಲು ಉಪಯೋಗಿಸುವರೆಂಬುದು ನಿಶ್ಚಯ. ಕಾಂಗ್ರೆಸ್ಸಿಗರಿಗೆ ಅಧಿಕಾರ ಬರಬೇಕಾದರೆ ಅದು ಅಹಿಂಸೆ ಅಥವಾ ಆತ್ಮಶಕ್ತಿ ಯಿಂದ ಮಾತ್ರ ಎಂಬುದು ನನ್ನ ದೃಢವಾದ ನಂಬಿಕೆ.

ಈ ಮಾರ್ಗದಲ್ಲಿಯೇ ಹೊಸ ಕಾರ್ಯ ಮಾಡಲು ನಮಗೆ ಕಾಲವೂ ಸಾಮಗ್ರಿಗಳೂ ಇಲ್ಲ. ಇಲ್ಲಿಯವರೆಗೆ ನಾವು ಅಹಿಂಸೆಯನ್ನು ದುರ್ಬಲರ ಆಯುಧವಾಗಿ ಉಪಯೋಗಿಸಿರುವಾಗ ಇದ್ದಕ್ಕಿದ್ದಂತೆ ಅದನ್ನು ಶಕ್ತರ ಆಯುಧ ವಾಗಿ ಪರಿವರ್ತಿಸಬೇಕೆಂದು ನಿರೀಕ್ಷಿಸುವುದು ಹೇಗೆ ಸಾಧ್ಯ? ಆದರೂ ಸಹ ಈ ಪ್ರಕೃತ ಸಂದರ್ಭದಲ್ಲಿ ನಮಗೆ ಈ ಪ್ರಯೋಗವೇ ಸಾಧ್ಯವಾದುದು ಮತ್ತು ನ್ಯಾಯ ಎಂದು ನಾನು ಭಾವಿಸುತ್ತೇನೆ. ಇದರಲ್ಲಿ ಯಾವ ಗಂಡಾಂತರವೂ ಅಡಗಿಲ್ಲ. ಇದರಲ್ಲಿ ಅಪಜಯ ಸಹ ಜಯದ ಆಕೃತಿಯನ್ನು ಹೊಂದುತ್ತದೆ. ಪೂರ್ಣ ಮಾರ್ಗಕ್ರಮಣಕ್ಕೆ ಜನರನ್ನು ಈ ಪ್ರಯೋಗದಲ್ಲಿ ಕೊಂಡುಹೋಗಲು ಸಾಧ್ಯವಿಲ್ಲದಿದ್ದರೂ ಅವರನ್ನು ಗುಂಡಿಗೆ ಕೆಡವಲು ಸಾಧ್ಯವಿಲ್ಲ. ದೇಹಬಲದ ಮಾರ್ಗವನ್ನು ಅನುಸರಿಸುವುದರಿಂದ ಅವರು ಹೇಡಿಗಳೆಂದು ರುಜುವಾತಾಗ

ಬಹುದು. ಜತೆಗೆ ಪರಿಚಯವಿಲ್ಲದ ಮಾರ್ಗವನ್ನು ಅನುಸರಿಸುವ ಪ್ರಯತ್ನದಲ್ಲಿ ಸಾವಿರಾರು ಜನ ನಾಶವಾಗಬಹುದು.

ಆದುದರಿಂದ ಡಕಾಯಿತರನ್ನೂ ಕಳ್ಳರನ್ನೂ ಹುಡುಕಿಕೊಂಡು ಹೋಗುವುದು ಕಾಂಗ್ರೆಸ್ಸಿಗರ ಕರ್ತವ್ಯ. ಅವರು ಡಕಾಯಿತರ ಮತ್ತು ಕಳ್ಳರ ಮನಸ್ಸನ್ನು ಅರಿತು ಅವರನ್ನು ಪರಿವರ್ತಿಸಲು ಪ್ರಯತ್ನಿಸಬೇಕು. ಇಂತಹ ಕೆಲಸಗಾರರು ಸುಲಭವಾಗಿ ದೊರೆಯುವುದಿಲ್ಲ. ಆದರೆ ಕಾಂಗ್ರೆಸ್ಸಿಗರು ಈ ಕಾರ್ಯದಲ್ಲಿ ಅಪಾಯವಿರುವಂತೆ ಇದು ಆವಶ್ಯಕವೂ ಸಹ ಎಂಬುದನ್ನು ತಿಳಿಯಬೇಕು. ಅವರ ಪೈಕಿ ಕೆಲವರು ಇದಕ್ಕೆ ಮೀಸಲಾಗಬೇಕು.

ಎರಡನೆಯದು—ನಾವು ಕಠಿಣ ಪರಿಸ್ಥಿತಿಗಳಲ್ಲಿ ಡಕಾಯಿತರನ್ನು ಎದುರಿಸುವಂತಹವರನ್ನು, ಡಕಾಯಿತರನ್ನು ತಡೆದು ಅವರ ಮನಸ್ಸನ್ನು ದುರ್ಮಾರ್ಗದಿಂದ ಪರಿವರ್ತಿಸುವವರನ್ನು, ಹಾಗೆ ಮಾಡುವಾಗ ಕಷ್ಟವನ್ನೂ ಕೊನೆಗೆ ಸಾವನ್ನೂ ಅಂಗೀಕರಿಸಲು ಸಿದ್ಧರಾಗಿರುವವರನ್ನು, ತಯಾರಿಸಬೇಕು. ಪ್ರಾಯಶಃ ಈ ಕಾರ್ಯಕ್ಕೆ ಬಹು ಕಡಮೆ ಸಂಖ್ಯೆಯ ಕೆಲಸಗಾರರು ಮುಂದೆ ಬರಬಹುದು. ಆದರೆ ದೇಶದಲ್ಲೆಲ್ಲ ಶಾಂತಿದಳಗಳು ತೀರ ಆವಶ್ಯಕ. ಇಲ್ಲದಿದ್ದರೆ ಅನಾಯಕತ್ವದ ಕಾಲದಲ್ಲಿ ಕಾಂಗ್ರೆಸ್ಸಿನವರು ಇಲ್ಲಿಯವರೆಗೆ ತಾವು ಸಂಪಾದಿಸಿಕೊಂಡಿರುವ ಒಳ್ಳೆಯ ಹೆಸರನ್ನು ಕಳೆದುಕೊಳ್ಳುತ್ತಾರೆ.

ಮೂರನೆಯದಾಗಿ, ಇಂದು ತಮ್ಮ ಕರ್ತವ್ಯವೇನೆಂಬುದನ್ನು ಧನಿಕರು ಚೆನ್ನಾಗಿ ಆಲೋಚಿಸಬೇಕು. ತಮ್ಮ ಐಶ್ವರ್ಯವನ್ನು ಕಾಯಲು ಕೂಲಿ ಕೊಟ್ಟು ರಕ್ಷಕರನ್ನು ನಿಯಮಿಸುವವರು, ಆ ರಕ್ಷಕರೇ ತಮಗೆ ವಿರೋಧಿಗಳಾಗುವುದನ್ನು ಕಾಣಬೇಕಾದೀತು. ಧನಿಕರು ಶಸ್ತ್ರದಿಂದ ಅಥವಾ ಅಹಿಂಸೆಯಿಂದ ಕಾದುವುದನ್ನು ಕಲಿಯಬೇಕಾಗುತ್ತದೆ. ಅಹಿಂಸೆಯ ಮಾರ್ಗವನ್ನು ಅನುಸರಿಸುವವರಿಗೆ ಉತ್ತಮವಾದ ಪರಿಣಾಮಕಾರಿಯಾದ ಮಂತ್ರ ಇದು : 'ತೇನ ತ್ಯಕ್ತೇನ ಭುಂಜೀಥಾಃ' (ತ್ಯಾಗಮಾಡುವುದರಿಂದ ಐಶ್ವರ್ಯವನ್ನು ಅನುಭವಿಸು.) ವಿಸ್ತಾರವಾಗಿ ಅದರ ಅರ್ಥ ಇಷ್ಟು : ಧಾರಾಳವಾಗಿ ಕೋಟ್ಯಂತರ ಸಂಪಾದಿಸು. ಆದರೆ ನಿನ್ನ ಐಶ್ವರ್ಯ ನಿನ್ನದಲ್ಲ ಎಂಬುದು ತಿಳಿದಿರಲಿ. ಅದು ಜನತೆಗೆ ಸೇರಿದುದು. ನಿನ್ನ ನ್ಯಾಯವಾದ ಆವಶ್ಯಕತೆಗೆ ಬೇಕಾದಷ್ಟನ್ನು ತೆಗೆದುಕೊ. ಮತ್ತು ಉಳಿದುದನ್ನು ಸಮಾಜಕ್ಕಾಗಿ ವಿನಿಯೋಗಿಸು. ಇಲ್ಲಿಯವರೆಗೆ ಈ

ಸತ್ಯದಂತೆ ನಡೆದಿಲ್ಲ. ಆದರೆ ಧನಿಕರು ಇಂತಹ ಕಷ್ಟಕಾಲದಲ್ಲಿ ಸಹ ಹಾಗೆ ಮಾಡದೆ ಇದ್ದರೆ ಅವರು ತಮ್ಮ ಆಸೆ ಮತ್ತು ಐಶ್ವರ್ಯಗಳ ಗುಲಾಮರಾಗುವರು; ಮತ್ತು ತಮ್ಮನ್ನು ಜಯಿಸುವವರ ಗುಲಾಮರಾಗುವರು.

ಆದರೆ ಈ ಯುದ್ಧದ ಅಂತ್ಯ ಬಂಡವಾಳದ ಆಧಿಪತ್ಯದ ಅಂತ್ಯ ಎಂಬುದು ನನ್ನ ದರ್ಶನ. ಬಡವರ ಆಳ್ವಿಕೆಯ ಕಾಲ ಬರುತ್ತಿರುವುದು ನನಗೆ ಕಾಣುತ್ತಿದೆ. ಆ ಆಳ್ವಿಕೆ ಶಸ್ತ್ರಬಲದ್ದಾಗಿರಬಹುದು ಅಥವಾ ಅಹಿಂಸೆಯದಾಗಿರಬಹುದು. ದೈಹಿಕಬಲ, ದೇಹದಂತೆ ಕ್ಷಣಿಕ ಎಂಬುದು ನೆನಪಿರಲಿ. ಆದರೆ ಆತ್ಮಬಲ ಶಾಶ್ವತ; ಆತ್ಮ ಹೇಗೆ ಎಂದಿಗೂ ಇರುವುದೋ ಹಾಗೆ. (ಹರಿಜನ, ೧–೨–೧೯೪೨)

## ಅದರ ಪರೀಕ್ಷೆ

'ನಾನು ಒಂದು ಅರ್ಥದಲ್ಲಿ ಇನ್ನೂ ಶಾಂತಿವಾದಿಯೇ. ಅಂದರೆ ಕ್ರೈಸ್ತರು ಭೌತಶಕ್ತಿಯನ್ನು ಆತ್ಮಶಕ್ತಿಯಿಂದ ಎದುರಿಸಬೇಕೆಂದು ನಾನು ಒಪ್ಪುತ್ತೇನೆ. ಈ ಹತ್ತೊಂಬತ್ತುನೂರು ವರುಷಗಳನಂತರವೂ—ವ್ಯಕ್ತಿಗಳು ಸಣ್ಣ ಪ್ರಮಾಣ ದಲ್ಲಿ ಹೊರತು—ನಾವು ಹಾಗೆ ಮಾಡಲು ಸಾಧ್ಯವಾಗಿಲ್ಲ ಎಂಬುದು ಭೀಕರ ವಾದುದು. ಯಾವುದಕ್ಕಾಗಿ ನಾವು ಈವರೆಗೆ ತಯಾರಿಯನ್ನೂ ತಪಸ್ಸನ್ನೂ ಮಾಡಿಕೊಳ್ಳಲಿಲ್ಲವೋ ಅಂತಹ ನಮ್ಮಲ್ಲಿ ಇಲ್ಲದಿರುವ ಶಕ್ತಿ ಇದೆ ಎಂಬಂತೆ ನಾವು ನಡೆಯುವುದು ಬರಿಯ ಶುಭವಾಗಲೆಂಬ ಆಸೆ ಮಾತ್ರ. ಅಂತಹ ಶಕ್ತಿ, ಸಾಧನೆ ಮಾಡದೆ ಇರುವವರಿಗೆ ಆವಶ್ಯಕವಾದಾಗ ಕೊನೆಯ ಗಳಿಗೆಯಲ್ಲಿ ಬರುವುದಿಲ್ಲ. ಅದು ನಮಗೆ ಬಂದಿಲ್ಲ. ಆದುದರಿಂದ (ಸುಮ್ಮನೆ ನೋಡುತ್ತಾ ನಿಂತಿರುವುದಕ್ಕಿಂತ) ಮನುಷ್ಯಸಮಾಜದ ಭವಿಷ್ಯಕ್ಕೆ ಅತಿಮುಖ್ಯವಾದುದು ಎಂದೂ ನ್ಯಾಯವಾದುದೆಂದೂ ನಾನು ನಂಬಿರುವ ತತ್ತ್ವಗಳ ರಕ್ಷಣೆಗಾಗಿ, ನನ್ನ ಕೈಯಲ್ಲಾದುದನ್ನು ಮಾಡಬಯಸುತ್ತೇನೆ. ಏನನ್ನೂ ಮಾಡದೆ ಸುಮ್ಮನೆ ಇರುವುದು ಬಹಳ ಕೆಟ್ಟ ನಡವಳಿಕೆ.

'ಆದುದರಿಂದ ನನ್ನ ಶಾಂತಿವಾದಿ ಮಿತ್ರರು, 'ಏಸು ಒಂದು ಬಾಂಬನ್ನು ಹಾಕುವುದನ್ನೂ ಒಂದು ಬಂದೂಕು ಹೊಡೆಯುವುದನ್ನೂ ನೀವು ಊಹಿಸ ಬಲ್ಲಿರಾ?' ಎಂದು ಕೇಳುವಾಗ, 'ಇಲ್ಲ, ಊಹಿಸಲಾರೆ. ಆದರೆ ಆತ ಏನನ್ನೂ

ಮಾಡದೆ ಸುಮ್ಮನೆ ನೋಡುತ್ತಾ ನಿಂತಿರುತ್ತಾನೆಂದೂ ಊಹಿಸಲಾರೆ ' ಎಂದು ಪ್ರತ್ಯುತ್ತರ ಕೊಡಲು ನನಗೆ ಹಕ್ಕು ಇದೆ.

' ಯಾವ ಶಾಂತಿವಾದಿಯಷ್ಟೇ ಯುದ್ಧವಿರೋಧಿಯಾದ (ಮತ್ತು ಕಳೆದ ಯುದ್ಧದಲ್ಲಿ ಪ್ರಾಣ ಕಳೆದುಕೊಂಡ) ನನ್ನ ಬಹು ಪ್ರಿಯ ಮಿತ್ರರೊಬ್ಬರು ಹೇಳಿದ ಮಾತುಗಳನ್ನು ಅನಿವಾರ್ಯವಾಗಿ ನಾನು ಪ್ರತಿಧ್ವನಿಸಬೇಕಾಗಿದೆ. ಅವರು ಹೇಳಿದ್ದು ಹೀಗೆ : ' ಆತ್ಮಶಕ್ತಿಯಿಂದ ಯುದ್ಧವನ್ನು ನಿಲ್ಲಿಸುವುದಕ್ಕಾದರೆ ಹಾಗೆ ಮಾಡಿ. ನಿಮಗೆ ಆಗದಿದ್ದರೆ ನನ್ನ ಕೈಯಲ್ಲಾದುದನ್ನು ಮಾಡಲು ನನ್ನನ್ನು ಬಿಟ್ಟುಬಿಡಿ. ಯುದ್ಧ ವಿನಾಶ; ಅದರಲ್ಲಿ ಭಾಗವಹಿಸುವವರೆಲ್ಲ ನಾಶ ಆಗುತ್ತಾರೆ ಎಂದು ನೀವು ಯೋಚಿಸುವುದು ಸರಿಯಾದರೆ ಆಗ ನಾನು ನಾಶ ಹೊಂದಿದರೂ ಚಿಂತೆಯಿಲ್ಲ; ನಡೆಯುತ್ತಿರುವುದನ್ನು ಸರ್ವಪ್ರಯತ್ನದಿಂದಲೂ —ನನ್ನ ಪ್ರಾಣವನ್ನು ಕೊಟ್ಟು ಕೂಡ ತಪ್ಪಿಸುವೆನು.'

' ಏಸು ಹೇಳಿದ : ' ತನ್ನ ಜೀವವನ್ನು ಕಳೆದುಕೊಳ್ಳುವವನು ಅದನ್ನು ಉಳಿಸಿಕೊಳ್ಳುತ್ತಾನೆ ' ಎಂಬುದರ ಅರ್ಥಕ್ಕೆ ಇದು ಅತಿ ಸಮೀಪವಾದುದಲ್ಲವೆ ?'

ಲಂಡನ್ನಿನ ಗಿಲ್ಡ್‌ಹೌಸ್‌ನ ಪ್ರಸಿದ್ಧ ಡಾಕ್ಟರ್ ಮಾಡ್ ರಾಯ್‌ಡನ್ ಎಂಬಾಕೆ, ೧೯೪೧ನೇ ಡಿಸೆಂಬರಿನ ' ಸರ್ವೆ ಗ್ರಾಫಿಕ್ ' ಎಂಬ ಪತ್ರಿಕೆಗೆ ಬರೆದ ಹೃದಯಸ್ಪರ್ಶಿ ಮತ್ತು ದುಃಖಪೂರಿತ ಲೇಖನದ ಕೊನೆಯ ಭಾಗ ಮೇಲಿನದು. ಆಕೆ ಪಶ್ಚಿಮ ದೇಶದ ಅತ್ಯಂತ ಪ್ರಮುಖ ಶಾಂತಿವಾದಿಗಳ ಪೈಕಿ ಒಬ್ಬಳು. ಇತರ ಅನೇಕರಂತೆ, ತನ್ನ ನಿಲುವನ್ನು ಪುನರ್ವಿಮರ್ಶಿಸಿಕೊಳ್ಳಬೇಕೆಂದು ಅನಿವಾರ್ಯವಾಗಿ ಆಕೆಗೆ ತೋರಿ, ಮನಸ್ಸಿಲ್ಲದಿದ್ದರೂ ಬ್ರಿಟಿಷ್ ದ್ವೀಪದ ರಕ್ಷಕರೊಂದಿಗೆ ಪೂರ್ಣ ಹೆಗಲುಕೊಟ್ಟು ನಿಂತಿದಾಳೆ.

' ಲೇಖನಕ್ಕೆ, ಚೆನ್ನಾಗಿ ಪರ್ಯಾಲೋಚಿಸಿದ ಉತ್ತರ ಆವಶ್ಯಕ. ಪಾಶ್ಚಾತ್ಯ ಶಾಂತಿವಾದಿಗಳೊಂದಿಗೆ ನನಗೆ ಸತತವಾದ ಸಂಪರ್ಕವಿದೆ. ನನ್ನ ಅಭಿಪ್ರಾಯ ದಲ್ಲಿ, ಡಾಕ್ಟರ್ ರಾಯ್‌ಡನ್‌ರು ನಾನು ಉದ್ಧರಿಸಿರುವ ಅವರ ಲೇಖನದ ಭಾಗದಲ್ಲಿ ತಮ್ಮ ನಿಲುವನ್ನೇ ಬಿಟ್ಟುಕೊಟ್ಟಿದಾರೆ. ವ್ಯಕ್ತಿಗಳು ಏಸುವಿನ ಬೋಧನೆಗಳಿಗೆ ಅನುಸಾರವಾಗಿ ನಡೆದಿದ್ದರೆ (ಅಹಿಂಸಾಮಾರ್ಗದಿಂದ) ಅಭ್ಯಾಸ ದಿಂದ ಇನ್ನೂ ಅನೇಕರಿಗೆ ದೊಡ್ಡ ಪ್ರಮಾಣದಲ್ಲಿ ಆ ಬಗೆಯ ಬಾಳನ್ನು ಬಾಳಲು ಸಾಧ್ಯವಾಗುತ್ತಿತ್ತು. ' ತನ್ನಲ್ಲಿ ಇಲ್ಲದ ಶಕ್ತಿ ತನಗೆ ಇದೆಯೆಂಬಂತೆ ' ನಡೆಯು

ವುದು ನಿಜವಾಗಿ ಮೂರ್ಖತನ. ಈ ಮಾನ್ಯ ಲೇಖಿಕೆ ಹೇಳುತ್ತಾಳೆ: 'ಅಂತಹ ಶಕ್ತಿ-ನಿಷ್ಠೆ-ನಿಯಮ-ಶಿಸ್ತು ಇಲ್ಲದವರಿಗೆ, ಆವಶ್ಯಕವಾದ ವೇಳೆಯಲ್ಲಿ ಕೊನೆಯ ಗಳಿಗೆಯಲ್ಲಿ ಬರುವುದಿಲ್ಲ' ಎಂದು.

'ದೋಷ ಗೊತ್ತಾಗಿರುವುದರಿಂದ ದೋಷವನ್ನು ನಿವಾರಿಸುವುದರಲ್ಲಿ ಕಾಲಹರಣವಾಗಕೂಡದೆಂದು ನಾನು ಸೂಚಿಸುತ್ತೇನೆ. ಅದು ಏನನ್ನಾದರೂ ಮಾಡಿದಂತೆ ಆಗುವುದಿಲ್ಲ. ಸರಿಯಾದ ಕಾರ್ಯವನ್ನೇ ಮಾಡಿದಂತೆ ಆಗುವುದು. ವಿರೋಧವಾದ ಅಭ್ಯಾಸದಿಂದ ತನ್ನ ನಂಬಿಕೆಯನ್ನು ನಿರಾಕರಿಸುವುದು ಬಹು ಕೆಟ್ಟ ಕಾರ್ಯ.

'ಏನನ್ನೂ ಮಾಡದೆ ಇರುವುದು ಬಹಳ ಕೆಟ್ಟ ನಡವಳಿಕೆ' ಎಂಬುದನ್ನು ನಾನು ಪೂರ್ಣ ಒಪ್ಪುವುದಿಲ್ಲ. ಉದಾಹರಣೆಗೆ, ಕೊಳೆತ (ಸೆಪ್ಟಿಕ್) ಗಾಯದ ಉಪಚಾರದಲ್ಲಿ ಏನೂ ಮಾಡದಿರುವುದೇ ಕರ್ತವ್ಯ. ಅಷ್ಟೇ ಅಲ್ಲ, ಆವಶ್ಯಕ ನಿರ್ಬಂಧ.

'ನಿರಾಶೆಗೆ ಕಾರಣವಿಲ್ಲ. ಸಂದಿಗ್ಧ ಸಮಯದಲ್ಲಿ ತನ್ನ ನಂಬಿಕೆಯನ್ನು ನಿರಾಕರಿಸುವುದಕ್ಕೂ ಕಾರಣವಿಲ್ಲ. ಬ್ರಿಟಿಷ್ ಶಾಂತಿವಾದಿಗಳು ಪೃಥಕ್ಕಾಗಿ ನಿಂತು ತಮ್ಮ ಬಾಳನ್ನು ಪೂರ್ಣವಾಗಿ ಯಾಕೆ ಪುನಃ ನಿರ್ಮಿಸಿಕೊಳ್ಳಬಾರದು? ತತ್‌ಕ್ಷಣ ಶಾಂತಿಯನ್ನು ಸ್ಥಾಪಿಸಲು ಅವರಿಗೆ ಸಾಧ್ಯವಾಗುವುದಿಲ್ಲ. ಆದರೆ ಅವರು ಅದರ ಗಟ್ಟಿಯಾದ ತಳಹದಿಯನ್ನು ಹಾಕುವುದಲ್ಲದೆ, ತಮ್ಮ ನಂಬಿಕೆಯ ಸ್ಪಷ್ಟವಾದ ಪರೀಕ್ಷೆಯನ್ನೂ ಕೊಟ್ಟಂತಾಗುವುದು. ನಾವು ನೋಡುತ್ತಿರುವ ಇಂತಹ ಅದ್ಭುತ ಬದಲಾವಣೆಯ ಎದುರಿನಲ್ಲಿ, ಅಚಲ ನಂಬಿಕೆಯ ವ್ಯಕ್ತಿಗಳು ಕೆಲವರೇ ಇರುವಾಗ, ಅವರು ತಮ್ಮ ನಂಬಿಕೆಗೆ ಅನುಗುಣವಾಗಿ ಬಾಳಬೇಕು. ಜಗತ್ತಿನ ನಡವಳಿಕೆಯ ಮೇಲೆ ಅವರಿಂದ ಯಾವ ಸ್ಪಷ್ಟ ಪರಿಣಾಮವೂ ಆಗದಿದ್ದರೂ ಚಿಂತೆಯಿಲ್ಲ. ಕಾಲಾನುಕಾಲಕ್ಕೆ ಅವರ ಕಾರ್ಯದಿಂದ ಸ್ಪಷ್ಟವಾದ ಫಲಗಳಾಗುವುವೆಂದು ಅವರು ನಂಬಬೇಕು. ಅವರ ದೃಢನಿಶ್ಚಯ ಸಂದೇಹವಾದಿಗಳನ್ನು ಖಂಡಿತ ಆಕರ್ಷಿಸುವುದು. ಡಾಕ್ಟರ್ ಮಾಡ್ ರಾಯ್‌ಡನ್‌ರಂತಹ ವ್ಯಕ್ತಿಗಳು ಬರಿಯ ಹಿಂಬಾಲಕರಲ್ಲವೆಂದು ನಾನು ಸೂಚಿಸಬಯಸುತ್ತೇನೆ. ಅವರು ನಾಯಕರು. ಆದುದರಿಂದ ಅವರು ಪರ್ವತಪ್ರವಚನದ ನಿಯಮಗಳನ್ನು ಚಾಚೂ ತಪ್ಪದೆ ತಮ್ಮ ಬಾಳನ್ನು ಬಾಳಬೇಕಾಗಿದೆ. ಆ

ಕೂಡಲೇ ಅವರಿಗೆ—ತಾನು ಬಿಡಬೇಕಾದುದು ಬಹಳ ಇದೆ. ಪುನಃ ರೂಪಿಸಿಕೊಳ್ಳಬೇಕಾದುದು ಬಹಳ ಇದೆ—ಎಂಬುದು ಗೊತ್ತಾಗುವುದು. ಅವರು ನಿರಾಕರಿಸಿಕೊಳ್ಳಬೇಕಾದ ಅತ್ಯಂತ ಮಹತ್ ವಿಷಯವೆಂದರೆ, ಸಾಮ್ರಾಜ್ಯತ್ವದ ಫಲಗಳು. ಲಂಡನ್ ನಗರವಾಸಿಗಳ ಇಂದಿನ ಜಟಿಲ ಜೀವನವೂ, ಮೇಲ್ಮಟ್ಟದ ಬಾಳುವೆಯೂ ಸಾಧ್ಯವಾಗಿರುವುದು ಏಷಿಯ, ಆಫ್ರಿಕ ಮತ್ತು ಜಗತ್ತಿನ ಇತರ ಭಾಗಗಳಿಂದ ಇಂಗ್ಲೆಂಡ್ ತಂದ ಐಶ್ವರ್ಯಗಳಿಂದ. 'ಪ್ರತಿ ಒಬ್ಬ ಬ್ರಿಟಿಷ್ ಪ್ರಜೆಗೂ' ಎಂಬ ನನ್ನ ಲೇಖನಕ್ಕೆ ವಿರೋಧವಾಗಿ ತೀಕ್ಷ್ಣವಾದ ಟೀಕೆಗಳಾಗಿದ್ದರೂ ಅದರ ಪ್ರತಿಯೊಂದು ಮಾತಿಗೂ ನಾನು ಅಂಟಿಕೊಳ್ಳುತ್ತೇನೆ. ಮತ್ತು ಮುಂದಿನ ತಲೆಮಾರಿನವರು—ಹಿಂಸೆಯು ಎಷ್ಟೇ ಭಯಂಕರವೂ ವ್ಯವಸ್ಥಿತವೂ ಆದರೂ—ಅದನ್ನು ಎದುರಿಸಲು ಆ ಲೇಖನದಲ್ಲಿ ನಾನು ಸೂಚಿಸಿರುವ ಪರಿಹಾರಮಾರ್ಗವನ್ನು ಅವಲಂಬಿಸುವರೆಂದು ನನಗೆ ನಂಬಿಕೆಯಾಗಿದೆ. ಈಗ ಶತ್ರು ಭಾರತದ ಬಾಗಿಲಿನಲ್ಲಿರುವಾಗ, ನಮ್ಮ ದೇಶಬಾಂಧವರಿಗೂ ಬ್ರಿಟಿಷ್ ಪ್ರಜೆಗಳಿಗೆ ಕೊಟ್ಟ ಸಲಹೆಯನ್ನೇ ಕೊಡುತ್ತೇನೆ. ನಮ್ಮ ದೇಶದವರು ನನ್ನ ಸಲಹೆಯನ್ನು ಅಂಗೀಕರಿಸಬಹುದು ಅಥವಾ ಬಿಡಬಹುದು. ನಾನು ಅಚಲಿತನಾಗಿರುತ್ತೇನೆ. ಅವರ ಅಸ್ವೀಕಾರ—ಅಹಿಂಸೆಯ ಅಪಜಯದ ಪರೀಕ್ಷೆಯಲ್ಲ. ನಾನು ನಿರ್ದೋಷಿಯಲ್ಲ ಎಂಬುದಕ್ಕೆ ನನ್ನ ಒಪ್ಪಿಗೆ. ಆದರೆ ಸತ್ಯಾಗ್ರಹಿ ತನ್ನೊಂದಿಗೆ ಪ್ರಯೋಗ ಮಾಡಲು ಇತರರನ್ನು ಆಹ್ವಾನಿಸಲು, ನಿರ್ದೋಷನಾಗುವುದಕ್ಕೆ ಕಾಯುವುದಿಲ್ಲ. ಆದರೆ ಅವನ ನಿಷ್ಠೆ ಬೆಟ್ಟದಂತೆ ಅಚಲವಾಗಿರಬೇಕು. ಡಾಕ್ಟರ್ ರಾಯ್‌ಡನ್‌ರ ಬಂಧು ಅವರಿಗೆ ಕೊಟ್ಟ ಮತ್ತು ಅವರು ಒಪ್ಪಿಗೆಯಿಂದ ಉದ್ಧರಿಸುವ ಸಲಹೆ ಪೂರ್ತಿ ತಪ್ಪು. ಯುದ್ಧ ವಿನಾಶಕಾರಕವಾದುದೆಂದಮೇಲೆ ರಕ್ಷಣೆಯ ಪಕ್ಷದಲ್ಲಿಯಾಗಲೀ ಅಥವಾ ತನ್ನ ಜೀವವನ್ನೇ ಕೊಟ್ಟಾಗಲೀ ಆತ ಅದರಲ್ಲಿ ಹೇಗೆ ಭಾಗವಹಿಸಬಲ್ಲ ? ಹಾಗೆ ಜೀವವನ್ನು ಕೊಡುವುದು 'ಜೀವವನ್ನು ಉಳಿಸಿಕೊಳ್ಳು'ವುದಂತೂ ಅಲ್ಲವೇ ಅಲ್ಲ. ಅದು ಬರಿ ವ್ಯರ್ಥ.

'ನಾನು ಡಾಕ್ಟರ್‌ವರ ಚರ್ಚ್‌ನ ಪ್ರಾರ್ಥನೆಯಲ್ಲಿ ಭಾಗವಹಿಸಿದೇನೆ. ಅಲ್ಲಿ ಪ್ರಾರ್ಥನೆಯ ಪರಿಣಾಮ ತುಂಬ ಪ್ರಚಾರದಲ್ಲಿದೆ. ಗಾಢಾಂಧಕಾರ ಅವಳ ಸುತ್ತ ಕವಿದಾಗ ಅವಳು ಬಲವನ್ನೂ ಸಮಾಧಾನವನ್ನೂ ನಿಜವಾದ

ಕಾರ್ಯವನ್ನೂ ಹೃತ್ಪೂರ್ವಕ ಪ್ರಾರ್ಥನೆಯಲ್ಲಿ ಯಾಕೆ ಹೊಂದಲಿಲ್ಲ? ತಿದ್ದಿಕೊಳ್ಳಲು ಕಾಲ ಎಂದೂ ಮೀರಿಹೋಗಿಲ್ಲ. ಆಕೆಯೂ ಆಕೆಯ ಸಹಶಾಂತಿವಾದಿಗಳೂ—ಅವರ ಪೈಕಿ ನನಗೆ ಅನೇಕರು ಗೊತ್ತು—ಧೈರ್ಯಮಾಡಬೇಕು. ಮತ್ತು ಪೀಟರ್‌ನಂತೆ ನಂಬಿಕೆ ಒಂದು ಗಳಿಗೆ ಇಲ್ಲದಂತಾದುದಕ್ಕೆ ಪಶ್ಚಾತ್ತಾಪಪಟ್ಟು, ಇಮ್ಮಡಿ ನವಚೈತನ್ಯದಿಂದ ಅಹಿಂಸೆಗೆ ಹಿಂದಿರುಗಬೇಕು. ಅವರು ಹಿಂದಿರುಗುವುದರಿಂದ ಯುದ್ಧಕಾರ್ಯಕ್ಕೆ ಭೌತನಷ್ಟವೇನೂ ಇಲ್ಲ. ಆದರೆ ಯುದ್ಧವಿರೋಧದ ಪ್ರಯತ್ನಕ್ಕೆ ತುಂಬ ಲಾಭ. ಮನುಷ್ಯ ಬರಿಯ ಎರಡು ಕಾಲಿನ ಪಶುವಾಗದೆ ಮನುಷ್ಯನಾಗಿ ಬಾಳಬೇಕಾದರೆ ಯುದ್ಧವಿರೋಧಪ್ರಯತ್ನ ಬೇಗನೇ—ಸಾವಕಾಶವಾಗಿ ಅಲ್ಲ—ಜಯಶಾಲಿಯಾಗುವುದು ಅನಿವಾರ್ಯ.

(ಹರಿಜನ, ೧೫-೩-೧೯೪೨)

## ಸ್ತ್ರೀಯರ ಮೇಲೆ ಅತ್ಯಾಚಾರ

ಇಂದು ಜಗತ್ತಿಗೇ ಪರೀಕ್ಷೆ. ಯಾರೂ ಯುದ್ಧದಿಂದ ತಪ್ಪಿಸಿಕೊಳ್ಳಲಾರರು. ರಾಮಾಯಣ-ಭಾರತಗಳು ಕವಿಗಳ ಕಲ್ಪನೆಗಳ ಕೃತಿಗಳಾದರೂ ಆ ಕವಿಗಳು ಬರಿಯ ಸಾಲು ಹೊಸೆಯುವವರಾಗಿರಲಿಲ್ಲ. ಅವರು ಋಷಿಗಳು. ಅವರು ಚಿತ್ರಿಸಿದುದು ಇಂದು ನಮ್ಮ ಕಣ್ಣೆದುರಿಗೇ ನಡೆಯುತ್ತಿದೆ. ರಾವಣರು ಒಬ್ಬರೊಂದಿಗೆ ಒಬ್ಬರು ಯುದ್ಧಮಾಡುತ್ತಿದಾರೆ. ಅವರು ಅದ್ವಿತೀಯ ಬಲ ಪ್ರದರ್ಶನ ಮಾಡುತ್ತಿದಾರೆ. ಅವರು ತಮ್ಮ ಮಾರಕ ಅಸ್ತ್ರಗಳನ್ನು ಅಂತರಿಕ್ಷದಿಂದ ಎಸೆಯುತ್ತಾರೆ. ಯುದ್ಧಭೂಮಿಯಲ್ಲಿ ಯಾವ ಸಾಹಸಕಾರ್ಯವೂ ಅವರ ಕಲ್ಪನೆಗೆ ಮೀರಿದುದಲ್ಲ.

ಮನುಷ್ಯ ಹೀಗೆ ಹೋರಾಡುವವನಲ್ಲ; ದೇವರಂತೂ ಅಲ್ಲವೇ ಅಲ್ಲ. ಬರಿಯ ಪಶುಗಳು ಮಾತ್ರ ಹೋರಾಡಬಲ್ಲವು. ದೈಹಿಕಬಲದಿಂದ ಕೊಬ್ಬಿದ ಸಿಪಾಯಿಗಳು ಅಂಗಡಿಗಳನ್ನು ಲೂಟಿಮಾಡುತ್ತಿದಾರೆ. ಸ್ತ್ರೀಯರೊಂದಿಗೆ ಸಲಿಗೆಯನ್ನು ಆಚರಿಸಲೂ ಅವರಿಗೆ ನಾಚಿಕೆಯಾಗುತ್ತಿಲ್ಲ. ಇಂತಹ ಸಂಭವಗಳನ್ನು ತಪ್ಪಿಸಲು ಸರ್ಕಾರ ಯುದ್ಧಕಾಲದಲ್ಲಿ ಅಶಕ್ತವಾಗಿದೆ. ಸೈನ್ಯ ಅವರ ಮುಖ್ಯ ಆವಶ್ಯಕತೆಯನ್ನು ಪೂರೈಸುತ್ತದೆ. ಅದರ ಅಕೃತ್ಯಗಳ ಕಡೆಗೆ ಅವರು

ಕಣ್ಣು ಮುಚ್ಚಿಕೊಳ್ಳುತ್ತಾರೆ. ಒಂದು ಇಡೀ ರಾಷ್ಟ್ರವೇ ಯುದ್ಧಸಿದ್ಧತೆಗಾಗಿ ವ್ಯವಸ್ಥಿತವಾದಾಗ ಅದು ಅದರ ನಾಗರಿಕತೆಯ ಭಾಗವೇ ಆಗಿಬಿಡುತ್ತದೆ. ಆದುದರಿಂದ ಸಿಪಾಯಿ ಆ ಸಲಿಗೆಯನ್ನು ತೆಗೆದುಕೊಳ್ಳುವುದು ದೂಷಣಾರ್ಹ ವಿಷಯವಲ್ಲ. ಆದರೆ ತಾನು ಹಾಗೆ ಆಗಬೇಕಾದರೆ ಭಾರತಕ್ಕೆ ಅನೇಕ ತಲೆಮಾರು ಬೇಕು. ಅದರಿಂದಲೇ ಒಬ್ಬ ಸಹೋದರಿ ಕಳುಹಿಸಿರುವ ಈ ಪ್ರಶ್ನೆಗಳು :

(೧) ಒಬ್ಬ ಸಿಪಾಯಿ ಸ್ತ್ರೀಯ ಮೇಲೆ ಅತ್ಯಾಚಾರ ಮಾಡಿದರೆ ಅವಳು ತನ್ನ ಶೀಲವನ್ನು ಕಳೆದುಕೊಂಡಳೆನ್ನಬಹುದೆ ?

(೨) ಸಮಾಜ ಅಂತಹ ಸ್ತ್ರೀಯನ್ನು ದೂಷಿಸಿ ಬಹಿಷ್ಕರಿಸಬಹುದೆ ?

(೩) ಇಂತಹ ಸಂದರ್ಭಗಳಲ್ಲಿ ಸ್ತ್ರೀಯರೂ ಸಾರ್ವಜನಿಕರೂ ಮಾಡಬೇಕಾದುದೇನು ?

ಸ್ತ್ರೀ ವಸ್ತುತಃ ಶೀಲವನ್ನು ಕಳೆದುಕೊಂಡಿದ್ದರೂ ಆ ನಷ್ಟ ಅವಳನ್ನು ದೂಷಣೆಗೂ ಬಹಿಷ್ಕಾರಕ್ಕೂ ಅರ್ಹಳನ್ನಾಗಿ ಮಾಡುವುದಿಲ್ಲ. ಅವಳು ನಮ್ಮ ಸಹಾನುಭೂತಿಗೆ ಅರ್ಹಳು. ಯಾಕೆಂದರೆ ಅವಳು ಕ್ರೂರವಾಗಿ ನೋಯಿಸಲ್ಪಟ್ಟಿದಾಳೆ. ಗಾಯಗೊಂಡವನ ಗಾಯಗಳನ್ನು ಉಪಚರಿಸುವಂತೆ ಆಕೆಯನ್ನು ನಾವು ಉಪಚರಿಸಬೇಕು.

ಸ್ತ್ರೀ ತಾನು ಇಷ್ಟಪಟ್ಟು ತನ್ನ ಶೀಲವನ್ನು ಕಳೆದುಕೊಂಡರೆ ಆಗ ಮಾತ್ರ ದೂಷಣಾರ್ಹಳು. ವ್ಯಭಿಚಾರವೂ ಬಲಾತ್ಕಾರ ಅತ್ಯಾಚಾರವೂ—ಎರಡೂ ಯಾವಾಗಲೂ ಒಂದೇ ಅಲ್ಲ. ಈ ದೃಷ್ಟಿಯಿಂದ ನಾವು ಇದನ್ನು ನೋಡುವುದಾದರೆ ಇಲ್ಲಿಯವರೆಗೆ ಮಾಡಿರುವಂತೆ ಇವುಗಳನ್ನು ಮುಚ್ಚುತ್ತಿರಲಿಲ್ಲ. ಸ್ತ್ರೀಯರ ವಿಷಯದಲ್ಲಿ ಪುರುಷರ ನಡತೆಗೆ ವಿರೋಧವಾದ ಜನಾಭಿಪ್ರಾಯ ಸೃಷ್ಟಿಯಾಗಿ ಪ್ರಕ್ರಿಯೆಗೊಳ್ಳುತ್ತಿತ್ತು.

ಪತ್ರಿಕೆಗಳು ಎಡೆಬಿಡದೆ ಚಳುವಳಿ ನಡೆಸಿದರೆ ಸಿಪಾಯಿಗಳು—ಬಣ್ಣದವರಾಗಲೀ ಬಿಳಿಯವರಾಗಲೀ—ಪ್ರಾಯಶಃ ಇಂತಹ ನಡತೆಯನ್ನು ಬಿಡುವರು. ಅವರ ಮೇಲಧಿಕಾರಿಗಳು ಈ ದುರ್ನಡತೆಯನ್ನು ಬಲಾತ್ಕಾರವಾಗಿ ತಪ್ಪಿಸುವುದು ಅನಿವಾರ್ಯವಾಗುವುದು.

ಸ್ತ್ರೀಯರಿಗೆ ನನ್ನ ಸಲಹೆ ಇದು : ಅವರು ನಗರಗಳನ್ನು ತೊರೆದು ಹಳ್ಳಿಗಳಿಗೆ ವಲಸೆಹೋಗಲಿ. ಅಲ್ಲಿ ಸೇವೆಯ ವಿಶಾಲಕ್ಷೇತ್ರ ಅವರಿಗಾಗಿ ಸಿದ್ಧವಾಗಿದೆ. ಹಳ್ಳಿಗಳಲ್ಲಿ ಅವರ ಮೇಲೆ ಅತ್ಯಾಚಾರಗಳಾಗುವ ಅಪಾಯಗಳು ಸಾಧಾರಣ ಕಡಮೆ. ಆದರೆ ಅವರು ಸರಳಜೀವನ ನಡೆಸಿ, ಬಡವರೊಂದಿಗೆ ಒಂದಾಗಬೇಕು. ಅವರು ರೇಶಿಮೆ-ಸಾಟಿನ್‌ಗಳನ್ನೂ ರತ್ನಾಭರಣಗಳನ್ನೂ ಧರಿಸಿಕೊಂಡು ಮೆರೆಯುವುದಾದರೆ ಒಂದು ಅಪಾಯದಿಂದ ಓಡಿಹೋಗಿ ಎರಡು ಅಪಾಯಗಳಿಗೆ ಬೀಳುತ್ತಾರೆ. ಕರ್ತವ್ಯಕ್ಕಾಗಿ ನಗರಗಳಲ್ಲಿರಬೇಕಾದವರಿಗೆ ಈ ಸಲಹೆ ಸ್ವಾಭಾವಿಕವಾಗಿಯೇ ಅನ್ವಯಿಸುವುದಿಲ್ಲ.

ಮುಖ್ಯ ವಿಷಯ—ಭಯರಹಿತರಾಗಿರುವುದು ಹೇಗೆಂಬುದನ್ನು ಸ್ತ್ರೀಯರು ತಿಳಿಯಬೇಕಾದುದು. ತನ್ನ ಪರಿಶುದ್ಧತೆಯೇ ತನ್ನ ಅತ್ಯುತ್ತಮ ಗುರಾಣಿ ಎಂದು ಅರಿತ ಸ್ತ್ರೀಯ ಮಾನಭಂಗ ಎಂದಿಗೂ ಸಾಧ್ಯವಿಲ್ಲ. ಪುರುಷ ಎಷ್ಟೇ ಪಶುವಾಗಿರಲಿ ಆಕೆಯ ಉಜ್ವಲ ಪರಿಶುದ್ಧತೆಯ ಜ್ಯೋತಿಯ ಎದುರು ಅವನು ನಾಚಿಕೆಯಿಂದ ತಲೆತಗ್ಗಿಸುತ್ತಾನೆ. ಹೀಗೆ ತಮ್ಮನ್ನು ರಕ್ಷಿಸಿಕೊಂಡಿರುವ ಮಹಿಳೆಯರ ಉದಾಹರಣೆ ಆಧುನಿಕ ಕಾಲದಲ್ಲಿ ಸಹ ಇದೆ. ಬರೆಯುತ್ತಿರುವಾಗ ಅಂತಹ ಎರಡು ಉದಾಹರಣೆಗಳು ನನ್ನ ಜ್ಞಾಪಕಕ್ಕೆ ಬರುತ್ತಿದೆ. ಆದುದರಿಂದ ಈ ಲೇಖನ ಓದುವ ಸ್ತ್ರೀಯರೆಲ್ಲ ಅಂತಹ ಧೈರ್ಯವನ್ನು ಬೆಳೆಸಿಕೊಳ್ಳಬೇಕು ಎಂದು ಸೂಚಿಸುತ್ತೇನೆ. ಹಾಗೆ ಮಾಡುವುದಾದರೆ ಅವರು ನಿರ್ಭೀತರಾಗುತ್ತಾರೆ; ಅತ್ಯಾಚಾರವನ್ನು ಸುಮ್ಮನೆ ಯೋಚಿಸಿದರೆ ಈಗ ನಡುಗುತ್ತಿರುವಂತೆ, ನಡುಗುವುದನ್ನೂ ಬಿಡುತ್ತಾರೆ. ಧೈರ್ಯದ ಪರೀಕ್ಷೆಯಲ್ಲಿ ತೇರ್ಗಡೆಯಾಗುವುದಕ್ಕಾಗಿಯೇ ಸ್ತ್ರೀಯು ಕ್ರೂರವಾದ ಅನುಭವವನ್ನು ಹೊಂದಬೇಕೆಂಬುದೇನೂ ಆವಶ್ಯಕವಿಲ್ಲ. ಇಂತಹ ಅನುಭವಗಳು ದೇವರ ದಯೆಯಿಂದ ಲಕ್ಷಾಂತರ ಜನರಿಗಾಗಲಿ, ಕೊನೆಯಲ್ಲಿ ಸಾವಿರಾರು ಜನರಿಗೇ ಆಗಲೀ ಉಂಟಾಗುವುದಿಲ್ಲ. ಪ್ರತಿ ಸಿಪಾಯಿಯೂ ಪಶುವಲ್ಲ. ಸಭ್ಯತೆಯ ಬುದ್ಧಿಯನ್ನು ಪೂರ್ಣವಾಗಿ ಕಳೆದುಕೊಳ್ಳುವವರು ಅಲ್ಪಸಂಖ್ಯಾತರು ಮಾತ್ರ. ಹಾವುಗಳ ಪೈಕಿ ಶೇಕಡ ಇಪ್ಪತ್ತು ಮಾತ್ರ ವಿಷಪೂರಿತ. ಅವುಗಳ ಪೈಕಿ ಎಲ್ಲೋ ಕೆಲವೇ ಕಡಿಯುವುವು. ತುಳಿದ ಹೊರತು ಅವು ಮೇಲೆ ಬೀಳುವುದಿಲ್ಲ. ಆದರೆ ಭಯಪೂರಿತರಾಗಿ ಹಾವನ್ನು ನೋಡಿದರೇ ನಡುಗುವವರಿಗೆ, ಈ ಜ್ಞಾನದಿಂದ ಸಹಾಯವಾಗುವುದಿಲ್ಲ.

ಆದುದರಿಂದ ಪೋಷಕರೂ ಗಂಡಂದಿರೂ ನಿರ್ಭಯದಿಂದಿರುವ ವಿದ್ಯೆಯನ್ನು ಸ್ತ್ರೀಯರಿಗೆ ಬೋಧಿಸಬೇಕು. ದೇವರಲ್ಲಿ ಸಜೀವ ನಂಬಿಕೆಯಿಡುವುದರಿಂದ ಇದನ್ನು ಉತ್ತಮವಾಗಿ ಕಲಿಯಬಹುದು. ಆತ ಅದೃಶ್ಯನಾಗಿದ್ದರೂ ಆತನೇ ಎಂದೂ ಕೈಬಿಡದ ರಕ್ಷಕ. ಈ ನಂಬಿಕೆ ಇರುವವನು ಎಲ್ಲರಿಗಿಂತ ಅತ್ಯಂತ ನಿರ್ಭೀತ.

ಆದರೆ ಇಂತಹ ನಿಷ್ಠೆ, ಧೈರ್ಯ ಒಂದು ದಿನದಲ್ಲಿ ಸಂಪಾದನೆಯಾಗುವುದಲ್ಲ. ಈ ಮಧ್ಯೆ ನಾವು ಇತರ ಮಾರ್ಗಗಳನ್ನು ಕಂಡುಹಿಡಿಯಲು ಪ್ರಯತ್ನಿಸಬೇಕು. ಸ್ತ್ರೀಯ ಮೇಲೆ ಅತ್ಯಾಚಾರ ಸಂಭವಿಸಿದರೆ, ಹಿಂಸೆ–ಅಹಿಂಸೆ ಯಾವುದನ್ನೂ ಅವಳು ಯೋಚಿಸಬಾರದು. ಆತ್ಮರಕ್ಷಣೆ ಅವಳ ಪ್ರಥಮ ಧರ್ಮ. ತನ್ನ ಶೀಲರಕ್ಷಣೆಗಾಗಿ ಅವಳು ತನ್ನ ಮನಸ್ಸಿಗೆ ತೋರಿದ ಎಲ್ಲ ಮಾರ್ಗಗಳನ್ನೂ ಸಾಧನಗಳನ್ನೂ ಉಪಯೋಗಿಸಲು ಸ್ವತಂತ್ರಳು. ದೇವರು ಆಕೆಗೆ ಹಲ್ಲುಗಳನ್ನೂ ಉಗುರುಗಳನ್ನೂ ಕೊಟ್ಟಿದಾನೆ. ಅವುಗಳನ್ನು ಅವಳು ಸರ್ವಶಕ್ತಿಯಿಂದ ವಿನಿಯೋಗಿಸಬೇಕು. ಆವಶ್ಯಕವಾದರೆ ಆ ಪ್ರಯತ್ನದಲ್ಲಿ ಸಾಯಬೇಕು. ಸಾವಿನ ಭಯವನ್ನು ಪೂರ್ಣ ಬಿಟ್ಟ ಸ್ತ್ರೀ ಅಥವಾ ಪುರುಷ ತಮ್ಮ ಜೀವವನ್ನು ಕೊಡುವುದರಿಂದ ತಮ್ಮನ್ನು ಮಾತ್ರ ರಕ್ಷಿಸಿಕೊಳ್ಳುವುದಲ್ಲದೆ, ಇತರರನ್ನೂ ರಕ್ಷಿಸುವರು. ನಿಜವಾಗಿ ನಾವು ಮರಣಕ್ಕೇ ಅತಿ ಹೆದರುವುದು. ಆದುದರಿಂದಲೇ ಕೊನೆಯಲ್ಲಿ ನಾವು ಹೆಚ್ಚಾದ ದೈಹಿಕಬಲಕ್ಕೆ ಅಧೀನರಾಗುತ್ತೇವೆ. ಕೆಲವರು ಆಕ್ರಮಣಕಾರರಿಗೆ ಶರಣಾಗತರಾಗುತ್ತಾರೆ; ಕೆಲವರು ಲಂಚ ಕೊಡುತ್ತಾರೆ. ಕೆಲವರು ಹೊಟ್ಟೆಯ ಮೇಲೆ ತೆವಳುತ್ತಾರೆ, ಅಥವಾ ಇತರ ಅವಮಾನಕ್ಕೂ ವಿಧೇಯರಾಗುತ್ತಾರೆ. ಕೆಲವು ಸ್ತ್ರೀಯರು ಸಾಯುವುದರ ಬದಲು ತಮ್ಮ ದೇಹವನ್ನೇ ಕೊಡುತ್ತಾರೆ. ನಾನು ಖಂಡನೆಯ ಮನೋಭಾವದಿಂದ ಇದನ್ನು ಹೇಳುತ್ತಿಲ್ಲ. ಮನುಷ್ಯಸ್ವಭಾವವನ್ನು ಉದಹರಿಸುತ್ತಿದೇನೆ ಮಾತ್ರ. ನಾವು ಹೊಟ್ಟೆಯಿಂದ ತೆವಳಲಿ ಅಥವಾ ಸ್ತ್ರೀಯು ಪುರುಷನ ಇಂದ್ರಿಯಲಂಪಟತನಕ್ಕಾಗಿ ತನ್ನ ದೇಹವನ್ನು ಕೊಡಲಿ; ಇದು ನಾವು ಏನನ್ನು ಬೇಕಾದರೂ ಮಾಡುವ ಅಧೋಗತಿಗೆ ಇಳಿಯುವ ಪ್ರಾಣದ ಆಸೆಯ ಸಂಕೇತ. ಆದುದರಿಂದ ಪ್ರಾಣವನ್ನು ಕಳೆದುಕೊಳ್ಳುವವನೇ ಪ್ರಾಣವನ್ನು ಉಳಿಸಿಕೊಳ್ಳುತ್ತಾನೆ. 'ತೇನ ತ್ಯಕ್ತೇನ ಭುಂಜೀಥಾಃ' ಪ್ರತಿಯೊಬ್ಬ ವಾಚಕನೂ ಈ ಅಸದೃಶ

ವಾದ ಶ್ಲೋಕವನ್ನು ಬಾಯಿಪಾಠ ಮಾಡಿಕೊಳ್ಳಬೇಕು. ಆದರೆ ಈ ಬಾಯಿ ಭಕ್ತಿಯಿಂದ ಮಾತ್ರವೇ ಏನೂ ಪ್ರಯೋಜನವಾಗುವುದಿಲ್ಲ. ಅದು ಅವನ ಹೃದಯಾಂತರಾಳದ ಆಳವನ್ನು ಮುಟ್ಟಬೇಕು. ಜೀವವನ್ನು ಅನುಭವಿಸಲು ಜೀವದ ಆಸೆಯನ್ನು ಬಿಡಬೇಕು. ಅದು ನಮ್ಮ ಸ್ವಭಾವದ ಭಾಗವೇ ಆಗಬೇಕು.

ಸ್ತ್ರೀ ಏನು ಮಾಡಬೇಕೆಂಬುದಕ್ಕೆ ಅಷ್ಟು. ಇಂತಹ ಅತ್ಯಾಚಾರವನ್ನು ನೋಡುತ್ತಿರುವ ಪುರುಷ ಏನು ಮಾಡಬೇಕು ? ಇದರ ಉತ್ತರವೂ ಮೇಲಿನ ದರಲ್ಲಿಯೇ ಅಧ್ಯಾಹಾರವಾಗಿದೆ. ಅವನು ಬರಿಯ ನಿರ್ವ್ಯಾಪಾರ ಪ್ರೇಕ್ಷಕ ಆಗಿರಕೂಡದು. ಅವನು ಸ್ತ್ರೀಯನ್ನು ರಕ್ಷಿಸಬೇಕು. ಅವನು ಪೋಲೀಸ್ ಸಹಾಯಕ್ಕೆ ಓಡಬಾರದು. ರೈಲಿನ ಎಚ್ಚರಿಕೆ ಸರಪಣಿಯನ್ನು ಎಳೆಯುವಷ್ಟರಿಂದಲೇ ತೃಪ್ತನಾಗಿ ಕೂರಬಾರದು. ಅಹಿಂಸೆಯನ್ನು ಆಚರಿಸಲು ಅವನಿಗೆ ಶಕ್ತಿಯಿದ್ದರೆ ಆ ಪ್ರಯತ್ನದಲ್ಲಿ ಅವನು ಸತ್ತು ಸಂಕಟದಲ್ಲಿರುವ ಸ್ತ್ರೀಯನ್ನು ರಕ್ಷಿಸಬೇಕು. ಅಹಿಂಸೆಯಲ್ಲಿ ಅವನಿಗೆ ನಂಬಿಕೆ ಇಲ್ಲದಿದ್ದರೆ ಅಥವಾ ಅದರ ಆಚರಣೆ ಅವನಿಗೆ ಸಾಧ್ಯವಿಲ್ಲದಿದ್ದರೆ ತನ್ನಲ್ಲಿರುವ ಎಲ್ಲ ಶಕ್ತಿಯನ್ನೂ ಉಪಯೋಗಿಸಿ ಆಕೆಯನ್ನು ರಕ್ಷಿಸಲು ಅವನು ಪ್ರಯತ್ನಿಸಬೇಕು.

ನಾನು ಮುದುಕ–ಜರ್ಜರಿತ–ದಂತಹೀನ—ಸಹೋದರಿಯೊಬ್ಬಳ ಮೇಲಿನ ಅತ್ಯಾಚಾರವನ್ನು ಅಹಿಂಸೆಯ ಹೆಸರಿನಲ್ಲಿ ಸುಮ್ಮನೆ ನೋಡುತ್ತಾ ಸಹಿಸಿಕೊಂಡಿದ್ದರೆ ನಮ್ಮ ಈ ಮಹಾತ್ಮಾಗಿರಿ ಎಂಬುದು ಅಪಹಾಸ್ಯ ಅವಮಾನಕ್ಕೆ ಗುರಿಯಾಗಿ ನಾಶವಾಗುವುದು. ನಾನಾಗಲೀ ಅಥವಾ ನನ್ನಂತಹ ಇತರರಾಗಲೀ ಮಧ್ಯೆ ನುಗ್ಗಿ ಹಿಂಸೆಯಿಂದಲೋ ಅಹಿಂಸೆಯಿಂದಲೋ ನಮ್ಮ ಜೀವವನ್ನು ಕೊಟ್ಟರೆ, ಬಲಿಯನ್ನು ನಿಜವಾಗಿ ತಪ್ಪಿಸಬಹುದು. ಹೇಗಾದರೂ ನಾವು ಆಕೆಯ ಅವಮಾನಕ್ಕೆ ಸಜೀವ ಪ್ರೇಕ್ಷಕರಾಗುವುದಿಲ್ಲ.

ಪ್ರೇಕ್ಷಕರನ್ನು ಕುರಿತು ಇಷ್ಟು. ಆದರೆ ಧೈರ್ಯ, ಚೈತನ್ಯ ನಮ್ಮ ನಾಡಿನ ವಾತಾವರಣವನ್ನೆಲ್ಲ ತುಂಬಿದರೆ ಸ್ತ್ರೀಯರ ಮೇಲೆ ಅತ್ಯಾಚಾರವನ್ನು ಯಾವ ಭಾರತೀಯನೂ ಸಹಿಸುವುದಿಲ್ಲವೆಂಬುದು ಗೊತ್ತಾದರೆ ಯಾವ ಸಿಪಾಯಿಗೂ ಅವರನ್ನು ಮುಟ್ಟುವ ಧೈರ್ಯವಾಗುವುದಿಲ್ಲವೆಂದು ನಾನು ಹೇಳುತ್ತೇನೆ. ಅಂತಹ ಚೈತನ್ಯ ಇಲ್ಲವೆಂಬುದು ನಮ್ಮ ನಾಚಿಕೆಪ್ರಸಂಗ. ಆದರೆ ಈ ಕಳಂಕವನ್ನು

ತೊಡೆದುಹಾಕಲು ಸಿದ್ಧರಾದವರು ಮುಂದೆ ಬಂದರೆ ಅದು ಸಮಾಧಾನದ ಸಂಗತಿ.

ಸರ್ಕಾರದಲ್ಲಿ ಪ್ರಭಾವವಿರುವವರು, ಸರ್ಕಾರ ಆವಶ್ಯಕ ಕಾರ್ಯಕ್ರಮವನ್ನು ಕೈಗೊಳ್ಳುವಂತೆ ಪ್ರಯತ್ನಿಸಲಿ. ಆದರೆ ಸ್ವಸಹಾಯವೇ ಉತ್ತಮ ಸಹಾಯ. ಇಂದಿನ ಪರಿಸ್ಥಿತಿಯಲ್ಲಿ ನಾವು ನಮ್ಮ ಸ್ವಂತ ಶಕ್ತಿಯ ಮೇಲೆ ಮತ್ತು ದೇವರ ಸಹಾಯದ ಮೇಲೆ ಮಾತ್ರ ಅವಲಂಬಿಸಬಹುದು. (ಹರಿಜನ, ೧-೩-೧೯೪೭)

## ಒಂದು ತೊಡಕಿನ ಸಮಸ್ಯೆ

ರೆವರೆಂಡ್ ಬಿ. ಡಿ. ಲೈಟ್‌ರವರು ಯುದ್ಧದ ವಿಷಯದಲ್ಲಿ ನನ್ನ ಮನೋಭಾವನೆಯನ್ನು ಕುರಿತು ಬಹಿರಂಗ ಪತ್ರದಲ್ಲಿ ಎತ್ತಿರುವ ಪ್ರಶ್ನೆಯನ್ನು ನಾನು ಪರಿಗಣಿಸುತ್ತಿರುವುದು ನಿಸ್ಸಂಕೋಚವಾಗಿ ಅಲ್ಲ. ತಪ್ಪಾಗಿ ಅರ್ಥವಾಗುವ ಅಪಾಯವಿದ್ದರೂ ಮೌನವನ್ನು ಅವಲಂಬಿಸುವುದು ಪರಿಸ್ಥಿತಿಯ ಕ್ಲಿಷ್ಟತೆಯಿಂದ ತಪ್ಪಿಸಿಕೊಳ್ಳುವ ಸುಲಭ ಮಾರ್ಗ. ಆ ಪತ್ರದಲ್ಲಿ ಸೂಚಿಸಿರುವ ಆ ಸಂದರ್ಭಗಳಲ್ಲಿ 'ಯುದ್ಧದಲ್ಲಿ ನಾನು ಭಾಗವಹಿಸಿದುದು ತಪ್ಪು' ಎಂದು ಹೇಳಿಬಿಡುವುದು ಇನ್ನೂ ಸುಲಭ. ಆದರೆ ಅತ್ಯಂತ ಸ್ನೇಹದಿಂದ ಕೇಳಿದ ಪ್ರಶ್ನೆಗಳಿಗೆ ಉತ್ತರ ಕೊಡದೆ ಇರುವುದು ಸ್ನೇಹವಲ್ಲ. ನನಗೆ ಪಶ್ಚಾತ್ತಾಪವಿಲ್ಲದಿರುವಾಗ, ಇದೆ ಎಂದು ನಟಿಸಬಾರದು. ಈ ಪ್ರಶ್ನೆಯ ಚರ್ಚೆಯನ್ನು ನಾನು ತಪ್ಪಿಸಿಕೊಳ್ಳಬೇಕೆಂಬ ಕಾತರ ನನಗೆ ನಿಶ್ಚಿತಾಭಿಪ್ರಾಯ ಇಲ್ಲವೆಂಬುದರಿಂದ ಉಂಟಾಗಿಲ್ಲ. ಆದರೆ ನನ್ನ ಅರ್ಥವನ್ನು ಸ್ಪಷ್ಟಪಡಿಸಲು ನನಗೆ ಸಾಧ್ಯವಾಗದಿರಬಹುದೆಂಬ ಮತ್ತು ಯುದ್ಧವಿಷಯದಲ್ಲಿ ನನಗೆ ಇಷ್ಟವಿಲ್ಲದಿರುವ ಮನೋಭಾವವನ್ನು ನಾನು ಇತರರಲ್ಲಿ ಸೃಷ್ಟಿಸಬಹುದೆಂಬ ಭಯದಿಂದ ಉಂಟಾಗಿದೆ. ನನ್ನ ಕೆಲವು ಮೂಲಭೂತ ಭಾವನೆಗಳನ್ನು ವ್ಯಕ್ತಪಡಿಸಲು ಭಾಷೆ ಒಂದು ದುರ್ಬಲ ಉಪಕರಣವೆಂದು ನನಗೆ ಅನೇಕ ಸಲ ತೋರಿದೆ. ಆದುದರಿಂದ ನಾನು ಬಿ. ಡಿ. ಲೈಟ್ ಮತ್ತು ಇತರ ಸಹಯುದ್ಧವಿರೋಧಿಗಳಿಗೆ ನನ್ನ ಅಪೂರ್ಣ ಅಥವಾ ದೋಷಯುಕ್ತ ವಾದವನ್ನೂ ಯುದ್ಧದ ವಿಷಯದಲ್ಲಿ ನನ್ನ ವಾದ ನನ್ನ ಆಚರಣೆಯಿಂದ ಭಿನ್ನವಾಗಿರುವುದನ್ನೂ ಪರಿಗಣಿಸಬಾರದೆಂದು ಕೇಳಿಕೊಳ್ಳು

ತ್ತೇನೆ. ನಾನು ಎಲ್ಲ ಯುದ್ಧಕ್ಕೂ ನಿರ್ದಾಕ್ಷಿಣ್ಯ ವಿರೋಧಿ ಎಂದು ಅವರು ತಿಳಿಯಲಿ. ನನ್ನ ವಾದ ಅವರಿಗೆ ಒಪ್ಪಿಗೆಯಾಗದಿದ್ದಲ್ಲಿ ನಾನು ಯುದ್ಧದಲ್ಲಿ ಭಾಗಿಯಾದುದು ನನಗೇ ತಿಳಿಯದ ದೌರ್ಬಲ್ಯವೆಂದು ಭಾವಿಸಲಿ. ಯಾಕೆಂದರೆ ಕೆಲವು ಪರಿಸ್ಥಿತಿಯಲ್ಲಿ ಯುದ್ಧ ನ್ಯಾಯವಾದುದೆಂದು ತೋರಿಸಲು, ನನ್ನ ಕಾರ್ಯವನ್ನು ಯಾರಾದರೂ ಉಪಯೋಗಿಸುವುದು ನನಗೆ ತುಂಬ ದುಃಖಕರವಾಗುತ್ತದೆ.

ಇಷ್ಟನ್ನು ಹೇಳಿ ಬಿ. ಡಿ. ಲೈಟ್‌ರವರು ತಮ್ಮ ಪತ್ರದಲ್ಲಿ ಎತ್ತಿರುವ ವಿಷಯವನ್ನು ತೆಗೆದುಕೊಳ್ಳುತ್ತೇನೆ. ನಮಗೂ ತಮಗೂ ಇರುವ ಒಂದು ವ್ಯತ್ಯಾಸ ಯೂರೋಪಿನ ಯುದ್ಧವಿರೋಧಿಗಳಿಗೆ ಮನದಟ್ಟಾಗಲಿ. ಅವರು ಆಕ್ರಮಣಕ್ಕೆ ಒಳಗಾದ ದೇಶಗಳ ಪ್ರತಿನಿಧಿಗಳಲ್ಲ. ನಾನು ಜಗತ್ತಿನಲ್ಲಿ ಅತ್ಯಂತವಾಗಿ ಲೂಟಿ–ದಬ್ಬಾಳಿಕೆಗೆ ಒಳಗಾದ ದೇಶವನ್ನು ಪ್ರತಿನಿಧಿಸುತ್ತೇನೆ. ಹೊಗಳಿಕೆಯಲ್ಲದ ಹೋಲಿಕೆಯನ್ನು ಹೇಳುವುದಾದರೆ, ಅವರು ಬೆಕ್ಕನ್ನು ಪ್ರತಿನಿಧಿಸುತ್ತಾರೆ; ನಾನು ಇಲಿಮರಿಯನ್ನು ಪ್ರತಿನಿಧಿಸುತ್ತೇನೆ. ಇಲಿಮರಿಗೆ ಅಹಿಂಸೆ ಎಂಬುದು ಇದೆಯೆಂಬ ಬುದ್ಧಿಯಾದರೂ ಇದೆಯೇ? ಯುದ್ಧಭೂಮಿಯಲ್ಲಿ ಅಹಿಂಸೆಯ ಧರ್ಮ ಅದರ ಸಾರ್ವಭೌಮತ್ವ–ವೈಭವ–ಸತ್ವ—ಇವುಗಳನ್ನು ಅದಕ್ಕೆ ಕಲಿಸುವುದಕ್ಕೆ ಮುಂಚೆ ಜಯಪ್ರದವಾದ ಹಿಂಸೆಯಿಂದ ಎದುರಿಸಲು ಹೋರಾಡುವುದು ಅದರ ಮೂಲಭೂತ ಆಸೆಯಲ್ಲವೆ? ಇಲಿಯ ಜಾತಿಯ ಪ್ರತಿನಿಧಿಯಾಗಿ, ನನ್ನ ಒಡೆಯನ ನಾಶಕಾರ್ಯದಲ್ಲಿ, ನಾಶಮಾಡದೆ ಇರುವುದು ಉತ್ತಮವೆಂದು ತೋರಿಸುವುದಕ್ಕಾಗಿಯಾದರೂ, ಭಾಗಿಯಾಗುವುದು ನನಗೆ ಆವಶ್ಯಕವಾಗಬಹುದಲ್ಲವೆ?

ಇಲ್ಲಿ ಇಲಿ ಮತ್ತು ಬೆಕ್ಕಿನ ಹೋಲಿಕೆ ಕೊನೆಯಾಗುತ್ತದೆ. ತನ್ನ ಸ್ವಭಾವವನ್ನು ಬದಲಾಯಿಸಿಕೊಳ್ಳುವ ಶಕ್ತಿ ಇಲಿಗೆ ಇಲ್ಲ. ಮನುಷ್ಯ, ಅವನು ಎಷ್ಟೇ ಹೀನನಾಗಿರಲಿ, ಅವನತಿಹೊಂದಿರಲಿ, ಬೇರೆ ಜನಾಂಗದ ಅಥವಾ ಬೇರೆ ಬಣ್ಣದ ಮನುಷ್ಯ ಏರಿರುವ ಅತ್ಯುನ್ನತಿಗೆ ಏರುವ ಶಕ್ತಿ ಅವನಿಗಿದೆ. ಆದುದರಿಂದ ನಮ್ಮ ದೇಶೀಯರ ಯುದ್ಧಸಿದ್ಧತೆಯ ಆವಶ್ಯಕತೆಯನ್ನು ಪೂರೈಸುವುದರಲ್ಲಿ, ನಾನು ಅವರೊಂದಿಗೆ ಬಹಳ ದೂರ ಹೋಗಬಹುದು. ಆದರೆ ಅವರು ಯುದ್ಧ ವ್ಯರ್ಥ ಎಂಬುದನ್ನು ಒಂದು ದಿನ ತಿಳಿಯುತ್ತಾರೆ; ಅವರನ್ನು

ಯುದ್ಧಭಾವನೆಯಿಂದ ಹಿಂದಿರುಗಿಸಬಹುದು ಎಂಬ ಪೂರ್ಣ ನಂಬಿಕೆಯಿಂದ ಹಾಗೆ ಮಾಡಬೇಕು. ನಾನು ಯುದ್ಧದ ಉದ್ದೇಶ್ಯಕ್ಕೆ ಸಹಾಯಕನಾಗುತ್ತಿರುವಂತೆ ತೋರುತ್ತಿದ್ದರೂ ಇತಿಹಾಸದಲ್ಲೆಲ್ಲ ಅತ್ಯಂತ ದೊಡ್ಡ ಅಹಿಂಸಾಪ್ರಯೋಗವನ್ನು ನಾನು ನಡೆಸುತ್ತಿರುವೆನೆಂಬುದು ಜ್ಞಾಪಕವಿರಲಿ. ಬುದ್ಧಿವಂತಿಕೆಯಿಲ್ಲದುದರಿಂದ ಪ್ರಯೋಗಕ್ಕೆ ಅಪಜಯವಾಗಬಹುದು. ಆದರೆ ಯೂರೋಪಿನ ಯುದ್ಧವಿರೋಧಿ, ಭಾರತದಲ್ಲಿ ಅವನ ಕಣ್ಣ ಮುಂದೆ ನಡೆಯುತ್ತಿರುವ ಅಸಾಧಾರಣ ಸಂಗತಿಯನ್ನು, ಒಬ್ಬನೇ ಮನುಷ್ಯ ಯುದ್ಧಕ್ಕೆ ಸಿದ್ಧಮಾಡಿಕೊಳ್ಳುವವರೊಡನೆ ಸಲಿಗೆಯಿಂದಿರುತ್ತಾ ಅಹಿಂಸೆಯಲ್ಲಿ ಧೀರವಾದ ಪ್ರಯೋಗ ನಡೆಸುತ್ತಿರುವುದನ್ನು ತಿಳಿದುಕೊಳ್ಳಲು ತನ್ನ ಬುದ್ಧಿಯನ್ನೆಲ್ಲ ಉಪಯೋಗಿಸಬೇಕು.

ನಮ್ಮ ದೇಶದವರನ್ನು ಅಹಿಂಸಾಮಾರ್ಗಕ್ಕೆ ತರಲು ನಾನು ನಿರೀಕ್ಷಿಸುವುದಾದರೆ, ಅವರೊಂದಿಗೆ ನನ್ನ ಅಭಿಪ್ರಾಯಗಳನ್ನು ಹಂಚಿಕೊಳ್ಳುವುದು ಅಹಿಂಸೆಯ ಯೋಜನೆಯ ಭಾಗ. ಎದ್ದುಕಾಣುವ ಸಂಗತಿ ಎಂದರೆ ಭಾರತೀಯರು—ವಿದ್ಯಾವಂತರೂ ಸಹ—ಅಹಿಂಸೆ ಮಾತ್ರವೇ ಭಾರತೀಯರನ್ನು ಅನೇಕ ಶತಮಾನಗಳ ದಾಸ್ಯದಿಂದ ಮುಕ್ತ ಮಾಡಬಲ್ಲುದೆಂದು ಸ್ವಾಭಾವಿಕವಾಗಿ ನಂಬುತ್ತಾರೆ. ಅಹಿಂಸೆಯ ಲೌಕಿಕ ಪರಿಣಾಮ ಎಲ್ಲರಿಗೂ ಅರ್ಥವಾಗಿಲ್ಲವೆಂಬುದು ನಿಜ. ಯಾರಿಗೆ ಸಾಧ್ಯ? ನನಗೆ ಅಹಿಂಸೆಯ ಸತ್ಯ ತಿಳಿದಿದೆ; ಅದನ್ನು ಆಚರಿಸಲು ನನ್ನ ಸರ್ವಪ್ರಯತ್ನವನ್ನೂ ಮಾಡುತ್ತೇನೆ ಎಂಬ ಹೆಮ್ಮೆ ನನಗಿದ್ದರೂ, ಆ ತತ್ತ್ವದ ತಾರ್ಕಿಕ ಅಂತ್ಯವನ್ನು ಅನುಸರಿಸಲು ನಾನು ಅನೇಕ ವೇಳೆ ಅಶಕ್ತನಾಗುತ್ತೇನೆ. ಮನುಷ್ಯನ ಹೃದಯದಲ್ಲಿ ಪ್ರಕೃತಿ ಮಾಡುವ ಕಾರ್ಯ ಒಂದು ರಹಸ್ಯ—ವಿವರಣೆಗೆ ನಿಲುಕುವುದಲ್ಲ.

ಇದು ನನಗೆ ಗೊತ್ತು: ಭಾರತ ಅಹಿಂಸೆಯ ಪ್ರಕಟವಾದ ಮಾರ್ಗದಿಂದ ಸ್ವತಂತ್ರವಾದರೆ, ಅದು ದೊಡ್ಡ ಸೈನ್ಯವನ್ನೂ ಅಷ್ಟೇ ಬೃಹತ್ ಆದ ಹಡಗುಪಡೆಯನ್ನೂ ಅಸಾಧ್ಯ ವಿಮಾನಸೈನ್ಯವನ್ನೂ ಇಟ್ಟುಕೊಳ್ಳಲು ಎಂದೂ ಬಯಸುವುದಿಲ್ಲ. ತನ್ನ ಸ್ವಾತಂತ್ರ್ಯದ ಅಹಿಂಸಾ ಹೋರಾಟದಲ್ಲಿ ಜಯ ಲಭಿಸುವಷ್ಟು ಉನ್ನತ ಮಟ್ಟಕ್ಕೆ ಭಾರತದ ಆತ್ಮಜ್ಞಾನ ಹೆಚ್ಚಿದರೆ ಜಗತ್ತಿನಲ್ಲಿ ಮೌಲ್ಯಗಳು ಬದಲಾಗುತ್ತವೆ. ಮತ್ತು ಯುದ್ಧದ ಬಹುಭಾಗದ ಸರಂಜಾಮು ಅನುಪಯುಕ್ತವಾಗಿರುವುದು ಗೊತ್ತಾಗುತ್ತದೆ. ಅಂತಹ ಭಾರತ

ಹಗಲುಗನಸು ಅಥವಾ ಮಕ್ಕಳ ಆಟಿಗೆಯಂತೆ ಕಾಣಬಹುದು. ಆದರೆ ನನ್ನ ಅಭಿಪ್ರಾಯದಲ್ಲಿ ಅಹಿಂಸೆಯಿಂದ ಸ್ವಾತಂತ್ರ್ಯವನ್ನು ಗಳಿಸುವ ಭಾರತ ಎಂದರೆ ಇದು.

ಆ ಸ್ವಾತಂತ್ರ್ಯ ಬಂದಾಗ—ಬಂದರೆ—ಅದು ಇಂಗ್ಲೆಂಡಿನೊಂದಿಗೆ ಮರ್ಯಾದೆಯ ಒಪ್ಪಂದದಿಂದ ಬಂದದ್ದಾಗಿರುವುದು. ಆದರೆ ಆಗ ಅದು ಜಗತ್ತಿನ ಸ್ವಾಮಿತ್ವಕ್ಕಾಗಿ ಹೋರಾಡುತ್ತಿದ್ದ ಸಾಮ್ರಾಜ್ಯಶಾಲಿ ಉದ್ಧತ ಬ್ರಿಟನ್ ಆಗಿರುವುದಿಲ್ಲ. ಮನುಷ್ಯಸಮಾಜದ ಸಾಮಾನ್ಯ ಸುಖಕ್ಕಾಗಿ ವಿನಯದಿಂದ ಸೇವೆ ಮಾಡಲು ಪ್ರಯತ್ನಿಸುತ್ತಿರುವ ಬ್ರಿಟನ್ ಆಗಿರುತ್ತದೆ. ಆಗ ಭಾರತ ನಿಸ್ಸಹಾಯಳಾಗಿ ಬ್ರಿಟನ್ನಿನ ಸಾಮ್ರಾಜ್ಯಸ್ಥಾಪನೆಯ ಯುದ್ಧದಲ್ಲಿ ದೂಡಲ್ಪಡುವುದಿಲ್ಲ. ಜಗತ್ತಿನ ಹಿಂಸಾಶಕ್ತಿಗಳನ್ನೆಲ್ಲ ಅಂಕೆಯಲ್ಲಿಡಲು ಪ್ರಯತ್ನಿಸುತ್ತಿರುವ ಪ್ರಬಲ ರಾಷ್ಟ್ರದ ವಾಣಿಯಾಗಿರುತ್ತದೆ—ಭಾರತದ ವಾಣಿ.

ಈ ಆಶಾಭಾವನೆಗಳೆಲ್ಲ ಕಾರ್ಯಗತವಾಗುವುವೋ ಇಲ್ಲವೊ ? ನನ್ನ ದಾರಿಯಂತೂ ಸ್ಪಷ್ಟ. ನಾನು ಇನ್ನು, ಯಾವ ಊಹಿಸಲ್ಪಡಬಹುದಾದ ಪರಿಸ್ಥಿತಿಯಲ್ಲಿಯೂ ಬ್ರಿಟನ್ನಿನ ಯುದ್ಧಗಳಲ್ಲಿ ಭಾಗವಹಿಸಲಾರೆ. ಈ ಪುಟಗಳಲ್ಲಿ ನಾನು ಈಗಾಗಲೇ ಹೇಳಿರುವಂತೆ, ಭಾರತ ಹಿಂಸಾಮಾರ್ಗದಿಂದ ಸ್ವಾತಂತ್ರ್ಯವನ್ನು ಗಳಿಸಿದರೆ (ನನ್ನ ಮಟ್ಟಿಗೆ ಅದು ಸ್ವಾತಂತ್ರ್ಯವೇ ಅಲ್ಲ) ಆಗ ಭಾರತ ನನ್ನ ಹೆಮ್ಮೆಯ ರಾಷ್ಟ್ರವಾಗಿರುವುದಿಲ್ಲ. ಅದು ನನಗೆ ಪ್ರಜಾಜೀವನಮರಣದ ಕಾಲವಾಗುತ್ತದೆ. ಆದುದರಿಂದ ಭಾರತ ಸಾಮ್ರಾಜ್ಯಸ್ಥಾಪನೆಯ ಯಾವುದಾದರೂ ಯುದ್ಧವನ್ನು ಹೂಡಿದರೂ, ಅದರಲ್ಲಿ ಪ್ರತ್ಯಕ್ಷವಾಗಿಯಾಗಲೀ ಅಪ್ರತ್ಯಕ್ಷವಾಗಿಯಾಗಲೀ ನಾನು ಭಾಗಿಯಾಗುವ ಪ್ರಶ್ನೆಯೇ ಇಲ್ಲ.

ಪಶ್ಚಿಮ ದೇಶದ ಸಹೋದ್ಯೋಗಿಯುದ್ಧವಿರೋಧಿಗಳು, ಶಾಂತಿಯ ಕಾಲದಲ್ಲಿಯೂ ಯುದ್ಧದಲ್ಲಿ ಭಾಗಿಗಳಾಗುತ್ತಾರೆ. ಯಾಕೆಂದರೆ ಯುದ್ಧದ ಸಿದ್ಧತೆಗೆ ಅವರು ತಮ್ಮ ಪಾಲಿನ ಹಣವನ್ನು ಕೊಡಬೇಕಾಗುತ್ತದೆ. ಮತ್ತು ಅಂತಹ ಸಿದ್ಧತೆಯೇ ಮುಖ್ಯ ಕರ್ಮವಾಗಿ ಉಳ್ಳ ಸರ್ಕಾರವನ್ನು ಅವರು ಸಾಕಬೇಕಾಗುತ್ತದೆ ಎಂದು ಹಿಂದೆಯೇ ನಾನು ಈ ಪುಟಗಳಲ್ಲಿ ತೋರಿಸಿದೇನೆ. ಎಲ್ಲಿಯವರೆಗೆ ಯುದ್ಧದ ಕಾರಣಗಳನ್ನು ಅರ್ಥಮಾಡಿಕೊಂಡು ಸಕಾರಣವಾಗಿ ಅವನ್ನು ಪರಿಹರಿಸುವುದಿಲ್ಲವೋ, ಅಲ್ಲಿಯವರೆಗೆ ಯುದ್ಧವನ್ನು ನಿಲ್ಲಿಸುವ ಎಲ್ಲ

ಚಟುವಟಿಕೆಗಳೂ ನಿಷ್ಪ್ರಯೋಜನಕಾರಿಯಾಗುತ್ತವೆ. ಜಗತ್ತಿನ ನಿರ್ಬಲ ರಾಷ್ಟ್ರಗಳನ್ನು (ಹಾಗೆನ್ನಿಸಿಕೊಳ್ಳುವವರನ್ನು) ಲೂಟಿಮಾಡುವ ಅಮಾನುಷ ಸ್ಪರ್ಧೆಯೇ ಇಂದಿನ ಯುದ್ಧಗಳಿಗೆ ಮುಖ್ಯ ಕಾರಣವಲ್ಲವೆ?

(ಯಂಗ್ ಇಂಡಿಯಾ)

## ದಯೆ – ನಿರ್ದಯೆ

ಯಾವ ಮನುಷ್ಯನಲ್ಲಿಯೂ ದಯೆ–ಅಹಿಂಸೆ–ಪ್ರೇಮ–ಸತ್ಯ ಈ ಸುಗುಣಗಳನ್ನು ನಿರ್ದಯೆ–ಹಿಂಸೆ–ದ್ವೇಷ–ಅಸತ್ಯ ಇವುಗಳಿಗೆ ಎದುರಾಗಿ ನಿಲ್ಲಿಸಿದಾಗ ಮಾತ್ರ ಪರೀಕ್ಷಿಸಬಹುದು.

ಇದು ನಿಜವಾದರೆ, ಕೊಲೆಗಾರನ ಮುಂದೆ ಅಹಿಂಸೆ ಪ್ರಯೋಜನಕ್ಕೆ ಬರುವುದಿಲ್ಲ ಎಂದು ಹೇಳುವುದು ಸರಿಯಲ್ಲ. ಕೊಲೆಯ ಸಮಕ್ಷದಲ್ಲಿ ಅಹಿಂಸೆಯಲ್ಲಿ ಪ್ರಯೋಗ ನಡೆಸುವುದು ಆತ್ಮನಾಶವೇ ಎಂದು ನಿಶ್ಚಯವಾಗಿ ಹೇಳಬಹುದು. ಆದರೆ ಇದು ಅಹಿಂಸೆಯ ಕೊನೆಯ ಪರೀಕ್ಷೆ. ಕೇವಲ ನಿಸ್ಸಹಾಯನಾಗಿ ತನ್ನ ಕೊಲೆಗೆ ಅವಕಾಶ ಕೊಡುವವನು ಪರೀಕ್ಷೆಯಲ್ಲಿ ತೇರ್ಗಡೆಯಾದವನೆಂದು ಹೇಳುವುದಕ್ಕಾಗುವುದಿಲ್ಲ. ತನ್ನನ್ನು ಹತ್ಯಾಕಾರಿ ಕೊಲ್ಲುತ್ತಿರುವಾಗ ಯಾರಿಗೆ ಅವನಲ್ಲಿ ದ್ವೇಷವುಂಟಾಗುವುದಿಲ್ಲವೋ ಮತ್ತು ಅವನನ್ನು ಕ್ಷಮಿಸುವಂತೆ ದೇವರನ್ನು ಪ್ರಾರ್ಥಿಸುತ್ತಾನೋ ಅವನು ನಿಜವಾಗಿ ಅಹಿಂಸಾವಾದಿ. ಏಸುವಿನ ವಿಷಯದಲ್ಲಿ ಚರಿತ್ರೆ ಹೀಗೆ ಹೇಳುತ್ತದೆ: ಶಿಲುಬೆಯ ಮೇಲೆ ತನ್ನ ಕೊನೆಯ ಉಸಿರಿನೊಂದಿಗೆ ಏಸು 'ತಂದೆ, ಅವರನ್ನು ಮನ್ನಿಸು. ತಾವು ಏನು ಮಾಡುತ್ತಿರುವರೆಂಬುದು ಅವರಿಗೆ ತಿಳಿಯದು' ಎಂದು. ಇತರ ಮತಗಳಲ್ಲಿಯೂ ಇಂತಹ ಉದಾಹರಣಾವಾಕ್ಯಗಳಿವೆ. ಈ ವಾಕ್ಯ ಜಗತ್ಪ್ರಸಿದ್ಧವಾದುದರಿಂದ ಇದನ್ನು ಕೊಟ್ಟದೆ.

ನಮ್ಮ ಅಹಿಂಸೆ ಆ ಮಟ್ಟಕ್ಕೆ ಏರಿಲ್ಲ ಎಂಬುದು ಬೇರೆ ವಿಷಯ. ನಮ್ಮ ಅಶಕ್ತಿ ಅಥವಾ ಅನನುಭವ—ಇವುಗಳ ಕಾರಣದಿಂದ ಅಹಿಂಸೆಯ ಮಟ್ಟವನ್ನು ನಾವು ಕಡಮೆ ಮಾಡುವುದು ಪೂರ್ಣ ತಪ್ಪು. ಧ್ಯೇಯವನ್ನು ಸರಿಯಾಗಿ **ಅರ್ಥಮಾಡಿಕೊಂಡಲ್ಲದೆ ಅದನ್ನು ಮುಟ್ಟುವ ಆಸೆ ಎಂದಿಗೂ ಸಾಧ್ಯವಿಲ್ಲ.**

ಆದುದರಿಂದ ಅಹಿಂಸೆಯ ಶಕ್ತಿಯನ್ನರಿಯಲು, ನಮ್ಮ ವಿವೇಚನೆಯನ್ನು ಪ್ರಯೋಗಿಸಬೇಕಾದುದು ಆವಶ್ಯಕ. (ಹರಿಜನ, ೨೮-೪-೧೯೪೬)

## ಅಣುಬಾಂಬು

ಜಗತ್ತಿನಲ್ಲಿ ಪ್ರಳಯಕಾಲದ ಬದಲಾವಣೆಗಳಾಗುತ್ತಿವೆ. ನಾನು ಸತ್ಯ ಮತ್ತು ಅಹಿಂಸೆಯಲ್ಲಿಯ ನನ್ನ ನಂಬಿಕೆಗೆ ಇನ್ನೂ ಅಂಟಿಕೊಂಡಿದೇನೆಯೆ? ಅಣುಬಾಂಬು ಆ ನಂಬಿಕೆಯನ್ನು ಹಾರಿಸಿಬಿಟ್ಟಿಲ್ಲವೆ? ಅದು ಹಾರಿಸಿಲ್ಲ; ಅದು ಮಾತ್ರವಲ್ಲ. ಜಗತ್ತಿನಲ್ಲಿ ಈ ಅವಳಿತತ್ತ್ವಗಳೇ (ಸತ್ಯ-ಅಹಿಂಸೆ) ಅತ್ಯಂತ ಶಕ್ತಿಯುತವಾದ ಅಸ್ತ್ರವಾಗುವುವೆಂಬುದನ್ನು ನಿದರ್ಶನಪಡಿಸಿದೆ. ಅದರ ಮುಂದೆ ಅಣುಬಾಂಬಿನ ಆಟ ಏನೂ ನಡೆಯುವುದಿಲ್ಲ. ಎದುರು ಬದುರಾಗಿರುವ ಎರಡು ಶಕ್ತಿಗಳೂ ಪೂರ್ಣ ಬೇರೆ ಬೇರೆ—ಒಂದು ನೈತಿಕ ಮತ್ತು ಆತ್ಮಿಕ; ಮತ್ತೊಂದು ದೈಹಿಕ ಮತ್ತು ಭೌತ. ಅದರ ಸ್ವಭಾವದಲ್ಲಿಯೇ ಅದರ ಅಂತ್ಯವಿದೆ. ಆತ್ಮಶಕ್ತಿ ಯಾವಾಗಲೂ ಪುರೋಗಾಮಿ ಮತ್ತು ಅನಂತ. ಅದರ ಪೂರ್ಣ ಪ್ರಕಟನೆ ಜಗತ್ತಿನಲ್ಲಿ ಅದನ್ನು ಅಜೇಯವಾಗಿ ಮಾಡುತ್ತದೆ. ಇದನ್ನು ಹೇಳುವುದರಲ್ಲಿ, ನಾನು ಹೊಸದು ಏನನ್ನೂ ಹೇಳಿಲ್ಲವೆಂಬುದು ನನಗೆ ಗೊತ್ತು. ಆ ವಿಷಯಕ್ಕೆ ನಾನು ಸುಮ್ಮನೆ ಸಾಕ್ಷಿ. ಇನ್ನೂ ಹೆಚ್ಚಿಗೆ ಏನೆಂದರೆ, ಆ ಶಕ್ತಿ ಎಲ್ಲರಲ್ಲಿಯೂ, ಹೆಣ್ಣು-ಗಂಡು-ಮಗು—ಅವರ ಚರ್ಮದ ಬಣ್ಣ ಯಾವುದೇ ಇರಲಿ—ಇದೆ. ಮಾತ್ರ ಅನೇಕರಲ್ಲಿ ಅದು ಜಡವಾಗಿದೆ. ಆದರೆ ವಿವೇಚನಾಯುತವಾದ ಶಿಕ್ಷಣದಿಂದ ಅದನ್ನು ಜಾಗೃತಗೊಳಿಸಬಹುದು.

ಇನ್ನು ಇದನ್ನೂ ಹೇಳಬೇಕು. ಈ ಸತ್ಯವನ್ನು ಅಂಗೀಕರಿಸಿ ಅವನು ಕಾರ್ಯಮಾಡದಿದ್ದಲ್ಲಿ, ಆತ್ಮನಾಶದಿಂದ ಬಿಡುಗಡೆ ಇಲ್ಲ. ನೆರೆಹೊರೆಯುವರ ಪ್ರತಿಕ್ರಿಯೆಯನ್ನು ಗಮನಿಸದೆ ಪ್ರತಿಯೊಬ್ಬ ವ್ಯಕ್ತಿಯೂ, ಜೀವನದ ಎಲ್ಲ ಕ್ಷೇತ್ರಗಳಲ್ಲಿಯೂ, ಆತ್ಮಪ್ರಕಟನೆ ಮಾಡಲು ತನ್ನನ್ನು ತಾನು ತಯಾರಿಸಿ ಕೊಳ್ಳುವುದರಲ್ಲಿಯೇ ಪರಿಹಾರವಿದೆ. (ಹರಿಜನ, ೧೦-೨-೧೯೪೬)

# ಅಣುಬಾಂಬು ಮತ್ತು ಅಹಿಂಸೆ

ಅಮೆರಿಕದ ಮಿತ್ರರು ಮತ್ತಾವುದೂ ಮಾಡದಷ್ಟು ವೇಗವಾಗಿ ಅಹಿಂಸೆಯನ್ನು ಅಣುಬಾಂಬು ತರುವುದೆಂದು ಸೂಚಿಸಿದಾರೆ. ಅಣುಬಾಂಬಿನ ವಿನಾಶಕ ಶಕ್ತಿ ಜಗತ್ತಿಗೆ ಅತ್ಯಂತ ಜಿಗುಪ್ಸೆಯನ್ನುಂಟುಮಾಡಿ ಸದ್ಯಕ್ಕಾದರೂ ಅದು ಹಿಂಸಾಮಾರ್ಗದಿಂದ ಬೇರೆ ಕಡೆ ತಿರುಗುವುದು ಎಂಬ ಅರ್ಥದಲ್ಲಿಯಾದರೆ, ಅಹಿಂಸೆ ಬರುವುದು ನಿಶ್ಚಯ. ಒಬ್ಬ ಹೊಟ್ಟೆಬಾಕ ವಾಂತಿ ಬರುವವರೆಗೆ ರುಚಿಯಾದ ತಿಂಡಿಗಳನ್ನು ಹೊಟ್ಟೆಗೆ ತುಂಬಿಕೊಂಡು, ಸ್ವಲ್ಪ ಬಿಟ್ಟು, ವಾಂತಿಯ ಪರಿಣಾಮ ಮುಗಿದಮೇಲೆ ಮತ್ತೆ ದ್ವಿಗುಣೋತ್ಸಾಹದಿಂದ ಮತ್ತೆ ತಿಂಡಿಗೆ ಹಿಂದಿರುಗುವಂತೆ, ಇದು. ಅದೇ ರೀತಿ ಜಗತ್ತು, ಜಿಗುಪ್ಸೆ ಶಮನವಾದ ಕೂಡಲೇ, ದ್ವಿಗುಣ ಉತ್ಸಾಹದಿಂದ ಹಿಂಸೆಗೇ ಹಿಂದಿರುಗುವುದು.

ಅನೇಕ ವೇಳೆ ಕೆಟ್ಟದ್ದರಿಂದ ಒಳ್ಳೆಯದು ಆಗುತ್ತದೆ. ಆದರೆ ಅದು ದೇವರ ಯೋಜನೆ, ಮನುಷ್ಯನದಲ್ಲ. ಕೇಡಿನಿಂದ ಕೇಡು ಬರುತ್ತದೆ. ಒಳ್ಳೆಯದರಿಂದ ಒಳ್ಳೆಯದು ಬರುತ್ತದೆ ಎಂಬುದು ಮಾತ್ರ ಮನುಷ್ಯನಿಗೆ ಗೊತ್ತು.

ಅಣುಶಕ್ತಿ, ಅಮೆರಿಕ ವಿಜ್ಞಾನಿಗಳಿಂದಲೂ ಸೈನ್ಯದಿಂದಲೂ ವಿನಾಶದ ಉದ್ದೇಶ್ಯಕ್ಕೆ ಹೂಡಲ್ಪಟ್ಟಿದ್ದರೂ, ಇತರ ವಿಜ್ಞಾನಿಗಳಿಂದ ಮಾನವೀಯ ಉದ್ದೇಶ್ಯಗಳಿಗಾಗಿ ಉಪಯೋಗಿಸಲ್ಪಡಬಹುದೆಂಬುದು ನಿಸ್ಸಂದೇಹವಾಗಿ ಸಾಧ್ಯ. ಆದರೆ ಅದಲ್ಲ ನನ್ನ ಅಮೆರಿಕದ ಮಿತ್ರರ ಅಭಿಪ್ರಾಯ. ಸತ್ಯವನ್ನು ಸರಾಗವಾಗಿ ಸೂಚಿಸುವ ಅಂತಹ ಪ್ರಶ್ನೆಯನ್ನು ಹಾಕುವಷ್ಟು ಅವರೇನೂ ತಿಳಿಯದವರಾಗಿರಲಿಲ್ಲ. ಕಿಚ್ಚಿಡುವವನು ಬೆಂಕಿಯನ್ನು ನಾಶಕಾರಕ ಮತ್ತು ಅಪಾಯಕರ ಕೆಲಸಗಳಿಗೆ ಉಪಯೋಗಿಸುತ್ತಾನೆ. ಗೃಹಿಣಿ, ಮಾನವರಿಗೆ ಪುಷ್ಟಿಯಾದ ಆಹಾರವನ್ನು ತಯಾರಿಸಲು ನಿತ್ಯ ಬೆಂಕಿಯನ್ನು ಉಪಯೋಗಿಸುತ್ತಾಳೆ.

ನನಗೆ ತೋರುವವರೆಗೆ, ಅಣುಬಾಂಬು, ಸಹಸ್ರಾರು ವರುಷಗಳಿಂದ ಮನುಷ್ಯಸಮಾಜವನ್ನು ರಕ್ಷಿಸಿರುವ ಅತ್ಯಂತ ಸದ್ಭಾವನೆಗಳನ್ನೆಲ್ಲ ನಿಶ್ಚೇತನಗೊಳಿಸಿದೆ. ಹಿಂದೆ ಯುದ್ಧನಿಯಮಗಳು ಎಂಬುವು ಇದ್ದವು. ಅದರಿಂದ ಯುದ್ಧ ಸಹನೀಯವಾಗಿತ್ತು. ಈಗ ನಮಗೆ ಬೆತ್ತಲೆಯ ಸತ್ಯ ಗೊತ್ತಾಗಿದೆ.

ಯುದ್ಧಕ್ಕೆ ಯಾವ ನಿಯಮವೂ ಇಲ್ಲ. ಬಲದ ನಿಯಮವೊಂದೇ. ಅಣುಬಾಂಬು ಮಿತ್ರರಿಗೆ ತಾತ್ಕಾಲಿಕವಾಗಿ ಬರಿದಾದ ಜಯವನ್ನು ಕೊಟ್ಟಿತು. ಆದರೆ ಅದರ ಪರಿಣಾಮ ಜಪಾನರ ಆತ್ಮವನ್ನು ನಾಶಮಾಡುವುದರಲ್ಲಿ ಆಯಿತು. ನಾಶ ಮಾಡಿದ ರಾಷ್ಟ್ರದ ಆತ್ಮಕ್ಕೆ ಏನಾಗಿದೆ ಎಂಬುದನ್ನು ಅರಿಯಲು ಇದು ಇನ್ನೂ ಅತ್ಯಲ್ಪಕಾಲ. ಪ್ರಕೃತಿಶಕ್ತಿಗಳು ರಹಸ್ಯವಾದ ಮಾರ್ಗದಲ್ಲಿ ಕೆಲಸಮಾಡುವುವು. ನಾವು ಈ ರಹಸ್ಯವನ್ನು ಭೇದಿಸಬಹುದು; ಅದೇ ಬಗೆಯ ಸಂಗತಿಗಳಿಂದ ತಿಳಿದಿರುವ ಫಲಗಳಿಂದ, ತಿಳಿಯದಿರುವ ಫಲವನ್ನೂ ಗ್ರಹಿಸಬಹುದು. ಗುಲಾಮನ ಯಜಮಾನ, ತಾನಾಗಲೀ ತನ್ನ ಪ್ರತಿನಿಧಿಯಾಗಲೀ ಬೋನಿ ನಲ್ಲಿದ್ದು ಗುಲಾಮನನ್ನು ಹಿಡಿದುಕೊಳ್ಳದಿದ್ದರೆ ಗುಲಾಮರನ್ನು ಇಟ್ಟುಕೊಳ್ಳು ವುದು ಸಾಧ್ಯವಿಲ್ಲ. ತನ್ನ ದುರಾಶೆಯನ್ನು ಈಡೇರಿಸಿಕೊಳ್ಳಲು ಜಪಾನ್ ಮಾಡಿದ ದುಷ್ಕೃತ್ಯಗಳಿಗೆ ನಾನು ಸಮರ್ಥನೆ ಮಾಡಬಯಸುವೆನೆಂದು ಯಾರೂ ಭಾವಿಸಕೂಡದು. ವ್ಯತ್ಯಾಸ ತಾರತಮ್ಯದ್ದು. ಜಪಾನರ ದುರಾಶೆ ಹೆಚ್ಚು ಅಯೋಗ್ಯವಾದದ್ದೆಂದು ನಾನು ಭಾವಿಸುತ್ತೇನೆ. ಆದರೆ ಈ ಹೆಚ್ಚು ಅಯೋಗ್ಯ ತನ, ಕಡಮೆ ಅಯೋಗ್ಯನಿಗೆ ಜಪಾನಿನ ಒಂದು ಭಾಗದ ಸ್ತ್ರೀಪುರುಷ ಶಿಶು ಗಳನ್ನೆಲ್ಲ ನಿಷ್ಕರುಣೆಯಿಂದ ನಾಶಮಾಡಲು ಯಾವ ಅಧಿಕಾರವನ್ನೂ ಉಂಟು ಮಾಡಲಿಲ್ಲ.

ಅಣುಬಾಂಬಿನ ಮಹತ್ ವಿಷಾದಘಟನೆಯಿಂದ ನ್ಯಾಯವಾಗಿ ವ್ಯಕ್ತ ವಾಗುವ ನೀತಿ ಏನೆಂದರೆ, ಅಣುಬಾಂಬನ್ನು ಪ್ರತಿಬಾಂಬಿನಿಂದ ನಾಶಮಾಡಲು ಸಾಧ್ಯವಿಲ್ಲ; ಹಿಂಸೆಯನ್ನು ಪ್ರತಿಹಿಂಸೆಯಿಂದ ನಾಶಮಾಡುವುದು ಹೇಗೆ ಸಾಧ್ಯವಿಲ್ಲವೋ ಹಾಗೆ. ದ್ವೇಷವನ್ನು ಪ್ರೇಮದಿಂದ ಮಾತ್ರ ಜಯಿಸಲು ಸಾಧ್ಯ. ಪ್ರತಿದ್ವೇಷ, ದ್ವೇಷದ ಆಳವನ್ನೂ ಅಗಲವನ್ನೂ ಹೆಚ್ಚಿಸುತ್ತದೆ ಮಾತ್ರ. ನಾನು ಹಿಂದೆ ಅನೇಕ ಸಲ ಹೇಳಿರುವುದನ್ನೇ ನನ್ನ ಶಕ್ತಿಗನುಗುಣವಾಗಿ ಆಚರಿಸಿರು ವುದನ್ನೇ ಮತ್ತೆ ಈಗ ಹೇಳುತ್ತಿದೇನೆ. ನಾನು ಮೊದಲು ಹೇಳಿದಾಗಲೂ ಅದು ಹೊಸದಲ್ಲ. ಅದು ಪರ್ವತಗಳಷ್ಟೇ ಪ್ರಾಚೀನ. ಮಾತ್ರ, ನಾನು ಅಕ್ಷರ ತಿದ್ದುವ (ಕಾಪಿ) ಪುಸ್ತಕದ ತಲೆವಾಕ್ಯವನ್ನು ಹೇಳಲಿಲ್ಲ. ನನ್ನ ಪ್ರತಿಯೊಂದು ರಕ್ತಕಣದಲ್ಲಿಯೂ ನಾನು ನಂಬಿದುದನ್ನೇ ಪ್ರಕಟಿಸಿದೆ. ಜೀವನದ ನಾನಾ ರಂಗಗಳಲ್ಲಿ ಅರವತ್ತು ವರುಷಗಳ ಅನುಭವ, ನನ್ನ ನಂಬಿಕೆಯನ್ನು ಹೆಚ್ಚು

ಸಂಪದ್ಯುಕ್ತವಾಗಿ ಮಾಡಿದೆ. ಸ್ನೇಹಿತರ ಅನುಭವ ಇದನ್ನೇ ಬಲಪಡಿಸಿದೆ. ಹೇಗೂ ಸ್ಖಲನಾಗಿ ಮನುಷ್ಯನನ್ನು ನಿಲ್ಲಿಸಬಲ್ಲ ಕೇಂದ್ರ ಸತ್ಯ ಇದು. ಮಾಕ್ಸ್ ಮುಲ್ಲರ್ ಅನೇಕ ವರುಷಗಳ ಕೆಳಗೆ ಹೇಳಿದುದನ್ನೇ ನಾನು ಪುನರುಚ್ಚರಿಸುತ್ತೇನೆ. ಏನೆಂದರೆ 'ಎಲ್ಲಿಯವರೆಗೆ ಸತ್ಯವನ್ನು ನಂಬದವರು ಇರುತ್ತಾರೆಯೋ ಅಲ್ಲಿಯವರೆಗೆ ಅದನ್ನು ಪದೇ ಪದೇ ಉಚ್ಚರಿಸುವುದು ಆವಶ್ಯಕ.'

(ಹರಿಜನ, ೭-೭-೧೯೪೬)

## ಒಬ್ಬ ಆಂಗ್ಲೇಯ ಪತ್ರಿಕಾಕರ್ತನೊಡನೆ

ಒಬ್ಬ ಆಂಗ್ಲೇಯ ಮಿತ್ರರು ಕೇಳಿದರು :

'ಜಗತ್ತು ಮುಂದುವರಿಯುತ್ತಿದೆಯೆ ? ಆಧುನಿಕ ಜಗತ್ತಿನಲ್ಲಿ ಜೀವನವೂ ಜೀವನಕ್ಕಾಗಿ ಹೋರಾಟವೂ ಸುಲಭವಾಗಿರುವುದು, ಮನುಷ್ಯನ ಸಹಜ ಪ್ರವೃತ್ತಿಗಳನ್ನೂ ಸೂಕ್ಷ್ಮಸ್ವಭಾವಗಳನ್ನೂ ಮೊದ್ದುಮಾಡುವ ಫಲವುಳ್ಳದುದು ಆಗಿರುವುದಲ್ಲವೆ ?'

ಗಾಂಧೀಜೀ ಹೇಳಿದರು : 'ಅದು ನಿಮ್ಮ ವ್ಯಾಖ್ಯಾನವಾದರೆ ನಾನು ಅನುಮೋದಿಸುತ್ತೇನೆ.'

**ಪ್ರಶ್ನೆ :** ಮತ್ತೆ ಅಣುಬಾಂಬು ?

**ಉತ್ತರ :** ಅದರ ವಿಷಯದಲ್ಲಿ ನೀವು ಜಗತ್ತಿಗೆ ಪ್ರಕಟಿಸಬಹುದು. ನನ್ನನ್ನು ತಿದ್ದಲು ಸಾಧ್ಯವಿಲ್ಲ. ಹೆಣ್ಣು-ಗಂಡು ಮಕ್ಕಳ ಪೂರ್ಣ ನಾಶಕ್ಕೆ ಅಣು ಬಾಂಬನ್ನು ಹೂಡುವುದನ್ನು ವಿಜ್ಞಾನದ ಪೈಶಾಚಿಕ ಉಪಯೋಗವೆಂದು ನಾನು ಭಾವಿಸುತ್ತೇನೆ.

**ಪ್ರಶ್ನೆ :** ಅದಕ್ಕೆ ಪರಿಹಾರ ಯಾವುದು ? ಅಹಿಂಸೆ ಹಳೆಯ ಕಂದಾಚಾರವಾಗಿಹೋಯಿತೆ ?

**ಉತ್ತರ :** ಇಲ್ಲ. ಅದರ ಬದಲು ಈಗ ಕ್ಷೇತ್ರದಲ್ಲಿ ಉಳಿದಿರುವುದು ಅಹಿಂಸೆಯೊಂದೇ. ಅಣುಬಾಂಬು ನಾಶಮಾಡಲಾರದ ಒಂದೇ ವಸ್ತು ಅದು. ಅಣುಬಾಂಬು ಹಿರೋಷಿಮಾವನ್ನು ತೊಡೆದುಹಾಕಿತೆಂದು ನಾನು ಮೊದಲು

ಕೇಳಿದಾಗ, ಸ್ವಲ್ಪವೂ ವಿಚಲಿತನಾಗಲಿಲ್ಲ. ಅದರ ಬದಲು ನನಗೇ ನಾನು ಹೇಳಿಕೊಂಡೆ: 'ಜಗತ್ತು ಅಹಿಂಸೆಯನ್ನು ಈಗ ಅಂಗೀಕರಿಸದಿದ್ದಲ್ಲಿ, ಅದು ನಿಜವಾಗಿ ಮಾನವಸಮಾಜದ ನಿಶ್ಚಿತ ಆತ್ಮಹತ್ಯೆ.'

(ಹರಿಜನ, ೨೯-೯-೧೯೪೬)

## ಚರಖಾ ಮತ್ತು ಅಣುಬಾಂಬು

ಕನೂ ಗಾಂಧೀಯವರಿಂದ ನೂಲುವುದರಲ್ಲಿ ಪಾಠಗಳನ್ನು ಕಲಿತ ನ್ಯೂಯಾರ್ಕ್ ಪೋಸ್ಟ್ ಪತ್ರಿಕೆಯ ಆಂಡ್ರ್ಯೂ ಫ್ರೀಮನ್, ಪಂಡಿತ ನೆಹರೂ ರವರೊಂದಿಗೆ ಗಡಿನಾಡು ಪ್ರವಾಸಮಾಡಿ ಹಿಂದಿರುಗಿದ ಬಳಿಕ, ವಿಷಯವನ್ನು ಗಾಂಧೀಜಿಯವರೊಂದಿಗೆ ಮುಂದುವರಿಸಿದರು. ಅವರು ಗಾಂಧೀಜಿಯವರಲ್ಲಿ ಬಂದುದು, ಚರಖಾಕ್ಕೆ ಒಂದು ಸಾಂಸ್ಕೃತಿಕ ಮತ್ತು ಚಿಕಿತ್ಸಕ ಗುಣವಿದೆ, ಅದರಲ್ಲಿಯೂ ಅಣುಬಾಂಬಿನಲ್ಲಿ ಮುಕ್ತಾಯವಾಗಿರುವ ಪಾಶ್ಚಾತ್ಯರ ಅಸ್ವಸ್ಥತೆ ಮತ್ತು ನೋವಿಗೆ—ಎಂಬ ನಂಬಿಕೆಯಿಂದ.

ಅವರು ಹೀಗೆ ಕೇಳಿದರು: 'ಚರಖಾ ಅಮೆರಿಕಕ್ಕೆ ಕೊಡುವ ಸಂದೇಶ ಇದೆಯೇ? ಅದು ಅಣುಬಾಂಬಿನ ಎದುರು ಅಸ್ತ್ರವಾಗಿ ಕೆಲಸಮಾಡಬಲ್ಲದೆ?'

ಗಾಂಧೀಜೀ ಉತ್ತರ ಕೊಟ್ಟರು: 'ಚರಖಾ ಅಮೆರಿಕಕ್ಕೂ—ಜಗತ್ತಿಗೇ ಕೊಡುವ ಸಂದೇಶವಿದೆಯೆಂದು ನಾನು ಭಾವಿಸುತ್ತೇನೆ. ಭಾರತ ಚರಖಾ ವನ್ನು ತನ್ನ ಸ್ವಂತದ್ದಾಗಿ ಮಾಡಿಕೊಂಡಿರುವುದನ್ನು ಜಗತ್ತಿಗೆ ನಿದರ್ಶನ ಮಾಡುವವರೆಗೆ—ಇಂದು ಮಾಡಿಕೊಂಡಿಲ್ಲ—ಆ ಸಂದೇಶ ಸಾಧ್ಯವಿಲ್ಲ. ತಪ್ಪು ಚರಖಾದ್ದಲ್ಲ. ಭಾರತದ ಉಳಿವೂ ಮತ್ತು ಜಗತ್ತಿನ ಉಳಿವೂ ಚರಖಾದಲ್ಲಿ ಅಡಕವಾಗಿದೆ ಎಂಬುದರಲ್ಲಿ ನನಗೆ ಲವಲೇಶವೂ ಸಂಶಯವಿಲ್ಲ. ಭಾರತ ಯಂತ್ರದ ಗುಲಾಮನಾದರೆ ಆಗ ನಾನು 'ದೇವರೇ ಜಗತ್ತನ್ನು ಕಾಪಾಡ ಬೇಕು' ಎಂದು ಹೇಳುತ್ತೇನೆ.'

ಗಾಂಧೀಜೀ ಮುಂದುವರಿದರು: 'ಭಾರತಕ್ಕೆ ಹೆಚ್ಚು ಉದಾತ್ತವಾದ ಉದ್ದಿಷ್ಟಕಾರ್ಯವಿದೆ. ಅದು ಜಗತ್ತಿನಲ್ಲಿ ಸ್ನೇಹ ಮತ್ತು ಶಾಂತಿಯನ್ನು ಸ್ಥಾಪಿಸ ಬೇಕಾಗಿದೆ. ಇನ್ನೂ ಹೆಚ್ಚು ಸಂಖ್ಯೆಯ ಸಮ್ಮೇಳನಗಳಿಂದ ಶಾಂತಿಯ ಸ್ಥಾಪನೆ

ಆಗುವುದಿಲ್ಲ. ನಮಗೆಲ್ಲ ಕಾಣುತ್ತಿರುವಂತೆ, ಸಮ್ಮೇಳನ ನಡೆಯುತ್ತಿರುವಾಗಲೇ, ಶಾಂತಿಯನ್ನು ಮುರಿಯುತ್ತಿದಾರೆ.

**ಫ್ರೀಮನ್ :** ಭಾರತ ಮಾರ್ಗದರ್ಶನ ಮಾಡಬೇಕು. ಆದರೆ ಭಾರತ ಸಂಕ್ಷೋಭೆಗೊಂಡಿದೆ. ಎಷ್ಟು ದುಃಖಕರ! ಚರಖಾವನ್ನು ಯಾವ ರಾಷ್ಟ್ರವಾದರೂ ನಿಜವಾಗಿ ತೆಗೆದುಕೊಳ್ಳಬಹುದಾದರೆ—ಅದು ಭಾರತ. ತೆಗೆದು ಕೊಳ್ಳುವುದೆಂದು ನೀವು ಭಾವಿಸುತ್ತೀರಾ ?

**ಗಾಂಧೀಜೀ :** ಭಾರತ ಹಾಗೆ ಮಾಡುತ್ತಿದೆ. ಆದರೆ ಮುಂದುವರಿಯು ತ್ತಿರುವುದು ಬಹಳ ನಿಧಾನ ಎಂದು ಒಪ್ಪುತ್ತೇನೆ. ಪಂಡಿತ ನೆಹರೂ ಖಾದಿ ಯನ್ನು 'ಸ್ವಾತಂತ್ರ್ಯದ ಸಮವಸ್ತ್ರ' ಎಂದು ಕರೆದರು. ಎಲ್ಲಿಯವರೆಗೆ ಅದು ವಕ್ರವ್ಯಕ್ತಿಗಳ ಮತ್ತು ದರಿದ್ರರ ಸಮಾಧಾನ ಮಾತ್ರವೊ, ಅಲ್ಲಿಯವರೆಗೆ ಅದು ಹಾಗೆ ಆಗಲಾರದು. ಮನುಷ್ಯನಿಂದ ಸಾಧಿಸಲಾಗದ ಅನೇಕ ಕಾರ್ಯ ಗಳಿವೆ. ಆದರೆ ಎಲ್ಲ ಕಾರ್ಯಗಳೂ ದೇವರಿಗೆ ಸಾಧ್ಯ. ದೇವರು ಎನಿಸಿಕೊಳ್ಳುವ ಸಜೀವಶಕ್ತಿ ಇಲ್ಲದಿದ್ದಲ್ಲಿ, ಚರಖಾಕ್ಕೆ ಸ್ಥಾನವಿಲ್ಲ.

**ಫ್ರೀಮನ್ :** ನೂಲುವವರನ್ನು ಇಲ್ಲಿ ವಕ್ರರೆಂದು ಕರೆಯುವುದಿಲ್ಲ, ಅಲ್ಲವೆ ?

**ಗಾಂಧೀಜೀ :** ಇಲ್ಲ, ಅಮೆರಿಕದವರು ಏನು ಹೇಳುವರೆಂಬುದನ್ನು ನಿರೀಕ್ಷಿಸಿ ಆ ಮಾತನ್ನು ಉಪಯೋಗಿಸಿದೆ. ನನ್ನನ್ನು ರಕ್ಷಿಸಿಕೊಳ್ಳಲು ನಾನು ಒಪ್ಪುತ್ತೇನೆ. ಒಬ್ಬ ಮಿತ್ರರು ನನ್ನನ್ನು 'ವ್ಯಾವಹಾರಿಕ ಧ್ಯೇಯವಾದಿ' ಎಂದು ವಿವರಿಸಿದರು.

**ಫ್ರೀಮನ್ :** ತಕ್ಕಮಟ್ಟಿಗೆ ಬುದ್ಧಿವಂತನಾಗಿ ಅಮೆರಿಕದವನಾಗಿ ನಾನು ಇಷ್ಟು ಮಾತ್ರ ಹೇಳಬಲ್ಲೆ : ಅನೇಕ ಅಮೆರಿಕದವರು ನೂಲುವವರನ್ನು ವಕ್ರಬುದ್ಧಿಯವರೆಂದು ಕರೆಯುವರು. ಆದರೆ ಬಹಳವಾಗಿ ಯೋಚಿಸುತ್ತಿರುವ ಅಮೆರಿಕದವರ ಸಂಖ್ಯೆ ಕಡಮೆ ಇಲ್ಲ. ನಾಗರಿಕತೆ ನಾಶವಾಗದಂತೆ ರಕ್ಷಿಸುವ ಏನನ್ನಾದರೂ ಕಂಡುಹಿಡಿಯಬೇಕು. ಜೀವನವನ್ನು ಸರಳ ಮಾಡಬೇಕು.

**ಗಾಂಧೀಜೀ :** ಮನುಷ್ಯನ ವ್ಯಕ್ತಿತ್ವ ಮತ್ತೆ ಯಾವ ಬೇರೆ ರೀತಿ ಯಿಂದಲೂ ರಕ್ಷಣೆಯಾಗುವುದಿಲ್ಲ. '**ಸರ್ವೋದಯ**' ಎಂಬ ಪದಸಮೂಹ

ದಿಂದ ಏನು ಅರ್ಥವಾಗುತ್ತದೆಯೋ ಅದೇ ನನ್ನ ಧ್ಯೇಯ. ಆ ಪುಸ್ತಕ ನನ್ನ ಜೀವನದಲ್ಲಿ ಬದಲಾವಣೆಯನ್ನು ಗುರುತಿಸುತ್ತದೆ. ಜಗತ್ತು ನಮಗೆ ಏನು ಮಾಡಬೇಕೆಂದು ನಾವು ಬಯಸುತ್ತೇವೆಯೋ, ನಾವೂ ಜಗತ್ತಿಗೆ ಕೊನೆಯು ವರೆಗೂ ಅದನ್ನೇ ಮಾಡಬೇಕು. ಎಲ್ಲರಿಗೂ ಸಮಾನಾವಕಾಶಗಳು ದೊರೆಯ ಬೇಕು. ಸರಿಯಾದ ಅನುಕೂಲ ದೊರೆತರೆ ಆಧ್ಯಾತ್ಮಿಕ ಬೆಳವಣಿಗೆಗೆ ಪ್ರತಿ ಒಬ್ಬರಲ್ಲಿಯೂ ಸಮಾನ ಸಾಧ್ಯತೆಗಳಿವೆ. ಚರಖಾ—ಅದಕ್ಕೆ ಸಂಕೇತವಾಗಿದೆ.

(ಹರಿಜನ, ೧೧-೧೧-೧೯೪೬)

## ಲೂಯಿ ಫಿಷರ್‌ರ ಭೇಟಿ

### ಸಾರ್ವಭೌಮ ಸಂಸ್ಥೆ

ಫಿಷರ್‌ರು ಸಂವಿಧಾನಸಭೆಯನ್ನು (ಕಾನ್ಸ್ಟಿಟ್ಯೂಯೆಂಟ್ ಅಸೆಂಬ್ಲಿ) ಕುರಿತ ಒಂದು ವಿಶಾಲ ಪ್ರಶ್ನೆಯೊಡನೆ ಸಂಭಾಷಣೆ ಪ್ರಾರಂಭಿಸಿದರು : ‘ ನಾನು ಸಂವಿಧಾನ ಸಭೆಗೆ ಹೋಗಿ ಅದನ್ನು ಬೇರೆ ಉದ್ದೇಶ್ಯಕ್ಕೆ ಉಪಯೋಗಿಸ ಬಯಸುತ್ತೇನೆ—ಯುದ್ಧರಂಗ—ಅದನ್ನು ಸಾರ್ವಭೌಮತ್ವವುಳ್ಳ ಸಂಸ್ಥೆಯೆಂದು ಘೋಷಿಸುತ್ತೇವೆ. ಇದಕ್ಕೆ ನಿಮ್ಮ ಅಭಿಪ್ರಾಯವೇನು ? ’

ಗಾಂಧೀಜೀ ಹೀಗೆ ಹೇಳಿದರು : ‘ ಬೇರೆ ಒಬ್ಬರು ಸೃಷ್ಟಿಸಿದ ಸಂಸ್ಥೆಯನ್ನು ಸಾರ್ವಭೌಮ ಸಂಸ್ಥೆ ಎಂದು ಕರೆಯುವುದರಿಂದ ಪ್ರಯೋಜನವಿಲ್ಲ. ಹೇಗೂ ಅದು ಬ್ರಿಟಿಷರ ಸೃಷ್ಟಿ. ಒಂದು ಸಂಸ್ಥೆ, ಸುಮ್ಮನೆ ಕರೆಯುವುದರಿಂದ ಸಾರ್ವಭೌಮವಾಗುವುದಿಲ್ಲ. ಜೋಹಾನ್ಸ್‌ಬರ್ಗ್‌ನ ಟೂಲಿ ಬೀದಿಯ ಮೂರು ದರ್ಜಿಗಳು ತಾವು ಸಾರ್ವಭೌಮಸಂಸ್ಥೆಯೆಂದು ಘೋಷಿಸಿಕೊಂಡರು. ಅದರಿಂದ ಏನೂ ಆಗಲಿಲ್ಲ. ಅದೊಂದು ಬರಿಯ ಪ್ರಹಸನವಾಯಿತು.

‘ ಸೂಚಿತವಾಗಿರುವ ಸಂವಿಧಾನಸಭೆ ಕ್ರಾಂತಿಕಾರಕವಲ್ಲವೆಂದು ನಾನು ಭಾವಿಸುವುದಿಲ್ಲ. ನಾನು ಹೇಳಿದೇನೆ ಮತ್ತು ನನ್ನ ನಂಬಿಕೆ ಸಹ : ಸೂಚಿತ ವಾಗಿರುವ ಸಂವಿಧಾನಸಭೆ ನಿರ್ಮಾಣಕಾರ್ಯಕ್ರಮದ ಸತ್ಯಾಗ್ರಹಕ್ಕೆ ಪರಿಣಾಮ ಕಾರಿಯಾದ ಮತ್ತೊಂದು ರೂಪ. ನಮ್ಮ ಸೋಷಲಿಸ್ಟ್ ಮಿತ್ರರ ನಿಸ್ಸ್ವಾರ್ಥತೆ ಮತ್ತು ತ್ಯಾಗಕ್ಕಾಗಿ ನನಗೆ ಅವರಲ್ಲಿ ತುಂಬ ಮೆಚ್ಚಿಕೆ ಇದ್ದರೂ, ನನ್ನ

ಮಾರ್ಗಕ್ಕೂ ಅವರ ಮಾರ್ಗಕ್ಕೂ ಇರುವ ವ್ಯತ್ಯಾಸವನ್ನು ನಾನು ಎಂದೂ ರಹಸ್ಯವಾಗಿಟ್ಟಿಲ್ಲ. ಅವರು ಸ್ಪಷ್ಟವಾಗಿ ಅಹಿಂಸೆಯಲ್ಲಿಯೂ, ಅದರ ಹೃದಯ ದಲ್ಲಿ ಅಡಗಿರುವ ಎಲ್ಲದರಲ್ಲಿಯೂ ನಂಬಿಕೆಯಿಟ್ಟಿದಾರೆ. ನಾನು ಎಲ್ಲಿಂದ ಎಲ್ಲಿಯುವರೆಗೂ ಪೂರ್ಣ ಅಹಿಂಸೆಯನ್ನೇ ನಂಬುತ್ತೇನೆ.

## ಸ್ವಲ್ಪ ವ್ಯತ್ಯಾಸದೊಂದಿಗೆ ಸಮಾಜವಾದಿ

ಅದು ಚರ್ಚೆಯನ್ನು ಸಮಾಜವಾದದ ಕಡೆಗೆ ತಿರುಗಿಸಿತು. ಫಿಷರ್ ಹೀಗೆ ಹೇಳಿದರು: ' ನೀವೂ ಸಮಾಜವಾದಿ—ಅವರೂ ಸಮಾಜವಾದಿ.'

**ಗಾಂಧೀಜೀ:** ನಾನು ಹೌದು; ಅವರು ಅಲ್ಲ. ಅವರಾರೂ ಜನಿಸು ವುದಕ್ಕೆ ಮುಂಚೆಯೇ ನಾನು ಸಮಾಜವಾದಿಯಾಗಿದ್ದೆ. ಜೊಹಾನ್ಸ್‌ಬರ್ಗ್‌ನ ಒಬ್ಬ ಉಗ್ರಸಮತಾವಾದಿಗೆ ನಾನು ನನ್ನ ಸೋಷಲಿಸಂನಲ್ಲಿ ನಂಬಿಕೆಯುಂಟು ಮಾಡಿದೆ. ಅದು ಇದಕ್ಕೆ ಪ್ರಕೃತವಲ್ಲ. ಅವರ ಸಮಾಜವಾದ ಮೃತಿಹೊಂದಿದ ಮೇಲೂ ನನ್ನ ಸಾಧನೆ ಉಳಿಯುವುದು.

**ಪ್ರಶ್ನೆ:** ಸೋಷಲಿಸಂ ಎಂದರೆ ನಿಮ್ಮ ಅರ್ಥವೇನು?

**ಉತ್ತರ:** ' ನನ್ನ ಸೋಷಲಿಸಂಗೆ ಅರ್ಥ—ಸರ್ವೋದಯ. ಕುರುಡರು, ಕಿವುಡರು, ಮೂಗರ ಬೂದಿಯ ಮೇಲೆ ಅಭಿವೃದ್ಧಿಹೊಂದಲು ನಾನು ಬಯಸು ವುದಿಲ್ಲ. ಅವರ ಸೋಷಲಿಸಂನಲ್ಲಿ ಪ್ರಾಯಶಃ ಇವರಿಗೆಲ್ಲ ಸ್ಥಳವಿಲ್ಲ. ಅವರ ಒಂದೇ ಗುರಿ ಭೌತ ಅಭಿವೃದ್ಧಿ. ಉದಾಹರಣೆಗೆ, ಪ್ರತಿಯೊಬ್ಬ ಅಮೆರಿಕ ದವರಿಗೂ ಒಂದು ಕಾರು ಇರಬೇಕೆಂಬುದು ಅಮೆರಿಕದ ಗುರಿ—ನನ್ನದಲ್ಲ. ನನಗೆ ನನ್ನ ವ್ಯಕ್ತಿತ್ವದ ಪೂರ್ಣ ಪ್ರಕಟನೆಗೆ ಸ್ವಾತಂತ್ರ್ಯ ಬೇಕು. ನನಗೆ ಬೇಕಾದರೆ ನಾನು ನಕ್ಷತ್ರಕ್ಕೆ (ಸಿರಿಯಸ್) ಒಂದು ಮಹಡಿ ಮೆಟ್ಟಲು ಕಟ್ಟಲು ಸ್ವಾತಂತ್ರ್ಯವಿರಬೇಕು. ಅಂದಮಾತ್ರಕ್ಕೆ ಅದನ್ನೆಲ್ಲ ಮಾಡುವುದಕ್ಕೆ ನನಗೆ ಇಷ್ಟವೆಂದಲ್ಲ. ಇನ್ನೊಂದು ಸೋಷಲಿಸಂನಲ್ಲಿ ವ್ಯಕ್ತಿಸ್ವಾತಂತ್ರ್ಯವಿಲ್ಲ. ಯಾವುದೂ ನಿಮ್ಮ ಸ್ವಂತವಲ್ಲ. ನಿಮ್ಮ ದೇಹವೂ ಅಲ್ಲ.

'ಹೌದು. ಆದರೆ ತಾರತಮ್ಯಗಳಿವೆ. ತಿದ್ದುಪಡಿಯಾದ ರೂಪದಲ್ಲಿ, ನನ್ನ ಸೋಷಲಿಸಂ ಎಂದರೆ ಸರ್ಕಾರ ಎಲ್ಲಕ್ಕೂ ಒಡೆಯನಲ್ಲ. ರಷ್ಯದಲ್ಲಿ ಸರ್ಕಾರಕ್ಕೆ ಎಲ್ಲ ಸೇರಿದ್ದು. ಅಲ್ಲಿ ನಿಮ್ಮ ದೇಹ ನಿಜವಾಗಿ ನಿಮ್ಮದಲ್ಲ. ನೀವು ಯಾವ ಅಪರಾಧವನ್ನು ಮಾಡದಿದ್ದರೂ ಯಾವ ಗಳಿಗೆಯಲ್ಲಾದರೂ ಬಂಧಿಸಲ್ಪಡಬಹುದು. ಅವರಿಗೆ ಇಷ್ಟ ಬಂದ ಕಡೆ ನಿಮ್ಮನ್ನು ಕಳುಹಿಸಬಹುದು.'

'ನಿಮ್ಮ ಸೋಷಲಿಸಂನಲ್ಲಿ ಸರ್ಕಾರ ಮಕ್ಕಳ ಮೇಲೆ ಸ್ವಾಮ್ಯ ಹೊಂದಿ ಅವರಿಗೆ ಶಿಕ್ಷಣವನ್ನು ತನಗೆ ಬೇಕಾದಂತೆ ಕೊಡುವುದಿಲ್ಲವೆ?'

'ಎಲ್ಲ ಸರ್ಕಾರಗಳೂ ಅದನ್ನು ಮಾಡುತ್ತವೆ. ಅಮೆರಿಕ ಅದನ್ನು ಮಾಡುತ್ತದೆ.'

'ಹಾಗಾದರೆ ಅಮೆರಿಕ, ರಷ್ಯದಿಂದ ಬಹಳ ಮಟ್ಟಿಗೆ ಬೇರೆಯಲ್ಲ?'

'ನೀವು ಸರ್ವಾಧಿಕಾರವನ್ನು ನಿಜವಾಗಿ ವಿರೋಧಿಸುತ್ತೀರಿ. ಆದರೆ ಸೋಷಲಿಸಂ, ಸರ್ವಾಧಿಕಾರಿ ಅಥವಾ ಸೋಮಾರಿಗಳ ವೇದಾಂತ. ನನ್ನನ್ನು ನಾನು ಕಮ್ಯೂನಿಸ್ಟ್ ಎಂದೂ ಕರೆದುಕೊಳ್ಳುತ್ತೇನೆ.'

'ಓ! ಬೇಡಿ, ಬೇಡಿ. ನಿಮ್ಮನ್ನು ಕಮ್ಯೂನಿಸ್ಟ್ ಎಂದುಕೊಳ್ಳುವುದು ನಿಮಗೆ ತುಂಬ ದುಸ್ಸಾಧ್ಯ. ಜಯಪ್ರಕಾಶ್ ಮತ್ತು ಇತರ ಸೋಷಲಿಸ್ಟರಿಗೆ ಬೇಕಾಗಿರುವುದು ಸ್ವತಂತ್ರ ಜಗತ್ತು. ಆದರೆ ಕಮ್ಯೂನಿಸ್ಟರಿಗೆ ಅದು ಬೇಕಾಗಿಲ್ಲ. ದೇಹವನ್ನೂ ಮನಸ್ಸನ್ನೂ ಗುಲಾಮಗಿರಿಯಲ್ಲಿ ಇಡುವ ಒಂದು ಕ್ರಮ ಅವರಿಗೆ ಬೇಕಾಗಿದೆ. ಮಾರ್ಕ್ಸ್‌ನ ವಿಷಯದಲ್ಲಿ ಹಾಗೆ ಹೇಳಬಹುದೆ?'

'ಕಮ್ಯೂನಿಸ್ಟರು ತಮ್ಮ ಉದ್ದೇಶ್ಯಕ್ಕೆ ಅನುಕೂಲವಾಗಿ ಮಾರ್ಕ್ಸ್‌ನ ಬೋಧನೆಗಳನ್ನು ಹೊಲಗೆಡಿಸಿದಾರೆ.'

'ಲೆನಿನ್‌ನೋ?'

'ಪ್ರಾರಂಭಿಸಿದವನೇ ಲೆನಿನ್. ಈಚೆಗೆ ಸ್ಟಾಲಿನ್ ಅದನ್ನು ಪೂರ್ತಿ ಮಾಡಿದಾನೆ. ಕಮ್ಯೂನಿಸ್ಟರು ನಿಮ್ಮಲ್ಲಿ ಬರುವಾಗ ಕಾಂಗ್ರೆಸ್ಸನ್ನು ಸೇರಿ ಅದನ್ನು ಸ್ವಾಧೀನಪಡಿಸಿಕೊಂಡು ತಮ್ಮ ಉದ್ದೇಶ್ಯಕ್ಕೆ ಅದನ್ನು ಉಪಯೋಗಿಸಬಯಸುತ್ತಾರೆ.'

'ಸೋಷಲಿಸ್ಟ್‌ರೂ ಹಾಗೆಯೇ. ನನ್ನ ಕಮ್ಯೂನಿಸಂ ಸೋಷಲಿಸಂನಿಂದ ಬಹಳ ಭಿನ್ನವಾದುದಲ್ಲ. ಅದು ಎರಡರ ಸಮರಸ ಮಿಳನ. ನನಗೆ ತಿಳಿದಿರುವಂತೆ ಕಮ್ಯೂನಿಸಂ ಸೋಷಲಿಸಂನ ಸ್ವಾಭಾವಿಕ ಪರಿಣಾಮ.'

'ಹೌದು, ನಿಮ್ಮ ಮಾತು ಸರಿ. ಎರಡಕ್ಕೂ ವ್ಯತ್ಯಾಸವೇ ಇಲ್ಲದ ಒಂದು ಕಾಲವಿತ್ತು. ಆದರೆ ಇಂದು ಸೋಷಲಿಸ್ಟರು ಕಮ್ಯೂನಿಸ್ಟರಿಂದ ತೀರ ಭಿನ್ನರಾಗಿದಾರೆ.'

'ಸ್ಟಾಲಿನ್‌ರ ಕಮ್ಯೂನಿಸಂನಂತಹ ಕಮ್ಯೂನಿಸಂ ಬೇಡ ಎಂದು ನೀವು ಹೇಳಬಯಸುತ್ತೀರಿ.'

'ಆದರೆ ಭಾರತದ ಕಮ್ಯೂನಿಸ್ಟರು ಸ್ಟಾಲಿನ್‌ರ ಮಾದರಿಯಂತೆ ಕಮ್ಯೂನಿಸಂನ್ನು ಭಾರತಕ್ಕೆ ಬಯಸುತ್ತಾರೆ. ಅದಕ್ಕಾಗಿ ನಿಮ್ಮ ಹೆಸರನ್ನು ಬಳಸುತ್ತಿದಾರೆ.'

**ಗಾಂಧೀಜೀ :** ಅವರು ಜಯಿಸುವುದಿಲ್ಲ.

## ಅನ್ಯೋನ್ಯ ಸಂಬಂಧದ ನೀತಿ

ಒಂದಷ್ಟು ಕತ್ತಿವರಸೆ ಆದಮೇಲೆ ಫಿಷರ್ ಮತ್ತೊಂದು ವಿಷಯಕ್ಕೆ ಬದಲಾಯಿಸಿದರು. ಅವರು ಹೇಳಿದರು : 'ನಿಮ್ಮ ಯುವಕರು ಭಾರತದಲ್ಲಿಯೇ ತುಂಬ ಕೇಂದ್ರೀಕೃತವಾದ ಮನಸ್ಸುಳ್ಳವರು.'

**ಗಾಂಧೀಜೀ :** ಅದು ಕೆಲವಂಶ ನಿಜ. ನಾವು ಅಂತರರಾಷ್ಟ್ರೀಯರಾಗಿದೇವೆಂದು ನಾನು ಹೇಳುವುದಿಲ್ಲ. ನಾವು ದೀನರ ಪಕ್ಷವನ್ನು ವಹಿಸಿಕೊಂಡಿದೇವೆ—ಅಂದರೆ ಲೂಟಿಗೆ ಒಳಗಾಗಿರುವ ರಾಷ್ಟ್ರಗಳ ಪಕ್ಷವನ್ನು. ಯಾಕೆಂದರೆ ನಾವೇ ಅತ್ಯಂತ ಲೂಟಿಗೆ ಒಳಗಾದ ದೇಶ.

**ಫಿಷರ್ :** ಇಲ್ಲಿ ಬೆಳೆಯುತ್ತಿರುವ ಶ್ವೇತವರ್ಣದವರ ವಿರೋಧಭಾವನೆ ಒಳ್ಳೆಯದಲ್ಲ. 'ತಾಜ್‌ಮಹಲ್ ಹೋಟೆಲ್'ನಲ್ಲಿ ದಕ್ಷಿಣ ಆಫ್ರಿಕದವರಿಗೆ

ಪ್ರವೇಶವಿಲ್ಲ ಎಂಬ ಜಾಹೀರಾತು ಹಲಗೆ ಇದೆ. ನನಗೆ ಅದು ಇಷ್ಟ ಇಲ್ಲ. ನಿಮ್ಮ ಅಹಿಂಸೆ ನಿಮ್ಮನ್ನು ಹೆಚ್ಚು ಉದಾರಿಯನ್ನಾಗಿ ಮಾಡಬೇಕು.

**ಗಾಂಧೀಜೀ :** ಅದು ಅಹಿಂಸೆಯಾಗುವುದಿಲ್ಲ. ಇಂದು ಬಿಳಿಯವರು ಭಾರತವಾಳುತ್ತಿರುವವರು. ಆದುದರಿಂದ ಆ ಜಾಹೀರಾತು ಹಾಕಲು ಧೈರ್ಯ ಇದ್ದರೆ ಅದು ಕೀರ್ತಿಯೇ.

ಫಿಷರ್‌ನ ಉದಾರತ್ವ ಗಾಯಗೊಂಡಿತು. ' ಪ್ರತಿ ರಾಷ್ಟ್ರವಾದಿಯೂ ಹೇಳುವುದೇ ಅದು. ನೀವು ಬೇರೆ ಏನಾದರೂ ಉತ್ತಮವಾದುದನ್ನು ಹೇಳಬೇಕು ' ಎಂದರು.

ಗಾಂಧೀಜೀ ದೃಢವಾಗಿ ಹೇಳಿದರು : ' ಹಾಗಾದರೆ ಒಂದು ಸಲ ನಾನು ರಾಷ್ಟ್ರವಾದಿಯಾಗುತ್ತೇನೆ. ಭಾರತೀಯರನ್ನು ಸಮಾನವಾಗಿ ನಡೆಸಿಕೊಳ್ಳದಿದ್ದ ಮೇಲೆ ಇಲ್ಲಿರಲು ಅವರಿಗೆ ಹಕ್ಕು ಇಲ್ಲ.'

**ಫಿಷರ್ :** ಹಕ್ಕು ಇಲ್ಲ—ನಿಜ. ಆದರೆ ಅವರಿಗೆ ನೀವು ಹಕ್ಕಿಗಿಂತ ಹೆಚ್ಚಿಗೆ ಕೊಡಬೇಕು. ನೀವು ಅವರನ್ನು ಆಹ್ವಾನಿಸಬೇಕು.

**ಗಾಂಧೀಜೀ :** ಹೌದು. ನಾನು ವೈಸ್‌ರಾಯ್ ಆದಾಗ.

**ಫಿಷರ್ :** ನಿಮ್ಮ ಅಭಿಪ್ರಾಯ ಭಾರತದ ಗಣರಾಜ್ಯದ ಅಧ್ಯಕ್ಷರಾದಾಗ.

**ಗಾಂಧೀಜೀ :** ಅಲ್ಲ. ವೈಸ್‌ರಾಯ್ ಆಗಿರಲು ನನಗೆ ತೃಪ್ತಿ. ಸದ್ಯಕ್ಕೆ ವ್ಯವಸ್ಥಾಬದ್ಧನಾದ ವೈಸ್‌ರಾಯ್. ನಾನು ಮಾಡುವ ಮೊದಲನೆಯ ಕಾರ್ಯ ವೈಸ್‌ರಾಯ್ ಭವನವನ್ನು ಬರಿದುಮಾಡಿ ಅದನ್ನು ಹರಿಜನರಿಗೆ ಕೊಡುವುದು. ಅನಂತರ ದಕ್ಷಿಣ ಆಫ್ರಿಕದ ಬಿಳಿಯುವರನ್ನು ನನ್ನ ಗುಡಿಸಲಿಗೆ ಆಹ್ವಾನಿಸಿ ಅವರಿಗೆ ಹೀಗೆ ಹೇಳುತ್ತೇನೆ : ' ನೀವು ನಮ್ಮ ಜನರನ್ನು ಪುಡಿಪುಡಿ ಮಾಡಿದೀರಿ. ಆದರೆ ನಾವು ನಿಮ್ಮನ್ನು ಅನುಕರಿಸುವುದಿಲ್ಲ. ನಿಮ್ಮ ಯೋಗ್ಯತೆಗಿಂತ ಹೆಚ್ಚಾಗಿ ನಿಮಗೆ ಕೊಡುತ್ತೇವೆ. ನೀವು ದಕ್ಷಿಣ ಆಫ್ರಿಕದಲ್ಲಿ ಮಾಡುವಂತೆ ನಾವು ' ಲಿಂಚ್ ' (ಥಡಿ ಏಟು) ಮಾಡುವುದಿಲ್ಲ.' ಹೀಗೆ ಹೇಳಿ ಅವರು ನಾಚಿಕೆಯಿಂದ ನ್ಯಾಯವಾಗಿ ನಡೆಯುವಂತೆ ಮಾಡುತ್ತೇನೆ.

ಫಿಷರ್ ವ್ಯಾಕುಲಗೊಂಡ ಮನಸ್ಸಿನಿಂದ ಹೇಳಿದರು : ' ಇಂದು ಶ್ವೇತ ವರ್ಣದವರ ವಿರುದ್ಧ ಭಾವನೆ ತೀವ್ರವಾಗಿದೆ.'

' ನಾನಂತೂ ಅದಕ್ಕೆ ವಿರೋಧಿ. ಅದರಿಂದ ಯಾರಿಗೂ ಒಳ್ಳೆಯ ದಾಗುವುದಿಲ್ಲ.'

' ಜಗತ್ತಿನಲ್ಲಿ ಇಷ್ಟೊಂದು ಪಕ್ಷಗಳಾಗಿವೆ. ಇನ್ನೊಂದು ಯುದ್ಧವಾಗ ಬಹುದು. ಅದು ಬಣ್ಣದ ಮತ್ತು ಬಿಳಿಯ ಜನಾಂಗಗಳ ನಡುವೆ ಆಗಬಹುದು.'

' ಯೂರೋಪು ಮತ್ತೊಂದು ಯುದ್ಧದ ಕಡೆಗೆ ಧಾವಿಸುತ್ತಿದೆ. ಅದು ಇನ್ನೂ ನಿತ್ರಾಣವಾದಂತೆ ತೋರುವುದಿಲ್ಲ.'

' ಯೂರೋಪು ದಾರುಣವಾಗಿ ನಿತ್ರಾಣವಾಗಿದೆ. ಆದರೆ ಅಣುಬಾಂಬು ಬಂದಮೇಲೆ ಮನುಷ್ಯರ ವಿಷಯ ಏನಾದರೇನು ? ಕೆಲವು ವಿಜ್ಞಾನಿಗಳು ಸಾಕು. ಮುಂದಿನ ಯುದ್ಧ ಕೆಲವು ಗುಂಡಿಗಳನ್ನು ಅಮುಕುವುದರಿಂದ ನಡೆಯುವುದು. ಆ ಕಾರಣದಿಂದಲೇ ವರ್ಣಯುದ್ಧ ಅಷ್ಟು ಅಪಾಯಕರ.'

' ಹೇಡಿತನಕ್ಕಿಂತ ಯಾವುದೂ ಉತ್ತಮ. ಅದು ಪೂರ್ಣ ಹಿಂಸೆ ' ಎಂದರು ಗಾಂಧೀಜೀ. ತಮ್ಮ ಮಾತನ್ನು ನಿದರ್ಶನಮಾಡಲು, ದಕ್ಷಿಣ ಆಫ್ರಿಕದ ಭೀಮನಂತಹ ಬಲಿಷ್ಠ ನೀಗ್ರೋ ಪಾದ್ರಿಯ ಕತೆಯನ್ನು ಹೇಳಿದರು : ' ರೈಲ್‌ಗಾಡಿಯಲ್ಲಿ ಬಿಳಿಯವನು ಪಾದ್ರಿಯನ್ನು ಅವಮಾನಪಡಿಸಿದಾಗ ಆತ ' ತಮ್ಮ, ನನ್ನನ್ನು ಕ್ಷಮಿಸು ' ಎಂದು ಹೇಳಿ ಬಣ್ಣದವರ ಗಾಡಿಗೆ ಕಳ್ಳನಂತೆ ನುಸುಳಿದ. ಅದು ಅಹಿಂಸೆಯಲ್ಲ. ಅದು ಏಸುವಿನ ಬೋಧನೆಗಳ ವಿಕಟ ಅನುಕರಣ. ಅಲ್ಲಿಯೇ ಪ್ರತೀಕಾರ ಮಾಡುವುದು ಇನ್ನೂ ಹೆಚ್ಚು ಪೌರುಷ ವಾಗುತ್ತಿತ್ತು.'

' ನಿಮಗೆ ಏನಾಗಬಹುದೆಂಬುದರ ಭಯ ನಿಮಗೆ ಇಲ್ಲ. ಆದರೆ ಇತರರಿಗೆ ಏನಾಗಬಹುದು ? ' ಗಾಂಧೀಜಿಯವರ ನಿದರ್ಶನವನ್ನು ವಿಭಜಿಸುತ್ತಾ ಫಿಷರ್ ಹೇಳಿದರು : ' ನೀವು ವಿವರಿಸಿದ ಪರಿಸ್ಥಿತಿಯಲ್ಲಿ ನಿಮ್ಮ ಭಾವನೆಗಳನ್ನು ಹೊರಗೆ ಪ್ರಕಟಿಸಿ ಬಿಳಿಯವನ ಕೆನ್ನೆಗೆ ಹೊಡೆಯಬೇಕಾದರೆ ಬಹಳ ಬೇಜವಾಬ್ದಾರಿ ಬೇಕಾಗುತ್ತದೆ. ಭಾರತದಲ್ಲಿನ ಪರಿಸ್ಥಿತಿ ಬೇರೆ. ಇಲ್ಲಿ ಬಿಳಿಯರು ಅಷ್ಟು ಹೆಚ್ಚಾಗಿಲ್ಲ.'

ಗಾಂಧೀಜೀ ಹೇಳಿದರು ' ನೀವು ತಪ್ಪು ತಿಳಿದುಕೊಂಡಿದೀರಿ. ಯಾಕೆ, ಒಬ್ಬ ಇಂಗ್ಲೀಷಿನವನು ಕೊಲ್ಲಲ್ಪಟರೆ ಪೂರ್ಣ ಹಳ್ಳಿಯನ್ನೇ ಪ್ರತೀಕಾರವಾಗಿ ನೆಲಸಮ ಮಾಡಿದಾರೆ. ಅಬ್ಬ! ಎಂತಹ ಸೇಡು!'

## ನಂಬಿಕೆಯ ಒಡಂಬಡಿಕೆ

'ಈಗ ನೀವು ತೀವ್ರ ವ್ಯವಸ್ಥಾಬದ್ಧರಾಗಿದೀರಿ. ಪಕ್ಷಾಂತರದ—ಅಂದರೆ ಹಿಂಸೆ ಪ್ರಬಲವಾಗುವುದೆಂಬ ಭಯವೋ?' ಎಂದು ಕೊನೆಯಲ್ಲಿ ಫಿಷರ್ ಕೇಳಿದರು.

**ಗಾಂಧೀಜೀ:** ಅಲ್ಲ. ರಕ್ತಸ್ನಾನ ಮಾಡುವುದು ಭಾರತದ ಹಣೆಯಲ್ಲಿ ಬರೆದಿದ್ದರೆ ಅದು ಹಾಗೆ ಮಾಡುವುದು. ನಾನು ಬೆದರುತ್ತಿರುವುದು—ನನ್ನ ಹೇಡಿತನ ಅಥವಾ ಅಪ್ರಾಮಾಣಿಕತೆಯನ್ನು ಕುರಿತು. ಎರಡೂ ನನ್ನಲ್ಲಿ ಇಲ್ಲ. ಆದುದರಿಂದ ನಾನು ಹೀಗೆ ಹೇಳುತ್ತೇನೆ: ಸರ್ಕಾರದಲ್ಲಿ ಸೇರಿ ಕೆಲಸ ಮಾಡೋಣ. ಅವರು ಅಪ್ರಾಮಾಣಿಕರಾದರೆ ಪತ್ತೆಯಾಗುವುದು. ನಷ್ಟ—ನಮ್ಮದಾಗುವುದಿಲ್ಲ, ಅವರದಾಗುವುದು.

**ಫಿಷರ್:** ಹಿಂಸೆಯ ಮನೋಭಾವ ಪ್ರಬಲವಾಗಬಹುದೆಂದು ನಿಮಗೆ ಭಯ ಎಂದು ಭಾವಿಸುತ್ತೇನೆ. ಅದು ವಿಶಾಲವಾಗಿ ಬೆಳೆದಿದೆ. ಅದು ದೇಶದ ಯುವಕರ ಮನಸ್ಸನ್ನೂ ಆಕರ್ಷಿಸಿದೆ ಎಂದು ನಾನು ಯೋಚಿಸುತ್ತೇನೆ. ನಿಮಗೂ ಅದು ಗೊತ್ತಾಗಿದೆ, ಆ ಮನೋಭಾವ. ಹೀಗಾದರೆ ಹೇಗೆ ಎಂದು ನೀವು ಹೆದರುತ್ತಿದೀರಿ.

**ಗಾಂಧೀಜೀ:** ಅದು ದೇಶದ ಮನಸ್ಸನ್ನು ಆಕರ್ಷಿಸಿಲ್ಲ. ಯುವಕರ ಒಂದು ಪಂಗಡದ ಮನಸ್ಸನ್ನು ಅದು ಆಕರ್ಷಿಸಿದೆಯೆಂದು ನಾನು ಒಪ್ಪುತ್ತೇನೆ.

**ಫಿಷರ್:** ಆ ಭಾವನೆಯನ್ನು ಎದುರಿಸಬೇಕಾಗಿದೆ.

**ಗಾಂಧೀಜೀ:** ಹೌದು. ನನ್ನದೇ ಆದ ಮಾರ್ಗದಲ್ಲಿ ನಾನು ಅದನ್ನು ಮಾಡುತ್ತಿದೇನೆ. ಕಾಲ ಬಂದಾಗ ತಾನಾಗಿಯೇ ಸಾಯುವ ಅವಶೇಷ

ಅದೆಂದು ನನ್ನ ದೃಢನಂಬಿಕೆ. ಅದು ಉಳಿಯಲಾರದು. ಅದು ಭಾರತದ ಸ್ವಭಾವಕ್ಕೆ ತೀರ ವಿರೋಧವಾದುದು. ಆದರೆ ಮಾತನಾಡುವುದರಿಂದ ಪ್ರಯೋಜನವೇನು ? ನಮ್ಮ ಅದೃಷ್ಟಗಳನ್ನು ನಿರ್ಣಯಿಸುವ ದುರ್ಭೇದ್ಯವಾದ ಪ್ರಕೃತಿ ನಿಯಮದಲ್ಲಿ ನನಗೆ ನಂಬಿಕೆ. ಅದನ್ನು ದೇವರೆಂದು ಕರೆಯಿರಿ. ಅಥವಾ ನಿಮಗೆ ಇಷ್ಟವಾದ ಬೇರೆ ಯಾವ ಹೆಸರಿನಿಂದಲಾದರೂ ಕರೆಯಿರಿ. ನನ್ನವಾದ ಇಷ್ಟು : ಹಿಂಸೆ ಬೆಳೆಯುವುದೆಂಬ ಭಯದಿಂದಲ್ಲ ನಾನು ಸಂವಿಧಾನ ಸಭೆಯಲ್ಲಿ ಪ್ರವೇಶಿಸಲು ದೇಶಕ್ಕೆ ಸಲಹೆ ಮಾಡುತ್ತಿರುವುದು. ಅಹಿಂಸೆಯಲ್ಲಿ, ಸತ್ಯಾಗ್ರಹಕ್ಕೆ ಪ್ರತಿಯಾದ ಗೌರವಾರ್ಹವಾದ ಬೇರೆಯದನ್ನು ಒಪ್ಪದಿರುವುದು ಅಸಹ್ಯಕರ ಎಂಬುದಕ್ಕಾಗಿ. (ಹರಿಜನ, ೪-೮-೧೯೪೬)

## ಔದ್ಯೋಗೀಕರಣಕ್ಕೆ ಬದಲು

ಒಬ್ಬ ಪತ್ರವ್ಯವಹಾರಿ ಬರೆಯುತ್ತಾರೆ :

' ನೀವು ಭಾರತದ ಔದ್ಯೋಗೀಕರಣ—ತನ್ನ ಹಡಗು, ರೈಲ್ವೆವಾಹನ, ಆಕಾಶವಿಮಾನ ಮುಂತಾದುವುಗಳನ್ನು ಮಾಡಿಕೊಳ್ಳುವಷ್ಟು ಔದ್ಯೋಗೀಕರಣ ಆವಶ್ಯಕವೆಂದು ನಂಬುತ್ತೀರಾ ? ಹಾಗಲ್ಲದಿದ್ದರೆ ಭಾರತ ಸ್ವತಂತ್ರ ರಾಷ್ಟ್ರವಾಗಿ ತನ್ನ ಜವಾಬ್ದಾರಿಗಳನ್ನು ಹೇಗೆ ನಿರ್ವಹಿಸಬಹುದೆಂಬ ಪರ್ಯಾಯ ಮಾರ್ಗವನ್ನು ದಯವಿಟ್ಟು ಸೂಚಿಸುತ್ತೀರಾ ?

' ಆ ಉದ್ಯೋಗಗಳ ಸ್ಥಾಪನೆಯಲ್ಲಿ ನಿಮಗೆ ನಂಬಿಕೆಯಿದೆಯೆ ? ಇದರಿಂದ ಬರುವ ಲಾಭ, ಆಡಳಿತನಿರ್ವಹಣೆ ಇವುಗಳ ಮೇಲೆ, ನಿಮ್ಮ ಅಭಿಪ್ರಾಯದಲ್ಲಿ, ಯಾರಿಗೆ ಹತೋಟಿ ಇರಬೇಕು ? '

**ಗಾಂಧೀಜೀ :** ' ಔದ್ಯೋಗೀಕರಣ—ಹೇಗೂ, ಯಾವ ರಾಷ್ಟ್ರಕ್ಕೂ ಆವಶ್ಯಕವೆಂದು ನಾನು ನಂಬುವುದಿಲ್ಲ. ಭಾರತಕ್ಕಂತೂ ಇಲ್ಲವೇ ಇಲ್ಲ. ಸ್ವತಂತ್ರ ಭಾರತ—ಸರಳವಾದ ಆದರೆ ಉದಾತ್ತ ನೀತಿಯ ಜೀವನವನ್ನು ಅಂಗೀಕರಿಸಿ ತನ್ನಲ್ಲಿರುವ ಅಸಂಖ್ಯಾತ ಗುಡಿಸಲುಗಳನ್ನು ಅಭಿವೃದ್ಧಿಪಡಿಸಿ, ಜಗತ್ತಿನೊಂದಿಗೆ ಸ್ನೇಹ-ಶಾಂತಿಯಿಂದ ಇರುವುದರಿಂದ ಮಾತ್ರ, ದುಃಖಿಸು

ತ್ತಿರುವ ಜಗತ್ತಿನ ವಿಷಯದಲ್ಲಿ ತನ್ನ ಕರ್ತವ್ಯವನ್ನು ನಿರ್ವಹಿಸುವುದೆಂದು ನಾನು ನಂಬುತ್ತೇನೆ. ಹಣದ ಪೂಜೆಯ ಒತ್ತಡ, ಅತಿವೇಗಯುಕ್ತ ಜಟಿಲ ವಾದ ಭೌತಜೀವನ ಇವುಗಳಿಗೂ ಉದಾತ್ತ ಆಲೋಚನೆಗಳಿಗೂ ಹೊಂದಾಣಿಕೆ ಇಲ್ಲ. ನಾವು ಉತ್ತಮವಾಗಿ ಬಾಳುವ ಕಲೆಯನ್ನು ಕಲಿತಾಗ ಮಾತ್ರ ಜೀವನದ ಸೊಗಸು–ಮಾಧುರ್ಯ–ರಮ್ಯತೆ ಸಾಧ್ಯ.

'ಅಪಾಯದಲ್ಲಿ ಜೀವಿಸುವುದರಲ್ಲಿ ಕೋಲಾಹಲ ಇರಬಹುದು. ಅಪಾಯ ವನ್ನು ಎದುರಿಸಿ ಜೀವಿಸುವುದು ಮತ್ತು ಅಪಾಯದಲ್ಲಿ ಜೀವಿಸುವುದು—ಈ ಎರಡರ ನಡುವೆ ವ್ಯತ್ಯಾಸವನ್ನು ಗಮನಿಸಬೇಕು. ಅಪಾಯದ ಪ್ರಾಣಿಗಳೂ ಅದಕ್ಕಿಂತ ಹೆಚ್ಚು ಅಪಾಯದ ಮನುಷ್ಯರೂ ತುಂಬಿರುವ ಕಾಡಿನಲ್ಲಿ, ಏಕಾಂಗಿ ಯಾಗಿ, ಬಂದೂಕು ಇಲ್ಲದೆ, ದೇವರೇ ಸಹಾಯವೆಂದು ವಾಸಿಸುವ ಧೈರ್ಯ ಮಾಡುವ ಮನುಷ್ಯ ನಿಜವಾಗಿ ಅಪಾಯವನ್ನು ಎದುರಿಸಿ ಜೀವಿಸುತ್ತಾನೆ. ಬಾಯಿಬಿಟ್ಟುಕೊಂಡು ನೋಡುತ್ತಿರುವ, ಜಗತ್ತಿನ ಯಾವಾಗಲೂ ಅಂತರಿಕ್ಷ ದಲ್ಲಿ ಮೆಚ್ಚಿಕೆಗಾಗಿ ಇರುತ್ತಾ, ನೀರಿನಲ್ಲಿ ಮುಳುಗುತ್ತಾ ಇರುವ ಮನುಷ್ಯ, ಅಪಾಯದಲ್ಲಿ ಜೀವಿಸುತ್ತಾನೆ. ಒಂದು ಉದ್ದೇಶ್ಯಪೂರಿತ, ಮತ್ತೊಂದು ಉದ್ದೇಶ್ಯರಹಿತ ಜೀವನ.

'ಒಂದು ರಾಷ್ಟ್ರ ಭೌಗೋಲಿಕವಾಗಿ ಮತ್ತು ಜನಸಂಖ್ಯೆಯ ದೃಷ್ಟಿಯಿಂದ ಎಷ್ಟೇ ದೊಡ್ಡದಾಗಿರಲಿ, ಸರ್ವಾಯುಧಸಜ್ಜಿತವಾದ ಆಡಂಬರ–ವೈಭವಗಳಲ್ಲಿ ಮೆರೆಯುವ ಈ ಜಗತ್ತಿನಲ್ಲಿ, ಆ ಏಕಾಂಗಿ ರಾಷ್ಟ್ರಕ್ಕೆ ಸರಳಜೀವನ ಸಾಧ್ಯವೇ ಎಂಬುದು ಸಂದೇಹವಾದಿಗಳ ಸಂಶಯಕ್ಕೆ ಸೇರಿದ ಪ್ರಶ್ನೆ. ಉತ್ತರ ನೇರ ಮತ್ತು ಸರಳ. ಸರಳಜೀವನವನ್ನು ಬಾಳುವುದು ಅರ್ಹವಾದರೆ ಅದಕ್ಕಾಗಿ ಪ್ರಯತ್ನ ಮಾಡುವುದೂ ಅರ್ಹವಾದುದು. ಪ್ರಯತ್ನ ಮಾಡುವವರು ಒಬ್ಬರೇ ಆಗಲಿ ಒಂದು ಗುಂಪೇ ಆಗಲಿ ಚಿಂತೆ ಇಲ್ಲ.

'ಇದರ ಜತೆಗೆ ಕೆಲವು ಮೂಲಕೈಗಾರಿಕೆಗಳು ಆವಶ್ಯಕವೆಂದು ನನ್ನ ನಂಬಿಕೆ. ಆರಾಮಕುರ್ಚಿಯ ಅಥವಾ ಆಯುಧಗಳ ಸಮತಾವಾದದಲ್ಲಿ ನನಗೆ ನಂಬಿಕೆಯಿಲ್ಲ. ನನ್ನ ನಂಬಿಕೆಗೆ ಅನುಸಾರವಾಗಿ—ಪೂರ್ಣ ಬದಲಾವಣೆಗೆ ಕಾಯದೆ—ಕೆಲಸಮಾಡುವುದರಲ್ಲಿಯೇ ನನ್ನ ನಂಬಿಕೆ. ಆದುದರಿಂದ ಮೂಲ ಕೈಗಾರಿಕೆಗಳ ಲೆಕ್ಕದ ಪಟ್ಟಿಯನ್ನು ನಮೂದಿಸದೆ, ಸ್ವಾಮಿತ್ವ ಸರ್ಕಾರಕ್ಕೆ

ಇರಬೇಕು. ಅಲ್ಲಿ ಅನೇಕ ಜನ ಕೆಲಸಮಾಡುತ್ತಿರಬೇಕು ಎಂದು ಹೇಳುತ್ತೇನೆ. ಅವರ ಕೂಲಿಯಿಂದಾದ ವಸ್ತುಗಳ ಸ್ವಾಮಿತ್ವ—ಬುದ್ಧಿವಂತಿಕೆಯ ಕೂಲಿ ಆಗಲಿ, ಬುದ್ಧಿವಂತಿಕೆಯಲ್ಲದ ಕೂಲಿಯಾಗಲಿ—ಸರ್ಕಾರದ ಮೂಲಕ ಅವರಲ್ಲಿ ಉಳಿಯುವುದು. ಆದರೆ ಇಂತಹ ಸರ್ಕಾರ ಅಹಿಂಸೆಯಿಂದ ಮಾತ್ರ ಸಾಧ್ಯ ಎಂದು ನಾನು ಭಾವಿಸುವುದರಿಂದ ಧನಿಕರಲ್ಲಿರುವ ಧನವನ್ನು ಕಸಿಯಲು ನಾನು ಬಲಾತ್ಕಾರವನ್ನು ಉಪಯೋಗಿಸುವುದಿಲ್ಲ. ಸರ್ಕಾರದ ಸ್ವಾಮ್ಯಕ್ಕೆ ಪರಿವರ್ತನೆ ಹೊಂದುವ ಕಾರ್ಯದಲ್ಲಿ, ಧನಿಕರ ಸಹಕಾರವನ್ನು ಆಹ್ವಾನಿಸುತ್ತೇನೆ. ಸಮಾಜದಲ್ಲಿ ಲಕ್ಷಾಧಿಕಾರಿಗಳಾಗಲೀ ಭಿಕ್ಷಾಧಿಕಾರಿಗಳಾಗಲೀ ಯಾರೂ 'ಪರಯ'ರಲ್ಲ. ಎರಡೂ ಒಂದೇ ರೋಗದ ಹುಣ್ಣುಗಳು. ಆದರೂ ಎಲ್ಲರೂ ಅವುಗಳಿಂದಲೇ ಮನುಷ್ಯರು.

'ನಾವು ನೋಡಿರುವ ಮತ್ತು ಇನ್ನೂ ಭಾರತದಲ್ಲಿಯೂ ಇತರ ಕಡೆಯೂ ನೋಡುವ ಪಾಶವೀಕೃತ್ಯಗಳಿದ್ದರೂ, ಈ ನಂಬಿಕೆಯನ್ನು ನಾನು ಕಂಠೋಕ್ತವಾಗಿ ಒಪ್ಪಿಕೊಳ್ಳುತ್ತೇನೆ.'

(ಹರಿಜನ, ೧-೯-೧೯೪೬)

## ಯಹೂದಿಗಳು ಮತ್ತು ಪ್ಯಾಲೆಸ್ಟೈನ್

ಇಲ್ಲಿಯವರೆಗೆ ಯಹೂದಿ-ಅರಬ್ ವಾದವಿವಾದವನ್ನು ಕುರಿತು ಸಾರ್ವಜನಿಕವಾಗಿ ನಾನು ಏನನ್ನೂ ಹೇಳದೆ ತಡೆದಿದ್ದೆ. ಹಾಗೆ ನಾನು ಮಾಡಿದುದಕ್ಕೆ ಸರಿಯಾದ ಕಾರಣಗಳಿವೆ. ಹಾಗೆಂದರೆ ಆ ಪ್ರಶ್ನೆಯಲ್ಲಿ ನನಗೆ ಶ್ರದ್ಧೆ ಇಲ್ಲವೆಂದಲ್ಲ. ಈ ಕಾರ್ಯಕ್ಕೆ ನನಗೆ ಸರಿಯಾದ ಸಿದ್ಧತೆಯಾಗಿದೆ ಎಂದು ನಾನು ಭಾವಿಸುವುದಿಲ್ಲ ಎಂದು ಅರ್ಥ. ಇದೇ ಕಾರಣಕ್ಕಾಗಿ ನಾನು ಜಗತ್ತಿನ ಅನೇಕ ಪ್ರಶ್ನೆಗಳನ್ನು ಕುರಿತು ತಟಸ್ಥನಾಗಿದ್ದಿದೇನೆ. ಅವುಗಳ ವಿಷಯದಲ್ಲಿ ನನ್ನ ಅಭಿಪ್ರಾಯವನ್ನು ವ್ಯಕ್ತಪಡಿಸದೆಯೇ, ನನಗೆ ಇರುವ ಸಮಸ್ಯೆಗಳು ಬೇಕಾದಷ್ಟು ಇವೆ. ಆದರೆ ಒಂದು ಪತ್ರಿಕೆಯಲ್ಲಿ ಪ್ರಕಟವಾದ ನಾಲ್ಕು ಸಾಲುಗಳು ತಂತ್ರವನ್ನು ಹೂಡಿತು. ಆ ಸಾಲುಗಳು ಒಬ್ಬ ಮಿತ್ರರಿಂದ ನನಗೆ ಒಂದು ಕಾಗದವನ್ನೂ ಪತ್ರಿಕೆಯ ಬರಹವನ್ನೂ ತಂದವು. ಆ ಮಿತ್ರರು ನನ್ನ ದೃಷ್ಟಿ

ಯನ್ನು ಅದರ ಕಡೆಗೆ ಸೆಳೆಯದೆ ಇದ್ದಿದ್ದರೆ ನನ್ನ ಕಣ್ಣುಗಳಿಂದ ಅದು ತಪ್ಪಿಸಿ ಕೊಳ್ಳುತ್ತಿತ್ತು. ಆ ಬರಹದಲ್ಲಿ ಹೇಳಿರುವ ರೀತಿಯು ಯಾವುದೋ ಮಾತುಗಳನ್ನು ಲೂಯಿ ಫಿಷರ್‌ರೊಂದಿಗೆ ಆದ ದೀರ್ಘ ಸಂಭಾಷಣೆಯಲ್ಲಿ ನಾನು ಹೇಳಿದುದು ನಿಜ. ಯಹೂದಿಗಳಿಗೆ ಜಗತ್ತಿನಲ್ಲಿ ಕ್ರೂರ ಅನ್ಯಾಯವಾಗಿದೆ ಎಂಬುದು ನನ್ನ ನಂಬಿಕೆ. ಯೂರೋಪಿನ ಬಹುಭಾಗದಲ್ಲಿ ಯಹೂದಿಗಳ ವಾಸಸ್ಥಾನಕ್ಕೆ 'ಗೆಟೊ'—ನನಗೆ ತಿಳಿದಮಟ್ಟಿಗೆ—ಎಂಬ ಹೆಸರು ಕೊಟ್ಟಿದಾರೆ. ಅವರನ್ನು ಹಾಗೆ ಹೃದಯಹೀನ ಚಿತ್ರಹಿಂಸೆಗೊಳಪಡಿಸದೆ ಇದ್ದಿದ್ದರೆ ಅವರು ಪ್ಯಾಲೆಸ್ಟೈನಿಗೆ ಹಿಂದಿರುಗುವ ಪ್ರಶ್ನೆಯೇ ಏಳುತ್ತಿರಲಿಲ್ಲ. ಜಗತ್ತಿಗೆ ಅವರು ಕೊಟ್ಟಿರುವ ಪ್ರಶಸ್ತವಾದ ಕೊಡುಗೆಗಳಿಗಾಗಿಯಾದರೂ ಜಗತ್ತೇ ಅವರ ತಾಯಿನಾಡು ಆಗಬೇಕಾಗಿತ್ತು.

ಆದರೆ ನನ್ನ ಅಭಿಪ್ರಾಯದಲ್ಲಿ ಅವರು ಇಂಗ್ಲೆಂಡ್ ಮತ್ತು ಅಮೆರಿಕದ ಸಹಾಯದಿಂದಲೂ ಮತ್ತು ಈಗ ಬೆತ್ತಲೆ ಹಿಂಸಾಚಾರದಿಂದಲೂ, ಪ್ಯಾಲೆಸ್ಟೈನನ್ನು ಬಂದು ಆಕ್ರಮಿಸುವ ಪ್ರಯತ್ನದಿಂದ ತುಂಬ ತಪ್ಪುಮಾಡಿದಾರೆ. ಜಗತ್ತಿನ ಅವರ ಪೌರತ್ವ ಅವರನ್ನು ಯಾವ ರಾಷ್ಟ್ರದಲ್ಲಿಯೂ ಮರ್ಯಾದಿತ ಅತಿಥಿಗಳನ್ನಾಗಿ ಮಾಡಬೇಕಾಗಿತ್ತು—ಮಾಡುತ್ತಿತ್ತು. ಅವರ ಮಿತವ್ಯಯ ಬಹುಬಗೆಯ ಸಾಮರ್ಥ್ಯ, ಕಾರ್ಯತತ್ಪರತೆ—ಇವು ಅವರನ್ನು ಎಲ್ಲಿಗಾದರೂ ಸ್ವಾಗತಿಸಬೇಕಾಗಿತ್ತು. ಹೊಸ ಒಡಂಬಡಿಕೆಯನ್ನು ತಪ್ಪಾಗಿ ಅರ್ಥಮಾಡಿಕೊಂಡು ಅವರನ್ನು ಆರಿಸಿ ಪೂರ್ವಗ್ರಹಕ್ಕೆ ಅವರನ್ನು ಗುರಿಪಡಿಸಿರುವುದು ಕ್ರಿಸ್ತಪ್ರಪಂಚಕ್ಕೆ ದೊಡ್ಡ ಕಳಂಕ. 'ಒಬ್ಬ ಯಹೂದಿ ತಪ್ಪುಮಾಡಿದರೆ ಇಡೀ ಯಹೂದಿ ಜಗತ್ತೇ ಅದಕ್ಕಾಗಿ ದೂಷ್ಯ.' ಐನ್‌ಸ್ಟೈನ್‌ನಂತಹ ಯಹೂದಿ ಒಂದು ಮಹತ್ ಪರಿಶೋಧನೆ ಮಾಡಿದರೆ ಅಥವಾ ಒಬ್ಬ ಸಂಗೀತನಿರ್ಮಾಪಕ ಅದ್ವಿತೀಯ ಸಂಗೀತವನ್ನು ರಚಿಸಿದರೆ ಆ ಯೋಗ್ಯತೆ ಕರ್ತೃವಿಗೆ ಸೇರಿದ್ದು, ಅವನ ಜನಾಂಗಕ್ಕಲ್ಲ.

ಅವರ ಈ ಅನಪೇಕ್ಷಣೀಯ ದುಃಖಸ್ಥಿತಿಯಲ್ಲಿ, ನನ್ನ ಸಹಾನುಭೂತಿ ಯಹೂದಿಗಳಲ್ಲಿರುವುದು ಆಶ್ಚರ್ಯವಲ್ಲ. ಆದರೆ ಕಷ್ಟಸ್ಥಿತಿ—ಅವರಿಗೆ ಶಾಂತಿ ಪಾಠವನ್ನು ಕಲಿಸಬೇಕಾಗಿತ್ತು. ತಮಗೆ ಸ್ವಾಗತವಿಲ್ಲದ ದೇಶಕ್ಕೆ ಬಲಾತ್ಕಾರದಿಂದ ನುಗ್ಗಲು ಅವರು ಯಾಕೆ ಅಮೆರಿಕೆಯ ಹಣ ಮತ್ತು ಬ್ರಿಟಿಷರ

ಬಂದೂಕದ ಮೇಲೆ ಅವಲಂಬಿಸಬೇಕು? ಬಲಾತ್ಕಾರವಾಗಿ ಪ್ಯಾಲೆಸ್ಟೈನಿನಲ್ಲಿ ಇಳಿದು ಅದನ್ನು ಸ್ಥಿರಪಡಿಸಲು ರಕ್ತಪಾತದಲ್ಲಿ ಯಾಕೆ ತೊಡಗಬೇಕು? ಅವರು ಎಣೆಯಿಲ್ಲದ ಅಹಿಂಸಾ ಆಯುಧವನ್ನು ಅಂಗೀಕರಿಸಿದರೆ—ಅವರ ಉತ್ತಮ ಪ್ರವಾದಿಗಳು ಅದನ್ನು ಬೋಧಿಸಿದಾರೆ—ಮುಳ್ಳಿನ ಕಿರೀಟವನ್ನು ಧರಿಸಿದ ಯಹೂದಿ ಏಸು ಅದನ್ನು ದುಃಖೀ ಜಗತ್ತಿಗೆ ಆಸ್ತಿಯಾಗಿ ಬಿಟ್ಟಿದಾನೆ—ಅವರ ಗುರಿ ಜಗತ್ತಿನ ಗುರಿಯಾಗುವುದು. ಯಹೂದಿಗಳು ಜಗತ್ತಿಗೆ ಕೊಟ್ಟಿರುವ ಅನೇಕ ವಸ್ತುಗಳ ಪೈಕಿ ಇದು ಅತ್ಯುತ್ತಮವೂ ಉಜ್ವಲತಮವೂ ಆಗುವುದರಲ್ಲಿ ಸಂದೇಹವಿಲ್ಲ. ಅದು ಇಬ್ಬರಿಗೂ ಶುಭವನ್ನುಂಟುಮಾಡುತ್ತದೆ. ಅದು ಅವರನ್ನು ನಿಜವಾದ ಅರ್ಥದಲ್ಲಿ ಸುಖಿಗಳನ್ನಾಗಿಯೂ ಧನಿಕರನ್ನಾಗಿಯೂ ಮಾಡುವುದು. ದುಃಖೀ ಜಗತ್ತನ್ನು ಸಂತೈಸುವ ಮುಲಾಮು ಆಗುವುದು.

ಮೇಲೆ ಸೂಚಿತವಾಗಿರುವ ನಾಲ್ಕು ಸಾಲು ಇದು. ಗಾಂಧೀಜೀ ಪ್ಯಾಲೆಸ್ಟೈನ್ ಸಮಸ್ಯೆಯನ್ನು ಚರ್ಚಿಸಿದರು. ಅವರು 'ಯಹೂದಿಗಳ ಗುರಿ ನ್ಯಾಯವಾದುದು. ಆದರೆ ಅರಬರಿಗೂ ಅನ್ಯಾಯವಾಗುವುದಿಲ್ಲವೆಂದು ನಂಬುತ್ತೇನೆ' ಎಂದು ಸ್ಥಿರೀಕರಿಸಿದರು. (ಹರಿಜನ, ೨೧-೭-೧೯೪೬)

## ಅಪರಾಧಿಗಳೂ ಅಹಿಂಸೆಯೂ

**ಪ್ರಶ್ನೆ:** ಸ್ವತಂತ್ರ ಭಾರತದಲ್ಲಿ, ನಿಮ್ಮ ಅಹಿಂಸಾದೃಷ್ಟಿಯಿಂದ ಅಪರಾಧಿಗಳನ್ನು ನಡೆಸಿಕೊಳ್ಳುವುದು ಹೇಗೆ?

**ಉತ್ತರ:** ಸ್ವತಂತ್ರ ಅಹಿಂಸಾಮಾರ್ಗದ ಭಾರತದಲ್ಲಿ ಅಪರಾಧಗಳಿರುತ್ತವೆ; ಅಪರಾಧಿಗಳು ಇರುವುದಿಲ್ಲ. ಅವರನ್ನು ಶಿಕ್ಷಿಸುವುದಿಲ್ಲ. ಅಪರಾಧ ಇತರ ರೋಗಗಳಂತೆ ಒಂದು ರೋಗ. ಇದು ಇಂದಿನ ಸಾಮಾಜಿಕ ಪದ್ಧತಿಯ ಶಿಶು. ಆದುದರಿಂದ ಎಲ್ಲ ಅಪರಾಧಗಳನ್ನೂ—ಕೊಲೆ ಸಹ—ರೋಗದಂತೆ ಉಪಚರಿಸಲಾಗುವುದು. ಅಂತಹ ಭಾರತ ಅಸ್ತಿತ್ವಕ್ಕೆ ಬರುವುದೇ?—ಎಂಬುದು ಬೇರೆ ಮಾತು. **(ಹರಿಜನ, ೫-೫-೧೯೪೬)**

## ಕಳವು

**ಪ್ರಶ್ನೆ:** ಕೆಲಸಗಾರ ಕಳವಿನ ಚಟವುಳ್ಳವನಾಗಿ, ಒಳ್ಳೆಯ ಮಾತುಗಳಿಂದಾಗಲೀ ದೊಣ್ಣೆ ಏಟಿನಿಂದಾಗಲೀ ತಿದ್ದಿಕೊಳ್ಳುವ ಮನಸ್ಸುಳ್ಳವನಾಗದಿದ್ದಲ್ಲಿ, ಯಜಮಾನ ಏನು ಮಾಡಬೇಕು ?

**ಉತ್ತರ:** ಇತರರಿಗೂ—ಅದು ಪತ್ತೆಯಾಗದಿದ್ದರೂ—ಅದೇ ಚಟ ಇರಬಹುದು. ನೋಡಿದರೆ ನಾವೆಲ್ಲ ಕಳ್ಳರೆಂಬುದು ಗೊತ್ತಾಗುವುದು. ವ್ಯತ್ಯಾಸ ಇಷ್ಟು : ನಮ್ಮ ವಿಷಯದಲ್ಲಿ ನಾವು ಸಹಿಸಿಕೊಳ್ಳುತ್ತೇವೆ. ಇತರರ ಕಳವು ಪತ್ತೆಯಾದರೆ ಮತ್ತು ಅವರು ಸಾಮಾನ್ಯರಿಂದ ಬೇರೆಯಾದರೆ ನಾವು ಅಸಹನೆ ಉಳ್ಳವರಾಗುತ್ತೇವೆ. ತಾನು ಮಾರುವ ವಸ್ತುಗಳಿಗೆ ಸಾಧ್ಯವಾದಷ್ಟು ಬೆಲೆಯನ್ನು—ಪ್ರಕಾಶವಾಗಿಯೇ ಹಾಕುವವನು ಕಳ್ಳನಲ್ಲದೆ ಮತ್ತೇನು ? ಕೊಳ್ಳುವವನು ಒಪ್ಪಿಯೇ ಮೋಸಹೋಗುತ್ತಾನೆ ಎಂಬುದು ಉತ್ತರವಾದರೆ ಅದು ನನ್ನ ವಾದವನ್ನು ಸ್ಥಿರಪಡಿಸಿದಂತೆ ಆಯಿತು. ವಾಸ್ತವವಾಗಿ ಕೊಳ್ಳುವವನಿಗೆ ಇಷ್ಟವಿಲ್ಲದಿದ್ದರೂ ಅವನು ನಿಸ್ಸಹಾಯಕ. ಈ ಕಳವು ಸಮಾಜದಲ್ಲಿ ಆಳವಾಗಿ ಬೇರು ಬಿಟ್ಟಿರುವ ರೋಗವೊಂದರ ಚಿಹ್ನೆ. ಹಣವಿರುವ ಕೆಲವರು, ನಿರ್ಗತಿಕರಾದ ಅನೇಕರು ಇವರ ನಡುವಿನ ಶಾಶ್ವತ ಹೋರಾಟದ ಸಂಕೇತ ಇದು. 'ನೌಕರ ಕಳ್ಳರಲ್ಲಿ ಚಪಲವುಂಟಾಗದಂತೆ ನೋಡಿಕೊಳ್ಳಿ ; ಅವರನ್ನು ನಿಮ್ಮ ಸಹೋದರರಂತೆ ನಡೆಸಿಕೊಳ್ಳಿ. ಆದರೆ ಎಂತಹ ಮಾನವೀಯ ನಡತೆಗೂ ಆತ ಬಗ್ಗದಿದ್ದಲ್ಲಿ ಬಿಟ್ಟು ಕಳುಹಿಸಿಬಿಡಿ.' ಆ ಪರಿಸ್ಥಿತಿಯಲ್ಲಿ ತನ್ನ ಸಹೋದರನನ್ನು ತಾನು ಹಾಗೆಯೇ ನಡೆಸಿಕೊಳ್ಳುತ್ತಿದ್ದನೇ ಎಂಬ ಪ್ರಶ್ನೆಯನ್ನು ಒಡೆಯ ತನಗೆ ತಾನೇ ಕೇಳಿಕೊಳ್ಳಲಿ. (ಹರಿಜನ, ೨೧-೭-೧೯೪೬)

## ಅಪರಾಧಿಗಳಿಗೆ ಪ್ರಕೃತಿಚಿಕಿತ್ಸೆ

ಉರಳಿಯಲ್ಲಿ ಪ್ರಾರ್ಥನಾಸಭೆಯಲ್ಲಿ ಮಾತನಾಡುತ್ತಾ ಗಾಂಧೀಜೀ ತಮ್ಮ ಅಭಿಪ್ರಾಯದಲ್ಲಿ, ತಮ್ಮ ಭಾವನೆಯ ಸ್ವರಾಜ್ಯವನ್ನು ಕಟ್ಟುವುದರಲ್ಲಿ ಪ್ರಕೃತಿಚಿಕಿತ್ಸೆ ಆವಶ್ಯಕವಾದ ಅಂಶ ಎಂದು ಹೇಳಿದರು. ಸ್ವರಾಜ್ಯಸಾಧನೆ **ಮೂರು ಶುದ್ಧತೆಗಳಿಂದ ಸಾಧ್ಯ—ದೇಹಶುದ್ಧಿ, ಮನಶ್ಶುದ್ಧಿ ಮತ್ತು ಆತ್ಮಶುದ್ಧಿ.**

ಅವರು ಆ ಮಾತುಗಳನ್ನು ಹೇಳಿದಾಗ, ಇನ್ನು ಇಪ್ಪತ್ತುನಾಲ್ಕು ಗಂಟೆಗಳೊಳಗಾಗಿ ಆ ಬೋಧನೆಯನ್ನು ಕಾರ್ಯಾಚರಣೆಯಲ್ಲಿ ತರುವ ಅವಕಾಶ ತಮಗೆ ಉಂಟಾಗುವುದೆಂದು ಅವರು ಭಾವಿಸಿದ್ದಿರಲಾರರು. ಮರುದಿನವೇ ಅವರಲ್ಲಿಗೆ ಒಬ್ಬ ಗಾಯಗೊಂಡವನನ್ನು ಕರೆತಂದರು. ಅವನ ಮನೆಯಿಂದ ಒಡವೆಗಳನ್ನು ತೆಗೆದುಕೊಂಡ ಕಳ್ಳರು ಅವನನ್ನು ಗಾಯಗೊಳಿಸಿದ್ದರು. ಗಾಂಧೀಜೀ ಉರಳಿ ಗ್ರಾಮಸ್ಥರಿಗೆ, ಕಳವಿನ ಪರಿಸ್ಥಿತಿಯಲ್ಲಿ ಮೂರು ವಿಧಾನಗಳನ್ನು ಅನುಸರಿಸಬಹುದೆಂದು ಹೇಳಿದರು: ಮೊದಲನೆಯದು, ಕಳ್ಳ ಬಂದಾಗ ಪದ್ಧತಿಯಂತೆ ಎಲ್ಲರಿಗೂ ಗೊತ್ತಿರುವ ಪೋಲೀಸಿಗೆ ತಿಳಿಸುವ ಹಳೆಯ ವಿಧಾನ. ಅನೇಕ ವೇಳೆ ಇದರಿಂದ ಪೋಲೀಸಿನವರಿಗೆ ಮುಂದೆ ಮತ್ತು ಅನೀತಿಗೆ ಅವಕಾಶ ಸಿಕ್ಕುತ್ತಿತ್ತೇ ಹೊರತು ಕಷ್ಟಕ್ಕೆ ಸಿಕ್ಕಿದವನಿಗೆ ಯಾವ ಪರಿಹಾರವೂ ಉಂಟಾಗುತ್ತಿರಲಿಲ್ಲ. ಎರಡನೆಯ ವಿಧಾನ, ಸಾಮಾನ್ಯವಾಗಿ ಹಳ್ಳಿಯವರು ಅನುಸರಿಸುತ್ತಿರುವ ವಿಧಾನ—ಒಪ್ಪಿಕೊಂಡು ಸುಮ್ಮನಿರುವುದು. ಇದು ತಿರಸ್ಕಾರಕ್ಕೆ ಯೋಗ್ಯ. ಇದರ ಮೂಲ ಹೇಡಿತನ. ಹೇಡಿತನ ಇರುವವರೆಗೆ ಅಪರಾಧ ಅಭಿವೃದ್ಧಿಯಾಗುವುದು. ಇನ್ನೂ ಏನೆಂದರೆ ಇಂತಹ ಹೇಡಿತನದಿಂದ ಅಪರಾಧಕ್ಕೆ ನಾವೂ ಪಾಲುದಾರರಾಗುತ್ತೇವೆ. ಮೂರನೆಯ ಮಾರ್ಗ, ಗಾಂಧೀಜೀ ಒಪ್ಪಿದುದು ಶುದ್ಧ ಸತ್ಯಾಗ್ರಹ ಮಾರ್ಗ. ಇದನ್ನು ಮಾಡಬೇಕಾದರೆ, ಕಳ್ಳರೂ ಅಪರಾಧಿಗಳೂ ನಮ್ಮ ಅಣ್ಣತಮ್ಮಂದಿರು–ಅಕ್ಕತಂಗಿಯರು ಎಂದು ಭಾವಿಸಬೇಕು. ಅಪರಾಧ ಒಂದು ರೋಗ. ಕಳ್ಳರೂ ಅಪರಾಧಿಗಳೂ ಆ ರೋಗಕ್ಕೆ ಬಲಿಯಾಗಿದಾರೆ. ಅವರನ್ನು ಗುಣಪಡಿಸುವುದು ಆವಶ್ಯಕ. ಕಳ್ಳನನ್ನೂ ಅಪರಾಧಿಯನ್ನೂ ಬೈದು ದ್ವೇಷಿಸಿ ಅವನಿಗೆ ಶಿಕ್ಷೆ ಮಾಡಿಸುವ ಬದಲು ಪರಿಹಾರಮಾರ್ಗವನ್ನು ಪ್ರಯತ್ನಿಸಬೇಕು. ಉದಾಹರಣೆಗೆ, ಅವನಿಗೆ ಯಾವುದಾದರೂ ಕಸಬನ್ನು ಕಲಿಸಿ, ಸಲಕರಣೆ ಒದಗಿಸಿ, ಪ್ರಾಮಾಣಿಕ ಜೀವನವನ್ನು ನಡೆಸುವಂತೆ, ಅವನ ಬಾಳಿನಲ್ಲಿ ಪರಿವರ್ತನೆಯಾಗುವಂತೆ ಪ್ರಯತ್ನಿಸಬೇಕು. ಕಳ್ಳನೂ ಅಪರಾಧಿಯೂ ತಮ್ಮಿಂದ ಬೇರೆ ಬಗೆಯಾದ ವ್ಯಕ್ತಿಯಲ್ಲ ಎಂಬುದನ್ನು ಅವರು ಅರಿಯಬೇಕು. ನಿಜವಾಗಿ ಬೆಳಕನ್ನು ಒಳಗಡೆ ತಿರುಗಿಸಿ, ತಮ್ಮ ಹೃದಯಾಂತರಾಳದೊಳಗೆ ಚೆನ್ನಾಗಿ ನೋಡಿದರೆ ವ್ಯತ್ಯಾಸ ತಾರತಮ್ಯದಲ್ಲಿ ಮಾತ್ರ ಎಂದು ಅವರಿಗೆ ನಿಜವಾಗಿ ಗೊತ್ತಾಗುವುದು. ಸ್ವಪ್ರಯೋಜನ

ಕ್ಕಾಗಿ ಇತರರನ್ನು ದುಡಿಸಿಕೊಳ್ಳುವ ಅಥವಾ ಇತರ ಅನ್ಯಾಯಮಾರ್ಗಗಳಿಂದ ಧನಿಕನಾದ ಮನುಷ್ಯ ಜೇಬುಗಳ್ಳ ಅಥವಾ ಮನೆಮುರುಕ ಕಳ್ಳನಿಗಿಂತ ಕಡಮೆಯ ಕಳ್ಳತನ ಮಾಡಿದವನಲ್ಲ. ಮೊದಲನೆಯವನು ಮರ್ಯಾದೆಯ ಮುಖವಾಡದ ಮರೆಯಲ್ಲಿ ರಕ್ಷಣೆಹೊಂದಿ ಕಾನೂನಿನ ದಂಡನೆಯನ್ನು ತಪ್ಪಿಸಿ ಕೊಳ್ಳುತ್ತಾನೆ. ನ್ಯಾಯವಾಗಿ ನೋಡಿದರೆ ತನ್ನ ಆವಶ್ಯಕತೆಗಳನ್ನು ಮೀರಿ ಹಣವನ್ನು ಸಂಪಾದಿಸಿ ಕೂಡಿಹಾಕುವುದೆಲ್ಲ ಕಳವು. ವಿವೇಕಯುತವಾದ ಐಶ್ವರ್ಯವ್ಯವಸ್ಥೆ ಮತ್ತು ಸಂಪೂರ್ಣ ಸಾಮಾಜಿಕ ನ್ಯಾಯ ಇವು ಇದ್ದರೆ, ಕಳವಿಗಾಗಲೀ ಕಳ್ಳರಿಗಾಗಲೀ ಆಸ್ಪದವೇ ಇರುವುದಿಲ್ಲ. ನನ್ನ ಭಾವನೆಯ ಸ್ವರಾಜ್ಯದಲ್ಲಿ ಕಳ್ಳರೂ ಅಪರಾಧಿಗಳೂ ಇರುವುದಿಲ್ಲವೆಂದು ನನ್ನ ನಂಬಿಕೆ. ಹಾಗಿಲ್ಲದಿದ್ದರೆ ಅದು ಬರಿಯ ಹೆಸರಿಗೆ ಸ್ವರಾಜ್ಯ. ಅಪರಾಧಿ ಸಮಾಜದ ರೋಗದ ಸಂಕೇತ. ನನ್ನ ಭಾವನೆಯ ಪ್ರಕೃತಿಚಿಕಿತ್ಸೆಯಲ್ಲಿ ದೇಹ-ಮನಸ್ಸು-ಆತ್ಮ ಮೂರರ ಚಿಕಿತ್ಸೆಯೂ ಸೇರಿದೆ. ಆದುದರಿಂದ ನೀವು ಉರಳಿಯಿಂದ ದೇಹದ ರೋಗಗಳನ್ನು ಮಾತ್ರ ಬಹಿಷ್ಕರಿಸುವುದರಲ್ಲಿ ತೃಪ್ತರಾಗಬಾರದು. ಮನಸ್ಸು ಮತ್ತು ಆತ್ಮದ ರೋಗಗಳ ಗುಣವನ್ನೂ ನಿಮ್ಮ ಕಾರ್ಯದಲ್ಲಿ ಸೇರಿಸಿ ಕೊಳ್ಳಬೇಕು. ಆಗ ನಿಮ್ಮಲ್ಲಿ ಪೂರ್ಣ ಸಾಮಾಜಿಕ ಶಾಂತಿ ನೆಲೆಗೊಳ್ಳುತ್ತದೆ.

## ಸತ್ಯಾಗ್ರಹದ ಮಾರ್ಗ

ನಾನು ವಿವರಿಸಿರುವಂತೆ ಸತ್ಯಾಗ್ರಹದ ಮಾರ್ಗವನ್ನು ಅನುಸರಿಸುವು ದಾದರೆ—ಅದೇ ಪ್ರಕೃತಿಚಿಕಿತ್ಸೆಯ ಮಾರ್ಗವೂ ಸಹ. ಅಪರಾಧ ನಡೆಯು ತ್ತಿರುವಾಗ ನೀವು ನೋಡುತ್ತ ಸುಮ್ಮನೆ ಕುಳಿತಿರುವುದಕ್ಕಾಗುವುದಿಲ್ಲ. ಸ್ಥಿತ ಪ್ರಜ್ಞನೊಬ್ಬ ಮಾತ್ರ, ತನ್ನಲ್ಲಿ ತಾನು ಲೀನನಾಗಿ ಜಗತ್ತಿನ ಜವಾಬ್ದಾರಿ ಗಳಿಂದಲೂ ತಾಪತ್ರಯಗಳಿಂದಲೂ ಪೂರ್ಣನಾಗಿ ಮುಕ್ತನಾಗಿರಬಲ್ಲ. ಆದರೆ ಆ ಸ್ಥಿತಪ್ರಜ್ಞತ್ವ ಯಾರಿಗೆ ಉಂಟು? ಸಮುದ್ರಮಧ್ಯದಲ್ಲಿ ಪೂರ್ಣಶಾಂತಿ ಉಂಟಾದರೆ ಅನುಭವಿ ಹಡಗು ಸಂಚಾಲಕನೂ ನಾವಿಕರೂ ಅದನ್ನು ಕಾತರ ದಿಂದ ಪರಿಗಣಿಸುವರು. ಪೂರ್ಣಶಾಂತಿ ಸಮುದ್ರದ ನಿಯಮವಲ್ಲ. ಜೀವನ

ಸಮುದ್ರದ ವಿಷಯವೂ ಹಾಗೆಯೇ. ಅನೇಕ ವೇಳೆ ಅದು ಬಿರುಗಾಳಿಯ ಮುನ್‌ಸೂಚನೆ. ಆದುದರಿಂದ ಸತ್ಯಾಗ್ರಹಿ ಪ್ರತೀಕಾರ ಮಾಡುವುದಿಲ್ಲ. ಅಪರಾಧಿಗೆ ಅಡಿಯಾಳಾಗುವುದಿಲ್ಲ. ತನ್ನನ್ನು ತಾನು ಗುಣಪಡಿಸಿಕೊಳ್ಳುವುದರಿಂದ ಅಪರಾಧಿಯನ್ನು ಗುಣಪಡಿಸಬಯಸುತ್ತಾನೆ. ಅವನು ಏಕಕಾಲದಲ್ಲಿ ಎರಡು ಕುದುರೆಗಳ ಸವಾರಿಮಾಡಲು ಪ್ರಯತ್ನಿಸುವುದಿಲ್ಲ. ಅಂದರೆ ಅಹಿಂಸಾ ಧರ್ಮವನ್ನು ಅನುಸರಿಸುವಂತೆ ನಟಿಸುತ್ತಾ ಪೋಲೀಸ್ ಸಹಾಯದ ಬೆನ್ನು ಹತ್ತುವುದಿಲ್ಲ. ಮೊದಲನೆಯದನ್ನು ಅನುಸರಿಸಲು ಎರಡನೆಯದನ್ನು ಬಹಿಷ್ಕರಿಸಬೇಕು. ಅಪರಾಧಿ ತಾನೇ ಪೋಲೀಸಿನವರ ಕೈಗೆ ಸಿಕ್ಕಲು ಒಪ್ಪಿದರೆ ಆ ವಿಷಯ ಬೇರೆ. ಅಪರಾಧಿಗೆ ವಿರೋಧವಾಗಿ ದೂರುಕೊಡಲು ನೀವು ಪೋಲೀಸಿಗೆ ಹೋಗುವುದಾದರೆ, ಅವನ ಹೃದಯವನ್ನು ಪರಿವರ್ತಿಸಿ ಅವನ ನಂಬಿಕೆಯನ್ನು ಗಳಿಸುವುದು ಸಾಧ್ಯವಿಲ್ಲ. ಅದು ಪೂರ ನಂಬಿಕೆಯ ದ್ರೋಹ. ಸಂಸ್ಕಾರಕ, ಚಾಡಿಕೋರನಾಗಲಾರ. ನಿದರ್ಶನವಾಗಿ ಗಾಂಧೀಜೀ ತಮ್ಮಲ್ಲಿ ಅನೇಕ ಹಿಂಸ್ರಕರು ಬಂದು ತಾವು ಮಾಡಿದ ಕಾರ್ಯವನ್ನು ಹೇಳಿಕೊಂಡಿದ್ದರೆಂದೂ ತಾವು ಪೋಲೀಸಿಗೆ ಸುದ್ದಿ ಕೊಡಲು ತಿರಸ್ಕರಿಸಿದ್ದರೆಂದೂ ಹೇಳಿದರು. 'ಸತ್ಯಾಗ್ರಹಿಯ ಮುಂದೆ ಬಂದು ತಪ್ಪನ್ನು ಒಪ್ಪಿಕೊಂಡವನ ವಿರೋಧವಾಗಿ ಸಾಕ್ಷಿ ಹೇಳುವಂತೆ ಯಾವ ಪೋಲೀಸ್ ಅಧಿಕಾರಿಯೂ ಸತ್ಯಾಗ್ರಹಿಯನ್ನು ಬಲಾತ್ಕರಿಸಲಾರ. ಸತ್ಯಾಗ್ರಹಿ ಎಂದಿಗೂ ನಂಬಿಕೆದ್ರೋಹದ ತಪ್ಪನ್ನು ಮಾಡುವವನಲ್ಲ.' ಗಾಂಧೀಜಿಯವರು ಉರಳಿ ಪ್ರಜೆಗಳು ಅಪರಾಧ ಮತ್ತು ಅಪರಾಧಿಗಳನ್ನು ಎದುರಿಸಲು ಸತ್ಯಾಗ್ರಹಮಾರ್ಗವನ್ನು ಅನುಸರಿಸುವುದನ್ನು ಅಪೇಕ್ಷಿಸಿದರು. ಸತ್ಯಾಗ್ರಹಿಗಳು ಅಪರಾಧಿಗಳನ್ನು ಅವರ ಮನೆಗಳಲ್ಲಿ ಸಂಧಿಸಬೇಕು. ದುರಾಚಾರ ಮತ್ತು ಕೆಟ್ಟ ಅಭ್ಯಾಸಗಳಿಂದ ಅವರನ್ನು ತಪ್ಪಿಸಬೇಕು. ಪ್ರಾಮಾಣಿಕನಾಗಿ ಜೀವಿಸುವುದನ್ನು ಕಲಿಸಿ ಅವರ ಪುನರ್ ವಸತಿಗೆ ಸಹಾಯಕರಾಗಬೇಕು. (ಹರಿಜನ, ೧೧-೮-೧೯೪೬)

# ಪ್ರಾಮಾಣಿಕ ವ್ಯಾಪಾರ

**ಪ್ರಶ್ನೆ :** ನಾನು ಇಪ್ಪತ್ತೊಂದು ವಯಸ್ಸಿನ ಯುವಕ. ಹನ್ನೊಂದು ಜನ ನನ್ನ ಪೋಷಣೆಯಲ್ಲಿದ್ದಾರೆ. ನನಗೆ ಸತ್ಯ ಮತ್ತು ಅಹಿಂಸೆಯಲ್ಲಿ ನಂಬಿಕೆ ಇದೆ. ಆದರೆ ವ್ಯಾಪಾರದಲ್ಲಿ ಇದನ್ನು ಚಾಚೂ ತಪ್ಪದೆ ಅನುಸರಿಸಲು ಸಾಧ್ಯವಾಗುತ್ತಿಲ್ಲ. ನಾನು ಏನು ಮಾಡಬೇಕು? ವ್ಯಾಪಾರವನ್ನು ಬಿಡುವುದೆಂದರೆ ನನ್ನ ಬಂಧುಗಳು ಕಷ್ಟವನ್ನು ಅನುಭವಿಸುವುದಾಗುತ್ತದೆ.

**ಉತ್ತರ :** ಇದು ಸ್ಥಿತಿಯನ್ನು ಸ್ಥಿರಪಡಿಸುವುದಾಗಿದೆ. ಪ್ರಾಮಾಣಿಕ ವ್ಯಾಪಾರ ಕಷ್ಟ ; ಆದರೆ ಅಸಾಧ್ಯವಲ್ಲ. ವಿಷಯವೇನೆಂದರೆ ಹೆಚ್ಚು ಪ್ರಾಮಾಣಿಕನಾದಂತೆ ವ್ಯಾಪಾರ ಹೆಚ್ಚುತ್ತದೆ. ಆದ್ದರಿಂದಲೇ 'ಪ್ರಾಮಾಣಿಕತೆ ಉತ್ತಮ ನೀತಿ' ಎಂಬ ಗಾದೆ ಹುಟ್ಟಿದೆ. ಪತ್ರವ್ಯವಹಾರಿಗೆ ಇಲ್ಲದೆ ಇರುವುದು ಏನೆಂದರೆ, ಅಧ್ಯವಸಾಯ ಮತ್ತು ಪ್ರಾಮಾಣಿಕ ವ್ಯಾಪಾರದ ಸರಿಯಾದ ಜ್ಞಾನ. ಪ್ರಾಮಾಣಿಕತೆಗೂ ದೊಡ್ಡ ಐಶ್ವರ್ಯವನ್ನು ಗಳಿಸುವುದಕ್ಕೂ ಸಹಯೋಗವಿಲ್ಲವೆಂಬುದು ನಿಜ. 'ನಿಜವಾಗಿ, ಧನಿಕನಿಗೆ ಭಗವಂತನ ಸಾಮ್ರಾಜ್ಯವನ್ನು ಪ್ರವೇಶಿಸುವುದಕ್ಕಿಂತ ಒಂಟೆಗೆ ಸೂಜಿಯ ಕಣ್ಣಿನ ಮೂಲಕ ಹಾದು ಹೋಗುವುದು ಹೆಚ್ಚು ಸುಲಭ.' ಮತ್ತು ವ್ಯಾಪಾರಿ ಎಷ್ಟೇ ಶಕ್ತನಾಗಿರಲಿ, ಸೋಮಾರಿಗಳನ್ನು ಹನ್ನೊಂದಾಗಲಿ ಹೆಚ್ಚಾಗಲಿ ಕಡಮೆಯಾಗಲಿ— ಪೋಷಿಸಕೂಡದು. ಆ ಹನ್ನೊಂದೂ ಆಶ್ರಿತರೂ ಶಿಶುಗಳೂ ಅಥವಾ ಅಶಕ್ತರೂ ಆಗಿರಲಾರರು. ಪ್ರಾಮಾಣಿಕತೆ, ವ್ಯಾಪಾರಿಯಿಂದ ಅಸಾಧ್ಯವಾದುದೇನನ್ನೂ ಕೇಳುವುದಿಲ್ಲ. ಪ್ರಾಮಾಣಿಕನಿಗೆ ಅಪ್ರಾಮಾಣಿಕ ಬಂಧುಗಳು ಇರುವುದಿಲ್ಲ. ಅಂತರಂಗವನ್ನು ಸರಿಯಾಗಿ ಪರೀಕ್ಷಿಸಿದಾಗ, ಪತ್ರವ್ಯವಹಾರಿಗೆ 'ಪ್ರಾಮಾಣಿಕ ವ್ಯಾಪಾರದಲ್ಲಿ ದೋಷವಿಲ್ಲ, ದೋಷವಿರುವುದು ತನ್ನಲ್ಲಿ' ಎಂದು ಸ್ಪಷ್ಟವಾಗಿ ಗೊತ್ತಾಗುವುದು. (ಹರಿಜನ, ೨೮–೭–೧೯೪೬)

# ಅವರ ವ್ಯಾಪ್ತಿಗೆ ಹೊರಗಾದದ್ದು

**ಮೇಜರ್ ಜನರಲ್ ಕಾರಿಯಪ್ಪ ಹೀಗೆ ಹೇಳಿರುವುದಾಗಿ ವರದಿಯಾಗಿದೆ :**

'ಭಾರತದಲ್ಲಿ ಇಂದಿನ ಪರಿಸ್ಥಿತಿಯಲ್ಲಿ ಅಹಿಂಸೆಯಿಂದ ಏನೂ ಪ್ರಯೋಜನವಿಲ್ಲ. ಬಲವಾದ ಸೈನ್ಯ ಮಾತ್ರ ಭಾರತವನ್ನು ಜಗತ್ತಿನ ಮಹತ್ ರಾಷ್ಟ್ರಗಳ ಪೈಕಿ ಒಂದಾಗಿ ಮಾಡುವುದು.'

ಅನೇಕ ಪ್ರವೀಣರಂತೆ ಜನರಲ್ ಕಾರಿಯಪ್ಪ ತಮ್ಮ ಪ್ರಮಾಣವನ್ನು ಮೀರಿಹೋಗಿ, ಅಹಿಂಸೆಯನ್ನು ಕುರಿತ ತಮ್ಮ ಗಂಭೀರ ಅಜ್ಞಾನವನ್ನು ಹೇಳುವ ಅಚಾತುರ್ಯಕ್ಕೆ ಸಿಕ್ಕಿದಾರೆಂದು ನಾನು ಭಾವಿಸುತ್ತೇನೆ. ಸ್ವಾಭಾವಿಕವಾಗಿಯೇ ಅಹಿಂಸೆಯ ಕಾರ್ಯಕ್ರಮದಲ್ಲಿ ಅವರ ಜ್ಞಾನ ತೀರ ಮೇಲುಮೇಲೆ. ಜೀವಮಾನದ ಪೂರ್ತ ಅಹಿಂಸೆಯನ್ನು ಅಭ್ಯಾಸಮಾಡಿರುವ ಕಾರಣದಿಂದ ನಾನು ಅದರಲ್ಲಿ ನಿಪುಣನೆಂದು ಹೇಳಿಕೊಳ್ಳುತ್ತೇನೆ—ತುಂಬ ಅಪೂರ್ಣನಾದರೂ. ಪರತತ್ತ್ವಪ್ರಕ್ರಿಯೆಯಲ್ಲಿ ಮಾತನಾಡುವುದಾದರೆ ನಾನು ಹೆಚ್ಚು ಹೆಚ್ಚಾಗಿ ಅದನ್ನು ಆಚರಿಸಿದಷ್ಟೂ ನನ್ನ ಬಾಳಿನಲ್ಲಿ ಅದರ ಪೂರ್ಣಪ್ರಕಾಶನದಿಂದ ನಾನು ಅಷ್ಟೂ ಅಷ್ಟು ದೂರದಲ್ಲಿರುವುದು ನನಗೆ ಸ್ಪಷ್ಟವಾಗಿ ಕಾಣುತ್ತದೆ. ಪ್ರಪಂಚದಲ್ಲಿ ಇದು ಮನುಷ್ಯನ ಅತಿ ಮಹತ್ ಧರ್ಮ. ಇದರ ಜ್ಞಾನ ಇಲ್ಲದುದು ಅವರು (ಕಾರಿಯಪ್ಪ) ಈ ಕಾಲದಲ್ಲಿ 'ಅಹಿಂಸೆ ಹಿಂಸೆಯ ಎದುರಿಗೆ ನಿರ್ಬಲ' ಎಂದು ಹೇಳುವಂತೆ ಮಾಡಿದೆ. ಆದರೆ ನಾನು ಧೈರ್ಯವಾಗಿ ಹೇಳುತ್ತೇನೆ. ಈ ಅಣುಬಾಂಬಿನ ಯುಗದಲ್ಲಿ ಹಿಂಸೆಯ ಎಲ್ಲ ಒಟ್ಟುಗೂಡಿದ ತಂತ್ರವನ್ನೂ ಚಕಿತಗೊಳಿಸುವ ಶಕ್ತಿ—ಶುದ್ಧವಾದ ಅಹಿಂಸೆಯೊಂದೆ. ಈಗ ಜನರಲ್‌ರಿಗೆ ಯುದ್ಧವಿಜ್ಞಾನ ಮತ್ತು ಅಭ್ಯಾಸದಲ್ಲಿ ಅವರ ಬ್ರಿಟಿಷ್ ಗುರುಗಳ ಮಾರ್ಗದರ್ಶನ ಇಲ್ಲದಿರುವಾಗ, ತಮಗೆ ನಿಲುಕದ ಆಳಕ್ಕೆ ಕೈಹಾಕದೆ ಇರುವುದು ಅವರಿಗೆ ಯೋಗ್ಯವಾಗುತ್ತಿತ್ತು. ಜನರಲ್ ಕಾರಿಯಪ್ಪ ಅವರಿಗಿಂತ ಹೆಚ್ಚು ಉನ್ನತರಾದ ಜನರಲ್‌ಗಳು, ಅಹಿಂಸೆಯ ಶಕ್ತಿಯ ಸಾಧ್ಯತೆಗಳನ್ನು ಕುರಿತು ಮಾತನಾಡಲು ತಮಗೆ ಹಕ್ಕು ಇಲ್ಲವೆಂದು ಹೇಳುವಷ್ಟು ನಮ್ರತೆಯನ್ನೂ ನಿಷ್ಕಾಪಟ್ಯವನ್ನೂ ಹೊಂದಿದವರಾಗಿದಾರೆ. ಯುದ್ಧವಿಜ್ಞಾನ ಮತ್ತು ಅದರ ಅಭ್ಯಾಸದ ದುಃಖಕರ ದಿವಾಳಿತನವನ್ನು ನಾವು ಅದರ ತಾಯಿನಾಡಿನಲ್ಲಿಯೇ ನೋಡುತ್ತಿದೇವೆ. ಸಟ್ಟಾವ್ಯಾಪಾರದ ಜೂಜಿನಲ್ಲಿ ದಿವಾಳಿಯಾದವನು ಆ ವಿಶಿಷ್ಟರೂಪದ ಜೂಜಿನ ಪ್ರಶಂಸೆಯನ್ನೇ ಮಾಡಬೇಕೆ?

(ಹರಿಜನ, ೧೬–೧೧–೧೯೪೭)

# ಅದು ಹೇಡಿತನವಲ್ಲವೆ ?

**ಪ್ರಶ್ನೆ :** ನಿಮ್ಮ ಅಭಿಪ್ರಾಯದಲ್ಲಿ ಅಹಿಂಸೆ ಹೇಡಿತನವಲ್ಲ, ಆದರೆ ಅದು ಅನ್ಯಾಯಕ್ಕೆ ವಿರುದ್ಧವಾಗಿ ಒಂದು ರೂಪದ ನಿರೋಧ ಎಂದು. ನಿರಪ ರಾಧಿಗಳನ್ನು—ಸತ್ಯಾಗ್ರಹಿಗಳು ನಿರಪರಾಧಿಗಳು—ಬಂಧಿಸಿ ಸೆರೆಹಾಕುವುದು ಅನ್ಯಾಯ ಎಂದು ನೀವೇ ಒಪ್ಪಿದೀರಿ. ಮತ್ತು ನೀವು ಸಂತೋಷದಿಂದ ಬಂಧನ ವನ್ನೂ ಸೆರೆವಾಸವನ್ನೂ ಆಹ್ವಾನಿಸಿದೀರಿ. ಇದು ಪೂರ್ವಾಪರವಿರೋಧವೂ ಹೇಡಿತನವೂ ಅಲ್ಲವೆ ?

**ಉತ್ತರ :** ನಿಜವಾಗಿಯೂ ನಿಮಗೆ ಅಹಿಂಸೆಯ ಕಾರ್ಯವಿಧಾನ ಗೊತ್ತಿಲ್ಲ. ಅನ್ಯಾಯದ ಕಾನೂನು ಹಿಂಸೆಯ ಒಂದು ರೂಪ. ಅದನ್ನು ಮುರಿದುದಕ್ಕಾಗಿ ಬಂಧನ—ಹಿಂಸೆಯ ಇನ್ನೂ ಹೆಚ್ಚಿನ ರೂಪ. ಈಗ ಅಹಿಂಸೆಯ ಕಾನೂನು ಹೀಗೆ ಹೇಳುತ್ತದೆ : 'ಹಿಂಸೆಯನ್ನು ಪ್ರತಿಹಿಂಸೆಯಿಂದ ಎದುರಿಸುವುದಲ್ಲ ; ಅಹಿಂಸೆಯಿಂದ.' ಯಾವ ಕಾನೂನನ್ನು ಮುರಿದರೂ ಅದರ ಜತೆಯಲ್ಲಿಯೇ ಅದರ ದಂಡವಿದೆ. ನಾನು ಹೇಳುವುದರಿಂದ ಮಾತ್ರವೇ ಅದು ಅನ್ಯಾಯವಾಗುವುದಿಲ್ಲ. ಆದರೂ ಅದು ಅನ್ಯಾಯ ಎಂಬುದು ನನ್ನ ಅಭಿಪ್ರಾಯ. ಕಾನೂನು ಪುಸ್ತಕದಲ್ಲಿ ಅದು ಇರುವವರೆಗೆ ಅದನ್ನು ಜಾರಿ ಮಾಡಲು ಸರ್ಕಾರಕ್ಕೆ ಅಧಿಕಾರವಿದೆ. ನಾನು ಅದನ್ನು ಅಹಿಂಸೆಯಿಂದ ಎದುರಿಸಬೇಕು. ಇದನ್ನು ನಾನು ಕಾನೂನನ್ನು ಮುರಿಯುವುದರಿಂದಲೂ ಬಂಧನಕ್ಕೂ ಸೆರೆವಾಸಕ್ಕೂ ಅಧೀನನಾಗುವುದರಿಂದಲೂ ಮಾಡುತ್ತೇನೆ. ಆ ನಡತೆ, ಆವಶ್ಯಕವಾದಷ್ಟು ಮಟ್ಟದ ಧೀರತನವೆಂದೂ ನಾನು ಕರೆಯುತ್ತೇನೆ. ಇಂದು ನನ್ನಂಥವನಿಗೆ ಸೆರೆವಾಸ ಕ್ಲೇಶಕರವಲ್ಲ ಎಂಬುದು ಅಸಂಬದ್ಧ. ನನ್ನ ಮನೋನಿಲುವಿನಲ್ಲಿ ಸಾಮಾನ್ಯ ಸೆರೆವಾಸದಿಂದ ಯಾವ ವ್ಯತ್ಯಾಸವೂ ಆಗುವು ದಿಲ್ಲವೆಂಬುದನ್ನು ಒಪ್ಪಬಹುದು. ಈ ಚರ್ಚೆಯಲ್ಲಿ ಬಂದಿರುವ ಪ್ರಶ್ನೆಯಲ್ಲಿ, ಸತ್ಯಾಗ್ರಹ ಅಹಿಂಸೆಯ ಪ್ರಾಮುಖ್ಯ ನಿಯಮ. ಅದು ಹೇಡಿತನದ ಚಿಹ್ನೆ ಅಲ್ಲ. ಅದರ ಬದಲು, ಬಂಧಿತನಾಗಲು ಒಪ್ಪದಿರುವ ಪ್ರತಿಭಟನೆ ನಿಜವಾಗಿ ಬರಿಯ ಅಬ್ಬರ. ವಿವೇಕವಿಲ್ಲದ ಹಿಂಸೆಯನ್ನು ಹೇಡಿತನದ ವಾಗಾಡಂಬರ ಎಂದು ಹೇಳಬಹುದು. (ಹರಿಜನ, ೨೨–೯–೧೯೪೬)

# ಅಹಿಂಸೆ ಏನು ಮಾಡಬಲ್ಲುದು ?

**ಪ್ರಶ್ನೆ:** ಇಂದು ಜಗತ್ತಿನಲ್ಲಿ ಯಾವೆಡೆಗೆ ಕಣ್ಣನ್ನು ಹೊರಳಿಸಿದರೂ ಹಿಂಸೆ ಮತ್ತು ಶಕ್ತಿ ರಾಜಕೀಯದ ಹೊರತು ಮತ್ತೇನೂ ಕಣ್ಣಿಗೆ ಬೀಳುವುದಿಲ್ಲ. ಮತ್ತು ಇಂಗ್ಲೆಂಡ್–ಅಮೆರಿಕದಂತಹ ಪ್ರಜಾತಂತ್ರ ರಾಷ್ಟ್ರಗಳಲ್ಲಿಯೂ ಇದೇ ಸ್ಥಿತಿ ಇದೆ. ಇಂತಹ ಪರಿಸ್ಥಿತಿಯಲ್ಲಿ ನಿಮ್ಮ ಅಹಿಂಸೆ ಏನು ಮಾಡಬಲ್ಲುದು ಎಂಬುದನ್ನು ಕುರಿತು ಚೆನ್ನಾಗಿ ಆಲೋಚಿಸಿದೀರಾ ?

**ಉತ್ತರ:** ನಿಜ. ಶಕ್ತಿ ರಾಜಕೀಯ ಎಲ್ಲೆಲ್ಲಿಯೂ ಇದೆ. ಆದರೆ ಇಂಗ್ಲೆಂಡಿನಲ್ಲಾಗಲೀ ಅಮೆರಿಕದಲ್ಲಾಗಲೀ ನಿಜವಾದ ಪ್ರಜಾತಂತ್ರ ಆಚರಣೆಯಲ್ಲಿದೆ ಎಂದು ನೀವು ಭಾವಿಸುವುದು ತುಂಬ ತಪ್ಪು. ಜನರ ಅಭಿಪ್ರಾಯ ದೇವರ ಅಭಿಪ್ರಾಯ ಎಂದು ಹೇಳಬಹುದು. ಆದರೆ ಇಂಗ್ಲೆಂಡ್–ಅಮೆರಿಕಗಳಲ್ಲಿರುವಂತೆ ಜನರೇ ತಮಗಾಗಿ ಇತರರನ್ನು ದುಡಿಸಿಕೊಳ್ಳುವವರಾದರೆ (ಸಾಮ್ರಾಜ್ಯಶಾಹಿಗಳಾದರೆ) ಅವರ ಮಾತು ಹೇಗೆ ದೇವರ ಮಾತು ಆಗುತ್ತದೆ ? ಅವರು ಬಣ್ಣದ ಜನಾಂಗಗಳ ದುಡಿಮೆಯಿಂದ ಅವರ ಮೇಲೆ ಜೀವಿಸುತ್ತಿದಾರೆ. ಜನತೆಯ ಅಭಿಪ್ರಾಯ ದೇವರ ಅಭಿಪ್ರಾಯವಾಗುವುದಾದರೆ, ಜನತೆ ಪಕ್ಷಗಳನ್ನು ಮೀರಿ ಇರಬೇಕು. ದೇವರ ತಕ್ಕಡಿ ಸತ್ಯ–ಅಹಿಂಸೆಗಳನ್ನು ಯಾವಾಗಲೂ ಸರಿಯಾಗಿ ತೂಗುತ್ತದೆ. ಈ ಮಾತಿನಲ್ಲಿ ನನ್ನ ಪ್ರತ್ಯುತ್ತರವೂ ಅಡಗಿದೆ. ನನ್ನ ಅಹಿಂಸೆ ಹೆಳವೂ ಅಲ್ಲ, ನಿರ್ಬಲವೂ ಅಲ್ಲ. ಅದು ಸರ್ವಶಕ್ತ. ಎಲ್ಲಿ ಅಹಿಂಸೆಯೋ ಅಲ್ಲಿ ಸತ್ಯವಿದೆ. ಸತ್ಯವೇ ದೇವರು. ದೇವರು ಹೇಗೆ ವ್ಯಕ್ತನಾಗುತ್ತಾನೆ ಅದನ್ನು ನಾನು ಹೇಳಲಾರೆ. ನನಗೆ ತಿಳಿದಿರುವುದು ಇಷ್ಟು: ಆತನು ಸರ್ವಾಂತರ್ಯಾಮಿ. ಅವನು ಇರುವ ಕಡೆ ಎಲ್ಲ ಶುಭ. ಆದುದರಿಂದ ಎಲ್ಲರಿಗೂ ಒಂದೇ ಧರ್ಮ. ಜಗತ್ತಿನಲ್ಲಿ ಎಲ್ಲೆಲ್ಲಿ ಸತ್ಯ–ಅಹಿಂಸೆ ಸಾರ್ವಭೌಮವಾಗಿರುವುವೋ ಅಲ್ಲಿ ಶಾಂತಿ ಮತ್ತು ಆನಂದ. ಇವು ಎಲ್ಲಿಯೂ ಇಲ್ಲ ಎಂಬುದು ಅವು ತಾತ್ಕಾಲಿಕವಾಗಿ ಮನುಷ್ಯರಿಂದ ಮರೆಯಾಗಿವೆ ಎಂಬುದನ್ನು ತೋರಿಸುತ್ತದೆ. ಆದರೆ ಅವು ಶಾಶ್ವತವಾಗಿ ಕಣ್ಮರೆಯಾಗಲಾರವು. ಆ ನಂಬಿಕೆ ನಿಷ್ಠಾವಂತರಿಗೆ ಆಸರೆಯಾಗಬೇಕು.

(ಹರಿಜನ, ೨೯–೯–೧೯೪೬)

## ಹಿಂಸೆಯ ಮಾರ್ಗಗಳು

ಸರಳರೇಖೆ ಒಂದು. ಅಹಿಂಸೆ ಸರಳರೇಖೆ. ಸರಳವಾಗಿಲ್ಲದ ರೇಖೆಗಳು ಅನೇಕವಾಗಿವೆ. ಲೇಖನಿಯನ್ನು ಹಿಡಿಯುವುದನ್ನು ಕಲಿತ ಮಗು ತನಗೆ ಇಷ್ಟಬಂದಷ್ಟು ಗೆರೆಗಳನ್ನು ಎಳೆಯಬಲ್ಲುದು. ಅದು ಆಕಸ್ಮಿಕವಾಗಿ ಹೊರತು ನೇರವಾದ ಗೆರೆಯನ್ನು ಎಳೆಯಲಾರದು. ಅನೇಕ ವಾಚಕರು ನಾನು ಅನುಮತಿ ಇತ್ತಿರುವ 'ಹಿಂಸೆಯಲ್ಲಿ' ಅವರು ಸೇರಿಸಿರುವುದೆಲ್ಲ ಸೇರಬಲ್ಲುದೇ ಎಂದು ಕೇಳುತ್ತಾರೆ. ಆಶ್ಚರ್ಯವೆಂದರೆ ಬಂದಿರುವ ಕಾಗದಗಳೆಲ್ಲ ಇಂಗ್ಲೀಷಿನಲ್ಲಿವೆ. ಬರೆದಿರುವವರು, ನನ್ನ ಲೇಖನವನ್ನು ಮತ್ತೆ ಓದಬೇಕು. ನಾನು ಆ ಪ್ರಶ್ನೆಗಳಿಗೆ ಉತ್ತರ ಕೊಡಲು ಯಾಕೆ ಆಗುವುದಿಲ್ಲವೆಂಬುದು ಅವರಿಗೆ ತತ್‌ಕ್ಷಣ ಗೊತ್ತಾಗುವುದು. ನಾನು ಅದಕ್ಕೆ ಅನರ್ಹ. ಯಾಕೆಂದರೆ ಪ್ರಾಯಶಃ ನಾನು ಹಿಂಸೆಯನ್ನು ಯಾವಾಗಲೂ ಆಚರಿಸಿಲ್ಲವೆಂಬ ಸರಳ ಕಾರಣದಿಂದ. ಎಲ್ಲಕ್ಕಿಂತ ಹೆಚ್ಚಾಗಿ ನಾನು ಹಿಂಸೆಗೆ ಯಾವಾಗಲೂ ಒಪ್ಪಿಗೆ ಕೊಟ್ಟಿಲ್ಲ. ನಾನು ಸುಮ್ಮನೆ, ಧೀರತನದ ಮತ್ತು ಹೇಡಿತನದ ದರ್ಜೆಗಳನ್ನು ಹೇಳಿದೇನೆ. ಕಾನೂನು ಬದ್ಧವಾದ ಒಂದೇ ಮಾರ್ಗ ಅಹಿಂಸೆ. ಇಲ್ಲಿ ಹೇಳಿರುವ ಅರ್ಥದಲ್ಲಿ, ಹಿಂಸೆ ಎಂದಿಗೂ ಕಾನೂನುಬದ್ಧವಾಗಲಾರದು. ಅಂದರೆ ಮನುಷ್ಯ ಮಾಡಿರುವ ಕಾನೂನಿಗನುಸಾರವಾಗಿ ಅಲ್ಲ. ಆದರೆ ಪ್ರಕೃತಿ ಮನುಷ್ಯನಿಗಾಗಿ ಮಾಡಿರುವ ಕಾನೂನಿಗನುಸಾರವಾಗಿ. ಹಿಂಸೆ ಕಾನೂನುಬದ್ಧವಲ್ಲದಿದ್ದರೂ ಆತ್ಮರಕ್ಷಣೆಗಾಗಿ ಆಗಲಿ ಅಥವಾ ಅನಾಥರ ರಕ್ಷಣೆಗಾಗಲಿ ಆಚರಿಸಿದಾಗ ಅದು ಧೀರತೆಯ ಕಾರ್ಯವಾಗುತ್ತದೆ. ಹೇಡಿತನದ ಶರಣಾಗತಿಗಿಂತ ಅದು ತುಂಬ ಶ್ಲಾಘ್ಯ.

(ಹರಿಜನ, ೨೭-೧೦-೧೯೪೬)

## ಸ್ತ್ರೀಯರ ಕಠಿಣ ಪರೀಕ್ಷೆ

ಒಂದು ಸಂದರ್ಭದಲ್ಲಿ ಗಾಂಧೀಜೀ ಹೇಳಿದರು : 'ಮರಣವಲ್ಲ ಯೋಚಿಸಬೇಕಾದದ್ದು. ಆದರೆ ಮರಣವನ್ನು ಹೇಗೆ ಎದುರುಗೊಳ್ಳುತ್ತೀರಿ' ಎಂಬುದು. ಭ್ರಾತೃವಿನ ಕೈಯಿಂದ ಸಾಯುವುದು, ನೀವು ಧೈರ್ಯದಿಂದ ಸಾಯುವುದಾದರೆ,

ಒಂದು ಸುಯೋಗ. ಆದರೆ ಬಲಾತ್ಕಾರವಾಗಿ ಹಾರಿಸಿಕೊಂಡು ಹೋಗಿ ಮತಾಂತರ ಮಾಡಿದ ಸ್ತ್ರೀಯರ ವಿಷಯವೇನು ?—ಒಬ್ಬರ ಇಷ್ಟಕ್ಕೆ ವಿರೋಧ ವಾಗಿ ಮಂತಾತರಿಸುವುದು ಮತಾಂತರವಲ್ಲ ಎಂಬುದು ಪ್ರಕೃತ ವಿಷಯವಲ್ಲ. ಭಾರತದ ಸ್ತ್ರೀಯರು ತಾವು ಅಷ್ಟು ನಿಸ್ಸಹಾಯರೆಂದು ಯಾಕೆ ಭಾವಿಸಬೇಕು ? ಧೈರ್ಯವೆಂಬುದು ಬರಿ ಗಂಡಸರ ಹಕ್ಕೆ ? ಮಹಿಳೆಯರು ಝಾನ್ಸಿ ರಾಣಿಯಂತೆ ಕತ್ತಿ ಹಿಡಿದುಕೊಂಡು ತಿರುಗುವುದಿಲ್ಲ. ಆದರೆ ಝಾನ್ಸಿ ರಾಣಿ ತನ್ನ ಸಹಜೀವಿ ದಳವನ್ನೆಲ್ಲ ಕತ್ತಿಯ ಸಾಹಸದಲ್ಲಿಯೂ ಶೌರ್ಯದಲ್ಲಿಯೂ ಹಿಂದಕ್ಕೆ ಹಾಕಿದಳು. ಆದರೆ ಎಲ್ಲರೂ ಝಾನ್ಸಿ ರಾಣಿಯರಾಗುವುದು ಸಾಧ್ಯವಿಲ್ಲ. ಆದರೆ ಎಲ್ಲ ಸ್ತ್ರೀಯರೂ ಸೀತೆಯ ಉದಾಹರಣೆಯನ್ನು ಅನುಕರಿಸಬಹುದು. ಪ್ರಬಲನಾದ ರಾವಣನೂ ಆಕೆಯನ್ನು ಮುಟ್ಟಲು ಶಕ್ತನಾಗಲಿಲ್ಲ. ಝಾನ್ಸಿ ರಾಣಿಯರನ್ನು ಪರಾಜಯಗೊಳಿಸುವುದೂ ಸಾಧ್ಯ.'

'ಸೀತೆಯ ಉದಾಹರಣೆಯನ್ನು ಕಟ್ಟುಕತೆಯೆಂದು ತಳ್ಳಬೇಡಿ' ಎಂದು ಗಾಂಧೀಜೀ ಆಲಿವ್ ಡೋಕ್‌ನ ಉದಾಹರಣೆಯನ್ನು ಹೇಳಿದರು. ಡೋಕ್ ಆಫ್ರಿಕದ ಹೃದಯದಲ್ಲಿ ವಸ್ತ್ರಹೀನ ಮೂಲ ನೀಗ್ರೋ ಬುಡಕಟ್ಟುಗಳೊಡನೆ, ತನಗೆ ಅಪಾಯ ಒದಗಬಹುದೆಂಬ ಭಯವನ್ನು ಬಿಟ್ಟು, ವಾಸಿಸುವ ಧೈರ್ಯ ಮಾಡಿದನು. ಆ ಉನ್ನತ ದರ್ಜೆಯ ಧೈರ್ಯವನ್ನು ಭಾರತದ ಮಹಿಳೆಯರು ಬೆಳೆಸಿಕೊಳ್ಳಬೇಕೆಂದು ಗಾಂಧೀಜೀ ಬಯಸಿದರು. ಸೈನ್ಯಗಳೂ ಪೋಲೀಸರೂ ಅವರನ್ನು ಅಪಹಾರದಿಂದ ತಪ್ಪಿಸಬಹುದು. ಆದರೆ ಈಗಾಗಲೇ ಅಪಹೃತ ರಾಗಿರುವವರ ಗತಿಯೇನು ? ಅಥವಾ ಮುಂದೆಯೂ ಪೋಲೀಸ್ ಮತ್ತು ಮಿಲಿಟರಿಯನ್ನೂ ಮೀರಿ ಅಪಹೃತರಾಗುವವರ ಗತಿಯೇನು ? ತಮ್ಮ ತಲೆಯ ಒಂದು ಕೂದಲಿಗೂ ಅಪಾಯ ಸಂಭವಿಸುವುದಕ್ಕೆ ಮುಂಚೆ, ಸಾಯುವುದನ್ನು ಅವರು ಕಲಿಯಬೇಕು. ಉಸಿರು ಕಟ್ಟುವುದರಿಂದಾಗಲೀ ನಾಲಗೆಯನ್ನು ಕಡಿದುಕೊಳ್ಳುವುದರಿಂದಾಗಲೀ ತಮ್ಮ ಪ್ರಾಣವನ್ನು ಕಳೆದುಕೊಳ್ಳುವುದು ಸ್ತ್ರೀಯರಿಗೆ ಸಾಧ್ಯವೆಂದು ಅವರು ಕಂಠೋಕ್ತವಾಗಿ ಹೇಳಿದರು.

# ಮಾನಭಂಗಕ್ಕಿಂತ ಮುಂಚೆ ಮರಣ

ಮರುದಿನ ಸಂಜೆ, ಮೇಲೆ ಸೂಚಿಸಿದ ಪ್ರಯೋಗತಂತ್ರವನ್ನು ಗಾಂಧೀಜೀ ಪುನರ್ವಿಮರ್ಶಿಸಬೇಕಾಯಿತು. ಮೊದಲ ದಿನ ಗಾಂಧೀಜೀ ಹೇಳಿದುದನ್ನು ಕೇಳಿದ ಡಾಕ್ಟರ್ ಸುಶೀಲಾ ನಯ್ಯರ್ ಅವರಿಗೆ ಹೇಳಿದ್ದಳು. ಗಾಂಧೀಜೀ ಅವರನ್ನು ಮರುದಿನ ನೋಡಿದ ಡಾಕ್ಟರ್ ಬಿ. ಸಿ. ರಾಯ್ ಆಕೆಯ ಮಾತನ್ನು ಪುಷ್ಟೀಕರಿಸಿದ್ದರು.

'ಉಸಿರು ಕಟ್ಟುವುದರಿಂದಾಗಲೀ, ನಾಲಿಗೆಯನ್ನು ಕಚ್ಚಿಕೊಳ್ಳುವುದರಿಂದಾಗಲೀ, ಸಾಯುವುದು ಸಾಧ್ಯವಿಲ್ಲ' ಎಂಬುದೇ ಡಾಕ್ಟರ್ ನಯ್ಯರ್ ಹೇಳಿದ ಮಾತಾಗಿತ್ತು. 'ತತ್‌ಕ್ಷಣ ಜೀವನಾಶಕ್ಕೆ ವೈದ್ಯಶಾಸ್ತ್ರಕ್ಕೆ ಗೊತ್ತಿದ್ದ ಮಾರ್ಗ ಒಂದೇ—ತೀವ್ರವಾದ ಒಂದು ಸಲಕ್ಕೆ ಬೇಕಾದಷ್ಟು (ಡೋಸ್) ವಿಷ.'

ಗಾಂಧೀಜೀ ಹೇಳಿದರು : 'ಹಾಗಾದರೆ ಮಾನಭಂಗದ ಗಂಡಾಂತರದಲ್ಲಿ ಕೆಲಸಮಾಡುವವರು ತಮ್ಮ ಜತೆ ಒಂದು ಸಲಕ್ಕೆ ಆಗುವಷ್ಟು ವಿಷವನ್ನು ಇಟ್ಟುಕೊಂಡಿರಬೇಕು. ಯೋಗಾಭ್ಯಾಸವನ್ನು ಮಾಡುವವರಿಂದ ಕೇಳಿದೇನೆ. ಯಾವುದೋ ಯೋಗಾಭ್ಯಾಸದಿಂದ ಪ್ರಾಣವನ್ನು ಬಿಡಲು ಸಾಧ್ಯವಂತೆ. ಇನ್ನೂ ವಿಚಾರಿಸಲು ಪ್ರಯತ್ನಿಸುತ್ತೇನೆ. ನನ್ನದು ನಿಷ್ಪ್ರಯೋಜಕ ಯೋಚನೆ ಅಲ್ಲ. ನಾನು ಹೇಳುತ್ತಿರುವುದು ನನ್ನ ಮನಸ್ಸಾಕ್ಷಿಯಾಗಿ. ಅಪಮಾನಕ್ಕಿಂತ ಸಾಯುವುದಾಗಿ ಎದೆಯನ್ನು ಉಕ್ಕುಮಾಡಿಕೊಳ್ಳುವುದರಿಂದಲೇ ಹೋರಾಡಲು ಹೊಸ ಶಕ್ತಿ ಬರುತ್ತದೆ. ನಮ್ಮ ದೇಶದಲ್ಲಿ ಸ್ತ್ರೀ, ಪತಿಯು ಜತೆಯಲ್ಲಿ ಅಥವಾ ಚಿತೆಯಮೇಲೆ ಮಾತ್ರ ಸುರಕ್ಷಿತಳೆಂದು ಬೋಧಿಸಲ್ಪಟ್ಟಿದೆ. ಭಾರತದ ಸ್ತ್ರೀಯರು ಅದರ ಬದಲು, ತಾವು ನಿಸ್ಸಹಾಯರೆಂದು ಭಾವಿಸುವುದನ್ನು ಬಿಟ್ಟು, ಆಯುಧಗಳನ್ನು ಹಿಡಿದುಕೊಂಡು ಹೋಗುವುದನ್ನೇ ನಾನು ನೋಡಿಯೇನು. ರಿವಾಲ್ವರ್‌ಗಳನ್ನೂ ಬಾಕುಗಳನ್ನೂ ಧರಿಸಿಕೊಂಡು ಹೋಗುವ ಪದ್ಧತಿ ಸ್ತ್ರೀಯರಲ್ಲಿ ಅಧಿಕವಾಗುತ್ತಿದೆ. ಅಸಮಾನ ಬಲವನ್ನು ಎದುರಿಸಿ ಮಾನರಕ್ಷಣೆ ಮಾಡಿಕೊಳ್ಳುವ ವಿಷಯದಲ್ಲಿ ಆಯುಧಗಳು ಏನೇನೂ ಉಪಯೋಗವಿಲ್ಲವೆಂಬುದು ನನಗೆ ಗೊತ್ತು. ಆಯುಧಗಳು ನಿಸ್ಸಹಾಯತೆಯ ಗುರುತು; ಶಕ್ತಿಯ

ಸಂಕೇತವಲ್ಲ. ಅವು ಕೈಬಿಟ್ಟುಹೋದರೆ ಶರಣಾಗತಿಯ ಹೊರತು ಬೇರೆ ದಾರಿಯೇ ಇಲ್ಲ.'

ಅನಂತರ ಒಬ್ಬ ಮುಸಲ್ಮಾನ ಮಿತ್ರರು, 'ಮುಸಲ್ಮಾನರ ಅತ್ಯಾಚಾರಗಳನ್ನು ಖಂಡಿಸಲು ನೀವು ಸಿದ್ಧರಾಗಿದೀರಿ. ಆದರೆ ಹಿಂದೂಗಳು ಅವುಗಳನ್ನು ಎಸಗಿದಾಗ ಮೌನವನ್ನು ಕೈಕೊಳ್ಳುವಿರಿ' ಎಂದು ಬರೆದಿದ್ದ ಕಾಗದದ ವಿಷಯವನ್ನು ಪ್ರಸ್ತಾಪಿಸಿದರು. 'ಈ ಆಕ್ಷೇಪಣೆ ನಿರಾಧಾರವಾದುದು. ನನಗೆ ಎಲ್ಲ ಮನುಷ್ಯರೂ ಸ್ವಂತ ಭ್ರಾತೃಗಳಂತೆ' ಎಂದರು. (ಹರಿಜನ, ೨೭-೧೦-೧೯೪೬)

---

ಅಧ್ಯಾಯ – ೧೩

# ಉಪಸಂಹಾರ



## ಭಾರತದ ಕುಲಧನ

ಗಾಂಧೀಜೀ ತಮ್ಮ ಪ್ರಾರ್ಥನಾನಂತರದ ಪ್ರವಚನದಲ್ಲಿ ಬರ್ಮಾದ ಮುಖ್ಯಮಂತ್ರಿ ತಮ್ಮನ್ನು ಸಂದರ್ಶಿಸಿದ್ದರೆಂದೂ ಅವರು ತುಂಬ ವಿನಯಶೀಲರೆಂದೂ ಹೇಳಿದರು. ಗಾಂಧೀಜೀ ಅವರಿಗೆ ಹೀಗೆ ಹೇಳಿದ್ದರು: 'ಭಾರತ ಭೌಗೋಲಿಕವಾಗಿ ದೊಡ್ಡ ರಾಷ್ಟ್ರ.' ಇದರ ಸಂಸ್ಕೃತಿಯೂ ಪ್ರಾಚೀನವಾದುದು. ಆದರೆ ಇಂದು ಬರ್ಮಾ ಭಾರತದಿಂದ ಕಲಿಯುವುದು ಏನೂ ಇಲ್ಲ. ಸರ್ವ ಪ್ರೇಮವನ್ನೂ ಸರ್ವರಲ್ಲಿಯೂ ಸಹಾನುಭೂತಿಯನ್ನೂ ಬೋಧಿಸಿದ ಗುರು ನಾನಕ್ ಭಾರತದಲ್ಲಿ ಜನ್ಮವೆತ್ತಿದುದು ನಿಶ್ಚಯ. ಸೀಖರು ಹಿಂದೂಗಳೊಡನೆ, ಮುಸಲ್ಮಾನರೊಡನೆ, ಎಲ್ಲರೊಡನೆಯೂ ಸೌಹಾರ್ದದಿಂದಿರಬೇಕು. ಹಿಂದೂಗಳಿಗೂ ಸೀಖರಿಗೂ ವ್ಯತ್ಯಾಸವುಂಟುಮಾಡುವುದು ತಪ್ಪು. ಮಾಸ್ಟರ್ ತಾರಾಸಿಂಗ್‌ರು ಹಿಂದೂಗಳನ್ನೂ ಸೀಖರನ್ನೂ ಉಗುರಿಗೂ ಬೆರಳಿಗೂ ಹೋಲಿಸಿದಾರೆ. ಎರಡನ್ನೂ ಬೇರೆ ಬೇರೆ ಮಾಡಲು ಯಾರಿಂದಲೂ ಸಾಧ್ಯವಿಲ್ಲ. ಗುರು ನಾನಕ್ ಯಾರು? ಹಿಂದುವೇ ಅಲ್ಲವೆ? ಗುರುಗ್ರಂಥ ವೇದತತ್ತ್ವಗಳಿಂದ ತುಂಬಿದೆ. ಹಿಂದೂ ಧರ್ಮ ಎಲ್ಲವನ್ನೂ ಸ್ವೀಕರಿಸುವ ಮಹತ್ ಸಾಗರ. ತಮ್ಮ ಈ ಉತ್ತರಾಧಿಕಾರವನ್ನು ಹಿಂದೂಗಳು ಮರೆತಂತೆ ತೋರುತ್ತಿದೆ. ಇಂದು ಭಾರತೀಯರು ಭ್ರಾತೃಹತ್ಯದಲ್ಲಿ ತೊಡಗಿರುವಂತೆ ತೋರುತ್ತಿದೆ. ಬರ್ಮಾ ಭಾರತದಿಂದ ಹೋರಾಟವನ್ನು ಕಲಿಯುವುದು ನನ್ನ ಇಷ್ಟವಲ್ಲ. ಇಂದಿನ ತಾತ್ಕಾಲಿಕವಾದ ಈ ಪರಿಸ್ಥಿತಿಯನ್ನು ಮರೆಯಿರಿ. ಭಾರತ—ರಕ್ತಪಾತವಿಲ್ಲದೆ ಸ್ವಾತಂತ್ರ್ಯ ಸಂಪಾದಿಸಿರುವುದು ಜ್ಞಾಪಕವಿರಲಿ. ಭಾರತ ಆಚರಿಸಿರುವ ಅಹಿಂಸೆ ಧೀರರ ಅಹಿಂಸೆಯಲ್ಲ ಎಂದು ನಾನು ಒಪ್ಪುತ್ತೇನೆ. ಅದು

ಏನೇ ಇರಲಿ. ಈ ನಾಲ್ವತ್ತು ಕೋಟಿ ಜನತೆಯ ಬೃಹತ್ ರಾಷ್ಟ್ರ ಪಾರ ತಂತ್ರ್ಯದ ಹೊರೆಯನ್ನು ಇಳಿಸಲು ಅದರಿಂದ ಶಕ್ತಿಯುಂಟಾಯಿತು. ಭಾರತದ ಸ್ವಾತಂತ್ರ್ಯ ಬರ್ಮಾ_ಸಿಲೋನಗಳಿಗೂ ಸಾತಂತ್ರ್ಯವನ್ನು ತಂದಿತು. ಆಯುಧ ಗಳ ಬಲವಿಲ್ಲದೆ ಸ್ವಾತಂತ್ರ್ಯವನ್ನು ಗಳಿಸಿದ ರಾಷ್ಟ್ರ, ಹಾಗೆಯೇ ಆಯುಧಬಲ ಇಲ್ಲದೆ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳುವುದಕ್ಕೂ ಶಕ್ತವಾಗಬೇಕು. ಭಾರತಕ್ಕೆ ಸೈನ್ಯ ಇದೆ. ಹಡಗುಪಡೆ ಸಿದ್ಧವಾಗುತ್ತಿದೆ. ವಿಮಾನಬಲವೂ ಇದೆ. ಅವು ಗಳನ್ನು ಇನ್ನೂ ಬೆಳೆಸುತ್ತಿದಾರೆ. ನಾನು ಹೀಗೆ ಹೇಳುತ್ತೇನೆ: ಆದರೆ ಭಾರತ ತನ್ನ ಅಹಿಂಸೆಯನ್ನು ಬೆಳೆಸಿಕೊಳ್ಳದೆ ಹೋದರೆ ಅದು ತನಗಾಗಿ ಗಳಿಸಿದ್ದು ಏನೂ ಇಲ್ಲ. ಜಗತ್ತಿಗಾಗಿ ಗಳಿಸಿದ್ದೂ ಏನೂ ಇಲ್ಲ. ಭಾರತ ಶಸ್ತ್ರಬಲಸಿದ್ಧತೆ ಹೊಂದುವುದು ಭಾರತದ ನಾಶ ಮತ್ತು ಜಗತ್ತಿನ ನಾಶ. ಬರ್ಮಾ ಮಿತ್ರರಿಗೆ ಜ್ಞಾಪಕವಿರಲಿ. ನಿಮ್ಮ ಬೌದ್ಧ ಧರ್ಮ ನಿಮಗೆ ಭಾರತದಿಂದ ಬಂದಿದೆ. ನನಗೆ ನಿಮ್ಮ ಅನೇಕ ಭಿಕ್ಷುಗಳ ಪರಿಚಯವಿದೆ. ಭಾರತದಿಂದ ನೀವು ಬೌದ್ಧಧರ್ಮ ದಲ್ಲಿ ಸರ್ವಶ್ರೇಷ್ಠವಾದುದನ್ನು ತೆಗೆದುಕೊಳ್ಳಬೇಕು. ನನ್ನ ಅಭಿಪ್ರಾಯದಲ್ಲಿ ಮೂಲದ ಯೋಗ್ಯತೆ, ವಲಸೆಹೋದುದರಿಂದ ಸ್ವಲ್ಪ ಅವನತಿಗಿಳಿದಿದೆ. ಬರ್ಮಾ, ಸಿಲೋನ್ ತಮ್ಮ ಅತ್ಯುತ್ತಮ ಘನತೆಯನ್ನು ಸಾಧಿಸಬೇಕೆಂಬುದು ನನ್ನ ಇಷ್ಟ. ಭಾರತದಲ್ಲಿರುವ ದೋಷಗಳನ್ನು ಬಿಟ್ಟು, ಅದರ ಅತ್ಯುತ್ತಮ ಗುಣಗಳನ್ನು ಅವರು ಗ್ರಹಿಸಿದರೆ ಮಾತ್ರ ಇದು ಸಾಧ್ಯ.' (ಹರಿಜನ, ೧೪-೦೨-೧೯೪೭)

## ಒಂದು ಕೋರಿಕೆ

ನಾನು ಅಹಿಂಸೆಯ ಶಾಸ್ತ್ರವನ್ನು ಕುರಿತು ಒಂದು ಪ್ರಕರಣಗ್ರಂಥವನ್ನು ಬರೆಯಬೇಕೆಂದು ಮಿತ್ರರೊಬ್ಬರು ಸೂಚಿಸುತ್ತಾರೆ.

ಅಂತಹ ಪ್ರಕರಣಗ್ರಂಥವನ್ನು ಬರೆಯುವುದು ನನ್ನ ಶಕ್ತಿಗೆ ಮೀರಿದುದು. ಶಾಸ್ತ್ರಜಿಜ್ಞಾಸೆಗಳನ್ನು ಬರೆಯಲು ನಾನು ನಿರ್ಮಿತನಾಗಿಲ್ಲ. ಕಾರ್ಯ ನನ್ನ ಕ್ಷೇತ್ರ. ನನ್ನ ದೃಷ್ಟಿಗೆ ಅನುಸಾರವಾಗಿ ನಾನು ಕರ್ತವ್ಯವೆಂದು ಭಾವಿಸುವು ದನ್ನು, ನನ್ನ ಪಾಲಿಗೆ ಒದಗುವುದನ್ನು ಮಾಡುತ್ತೇನೆ. ನನ್ನ ಕಾರ್ಯವೆಲ್ಲ

ಸೇವಾಮನೋಭಾವದಿಂದಲೇ ಪ್ರಚೋದಿತವಾಗುತ್ತದೆ. ಅಹಿಂಸೆಯನ್ನು ಒಂದು ಶಾಸ್ತ್ರವಾಗಿ ಕ್ರಮಗೊಳಿಸಬಲ್ಲ ಯಾರಾದರೂ ಅದನ್ನು ಮಾಡಲಿ—ಅಹಿಂಸೆ ನಿಜವಾಗಿ ಅಂತಹ ಪ್ರತಿಪಾದನೆಗೆ ಒಳಪಡುವುದಾದರೆ. ನನಗೆ ಅಸಾಧ್ಯವಾಗುವುದಾದರೆ ಪತ್ರವ್ಯವಹಾರಿ ಈ ಕಾರ್ಯಕ್ಕೆ ಮೂರು ಹೆಸರುಗಳನ್ನು ಸೂಚಿಸಿದ್ದಾರೆ. ಶ್ರೀ ವಿನೋಬಾ, ಶ್ರೀ ಕಿಶೋರ್‌ಲಾಲ್ ಮತ್ತು ಶ್ರೀ ಕಾಕಾ ಕಾಲೇಲ್ಕರ್. ಮೊದಲನೆಯ ಹೆಸರಿನವರು ಮಾಡಬಲ್ಲರು, ಆದರೆ ಅವರು ಮಾಡುವುದಿಲ್ಲವೆಂದು ನನಗೆ ಗೊತ್ತು. ಅವರ ಪ್ರತಿಯೊಂದು ಗಂಟೆಯೂ ಅವರ ಕೆಲಸಕ್ಕಾಗಿ ನಿಯಮಿತವಾಗಿದೆ. ಆ ಕಾರ್ಯಗಳಿಂದ ಒಂದು ನಿಮಿಷ ಕಡಮೆಮಾಡಿ ಅದನ್ನು ಒಂದು ಶಾಸ್ತ್ರರಚನೆಗೆ ವಿನಿಯೋಗಿಸುವುದನ್ನೂ ಅವರು ದೈವದ್ರೋಹವೆಂದು ಎಣಿಸುತ್ತಾರೆ. ನಾನೂ ಅವರೊಂದಿಗೆ ಸಹಮತ. ಜಗತ್ತಿಗೆ ಶಾಸ್ತ್ರಗಳ ಹಸಿವು ಇಲ್ಲ. ಅದು ಹಂಬಲಿಸುತ್ತಿರುವುದು, ಯಾವಾಗಲೂ ಹಂಬಲಿಸುವುದು—ಶ್ರದ್ಧೆಯಿಂದ ಕೂಡಿದ ಕಾರ್ಯವನ್ನು. ಅದರ ಈ ಹಸಿವನ್ನು ತಣಿಸಬಲ್ಲವನು ಶಾಸ್ತ್ರವನ್ನು ವಿಸ್ತರಿಸುವುದರಲ್ಲಿ ತನ್ನ ಕಾಲವನ್ನು ವಿನಿಯೋಗಿಸುವುದಿಲ್ಲ.

ಕಿಶೋರ್‌ಲಾಲ್‌ರು ಈಗಾಗಲೇ ಒಂದು ಸ್ವತಂತ್ರ ಪ್ರಕರಣಗ್ರಂಥವನ್ನು ಬರೆದಿದ್ದಾರೆ. ಅವರ ದೇಹಾರೋಗ್ಯ ತೃಪ್ತಿಕರವಾಗಿದ್ದರೆ ಇನ್ನೂ ಹೆಚ್ಚಿಗೆ ಬರೆಯುವುದು ಅವರ ಇಷ್ಟವೆಂದು ನನಗೆ ಗೊತ್ತು. ಅವರ ಕೃತಿಯನ್ನು ಶಾಸ್ತ್ರವೆನ್ನುವುದು ಸರಿಯಾಗಲಾರದು. ಆದರೆ ಅದು ಶಾಸ್ತ್ರದ ಬಹು ಸಮೀಪ ಎನ್ನಬಹುದು. ಅವರ ಈಗಿನ ಆರೋಗ್ಯಸ್ಥಿತಿಯಲ್ಲಿ ಅವರು ಈ ಭಾರವನ್ನು ಹೊರಬಲ್ಲರೆಂದು ನಾನು ಭಾವಿಸುವುದಿಲ್ಲ. ಈ ಹೊರೆಯನ್ನು ಅವರ ಮೇಲೆ ನಾನು ಹೊರಿಸಲು ಎಂದೂ ಒಪ್ಪುವುದಿಲ್ಲ. ವಿನೋಬಾರಂತೆ ಅವರೂ ತಮ್ಮ ಕಾಲದ ಒಂದು ಗಳಿಗೆಯನ್ನೂ ವ್ಯರ್ಥವಾಗಗೊಡುವುದಿಲ್ಲ. ಅದರ ಬಹುಭಾಗ ಅನೇಕ ಮಿತ್ರರ ವೈಯಕ್ತಿಕ ಸಮಸ್ಯೆಗಳನ್ನು ಬಿಡಿಸಲು ವೆಚ್ಚವಾಗುತ್ತಿದೆ. ದಿನದ ಕೊನೆಯಲ್ಲಿ ಅವರು ಪೂರ್ಣ ಬಳಲಿದವರಾಗಿರುತ್ತಾರೆ.

ಶ್ರೀ ಕಾಕಾಸಾಹೇಬರು ಠಕ್ಕರ್‌ಬಾಪಾರಂತೆ ಅಲೆಯುವವರು; ಅವರನ್ನು ತಿದ್ದುವುದಕ್ಕಾಗುವುದಿಲ್ಲ. ಈಗ ಅವರು ರಾಷ್ಟ್ರೀಯ ಮತ್ತು ಪ್ರಾಂತೀಯ ಭಾಷೆಗಳ ಅಭಿವೃದ್ಧಿಯನ್ನು ತಮ್ಮ ವಿಶಿಷ್ಟವಾದ ಹೊಣೆಯಾಗಿ ಮಾಡಿಕೊಂಡಿ

ದಾರೆ. ತಮ್ಮ ಕಾಲದ ಒಂದು ಗಳಿಗೆಯನ್ನೂ ಶಾಸ್ತ್ರ ಬರೆಯಲು ಅವರು ತಿರುಗಿಸಲು ಇಷ್ಟಪಟ್ಟರೂ ನಾನು ಅದನ್ನು ತಡೆಯಲು ಪ್ರಯತ್ನಿಸುತ್ತೇನೆ.

ಮೇಲೆ ಬರೆದಿರುವುದರಿಂದ ಈಗ ಪ್ರಮಾಣಗ್ರಂಥಕ್ಕೆ ಆವಶ್ಯಕತೆ ಇಲ್ಲ ಎಂದು ಭಾವಿಸಬಹುದು. ಅಂತಹದು ಯಾವುದೂ ನನ್ನ ಜೀವಿತಕಾಲದಲ್ಲಿ ಅಪೂರ್ಣವಾಗಿಯೇ ಅನಿವಾರ್ಯವಾಗಿ ಇರುವುದು. ನನ್ನ ಮರಣಾನಂತರವೇ ಅದನ್ನು ಬರೆಯುವುದು ಸಾಧ್ಯ. ಹಾಗಾದರೂ ಒಂದು ಎಚ್ಚರಿಕೆ ಕೊಡುತ್ತೇನೆ. ಅದು ಅಹಿಂಸೆಯ ಪೂರ್ಣ ವಿವರಣೆ ಕೊಡುವುದರಲ್ಲಿ ಜಯಪ್ರದವಾಗುವುದಿಲ್ಲ. ಯಾವ ಮನುಷ್ಯನೂ ದೇವರನ್ನು ಪೂರ್ತಿ ವಿವರಿಸಲು ಶಕ್ತನಾಗಿಲ್ಲ. ಅದೇ ಮಾತು ಅಹಿಂಸೆಗೂ ಅನ್ವಯಿಸುತ್ತದೆ. ಇವತ್ತು ನಾನು ಯಾವುದು ಸತ್ಯವೆಂದು ನಂಬಿ ಅದರಂತೆ ನಡೆಯುತ್ತಿದೇನೆಯೋ ನಾಳೆ ಅದನ್ನೇ ನಂಬಿ ಮಾಡುವೆನೆಂದು ನಿಶ್ಚಯವಾಗಿ ಹೇಳಲಾರೆ. ದೇವರು ಮಾತ್ರವೇ ಸರ್ವಜ್ಞ. ರಕ್ತ, ಮಾಂಸ-ಮೂಳೆಗಳ ಮನುಷ್ಯ ನಿಜವಾಗಿ ನ್ಯೂನ. ಮನುಷ್ಯ ದೇವರ ರೂಪದಲ್ಲಿ ಸೃಷ್ಟಿಯಾಗಿದಾನೆಂದು ವಿವರಿಸಬಹುದು. ಆದರೆ ಅವನು ದೇವರಾಗುವುದರಿಂದ ಬಹುದೂರದಲ್ಲಿದ್ದಾನೆ. ದೇವರು ಅಗೋಚರ; ಮನುಷ್ಯನ ಕಣ್ಣುಗಳ ವ್ಯಾಪ್ತಿಗೆ ಮೀರಿದವನು. ಆದುದರಿಂದ ನಾವು ಮಾಡಬಹುದಾದುದು ಏನೆಂದರೆ, ಯಾರನ್ನು ದೇವಮಾನವರೆಂದು ನಾವು ಭಾವಿಸುತ್ತೇವೆಯೋ ಅವರ ಮಾತುಗಳನ್ನೂ ಕಾರ್ಯಗಳನ್ನೂ ಅರ್ಥಮಾಡಿಕೊಳ್ಳಲು ಪ್ರಯತ್ನಿಸುವುದು. ಆ ಮಾತುಗಳಲ್ಲೂ ಕಾರ್ಯಗಳಲ್ಲೂ ನಾವು ಪೂರಾ ತೋಯೋಣ. ಅವುಗಳನ್ನು ನಾವು—ನಮ್ಮ ಹೃದಯಕ್ಕೆ ಅವು ಒಪ್ಪಿಗೆಯಾಗುವವರೆಗೆ—ಕಾರ್ಯಗತಮಾಡಲು ಪ್ರಯತ್ನಿಸೋಣ. ಶಾಸ್ತ್ರೀಯ ಪ್ರಮಾಣಗ್ರಂಥ, ನಮಗೆ ಇದಕ್ಕಿಂತ ಹೆಚ್ಚಿಗೆ ಏನು ಮಾಡಬಲ್ಲದು? (ಹರಿಜನ, ೩-೩-೧೯೪೬)

## ಪ್ರಾರ್ಥನೆ ಮಾಡೋಣ

ಭಾರತ ತನ್ನ ಬಹುಕಾಲದ ಗುರಿಯಾದ ರಾಜಕೀಯ ಸ್ವಾತಂತ್ರ್ಯವನ್ನು ಹೊಂದುವ ತರುಣದಲ್ಲಿದೆಯೆಂಬುದರಲ್ಲಿ ಸಂಶಯವಿಲ್ಲ. ಪ್ರವೇಶ ಪ್ರಾರ್ಥನಾ

ಪೂರ್ವಕವಾಗಿ ಆಗಲಿ. ಪ್ರಾರ್ಥನೆ ಮುದಿ ಹೆಂಗಸಿನ ಸೋಮಾರಿತನದ ವಿನೋದವಲ್ಲ. ಸರಿಯಾಗಿ ಅರಿತು ಪ್ರಯೋಗಿಸಿದರೆ ಅದು ಅತ್ಯಂತ ಸಮರ್ಥವಾದ ಕಾರ್ಯೋಪಕರಣ.

ಆದುದರಿಂದ ಪ್ರಾರ್ಥನೆ ಮಾಡೋಣ ; ಅಹಿಂಸೆಯೆಂದರೆ ನಾವು ಏನು ಅರ್ಥಮಾಡಿಕೊಂಡಿದ್ದೇವೆ ? ಅದರ ಉಪಯೋಗದಿಂದ ದೊರೆತ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳುವುದು ಹೇಗೆಂಬುದನ್ನು ಕಂಡುಕೊಳ್ಳೋಣ. ನನ್ನ ಅಹಿಂಸೆ ದುರ್ಬಲರ ಅಹಿಂಸೆಯಾದರೆ, ಅಂತಹ ಅಹಿಂಸೆಯಿಂದ ನಮ್ಮ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳಲು ಎಂದಿಗೂ ಸಾಧ್ಯವಾಗದೆಂಬುದು ಅದರ ಹಿಂದೆಯೇ ಇದೆ. ಆದರೆ ನಾವು ಕೆಲವು ಕಾಲದವರೆಗೆ ಆದರೂ ನಮ್ಮಲ್ಲಿ ಆಯುಧಗಳಿಲ್ಲದಿರುವುದರಿಂದಲೂ ಅವುಗಳ ಉಪಯೋಗ ನಮಗೆ ತಿಳಿದಿಲ್ಲದೆ ಇರುವುದರಿಂದಲೂ ನಮ್ಮ ರಕ್ಷಣೆಯನ್ನು ಆಯುಧಗಳ ಉಪಯೋಗದಿಂದ ಮಾಡಿಕೊಳ್ಳುವುದು ಸಾಧ್ಯವಿಲ್ಲವೆಂಬುದು ಅದರ ಹಿಂದೆಯೇ ಇದೆ. ನಮಗೆ ಆವಶ್ಯಕವಾದ ಶಿಸ್ತು ಸಹ ಇಲ್ಲ. ಫಲವಾಗಿ ನಾವು ಮತ್ತಾವುದಾದರೂ ದೇಶದ ಸಹಾಯದಮೇಲೆ ಅವಲಂಬಿಸಬೇಕಾಗುತ್ತದೆ. ನಾವು ಆ ದೇಶದ ' ಕೆಳಗಿನವ ' ರಾಗಿರಬೇಕಾಗುತ್ತದೆ. ಆ ಮಾತು ಕಿವಿಗೆ ಹಿತವಾಗಿ ಇಲ್ಲದಿದ್ದರೆ ' ಅವರು ಗುರುಗಳು, ನಾವು ಶಿಷ್ಯರು ' ಆಗಿರಬೇಕಾಗುತ್ತದೆ ಎನ್ನೋಣ.

ಆದುದರಿಂದ ಸ್ವಾತಂತ್ರ್ಯವನ್ನು ಗಳಿಸಲು ಹೇಗೆ ಅಹಿಂಸೆಯ ಮೇಲೆ ಅವಲಂಬಿಸಿದೆವೋ, ಹಾಗೆಯೇ ಉಳಿಸಿಕೊಳ್ಳಲೂ ಅದರ ಹೊರತು ಬೇರೆ ಏನೂ ಇಲ್ಲ. ಅಂದರೆ ನಮ್ಮ ವಿರೋಧಿಗಳು ಎನಿಸಿಕೊಳ್ಳುವವರಿಗೆಲ್ಲ ಎದುರಾಗಿ ನಮ್ಮ ಅಹಿಂಸೆಯ ಆಚರಣೆ ಎಂದು ಅರ್ಥ. ಮೂರು ದಶವರ್ಷಗಳಿಂದ ಅಹಿಂಸೆಯ ಅಭ್ಯಾಸಹೊಂದಿರುವ ಮನುಷ್ಯನಿಗೆ ಇದೇನೂ ಹೆಚ್ಚಾಗಿ ತೋರಬಾರದು. ಅದು ' ಆವಶ್ಯಕವಾದರೆ ಕೊಲ್ಲು ಮತ್ತು ಅದೇ ಕಾರ್ಯದಲ್ಲಿ ಪ್ರಾಣಕೊಡು ' ಎಂಬುದರ ಬದಲು ' ನಿಮ್ಮ ಕೀರ್ತಿ ಮತ್ತು ಸ್ವಾತಂತ್ರ್ಯಕ್ಕಾಗಿ ಮಡಿಯಿರಿ ' ಎಂಬುದರಲ್ಲಿ ಅಡಕವಾಗಿದೆ. ಧೀರನಾದ ಸಿಪಾಯಿ ಏನು ಮಾಡುತ್ತಾನೆ ? ಅವನು ಆವಶ್ಯಕವಾದರೆ ಮಾತ್ರ ಕೊಲ್ಲುತ್ತಾನೆ. ಆ ಕಾರ್ಯದಲ್ಲಿ ತನ್ನ ಜೀವವನ್ನು ಅಪಾಯಕ್ಕೆ ಒಡ್ಡುತ್ತಾನೆ. ಅಹಿಂಸೆ ಇನ್ನೂ ಹೆಚ್ಚು ಧೈರ್ಯವನ್ನೂ ತ್ಯಾಗವನ್ನೂ ಕೇಳುತ್ತದೆ. ಕೊಲ್ಲುವುದರಲ್ಲಿ ಪ್ರಾಣವನ್ನು

ಅಪಾಯಕ್ಕೆ ಈಡುಮಾಡಿಕೊಳ್ಳುವುದು ಯಾಕೆ ಅಷ್ಟು ಸುಲಭ? ಜೀವವನ್ನು ಉಳಿಸುವುದಕ್ಕಾಗಿ, ಪ್ರಾಣವನ್ನು ಅಪಾಯಕ್ಕೆ ಈಡುಮಾಡಿಕೊಳ್ಳುವುದು ಯಾಕೆ ಅಷ್ಟು ಮನುಷ್ಯಾತೀತ? ಕೊಲ್ಲುವ ವಿದ್ಯೆಯನ್ನು ನಾವು ಕಲಿತರೆ ನಾವು ಸಾವಿನೊಂದಿಗೆ ಸರಸವಾಡಬಹುದು, ಇಲ್ಲದಿದ್ದರೆ ಇಲ್ಲ ಎಂಬುದು ಪೂರ್ಣ ಆತ್ಮವಂಚನೆ. ಅಸತ್ಯವನ್ನು ಅನೇಕ ಸಲ ಕೇಳಿ ಕೇಳಿ, ನಮ್ಮ ಬುದ್ಧಿ, ಮಂಕು ನಿದ್ರಾವಶವಾಗದಿದ್ದಲ್ಲಿ ನಾವು ಹೀಗೆ ನಮ್ಮನ್ನು ಪೂರ್ತಿ ಮೋಸ ಗೊಳಿಸಿಕೊಳ್ಳಬಾರದು.

ಆದರೆ ಟೀಕಾಕಾರನೂ ಅಪಹಾಸ್ಯಮಾಡುವವನೂ 'ವಿಷಯ ಇಷ್ಟು ಸರಳವಾಗಿದ್ದಮೇಲೆ ಪ್ರಾರ್ಥನೆಯನ್ನು ಯಾಕೆ ಇದರಲ್ಲಿ ತರುತ್ತೀರಿ?' ಎಂದು ಕೇಳುತ್ತಾನೆ. ಉತ್ತರ ಇದು : ತನ್ನ ದೇಶದ ಸ್ವಾತಂತ್ರ್ಯ ಮತ್ತು ಕೀರ್ತಿಯಲ್ಲಿ ಮುಕ್ತಾಯವಾಗುವ, ಜೀವನದ ನಾನಾಕ್ಷೇತ್ರಗಳಲ್ಲಿ ತನ್ನ ಬಲಿದಾನ ಕೊಡುವ ಶ್ಲಾಘ್ಯವಾದ ಮತ್ತು ಧೀರವಾದ ಕಲೆಯನ್ನು ಕಲಿಯುವುದರಲ್ಲಿ, ಆದಿ ಮತ್ತು ಅಂತ್ಯ ಪಾಠಗಳೇ ಪ್ರಾರ್ಥನೆ.

ನಿಸ್ಸಂದೇಹವಾಗಿ, ಪ್ರಾರ್ಥನೆಗೆ ದೇವರಲ್ಲಿ ಸಜೀವ ಭಕ್ತಿ ಇರುವುದು ಆವಶ್ಯಕ. ದೇವರು ಎಂಬುದನ್ನು ಬೇರೆ ಯಾವ ಹೆಸರಿನಿಂದಲಾದರೂ ಕರೆಯ ಬಹುದು; ಅದು ಪ್ರಾಣದ ಸಜೀವ ಧರ್ಮವನ್ನು, ಇತರ ಮಾತುಗಳಲ್ಲಿ ಹೇಳುವುದಾದರೆ, ಧರ್ಮವೂ ಧರ್ಮನಿರ್ದೇಶಕನೂ ಎರಡೂ ಒಂದೆ ಎಂಬ ಅಂತರಾರ್ಥವನ್ನೂ ಸೂಚಿಸುವುದಾಗಿರಬೇಕು, ಅಷ್ಟೆ.

(ಹರಿಜನ, ೧೪-೪-೧೯೪೬)

## ಸತ್ಯ ಅಥವಾ ಅಹಿಂಸೆ

ಒಂದು ಸಂಜೆ ಗಾಂಧೀಜಿಯವರೊಂದಿಗೆ ಮಾತನಾಡುತ್ತಾ ಹೆಚ್ಚು ಸಲಿಗೆಯುಳ್ಳ ಮಿತ್ರರೊಬ್ಬರು ಹೀಗೆ ಹೇಳಿದರು : 'ಗಾಂಧೀಜೀ, ನೀವು ನಮ್ಮನ್ನು ಸ್ವಾತಂತ್ರ್ಯದ ಹೊಸಲಿಗೆ ತಂದುಬಿಟ್ಟಿರಿ. ಅದಕ್ಕಾಗಿ ನಾವು ನಿಮಗೆ ಎಷ್ಟು ಕೃತಜ್ಞರಾಗಿದ್ದರೂ ಸಾಲದು. ನೀವು ಅದರ ಕೀರ್ತಿಯನ್ನೆಲ್ಲ ನಿಮ್ಮ

ಮುದ್ದಿನ ಮಗುವಾದ ಅಹಿಂಸೆಗೇ ಕೊಡುತ್ತೀರಿ. ಆದರೆ ನನಗೆ ಹೀಗೆ ತೋರುತ್ತದೆ: ನಾವು ನಿಮ್ಮ ಅಹಿಂಸೆಗಿಂತ ಹೆಚ್ಚಾಗಿ ಸತ್ಯದಿಂದ ಹೆಚ್ಚು ಬಲ ಸಂಪಾದಿಸಿದೇವೆ.'

ಗಾಂಧೀಜೀ ಹೀಗೆ ಹೇಳಿದರು : 'ಅಹಿಂಸೆಯಲ್ಲಿ ನನ್ನ ಪಕ್ಷಪಾತದಿಂದ, ನಾನು ಸತ್ಯಕ್ಕೆ ಎರಡನೆಯ ಸ್ಥಾನವನ್ನು ಕೊಟ್ಟಿದೇನೆಂದು ನೀವು ಭಾವಿಸಿರುವುದು ತಪ್ಪು. . ದೇಶ ಅಹಿಂಸೆಯಿಂದ ಹೊಂದಿದುದಕ್ಕಿಂತ ಸತ್ಯದಿಂದ ಹೆಚ್ಚು ಶಕ್ತಿಹೊಂದಿದೆಯೆಂದು ನೀವು ಭಾವಿಸಿರುವುದೂ ತಪ್ಪು. ಅದಕ್ಕೆ ಬದಲು ನಾನು, ದೇಶ ಸಾಧಿಸಿರುವ ಯಾವ ಪ್ರಗತಿಗೂ ಅದು ತನ್ನ ಹೋರಾಟದ ಸಾಧನವಾಗಿ ಅಹಿಂಸೆಯನ್ನು ಅಂಗೀಕರಿಸಿದುದೇ ಕಾರಣವೆಂದು ದೃಢವಾಗಿ ನಂಬುತ್ತೇನೆ.'

'ನನ್ನ ಅರ್ಥ, ದೇಶ ನಿಮ್ಮ ಅಹಿಂಸೆಯನ್ನು ಅರ್ಥಮಾಡಿಕೊಳ್ಳಲಿಲ್ಲ, ಸತ್ಯವನ್ನು ಅರ್ಥಮಾಡಿಕೊಂಡಿತು. ಅದರಿಂದ ಅದು ಶಕ್ತಿಪೂರ್ಣವಾಯಿತು' ಎಂದರು ಸ್ನೇಹಿತರು.

ಗಾಂಧೀಜೀ ಪ್ರತ್ಯುತ್ತರವಿತ್ತರು : 'ಅದಕ್ಕೆ ತೀರ ವಿರೋಧ. ದೇಶದಲ್ಲಿ ಅಷ್ಟೊಂದು ಅಸತ್ಯ ಇದೆ. ಕೆಲವು ವೇಳೆ ನನಗೆ ಉಸಿರು ಕಟ್ಟುತ್ತದೆ. ಆದುದರಿಂದ ಅಹಿಂಸೆಯ ಆಚರಣೆ—ಅದು ಎಷ್ಟೇ ದೋಷಯುಕ್ತವಾಗಿರಲಿ—ಅದೇ ನಮ್ಮನ್ನು ಇಲ್ಲಿಯವರೆಗೆ ಕರೆತಂದಿದೆಯೆಂದು ನಾನು ದೃಢವಾಗಿ ನಂಬುತ್ತೇನೆ.'

ಗಾಂಧೀಜೀ ಮುಂದುವರಿದು, 'ನೀವು ಯೋಚಿಸಿರುವಂತೆ ನಾನು ಸತ್ಯಕ್ಕೆ ದ್ವಿತೀಯ ಸ್ಥಾನವನ್ನು ಕೊಟ್ಟಿಲ್ಲ' ಎಂದರು. ಮುಂದುವರಿದು ಜಿನೀವದ ಒಂದು ಸಭೆಯಲ್ಲಿ, 'ಹಿಂದೆ ದೇವರು ಸತ್ಯವೆಂದು ಹೇಳುತ್ತಿದ್ದೆ. ಈಚೆಗೆ ಸತ್ಯ ದೇವರೆಂದು' ಹೇಳಿ, ಎಲ್ಲರಿಗೂ ಹೇಗೆ ದಿಗ್ಭ್ರಾಂತಿಯನ್ನು ಉಂಟುಮಾಡಿದ್ದರೆಂದು ವಿವರಿಸಿದರು.

'ಹೇಗಾದರೂ ನಿಮ್ಮ ಪ್ರಾಶಸ್ತ್ಯ ಅಹಿಂಸೆಗೆ. ಅಹಿಂಸೆಯ ಪ್ರಚಾರವನ್ನು ನಿಮ್ಮ ಬಾಳಿನ ಗುರಿಯಾಗಿ ಮಾಡಿಕೊಂಡಿದೀರಿ' ಎಂದರು ಸ್ನೇಹಿತರು, ಗಾಂಧೀಜಿಯವರ ವಾದವನ್ನು ಒಪ್ಪಲು ಇನ್ನೂ ಇಷ್ಟವಿಲ್ಲದವರಾಗಿ.

ಗಾಂಧೀಜೀ ಹೀಗೆ ಪ್ರತ್ಯುತ್ತರವಿತ್ತರು : 'ಮತ್ತೆ ಅಲ್ಲಿಯೂ ನಿಮ್ಮದು ತಪ್ಪು, ಅಹಿಂಸೆ ಗುರಿಯಲ್ಲ. ಸತ್ಯ ಗುರಿ. ಆದರೆ ನಮ್ಮ ವ್ಯವಹಾರದಲ್ಲಿ

ಅಹಿಂಸೆಯ ಮಾರ್ಗದಿಂದಲ್ಲದೆ ಸತ್ಯವನ್ನು ಸಾಕ್ಷಾತ್ಕರಿಸಿಕೊಳ್ಳಲು ದಾರಿ ಇಲ್ಲ. ಅಹಿಂಸೆಯ ಸ್ಥಿರವಾದ ಆಚರಣೆ ಅನಿವಾರ್ಯವಾಗಿ ಸತ್ಯದೊಂದಿಗೆ ಬಂಧಿತ ವಾಗಿದೆ. ಹಿಂಸೆ ಹಾಗಲ್ಲ. ಆದುದರಿಂದಲೇ ನಾನು ಅಹಿಂಸೆಯ ಹೆಸರಿನಲ್ಲಿ ಆಣೆ ಮಾಡುತ್ತೇನೆ. ಸತ್ಯ ನನಗೆ ಸ್ವಾಭಾವಿಕವಾಗಿ ಬಂದಿತು. ಅಹಿಂಸೆಯನ್ನು ಹೋರಾಟದಿಂದ ಗಳಿಸಿಕೊಂಡೆ. ಅಹಿಂಸೆ ಸಾಧನವಾದುದರಿಂದ ನಿಮ್ಮ ನಿತ್ಯ ಜೀವನದಲ್ಲಿ ಅದರ ಗೊಡವೆ ನಮಗೆ ಸ್ವಾಭಾವಿಕವಾಗಿ ಹೆಚ್ಚು. ಆದುದರಿಂದ ನಮ್ಮ ಜನಸಾಮಾನ್ಯಕ್ಕೆ ಅಹಿಂಸೆಯ ಶಿಕ್ಷಣವನ್ನು ಕೊಡಬೇಕು. ಸತ್ಯದಲ್ಲಿ ಶಿಕ್ಷಣ, ಅದರ ಸ್ವಾಭಾವಿಕ ಗುರಿಯಾಗಿ ಹಿಂಬಾಲಿಸುತ್ತದೆ.

(ಹರಿಜನ, ೨೩–೬–೧೯೪೬)

## ಪ್ರೇಮದ ಬಂಧನ

ಸಂಜೆಯ ಭಜನೆ 'ಸಬ್ ಸೇ ಊಂಚೀ ಪ್ರೇಮ್ ಸಗಾಯಿ'ಯ ಮೇಲೆ ವ್ಯಾಖ್ಯಾನ ಮಾಡುತ್ತಾ ಗಾಂಧೀಜೀ ಹೀಗೆ ಹೇಳಿದರು: 'ಆ ಕೀರ್ತನೆಯಲ್ಲಿ ಕವಿ ಅಹಿಂಸೆಯ ಪ್ರೇಮಬಂಧನವನ್ನು ಕುರಿತು ಹಾಡಿದಾನೆ. ಪ್ರೇಮದ ಬಂಧನಕ್ಕಿಂತ ಉಚ್ಚವಾದುದೂ ಬಲವಾದುದೂ ಯಾವುದೂ ಇಲ್ಲ. ಸುದಾಮನ ಪ್ರೇಮಬಂಧನಕ್ಕೆ ಬಾಗಿ ಭಗವಾನ್ ಶ್ರೀಕೃಷ್ಣ ಆತನ ಕೊಳಕು ಚಿಂದಿಯ ಅವಲಕ್ಕಿಯ ಕಾಣಿಕೆಯನ್ನು ಅಂಗೀಕರಿಸಿದನು. ಮತ್ತೆ ದುರ್ಯೋಧನನ ಅಪೂರ್ವವಾದ ಮತ್ತು ರಸಭರಿತವಾದ ಹಣ್ಣುಗಳನ್ನು ಬಿಟ್ಟು ವಿದುರನ ಸರಳ ವಾದ ಸೊಪ್ಪು–ಸಸ್ಯಗಳನ್ನೇ ಅಂಗೀಕರಿಸಲು ಒಪ್ಪಿದನು. ಅರ್ಜುನನ ಪ್ರೇಮಭಕ್ತಿಗೆ ಪ್ರತಿಯಾಗಿ ಕೃಷ್ಣ ತನ್ನ ರಾಜತ್ವವನ್ನು ಮರೆತು ಅರ್ಜುನನ ಸಾರಥಿಯಾದನು; ಅರ್ಜುನನ ಬಿಲ್ಲಿನ ತ್ರಾಣಕ್ಕಿಂತ ಶ್ರೀಕೃಷ್ಣನ ಯುದ್ಧ ವಿದ್ಯಾನೈಪುಣ್ಯ ಜಯಕ್ಕೆ ಹೆಚ್ಚು ಸಹಾಯಕವಾಯಿತೆಂದು ನಾವು ಕೇಳಿದೇವೆ. ಒಬ್ಬರು ಮತ್ತೊಬ್ಬರಿಗೆ ಮಾಡುವ ಅತ್ಯುಚ್ಚ ಸೇವೆ ಎಂದರೆ ಪ್ರೇಮಸೇವೆ. ಅದು ಪ್ರತಿಫಲವನ್ನು ಬಯಸುವುದಿಲ್ಲ. ಪ್ರೇಮ, ಪ್ರತಿಫಲವನ್ನಾಗಲೀ ಪ್ರತಿ ಪ್ರೇಮವನ್ನಾಗಲೀ ಕೇಳಿದರೆ, ಅದೊಂದು ನೀಚ ವ್ಯಾಪಾರವಾಗುತ್ತದೆ. ಅಯತ್ನಪೂರ್ವಕ ಸೇವೆ—ಶುದ್ಧಿಮಾಡುತ್ತದೆ ಮತ್ತು ಉನ್ನತಿಗೇರಿಸುತ್ತದೆ.

(ಹರಿಜನ, ೨–೬–೧೯೪೬)

## ' ಮಾಡು ಇಲ್ಲ ಮಡಿ '—ದೀಕ್ಷೆ

ಸತ್ಯಾಗ್ರಹದ ಮಾರ್ಗದಲ್ಲಿ ವಿರಾಮವಿಲ್ಲ; ವಿಶ್ರಾಂತಿಗೆ ಸ್ಥಾನವಿಲ್ಲ. ಮುಂದಕ್ಕೆ, ಮುಂದುಮುಂದಕ್ಕೆ ಹೋಗುತ್ತಿರಬೇಕು. ಇಲ್ಲದಿದ್ದರೆ ಹಿಂದಕ್ಕೆ ಹೋಗಬೇಕು. ಧರ್ಮಶ್ರದ್ಧೆಯಲ್ಲಿ ಒಂದು ಸಾಹಸ ಎಂಬುದಾಗಿ ವಿವರಿಸಿದ ಗಾಂಧೀಜಿಯವರ ನಿರ್ಣಯ, ದತ್ತ ಪಾರ ಎಂಬಲ್ಲಿ ತೆಗೆದುಕೊಂಡದ್ದು. ಖಾಜಿರ್‌ಖಿಲ್‌ಗೆ ಅವರು ಬದಲಾಯಿಸಿದಾಗ ಅವರು ಮತ್ತೊಂದು ಹೆಜ್ಜೆ ಮುಂದೆ ಹೋದರು. ತಾವು ಒಬ್ಬ ಮುಸಲ್ಮಾನನ ಮನೆಯಲ್ಲಿ ವಾಸಿಸಬೇಕು; ಬಂಗಾಳದ ಸರ್ಕಾರ ಒಪ್ಪುವ ಒಬ್ಬ ಒಳ್ಳೆಯ ಮುಸ್ಲಿಂ ಲೀಗ್ ಸದಸ್ಯ, ತಮ್ಮನ್ನು ಸಂಸಾರದ ಒಬ್ಬ ಪ್ರಜೆಯಾಗಿ ಸ್ವೀಕರಿಸಲು ಒಪ್ಪುವುದಾದರೆ, ೧೬ನೇ ತಾರೀಖು ತಮ್ಮನ್ನು ನೋಡಿದ ಸಿವಿಲ್ ಸಪ್ಲೈ ಮಂತ್ರಿ ಗೊಫ್ರಾನ್ ಸಾಹೇಬರೊಂದಿಗೆ ಗಾಂಧೀಜೀ ಈ ವಿಷಯವನ್ನು ಚರ್ಚಿಸಿ, ' ನನ್ನನ್ನು ಯಾರಿಗಾದರೂ ಶಿಫಾರಸು ಮಾಡುತ್ತೀರಾ ? ' ಎಂದು ಕೇಳಿದರು. ಗೊಫ್ರಾನ್ ಸಾಹೇಬರು ಬೆಚ್ಚಿಬಿದ್ದರು. ಗಾಂಧೀಜೀ ಜತೆಗಾರರನ್ನೆಲ್ಲ ಬಿಟ್ಟು, ಅವರನ್ನು ಉಪಚರಿಸುವುದನ್ನು ಅರಿಯದವರ ಮಧ್ಯದಲ್ಲಿ ವಾಸಿಸುವುದು ಹೇಗೆಂದು. ಗಾಂಧೀಜೀ : ' ನನ್ನ ಕಾರ್ಯ ನಾನು ಮಾಡಿಕೊಳ್ಳುತ್ತೇನೆ. ನನಗೆ ಯಾರ ಸೇವೆಯೂ ಆವಶ್ಯಕವಿಲ್ಲ ' ಎಂದರು. ಗೊಫ್ರಾನ್ ಸಾಹೇಬರು ನಗುತ್ತಾ ' ಹಾಗಾದರೆ ನಿಮ್ಮನ್ನು ಯಾವ ಮುಸಲ್ಮಾನನೂ ಸ್ವೀಕರಿಸಲು ಸಿದ್ಧನಾಗಿಲ್ಲ ಎಂದು ನಾನು ಭಾವಿಸುತ್ತೇನೆ ' ಎಂದರು. ಆದರೆ ಗಾಂಧೀಜಿಯವರನ್ನು ಸುಲಭವಾಗಿ ತಳ್ಳಲು ಸಾಧ್ಯವಿರಲಿಲ್ಲ. ಸಂಧ್ಯಾಕಾಲದ ಪ್ರಾರ್ಥನೆಯ ಬಳಿಕ ತಮ್ಮ ಪ್ರವಚನದಲ್ಲಿ ಅವರು ಆದರ ಮೇಲೆ ವಿಸ್ತಾರವಾಗಿ ಮಾತನಾಡಿದರು : ' ನಾನು ನೌಖಾಲಿಯಲ್ಲಿ ಮುಸಲ್ಮಾನ ಜನರ ನಡುವೆ ಇದ್ದೇನೆ. ಹಿಂದೂ ಮಿತ್ರರ ಜತೆ ಇಲ್ಲಿ ವಾಸಿಸುವುದು ನನಗೆ ಇಷ್ಟವಿಲ್ಲ. ಒಬ್ಬ ಮುಸ್ಲಿಂ ಲೀಗ್ ಸದಸ್ಯರೊಡನೆ ವಾಸಿಸಲು ಅವಕಾಶವಾಗುವುದೆ ಎಂದು ನೋಡುತ್ತಿದೇನೆ. ನನ್ನ ಆವಶ್ಯಕತೆಗಳು ಕಡಮೆ. ನನಗೆ ಬೇಕಾದುದು ಪರಿಶುದ್ಧತೆ, ಶುದ್ಧವಾದ ನೀರು, ಒಪ್ಪಿಗೆಯಾದ ಆಹಾರ, ನನ್ನ ಮಾರ್ಗದಲ್ಲಿ ದೇವರನ್ನು ಪೂಜಿಸಲು ಸ್ವಾತಂತ್ರ್ಯ—ಇಷ್ಟೆ.' ಹಿಂದೂಗಳು, ತಾವು ಲೀಗ್ ಮುಸಲ್ಮಾನರೊಡನೆ

ವಾಸಿಸುವುದನ್ನು ನೋಡಿದರೆ ಮತ್ತೆ ಧೈರ್ಯಹೊಂದಿ ತಮ್ಮ ತಮ್ಮ ಮನೆಗಳಿಗೆ ಬೇಗ ಬೇಗ ಹಿಂದಿರುಗುವರು ಎಂಬುದು ಗಾಂಧೀಜಿಯವರ ಉದ್ದೇಶ್ಯ. 'ಮುಸಲ್ಮಾನ ಮಿತ್ರರು ನನ್ನನ್ನು ಹತ್ತಿರದಲ್ಲಿ ಪರೀಕ್ಷಿಸಲಿ. ನಾವು ಅವರ ಮಿತ್ರರೇ ಶತ್ರುವೇ ಎಂಬುದನ್ನು ತಿಳಿಯುವ ಅವಕಾಶ ಹೊಂದುವರು.'

ಆದರೆ ಒಬ್ಬ ಮುಸಲ್ಮಾನ ಗೃಹಸ್ಥರ ಮನೆ, ತಮ್ಮನ್ನು ಸ್ವೀಕರಿಸಲು ಸಿದ್ಧವಾಗುವವರೆಗೆ ಅವರು ತಮ್ಮ 'ಧರ್ಮಶ್ರದ್ಧೆಯಲ್ಲಿ ಸಾಹಸ'ವನ್ನು ಮುಂದಕ್ಕೆ ಹಾಕಲು ಇಷ್ಟಪಡಲಿಲ್ಲ. ಒಂದು ದಿನ ಅವರು ಹೀಗೆ ಹೇಳಿದರು: 'ನಾನು ಆಗಾಖಾನ್ ಅರಮನೆಯಲ್ಲಿ ಬಂಧನದಲ್ಲಿದ್ದಾಗ ಒಂದು ಸಲ ಅಹಿಂಸೆಯ ವೀರ ನಾಯಕನಂತೆ ಒಂದು ಸಮರ್ಥನಗ್ರಂಥವನ್ನು ಬರೆಯಲು ತೊಡಗಿದೆ. ಆದರೆ ಬರೆಯುತ್ತಾ ಬರೆಯುತ್ತಾ ನನ್ನ ಬರವಣಿಗೆ ಮುಂದೆ ಸಾಗದೆ ನಿಂತಿತು. ನಾನು ಬರೆಯುವುದನ್ನು ನಿಲ್ಲಿಸಬೇಕಾಯಿತು. ಹಿಂದೂ ಧರ್ಮದಲ್ಲಿ ಎರಡು ಮುಖಗಳಿವೆ. ಒಂದು ಕಡೆ, ಅಸ್ಪೃಶ್ಯತೆ, ಕಲ್ಲು–ಮರಗಳ ಮೂಢನಂಬಿಕೆಯ ಪೂಜೆ, ಪ್ರಾಣಿಯಜ್ಞ ಇವುಗಳಿಂದ ಕೂಡಿದ ಐತಿಹಾಸಿಕ ಹಿಂದೂ ಧರ್ಮ: ಮತ್ತೊಂದೆಡೆ, ಗೀತೆ–ಉಪನಿಷತ್ತು, ಅಹಿಂಸೆಯ ತಿರುಳಾದ ಮತ್ತು ಸೃಷ್ಟಿಯೆಲ್ಲ ಒಂದು ಎಂಬುದನ್ನು ತೋರಿಸುವ ಪತಂಜಲಿಯ ಯೋಗ ಸೂತ್ರ, ಸರ್ವಜ್ಞನೂ ಆಕಾರರಹಿತನೂ ಅವಿನಾಶಿಯೂ ಆದ ದೇವರು—ಇವು ಗಳನ್ನೊಳಗೊಂಡ ಹಿಂದೂ ಧರ್ಮ. ನನ್ನ ಮಟ್ಟಿಗೆ ಹಿಂದೂ ಧರ್ಮದ ಮುಖ್ಯ ವೈಭವ ಅಹಿಂಸೆ. ಅದು ಬರಿಯ ಸನ್ಯಾಸಿಗಳಿಗೆ ಎಂದು ನಮ್ಮ ಜನ ವಿವರಿಸಲು ಪ್ರಯತ್ನಿಸಿದಾರೆ. ನಾನು ಆ ಅಭಿಪ್ರಾಯವನ್ನು ಒಪ್ಪುವುದಿಲ್ಲ. ಅದೇ ಜೀವನದ ಮಾರ್ಗ ಎಂದು ನನ್ನ ಮತ. ಭಾರತ ಅದನ್ನು ಜಗತ್ತಿಗೆ ತೋರಿಸಬೇಕಾಗಿದೆ. ನಾನು ಎಲ್ಲಿ ನಿಂತಿದೇನೆ? ನನ್ನ ಈ ದೇಹದಲ್ಲಿ ಅದನ್ನು ಪ್ರತಿನಿಧಿಸುತ್ತಿದೇನೆಯೆ? ನಾನು ಹಾಗೆ ಮಾಡುತ್ತಿದ್ದರೆ ವಾತಾವರಣವನ್ನು ವಿಷಮಗೊಳಿಸುತ್ತಿರುವ ಮೋಸ–ದ್ವೇಷಗಳು ಮಾಯವಾಗಬೇಕು. ಯಾರ ಸಹಾಯದ ಮೇಲೆ ಈವರೆಗೆ ಅವಲಂಬಿಸಿದ್ದೆನೋ ಆ ಮಿತ್ರರನ್ನು ಬಿಟ್ಟು ಏಕಾಂತಕ್ಕೆ ಹೋಗಿ ನನ್ನ ಸ್ವಂತ ಊರುಗೋಲಿನ ಮೇಲೆ ನಿಂತಾಗ ಮಾತ್ರ ನನ್ನ ಬೆಲೆಯನ್ನು ನಾನು ಕಂಡುಕೊಳ್ಳುವೆ ಮತ್ತು ದೇವರಲ್ಲಿ ನನ್ನ ನಂಬಿಕೆ ಯನ್ನು ಪರೀಕ್ಷಿಸುವೆ.'

ಸೇವಾಗ್ರಾಮದವರಿಗೆ ಅವರು ಹೀಗೆ ಬರೆದರು :

'ನಾನು ಬೇಗ ಆಶ್ರಮಕ್ಕೆ ಹಿಂದಿರುಗುವ ಆಸೆಯನ್ನು ನೀವು ಬಿಡಬೇಕು ಎಂದು ನನಗೆ ತೋರುತ್ತದೆ. ನನ್ನ ಜತೆಗಾರರಿಗೂ ಅದೇ ಅನ್ವಯಿಸುತ್ತದೆ. ನಾನು ಎದುರಿಸುತ್ತಿರುವುದು ಅಗಾಧ ಕೆಲಸ. ನನ್ನ ಪರೀಕ್ಷೆ ನಡೆಯುತ್ತಿದೆ. ನನ್ನ ಭಾವನೆಯ ಸತ್ಯಾಗ್ರಹ ದುರ್ಬಲರ ಸತ್ಯಾಗ್ರಹವೆ ? ಅಥವಾ ಬಲಿಷ್ಠರ ಸತ್ಯಾಗ್ರಹವೆ ? ನಾನು ಎರಡನೆಯದನ್ನು ಸಿದ್ಧಿಸಿಕೊಳ್ಳಬೇಕು. ಅಥವಾ ಆ ಪ್ರಯತ್ನದಲ್ಲಿ ಪ್ರಾಣವನ್ನು ಬಿಡಬೇಕು. ಅದೇ ನನ್ನ ಅನ್ವೇಷಣೆ. ಅದನ್ನು ಹುಡುಕುತ್ತಾ ನಾನು ಈ ಧ್ವಂಸವಾದ ಹಳ್ಳಿಯಲ್ಲಿ ಬಂದು ಅಡಗಿದೇನೆ. ಅವನ ಇಚ್ಛೆ ನಡೆಯಲಿ.'

೩ಂನೆಯ ತಾರೀಖು ಗಾಂಧೀಜೀ ಖಾಜಿರ್‌ಖಿಲ್‌ನಲ್ಲಿಯ ತಮ್ಮ ಶಿಬಿರವನ್ನು ಕಿತ್ತು ತಮ್ಮ ಶೀಘ್ರಲಿಪಿಗಾರ ಪರಶುರಾಮ್ ಮತ್ತು ಬಂಗಾಳಿ ದ್ವಿಭಾಷಿ ಪ್ರೊಫೆಸರ್ ನಿರ್ಮಲಕುಮಾರ್ ಬೋಸ್‌ರೊಂದಿಗೆ ಮಾತ್ರ ಅಂಧಕಾರ ಅಜ್ಞಾತವನ್ನು ಎದುರಿಸಲು ಹೊರಟರು. ಹೊರಡುವುದಕ್ಕಿಂತ ಮುಂಚೆ ಅವರ ಜತೆ ಇದ್ದ ಸಣ್ಣ ಗುಂಪು ಸ್ವಲ್ಪ ಕಾಲದ ಪ್ರಾರ್ಥನೆ ಮಾಡಿತು. ಅದರಲ್ಲಿ ಅವರ ಪ್ರಿಯ ಕೀರ್ತನೆಯಾದ 'ವೈಷ್ಣವಜನ ತೋ ತೇನೇ ಕಹಿಯೇ'ಯನ್ನೂ ಹಾಡಿದರು. ಅನೇಕ ಗಂಟಲ ಧ್ವನಿಗಳು ಒಣಗಿದ್ದವು ; ಕಣ್ಣುಗಳು ಕಣ್ಣೀರಿನಿಂದ ಮಂಕಾಗಿದ್ದವು. ಸಣ್ಣ ನಾಡದೋಣಿ ಅವರನ್ನು ಕೂರಿಸಿಕೊಂಡು ಸೇತುವೆಯ ಆಚೆ, ಶ್ರೀರಾಮಪುರದ ದಿಕ್ಕಿನಲ್ಲಿ ಕಣ್ಮರೆಯಾಯಿತು.

ಅವರ ಗಮನವನ್ನನುಸರಿಸಿ ಅವರ ಪಂಗಡದ ಸದಸ್ಯರು ಒಬ್ಬೊಬ್ಬರಾಗಿ ತಮಗೆ ನಿಯಮಿತವಾದ ಬೇರೆ ಬೇರೆ ಸ್ಥಳಗಳಿಗೆ ಚದರಿಹೋದರು.

(ಹರಿಜನ, ೮-೧೨-೧೯೪೬)

## ಗಾಂಧೀಜಿಯ ಚರಮ ಇಚ್ಛಾಪತ್ರ

(ಈ ಕೆಳಗಿನದು, ಗಾಂಧೀಜೀ ತಮ್ಮ ಕೊಲೆಯಾದ ದಿನ ಕಾಂಗ್ರೆಸ್ಸಿಗಾಗಿ ಸಿದ್ಧಗೊಳಿಸಿದ ಕಾಂಗ್ರೆಸ್ ಸಂವಿಧಾನ. ಅಲ್ಲಿಯವರೆಗೆ ಸ್ವಾತಂತ್ರ್ಯಸಾಧನೆಯಲ್ಲಿ ಮುಖ್ಯವಾಗಿ ತೊಡಗಿದ್ದ ಕಾಂಗ್ರೆಸ್, ಜನಸೇವೆಯ ಸಂಸ್ಥೆಯಾಗಿ(ಲೋಕಸೇವಕ

ಸಂಘ) ಪರಿವರ್ತನೆಗೊಂಡು ಅಹಿಂಸೆಯ ಆಧಾರದ ಮೇಲೆ ರಚಿತವಾದ ಸಮಾಜಸ್ಥಾಪನೆಗೆ ಹೇಗೆ ಸಹಾಯಕವಾಗುವುದೆಂಬುದನ್ನು ತೋರಿಸುವುದೇ ಅವರ ಗುರಿ ಆಗಿದ್ದಿತು. —ಸಂ.)

ಕಾಂಗ್ರೆಸ್ ಯೋಜಿಸಿದ ಮಾರ್ಗದಿಂದ ಭಾರತಸ್ವಾತಂತ್ರ್ಯವನ್ನು— ದೇಶ ಇಬ್ಭಾಗವಾಗಿಯಾದರೂ ಸಂಪಾದಿಸಿದ ಬಳಿಕ—ಕಾಂಗ್ರೆಸ್ ಈಗಿನ ರೂಪದಲ್ಲಿ ಎಂದರೆ ಪ್ರಚಾರ ಮತ್ತು ಶಾಸನದ ಉಪಕರಣವಾಗಿ ತನ್ನ ಉಪಯುಕ್ತತೆಯನ್ನು ಮುಗಿಸಿದೆ. ಭಾರತ ಇನ್ನೂ ತನ್ನ ಏಳು ಲಕ್ಷ ಹಳ್ಳಿಗಳಲ್ಲಿ— ನಗರಗಳೂ ಪಟ್ಟಣಗಳೂ ಇರಲಿ—ಸಾಮಾಜಿಕ-ನೈತಿಕ-ಆರ್ಥಿಕಸ್ವಾತಂತ್ರ್ಯವನ್ನು ಸಂಪಾದಿಸಬೇಕಾಗಿದೆ. ಭಾರತದ ಪ್ರಜಾತಂತ್ರ ಗುರಿಯ ಮಾರ್ಗದಲ್ಲಿ ಸೈನ್ಯಶಕ್ತಿಯ ಮೇಲೆ ಪ್ರಜಾತಂತ್ರಶಕ್ತಿಯ ಮೇಲಧಿಕಾರದ ಹೋರಾಟ ಆಗಿಯೇ ಆಗುತ್ತದೆ. ಜಾತೀಯ ಮತ್ತು ರಾಜಕೀಯ ಸಂಸ್ಥೆಗಳ ಅಯೋಗ್ಯ ಸ್ಪರ್ಧೆಯಿಂದ ಕಾಂಗ್ರೆಸ್ ಬೇರೆ ಇರಬೇಕು. ಇಂತಹ ಮತ್ತು ಇವೇ ಬಗೆಯ ಇತರ ಕಾರಣಗಳಿಗಾಗಿಯೂ, ಈಗ ಇರುವ ಕಾಂಗ್ರೆಸ್ಸನ್ನು ಮುಕ್ತಾಯಗೊಳಿಸಿ ಕೆಳಗಿನ ನಿಯಮಗಳಿಗನುಸಾರವಾಗಿ ಲೋಕಸೇವಾ ಸಂಘವಾಗಿ ಅರಳುವಂತೆ ಅಖಿಲ ಭಾರತ ಕಾಂಗ್ರೆಸ್ ಸಮಿತಿ ನಿರ್ಣಯಿಸುತ್ತದೆ. ಆವಶ್ಯಕ ತೋರಿದಂತೆ ಈ ನಿಯಮಗಳನ್ನು ಬದಲಾಯಿಸಬಹುದು.

ಹಳ್ಳಿಯವರಾದ ಅಥವಾ ಹಳ್ಳಿಯ ಮನೋಭಾವವುಳ್ಳ ಐದು ಜನರ ಪಂಚಾಯಿತಿ ಒಂದು ಘಟಕ ಅಥವಾ ಏಕಮಾನ.

ಅಂತಹ ಎರಡು ನೆರೆಹೊರೆಯ ಪಂಚಾಯಿತಿಗಳು ತಮ್ಮೊಳಗೆ ಆರಿಸಿಕೊಂಡ ನಾಯಕನ ಕೆಳಗೆ ಒಂದು ಕಾರ್ಯ ಮಾಡುವ ಪಕ್ಷವಾಗಿ ಏರ್ಪಡುವುದು.

ಹೀಗೆ ನೂರು ಪಂಚಾಯಿತಿಗಳು ಆದಮೇಲೆ ಮೊದಲನೆಯ ಐವತ್ತು ನಾಯಕರು ತಮ್ಮಲ್ಲಿ ಒಬ್ಬ ಎರಡನೆಯ ನಾಯಕನನ್ನು ಆರಿಸುವರು. ಹಾಗೆ ಆ ಮಧ್ಯದಲ್ಲಿ ಮೊದಲನೆಯ ದರ್ಜೆಯ ನಾಯಕರು ಎರಡನೆಯ ದರ್ಜೆಯ ನಾಯಕನ ಅಧೀನದಲ್ಲಿ ಕೆಲಸ ಮಾಡುವರು. ಹೀಗೆ ಇನ್ನೂರು ಪಂಚಾಯಿತಿಗಳ ಸಮಸಮಾನ ಗುಂಪುಗಳ ಪಂಚಾಯಿತಿಗಳು ಸ್ಥಾಪನೆಯಾಗುತ್ತಾ ಅಖಿಲ

ಭಾರತದಲ್ಲಿಯೂ ಹರಡುವುವು. ಮೊದಲದರಂತೆಯೇ ಪ್ರತಿ ಮುಂದಿನ ಪಂಚಾಯಿತಿಗಳ ಗುಂಪು ಎರಡನೆಯ ದರ್ಜೆಯ ನಾಯಕನನ್ನು ಆರಿಸುತ್ತಾ ಹೋಗುವುದು. ಎರಡನೆಯ ನಾಯಕರೆಲ್ಲ ಒಟ್ಟಾಗಿ ಅಖಿಲ ಭಾರತದ ಮತ್ತು ಬೇರೆಬೇರೆಯಾಗಿ ತಮ್ಮ ಪ್ರದೇಶಗಳ ಸೇವೆಮಾಡುವರು. ಎರಡನೆಯ ದರ್ಜೆಯ ನಾಯಕರು ಆವಶ್ಯಕವಾದಾಗ ತಮ್ಮೊಳಗೇ ಒಬ್ಬ ಮುಖಂಡನನ್ನು ನಿಯಮಿಸಿಕೊಳ್ಳಬಹುದು. ಆತ ತನ್ನನ್ನು ಆರಿಸಿದವರಿಗೆ ಇಷ್ಟವಾದಷ್ಟು ಕಾಲ ಎಲ್ಲ ಗುಂಪುಗಳ ನೇತೃ ಆಗಿರುವನು. ಐದು ವಯಸ್ಕರ ಹೆಣ್ಣು ಅಥವಾ ಗಂಡುಗಳು ಒಂದು ಘಟಕ. ಅವರಿಗೆ ಒಬ್ಬ ನಾಯಕ. ಅಂತಹ ಎರಡು ಘಟಕ ಒಂದು ಕಾರ್ಯಕ್ಷೇತ್ರ. ಅಂತಹ ನೂರು ಪಂಚಾಯಿತಿಗಳಿಗೆ ಐವತ್ತು ನಾಯಕರು. ಅವರು ಒಬ್ಬ ಎರಡನೆಯ ನಾಯಕನನ್ನು ಆರಿಸುವರು. ಅಂದರೆ ೨೦೦ ಪಂಚಾಯಿತಿಗಳಿಗೆ ಒಬ್ಬ ಎರಡನೆಯ ನಾಯಕ. ಭಾರತದಲ್ಲೆಲ್ಲ ಹೀಗೆ ಇನ್ನೂರು ಇನ್ನೂರು ಪಂಚಾಯಿತಿಗಳ ಗುಂಪು ದೇಶದ ತುಂಬ ಆಗುವುದು. ಆ ಇನ್ನೂರು ಪಂಚಾಯಿತಿಗಳಿಗೆ ಒಬ್ಬ ನಾಯಕ.

ಪ್ರಾಂತಗಳ ಮತ್ತು ಜಿಲ್ಲೆಗಳ ಅಂತ್ಯರೂಪ ಇನ್ನೂ ಅನಿರ್ದಿಷ್ಟವಾಗಿರುವುದರಿಂದ ಈ ಸೇವಕರ ಗುಂಪನ್ನು ಪ್ರಾಂತ ಅಥವಾ ಜಿಲ್ಲೆಯ ಸಮಿತಿಗಳಾಗಿ ವಿಂಗಡಿಸಲು ಪ್ರಯತ್ನಪಟ್ಟಿಲ್ಲ. ಅಖಿಲ ಭಾರತದಲ್ಲಿಯೂ ಆ ಕಾಲಕ್ಕೆ ಸಂಘಟನೆಗೊಳ್ಳುವ ಗುಂಪು ಅಥವಾ ಗುಂಪುಗಳಿಗೆ, ಅಧಿಕಾರವ್ಯಾಪ್ತಿಯನ್ನು ಕೊಡಲಾಗಿದೆ. ಈ ಸೇವಕರಿಗೆ ಅವರ ಯಜಮಾನರು ಅಖಿಲ ಭಾರತಕ್ಕೆ ಮಾಡುವ ವಿವೇಕಯುತವಾದ ಮತ್ತು ಪೂರ್ಣ ಮನಸ್ಸಿನ ಸೇವೆಯಿಂದ, ಅಧಿಕಾರ ಪ್ರಾಪ್ತಿಯಾಗುತ್ತದೆಂಬುದನ್ನು ಗಮನಿಸಬೇಕು.

(೧) ಪ್ರತಿಯೊಬ್ಬ ಕೆಲಸಗಾರನೂ ತಾನೇ ನೂತ ಅಥವಾ ಅಖಿಲ ಭಾರತ ಚರಖಾ ಸಂಘದ ಒಪ್ಪಿಗೆ ಪಡೆದ ಖಾದಿಯ ನಿರಂತರ ಧಾರಿಯಾಗಿರಬೇಕು. ಪೂರ್ಣ ಮದ್ಯವರ್ಜಕನಾಗಿರಬೇಕು. ಆತ ಹಿಂದೂ ಆದರೆ ತಾನು ಮತ್ತು ತನ್ನ ಸಂಸಾರದಲ್ಲಿ ಅಸ್ಪೃಶ್ಯತೆಯನ್ನು ಎಲ್ಲ ರೂಪದಲ್ಲಿಯೂ ತ್ಯಜಿಸಿರಬೇಕು. ಅಂತರ್‌ಜಾತೀಯ ಸೌಹಾರ್ದ, ಎಲ್ಲ **ಮತಗಳಿಗೂ ಸಮಾನ ಗೌರವ, ಗಣನೆ, ಜನಾಂಗ–ಧರ್ಮ–ಲಿಂಗ**

ಇವುಗಳ ಭೇದವಿಲ್ಲದೆ, ಎಲ್ಲರಿಗೂ ಸಮಾನಾವಕಾಶ ಇವುಗಳಲ್ಲಿ ನಂಬಿಕೆ ಯುಳ್ಳವನಾಗಿರಬೇಕು.

(೨) ಅವನು ತನ್ನ ವ್ಯಾಪ್ತಿಯಲ್ಲಿ ಪ್ರತಿಯೊಬ್ಬ ಹಳ್ಳಿಯವನೊಂದಿಗೂ ಪರಿಚಯ, ಸಂಬಂಧವಿಟ್ಟುಕೊಳ್ಳಬೇಕು.

(೩) ಹಳ್ಳಿಯವರನ್ನು ಸೇರಿಸಿಕೊಂಡು ಅವರ ಪೈಕಿಯೇ ಕೆಲಸಗಾರರನ್ನು ತಯಾರಿಸಬೇಕು. ಅವರ ಒಂದು ಪಟ್ಟಿಯನ್ನೂ ಇಡಬೇಕು.

(೪) ತನ್ನ ದಿನದಿನದ ಕಾರ್ಯದ ಒಂದು ದಿನಚರಿಯನ್ನೂ ಇಡುವುದು.

(೫) ಹಳ್ಳಿಯವರು ಅವರ ವ್ಯವಸಾಯ ಮತ್ತು ಕೈಕಸಬುಗಳ ಮೂಲಕ ಸ್ವಾವಲಂಬಿಗಳಾಗುವಂತೆ ವ್ಯವಸ್ಥೆಗೊಳಿಸುವನು.

(೬) ಅವನು ಹಳ್ಳಿಯವರಿಗೆ ಆರೋಗ್ಯ-ನೈರ್ಮಲ್ಯಗಳಲ್ಲಿ ಶಿಕ್ಷಣ ಕೊಟ್ಟು ಅವರ ಅನಾರೋಗ್ಯ-ರೋಗ ಇವುಗಳ ನಿವಾರಣೆಯ ಎಲ್ಲ ಕ್ರಮಗಳನ್ನೂ ಆಚರಿಸಬೇಕು.

(೭) ಹಿಂದೂಸ್ತಾನಿ ತಾಲೀಮೀ ಸಂಘದವರು ನಿಯಮಿಸಿರುವ ತತ್ತ್ವಗಳಿಗನು ಸಾರವಾಗಿ ಅವನು ಹಳ್ಳಿಯವರ ಶಿಕ್ಷಣವನ್ನು ಜನನದಿಂದ ಮರಣದ ವರೆಗೆ ನಯೀ ತಾಲಿಂ. ಶಿಕ್ಷಣ ಪದ್ಧತಿಯಲ್ಲಿ ವ್ಯವಸ್ಥೆಗೊಳಿಸಬೇಕು.

(೮) ಶಾಸನಬದ್ಧ ಮತದಾರರ ಪಟ್ಟಿಯಲ್ಲಿ ಕೈಬಿಟ್ಟಿರುವ ಮತದಾರರ ಹೆಸರು ಗಳು ಪಟ್ಟಿಯಲ್ಲಿ ಸರಿಯಾಗಿ ಸೇರಲು ಅವನು ಏರ್ಪಡಿಸುವಂತಾಗ ಬೇಕು.

(೯) ಮತದಾರರಾಗಲು ಕಾನೂನುಬದ್ಧ ಅರ್ಹತೆಯಿಲ್ಲದವರು ಆ ಅರ್ಹತೆ ಯನ್ನು ಸಂಪಾದಿಸುವಂತೆ ಅವನು ಪ್ರೋತ್ಸಾಹಿಸಬೇಕು.

(೧೦) ಮೇಲಿನ ಉದ್ದೇಶ್ಯಗಳಿಗಾಗಿಯೂ ಮತ್ತು ಇವುಗಳಿಗೆ ಸಂಬಂಧಿಸಿದ ಇತರ ಉದ್ದೇಶ್ಯಗಳಿಗಾಗಿಯೂ, ಸಂಘವು ದಕ್ಷ ಕಾರ್ಯಸಾಧನೆಗಾಗಿ ನಿಯಮಿಸುವ ನಿಯಮಗಳಿಗನುಸಾರವಾಗಿ ಅವನು ತನ್ನನ್ನು ತರಪೇತು ಮಾಡಿಕೊಳ್ಳುವಂತಾಗಬೇಕು.

ಸಂಘವು ಕೆಳಗಿನ ಸ್ವಯಮಧಿಕಾರದ ಸಂಸ್ಥೆಗಳನ್ನು ತನ್ನ ಅಂಗಸಂಸ್ಥೆಗಳನ್ನಾಗಿ ಅಂಗೀಕರಿಸುವುದು :

(೧) ಅಖಿಲ ಭಾರತ ಚರಖಾ ಸಂಘ
(೨) ಅಖಿಲ ಭಾರತ ಗ್ರಾಮೋದ್ಯೋಗ ಸಂಘ
(೩) ಹಿಂದೂಸ್ತಾನಿ ತಾಲಿಮೀ ಸಂಘ
(೪) ಹರಿಜನ ಸೇವಕ ಸಂಘ
(೫) ಗೋಸೇವಾ ಸಂಘ

## ಹಣಕಾಸು

ಸಂಘ ತನ್ನ ಕಾರ್ಯಸಾಧನೆಗಾಗಿ ಹಳ್ಳಿಯವರಿಂದಲೂ ಇತರರಿಂದಲೂ ಹಣವನ್ನು ಶೇಖರಿಸುವುದು. ಅದು ಬಡವರ ಕಾಸಿಗೆ ಹೆಚ್ಚು ಪ್ರಾಮುಖ್ಯತೆ ಕೊಡುವುದು.

(ಹರಿಜನ, ೧೫–೨–೧೯೪೮)

---

# ಅಧ್ಯಯನ ಗ್ರಂಥಗಳು

## ಕನ್ನಡ

ಗಾಂಧೀ ವಿಚಾರ ದೋಹನ — ಶ್ರೀ ಕಿ. ಘ. ಮಶ್ರೂವಾಲಾ

ಸತ್ಯಾಗ್ರಹ — ಶ್ರೀ ರಂ. ರಾ. ದಿವಾಕರ

ಸ್ವರಾಜ್ಯಶಾಸ್ತ್ರ — ವಿನೋಬಾ

## ಹಿಂದೀ

ಸರ್ವೋದಯ ದರ್ಶನ — ಶ್ರೀ ದಾದಾ ಧರ್ಮಾಧಿಕಾರೀ

ಸತ್ಯಾಗ್ರಹ ಮೀಮಾಂಸಾ — ಶ್ರೀ ರಂ. ರಾ. ದಿವಾಕರ

## ಇಂಗ್ಲೀಷ್

**Non-violence in Peace and War** — Parts I & II —By Gandhiji

**The Power of Non-violence** —By R. B. Gregg

**Studies in Gandhism** —By N. K. Bose

**My Days with Gandhi** —By N. K. Bose

---

## A Few Navajivan Publications in English

(1) **The Power of Non-violence**
—By Richard B. Gregg
Pages: xiii, 184 — Price: Rs. 2-50

(2) **A Discipline for Non-violence**
—By Richard B. Gregg
Pages: iv, 34 — Price: As. 10

(3) **A Compass for Civilization**
—By Richard B. Gregg
Pages: vi, 279 — Price: Rs. 3/-

(4) **Which Way Lies Hope ?**
—By Richard B. Gregg
Pages: viii, 219 — Price: Rs. 2/-

(5) **A Philosophy of Indian Economic Development**
—By Richard B. Gregg
Pages: viii, 232 — Price: Rs. 2-50

(6) **Practical Non-violence**
—By K. G. Mashruwala
Pages: 48 — Price: 0-50 nP.

(7) **Gandhi and Marx**
Pages: vii, 117 — Price: Re. 1/-